॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೧


ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನ್ನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು





ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೨೧



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1950

# ಮುನ್ನುಡಿ

ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಭಾಗವು ಈ ಪ್ರತಿಯಲ್ಲಿ ಪೂರ್ಣವಾಗಿದೆ. ಶಿವರಹಸ್ಯಗ್ರಂಥಗಳಲ್ಲಿರುವ ಹನ್ನೆರಡು ಅಂಶಗಳಲ್ಲಿ ಹೆಚ್ಚು ವಿಸ್ತಾರವಾಗಿ ಬರೆಯಲ್ಪಟ್ಟಿರುವ ಅಂಶವೆಂದರೆ ಈ ಏಳನೆಯದೇ. ಈ ಅಂಶದಲ್ಲೆಲ್ಲಾ ವಿಶೇಷವಾಗಿ ಶಿವಕ್ಷೇತ್ರಗಳು, ಅಲ್ಲಿನ ಸ್ಥಳಮಹಿಮೆ, ಅಲ್ಲಲ್ಲಿ ಮಹಾತ್ಮರಾದವರು ಶಿವನನ್ನು ಸ್ತುತಿಸಿರುವ ಕ್ರಮ ಇವೇ ಹೆಚ್ಚಾಗಿ ವರ್ಣಿತವಾಗಿವೆ. ಸಾಮಾನ್ಯವಾಗಿ ಸಪ್ತಮಾಂಶದ ಪೂರ್ವಾರ್ಧವೆಲ್ಲಾ ಉತ್ತರಭಾರತದ ಶಿವಕ್ಷೇತ್ರಗಳನ್ನು ವಿವರಿಸಿ ತಿಳಿಸುವುದರಲ್ಲಿಯೇ ಪರ್ಯಾಪ್ತವಾಗಿದೆ. ಕಾಶೀಕ್ಷೇತ್ರದ ಮಹಿಮೆಯೂ, ಅಲ್ಲಿರುವ ಶಿವಲಿಂಗಗಳ ವೈಭವವೂ ಈ ಅಂಶದಲ್ಲಿ ಬಂದಿರುವಷ್ಟು ಮತ್ತಾವ ಗ್ರಂಥದಲ್ಲಿಯೂ ಇಲ್ಲವೆನ್ನಬಹುದು. ಸಪ್ತಮಾಂಶದ ಉತ್ತರಾರ್ಧವೆನಿಸಿದ ಈ ಪ್ರತಿಯಲ್ಲಿ ದಕ್ಷಿಣ ಭಾರತದ ಶಿವಕ್ಷೇತ್ರಗಳೆಲ್ಲಾ ನಿರೂಪಿತಗಳಾಗಿವೆ. ಕಾವೇರೀನದಿಯು ಅಗಸ್ತ್ಯ ಮಹರ್ಷಿಗಳ ಕಲಶೋದಕದಿಂದ ಉತ್ಪನ್ನವಾಗಿರುವ ಅಂಶವು ಈ ಭಾಗದಲ್ಲಿ ವಿಸ್ತೃತವಾಗಿದೆ. ಇಲ್ಲಿ ಕಾವೇರೀನದಿಗೆ ದೊರೆತಿರುವಷ್ಟು ಪ್ರಾಧಾನ್ಯವು ದಕ್ಷಿಣ ಭಾರತದಲ್ಲಿರುವ ಯಾವ ನದಿಗಳಿಗೂ ಲಭಿಸಿದಂತೆ ಕಾಣುವುದಿಲ್ಲ. ಕಾವೇರೀನದಿಯ ಎರಡು ದಡಗಳಲ್ಲಿಯೂ ಇರುವ ಶಿವಕ್ಷೇತ್ರಗಳ ಹೆಸರೆಲ್ಲಾ ಈ ಅಂಶದಲ್ಲಿ ಬಂದಿದೆ. ಈಗ ವ್ಯವಹಾರದಲ್ಲಿ ಪ್ರಸಿದ್ಧವಾಗಿರುವ ಶಿವಕ್ಷೇತ್ರಗಳ ಹೆಸರನ್ನೂ, ಜನರಿಗೆ ಗೋಚರಿಸದೇ ಇರುವ ಕ್ಷೇತ್ರವಿಶೇಷಗಳನ್ನೂ ನಾವು ಈ ಗ್ರಂಥದಲ್ಲಿ ನೋಡಬಹುದು. ಹಾಗೆಯೇ ತಾಮ್ರಪರ್ಣೀನದಿಯ ವರ್ಣನೆ, ತಾಮ್ರಪರ್ಣೀತೀರದ ಶಿವಕ್ಷೇತ್ರಗಳ ಮಹಿಮೆ ಇವು ಇಲ್ಲಿ ಬಂದಿರುವ ಮುಖ್ಯ ವಿಷಯಗಳು. ಪರಶಿವನು ಪಾರ್ವತಿಗೆ ಉಪದೇಶಿಸಿದಂತಿರುವ ನಟೇಶಸಹಸ್ರನಾಮಸ್ತೋತ್ರವು ಈ ಭಾಗದಲ್ಲಿ ಬಂದಿದೆ. ಪ್ರಾಯಶಃ ಈ ಸಹಸ್ರನಾಮಸ್ತೋತ್ರವು ಮತ್ತಾವ ಗ್ರಂಥದಲ್ಲಿಯೂ ದೊರೆಯಲಾರದು. ಅಲ್ಲಲ್ಲಿ ಬರುವ ಶಿವಸ್ತೋತ್ರಗಳಂತೂ ಭಕ್ತಿರಸಭರಿತಗಳಾಗಿ ಶಿವಾರಾಧಕರಿಗೆ ವಿಶೇಷಾನಂದಪ್ರದಗಳಾಗಿರುವುವು. ದಕ್ಷಿಣಭಾರತದ ಎಲ್ಲ ಶಿವಕ್ಷೇತ್ರಗಳ ಸೂಕ್ಷ್ಮಪರಿಚಯವನ್ನೂ ಒದಗಿಸುವ ಇಂತಹ ಗ್ರಂಥವು ಈಶ್ವರಭಕ್ತರಿಗೆ ಒಂದು ರತ್ನಪ್ರಾಯವೆನಿಸುವುದು.

ಆದರೆ ಈ ಭಾಗದ ಮೂಲಗ್ರಂಥದಲ್ಲಿ ಅನೇಕ ಅಕ್ಷರಸ್ಖಾಲಿತ್ಯಗಳೂ, ಅರ್ಥವೇ ಆಗದಂತಹ ಅಪೂರ್ವಪದಗಳೂ, ಛಂದಸ್ಸಿನಲ್ಲಿ ಅಸ್ತವ್ಯಸ್ತತೆಯನ್ನು

ಹೊಂದಿರುವ ಶ್ಲೋಕಗಳೂ ವಿಶೇಷವಾಗಿವೆ. ಭಾಷಾಶೈಲಿಯೂ ಇದರಲ್ಲಿ ಅಷ್ಟು ಮೃದುವಾಗಿರುವಂತೆ ಕಾಣುವುದಿಲ್ಲ. ಉಳಿದ ಮತ್ತಾವ ಅಂಶವೂ ಇಷ್ಟು ನಾರಿಕೇಳ ಪಾಕದಲ್ಲಿ ಮುಂದುವರಿದಿಲ್ಲ. ಪರಿವರ್ತನೆಗೆ ಅಸಾಧ್ಯವಾದೆಡೆಗಳಲ್ಲಿ ಪ್ರಶ್ನಾರ್ಥ ಸೂಚಕ ಚಿನ್ಹೆಗಳನ್ನುಪಯೋಗಿಸಿ, ಮೂಲವನ್ನು ಬದಲಾಯಿಸದೆ, ಮೂಲಪಾಠ ಮಾತ್ರವನ್ನೇ ಅಚ್ಚು ಹಾಕಿಸಲಾಗಿದೆ. ಮೈಸೂರು ಓರಿಯಂಟಲ್ ಲೈಬ್ರೆರಿಯಲ್ಲಿ ದೊರೆತ ಪ್ರತಿಯಲ್ಲದೆ ಮತ್ತಾವ ಪ್ರತಿಯೂ ನಮಗೆ ಪರಿವರ್ತನೆಯ ಕಾಲದಲ್ಲಿ ದೊರೆಯದಿದ್ದುದರಿಂದ ಆ ರೀತಿ ಮಾಡಬೇಕಾಯಿತು. ಒಟ್ಟಿನಲ್ಲಿ ಶಿವಸ್ತೋತ್ರಗಳಿಂದಲೂ, ಚಾರಿತ್ರಕವಾದ ಅನೇಕ ಕ್ಷೇತ್ರೇತಿಹಾಸಗಳಿಂದಲೂ ಭರಿತವಾಗಿರುವ ಈ ಗ್ರಂಥಭಾಗವು ಸರ್ವಜನಾದರಣೀಯವಾಗುವುದರಲ್ಲಿ ಸಂಶಯವಿಲ್ಲ.

ಪರಮಪವಿತ್ರಗಳೂ, ಭಾರತೀಯ ಸಂಸ್ಕೃತಿಪ್ರಚೋದಕಗಳೂ, ಆಮುಷ್ಮಿಕ ಫಲಪ್ರದಾತೃಗಳೂ, ಆದ ಇಂತಹ ಪುರಾಣಗ್ರಂಥಗಳು ನಮ್ಮನ್ನಾಳುತ್ತಿರುವ ಶ್ರೀಮನ್ಮಹಾರಾಜರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುಗಳವರ ಉದಾರಾಶ್ರಯದಿಂದ ಕನ್ನಡಿಗರಿಗೆ ರತ್ನಕೋಶಗಳಂತೆ ಈಗ ಹಸ್ತಗತವಾಗಿವೆ. ಇಂತಹ ಅಮೋಘಕಾರ್ಯಕ್ಕೆ ನೆರವಾಗಿರುವ ನಮ್ಮ ಶ್ರೀಮಹಾಪ್ರಭುವರ್ಯರಿಗೂ ಅವರ ಕುಟುಂಬವರ್ಗಕ್ಕೂ ಸರ್ವೇಶ್ವರನು ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತುಗಳನ್ನೂ ಕರುಣಿಸಿ ಸಲಹುತ್ತಿರಲೆಂದು ಅನನ್ಯಭಕ್ತಿಯಿಂದ ಪರಮೇಶ್ವರನನ್ನು ನಾನು ಪ್ರಾರ್ಥಿಸುತ್ತೇನೆ.

ವಿಕೃತಿನಾಮ ಸಂವತ್ಸರದ
ನಿಜಾಷಾಢ ಶುದ್ಧ ದ್ವಿತೀಯಾ
ಸೋಮವಾರ
17—7—1950

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದ
# ವಿಷಯಾನುಕ್ರಮಣಿಕಾ

## ಅಧ್ಯಾಯಗಳು ೧—೫೦

## ಆರನೆಯ ಅಧ್ಯಾಯ



## ಏಳನೆಯ ಅಧ್ಯಾಯ



## ಎಂಟನೆಯ ಅಧ್ಯಾಯ



## ಒಂಬತ್ತನೆಯ ಅಧ್ಯಾಯ



## ಹತ್ತನೆಯ ಅಧ್ಯಾಯ



## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ

## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ



## ಹದಿನಾರನೆಯ ಅಧ್ಯಾಯ



## ಹದಿನೇಳನೆಯ ಅಧ್ಯಾಯ



## ಹದಿನೆಂಟನೆಯ ಅಧ್ಯಾಯ



## ಹತ್ತೊಂಬತ್ತನೆಯ ಅಧ್ಯಾಯ



## ಇಪ್ಪತ್ತನೆಯ ಅಧ್ಯಾಯ



## ಇಪ್ಪತ್ತೊಂದನೆಯ ಅಧ್ಯಾಯ

## ಇಪ್ಪತ್ತೆರಡನೆಯ ಅಧ್ಯಾಯ



## ಇಪ್ಪತ್ತುಮೂರನೆಯ ಅಧ್ಯಾಯ



## ಇಪ್ಪತ್ತುನಾಲ್ಕನೆಯ ಅಧ್ಯಾಯ



## ಇಪ್ಪತ್ತುಐದನೆಯ ಅಧ್ಯಾಯ



## ಇಪ್ಪತ್ತಾರನೆಯ ಅಧ್ಯಾಯ



## ಇಪ್ಪತ್ತೇಳನೆಯ ಅಧ್ಯಾಯ



## ಇಪ್ಪತ್ತೆಂಟನೆಯ ಅಧ್ಯಾಯ



## ಇಪ್ಪತ್ತೊಂಬತ್ತನೆಯ ಅಧ್ಯಾಯ

### ಮೂವತ್ತನೆಯ ಅಧ್ಯಾಯ



### ಮೂವತ್ತೊಂದನೆಯ ಅಧ್ಯಾಯ



### ಮೂವತ್ತೆರಡನೆಯ ಅಧ್ಯಾಯ



### ಮೂವತ್ತುಮೂರನೆಯ ಅಧ್ಯಾಯ



### ಮೂವತ್ತುನಾಲ್ಕನೆಯ ಅಧ್ಯಾಯ



### ಮೂವತ್ತುಐದನೆಯ ಅಧ್ಯಾಯ



### ಮೂವತ್ತಾರನೆಯ ಅಧ್ಯಾಯ



### ಮೂವತ್ತೇಳನೆಯ ಅಧ್ಯಾಯ

## ನಲವತ್ತಾರನೆಯ ಅಧ್ಯಾಯ



## ನಲವತ್ತೇಳನೆಯ ಅಧ್ಯಾಯ



## ನಲವತ್ತೆಂಟನೆಯ ಅಧ್ಯಾಯ



## ನಲವತ್ತೊಂಬತ್ತನೆಯ ಅಧ್ಯಾಯ



## ಐವತ್ತನೆಯ ಅಧ್ಯಾಯ





॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಪ್ರಥಮೋಽಧ್ಯಾಯಃ

॥ ಸೂತ ಉವಾಚ ॥

ಓಂ ವಂದೇ ಮಹೇಶ್ವರಂ ದೇವಂ ವಿಘ್ನೇಶಂ ಷಣ್ಮುಖಂ ಶಿವಂ ।
ಗಣೇಶಾನ್ನಂದಿಮುಖ್ಯಾಂಶ್ಚ ಶಿವಭಕ್ತಾನ್ಮಹಾಮುತೀನ್ ॥೧॥

ಮಂಗಲಂ ದಿಶತು ಮೇ ವಿನಾಯಕೋ
ಮಂಗಲಂ ದಿಶತು ಮೇ ಸರಸ್ವತೀ ।
ಮಂಗಲಂ ದಿಶತು ಮೇ ಮಹೇಶ್ವರೀ
ಮಂಗಲಂ ದಿಶತು ಮೇ ಮಹೇಶ್ವರಃ ॥೨॥

---

## ಶ್ರೀಶಿವರಹಸ್ಯದ ಸಪ್ತಮಾಂಶದ ಉತ್ತರಾರ್ಧದಲ್ಲಿ ಮೊದಲನೆಯ ಅಧ್ಯಾಯ

"ಗ್ರಂಥಾರಂಭದಲ್ಲಿ ಸಕಲೈಶ್ವರ್ಯಸಂಪನ್ನನಾದ ಪರಶಿವನಿಗೆ ಭಕ್ತಿಯಿಂದ ವಂದಿಸಿ ಶಿವಪರಿವಾರದೇವತೆಗಳಾದ ವಿಘ್ನೇಶ್ವರ, ಕುಮಾರಸ್ವಾಮಿ, ನಂದಿಕೇಶ್ವರ, ಮೊದಲಾದ ಗಣಾಧಿಪತಿಗಳಿಗೂ, ದಿವ್ಯಜ್ಞಾನಿಗಳೆನಿಸಿದ ಶೈವಧರ್ಮಾನುಯಾಯಿಗಳಿಗೂ ಪ್ರಣಾಮಮಾಡುವೆನು. ॥೧॥

ಸಕಲ ವಿಘ್ನನಾಶಕನಾದ ವಿನಾಯಕನೂ, ವಿದ್ಯಾಭಿಮಾನಿನಿಯಾದ ಸರಸ್ವತಿಯೂ, ಪ್ರಪಂಚಕ್ಕೇ ಮಾತಾಪಿತೃಗಳೆನಿಸಿದ ಪಾರ್ವತೀ ಮತ್ತು ಪರಮೇಶ್ವರರೂ ನನಗೆ ಮಂಗಳವನ್ನುಂಟುಮಾಡಲಿ.'' ಹೀಗೆಂದು ಸೂತಮಹಾಮುನಿಗಳು ಇಷ್ಟ ದೇವತಾಪ್ರಾರ್ಥನೆಯನ್ನು ನೆರವೇರಿಸಿ, ಅನಂತರ ನೈಮಿಷಾರಣ್ಯವಾಸಿಗಳಾದ ಮಹಾಮುನಿಗಳನ್ನು ಕುರಿತು ಈ ರೀತಿ ಮುಂದಿನ ಶಿವರಹಸ್ಯ ಭಾಗವನ್ನು ವಿವರಿಸಲುಪಕ್ರಮಿಸಿದರು. ॥೨॥

ಜಂಬೂದ್ವೀಪಸ್ಯ ಮಾಹಾತ್ಮ್ಯಮಿತಿಹಾಸೋಽತ್ರ ಕಥ್ಯತೇ ।
ತತ್ಪ್ರವಕ್ಷ್ಯಾಮಿ ಮುನಯೋ ನೈಮಿಷಾರಣ್ಯವಾಸಿನಃ ॥೩॥

॥ ಮುನಯ ಊಚುಃ ॥

ಸೂತ ಸೂತ ಮುನಿಶ್ರೇಷ್ಠ ಪುರಾಣಂ ವೇದಸಂಮತಂ ।
ಶ್ರುತಮಸ್ಮಾಭಿರಾನಂದಂ ತ್ವನ್ಮುಖಾಂಭೋಜನಿಃಸೃತಂ ॥೪॥

ಅವಿಮುಕ್ತಪ್ರಶಂಸಾ ಚ ವಿಷ್ಣೋಶ್ಚೈವ ಮಹಿಮ್ನಕಂ ।
ಪುಷ್ಪದಂತಮಹಿಮ್ನಶ್ಚ ನಾಮ್ನಾಮಷ್ಟಶತಂ ವಿಭೋಃ ॥೫॥

ಕಾಲಹಸ್ತಿಪ್ರಭಾವಶ್ಚ ಅರುಣಾದ್ರೀಶವೈಭವಂ ।
ವೃದ್ಧಾದ್ರೀಶಪ್ರಭಾವಂ ಚ ಶ್ರೀಚಿದಂಬರವೈಭವಂ ॥೬॥

ಕುಂಭಘೋಣಪ್ರಭಾವಂ ಚ ಮಧ್ಯಾರ್ಜುನಪ್ರಶಂಸನಂ ।
ಪುಣ್ಯೇ ಶಿವರಹಸ್ಯೇಽತ್ರ ಸಪ್ತಮಾಂಶೇ ತ್ವಯೋದಿತಂ ॥೭॥

---

“ನೈಮಿಷಾರಣ್ಯದಲ್ಲಿ ವಾಸಮಾಡುವ ಮಹಾಮುನಿಗಳಿರಾ! ಜಂಬೂದ್ವೀಪದ ಮಹಿಮೆಗೆ ಸಂಬಂಧಿಸಿದ ಇತಿಹಾಸವನ್ನು ಈಗ ನಿಮಗೆ ಹೇಳುವೆನು. ಆಸಕ್ತಿಯಿಂದ ಕೇಳಿರಿ” ಎಂದೊಡನೆಯೇ ಅಲ್ಲಿ ನೆರೆದಿದ್ದ ಸಕಲ ಮುನಿವೃಂದವೂ ಸೂತಮುನಿಯೊಡನೆ ಹೀಗೆ ಬಿನ್ನೈಸಿಕೊಂಡಿತು. ॥೩॥

“ಮುನಿಪುಂಗವನಾದ ಸೂತಮಹಾಮುನಿಯೇ, ನಿನ್ನ ಮುಖಕಮಲದಿಂದ ಪ್ರಕಾಶಿತವಾದ ವೇದಪ್ರಸಿದ್ಧವಾಗಿರುವ ಪುರಾಣಸಾರವನ್ನು ನಾವು ಆನಂದದಿಂದ ಕೇಳಿದೆವು. ಅವಿಮುಕ್ತಕ್ಷೇತ್ರ (ಕಾಶೀ) ಪ್ರಶಂಸೆ, ವಿಷ್ಣುಕೃತವಾದ ಶಿವಮಹಿಮ್ನಸ್ತುತಿ, ಪುಷ್ಪದಂತವಿರಚಿತ ಶಿವಸ್ತುತಿ, ಸರ್ವವ್ಯಾಪಕನೆನಿಸಿದ ಪರಮೇಶ್ವರನ ಅಷ್ಟೋತ್ತರಶತ (ನೂರೆಂಟು) ನಾಮಗಳು, ಕಾಲಹಸ್ತೀಶ್ವರಪ್ರಭಾವ, ಅರುಣಾಚಲ, ವೃದ್ಧಾಚಲ, ಶ್ರೀಚಿದಂಬರ, ಕುಂಭಘೋಣ ಇವೇ ಮೊದಲಾದ ಕ್ಷೇತ್ರಗಳ ಮಹಿಮೆ, ಮಧ್ಯಾರ್ಜುನಕ್ಷೇತ್ರ ಪ್ರಶಂಸೆ, ಇವು ಪುಣ್ಯಕರವಾದ ಶಿವರಹಸ್ಯದ ಇದೇ ಏಳನೆಯ ಅಂಶದ ಪೂರ್ವಾರ್ಧದಲ್ಲಿ ಮಹಾದೇವನು ದೇವಿಗೆ ಹೇಳಿದುದನ್ನು ನೀನು ನಮಗೆ ತಿಳಿಸಿರುವೆ. ॥೪-೫-೬-೭॥

**ಪೂರ್ವಾರ್ಧೇ ತು ಮುನಿಶ್ರೇಷ್ಠ ದೇವ್ಯೈ ದೇವೇನ ಭಾಷಿತಂ ।**
**ಜಂಬೂದ್ವೀಪೇ ತು ಕಾವೇರ್ಯಾ ದಕ್ಷಿಣೇ ಭುವಿ ಯಾವತಿ ॥೮॥**

**ತಾವದ್ವಕ್ತುಂ ಮುನಿಶ್ರೇಷ್ಠ ಶಿವಕ್ಷೇತ್ರಪರಂ ಶುಭಂ ।**
**ತಾಮ್ರಪರ್ಣ್ಯಾಶ್ಚ ತಟಯೋಃ ಕ್ಷೇತ್ರಾಣ್ಯುತ್ತಮಾನಿ ಚ ॥೯॥**

**ಶ್ರೋತುಕಾಮಾ ವಯಂ ಪುಣ್ಯಂ ಮಾಹಾತ್ಮ್ಯಮಘನಾಶಕಂ ।**
**ವದಸ್ವ ಕತಿ ತೀರ್ಥಾನಿ ಕತಿಕ್ಷೇತ್ರಾಣಿ ಸಂತಿ ಚ ॥೧೦॥**

**ಸ್ವಯಂಭೂಸ್ಥಾನಚರಿತಂ ಪ್ರತಿಷ್ಠಾಸ್ಥಾನವೈಭವಂ ।**
**ವಕ್ತುಮರ್ಹಸ್ಯಶೇಷೇಣ ಯಾವತ್ತತ್ರ ಶಿವಾಲಯಂ ॥೧೧॥**

॥ ಸೂತ ಉವಾಚ ॥

**ಪುರಾ ಕೈಲಾಸಶಿಖರೇ ಪಾರ್ವತೀ ಪರಮೇಶ್ವರಂ ।**
**ಸುಖಾಸನೇ ಸಮಾಸೀನಂ ವಾಚಮೇತಾಮುವಾಚ ಹ ॥೧೨॥**

---

ಆದರೆ ಜಂಬೂದ್ವೀಪದಲ್ಲಿ ಕಾವೇರೀ ನದಿಯ ದಕ್ಷಿಣ ದಡದಲ್ಲಿರುವ ಶಿವಕ್ಷೇತ್ರಗಳೆಷ್ಟು? ತಾಮ್ರಪರ್ಣೀ ನದಿಯದಡದಲ್ಲಿರುವ ಅತ್ಯುತ್ತಮಗಳೂ ಶುಭಕರಗಳೂ ಆದ ಕ್ಷೇತ್ರಗಳು ಯಾವುವು? ಎಲೈ ಮುನಿಶ್ರೇಷ್ಠನೇ, ನಾವು ಪಾಪಿಗಳ ಪಾಪರಾಶಿಯನ್ನು ನಾಶಮಾಡಿ, ಪುಣ್ಯಪ್ರದಗಳಾಗಿರುವ ಆ ಕ್ಷೇತ್ರಗಳ ಮಹಿಮೆಯನ್ನು ಕೇಳಬೇಕೆಂದು ಕುತೂಹಲವುಳ್ಳವರಾಗಿದ್ದೇವೆ. ಮುನಿಪುಂಗವನೇ, ಅಲ್ಲಿ ಎಷ್ಟು ಕ್ಷೇತ್ರಗಳು ಮತ್ತು ಎಷ್ಟು ತೀರ್ಥಗಳಿವೆಯೆಂಬುದನ್ನು ನಮಗೆ ದಯೆಯಿಂದ ತಿಳಿಸುವನಾಗು. ॥೮-೯-೧೦॥

ಸ್ವಯಂಭುವೆನಿಸಿದ ಮಹೇಶ್ವರನ ಸ್ಥಾನಗಳ ಚರಿತ್ರೆಯನ್ನೂ, ಆ ದೇವನನ್ನು ಪ್ರತಿಷ್ಠಿಸಿರುವ ಸ್ಥಾನಗಳ ವೈಭವವನ್ನೂ, ಶಿವಾಲಯ ಸಂಬಂಧವಾದ ಇತರ ಎಲ್ಲಾ ರಹಸ್ಯಗಳನ್ನೂ, ಸ್ವಲ್ಪವೂ ಬಿಡದೇ ಹೇಳಲು ನೀನೇ ಸಮರ್ಥನಾಗಿದ್ದೀಯೆಂದು ನೈಮಿಷಾರಣ್ಯವಾಸಿಗಳಾದ ಮುನಿಗಳು ಸೂತಮಹಾಮುನಿಯನ್ನು ವಿನಯದಿಂದ ಪ್ರಾರ್ಥಿಸಿದರು. ॥೧೧॥

ಇದನ್ನು ಕೇಳಿ, ಸೂತಮುನಿಗಳು ಅವರ ಕೋರಿಕೆಯಂತೆ ಆ ಕ್ಷೇತ್ರಗಳ ಮಹಿಮೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದರು--ಹಿಂದೆ ಕೈಲಾಸಪರ್ವತದ

|| ಪಾರ್ವತ್ಯುವಾಚ ||

ಶಿವ ಶಂಭೋ ವಿರೂಪಾಕ್ಷ ಚಿನ್ಮಯಾಕಾರ ಶಂಕರ ।
ಭೂಲೋಕೇ ಯಾನಿ ತೀರ್ಥಾನಿ ತವ ಕ್ಷೇತ್ರಾಣಿ ಯಾನಿ ವೈ ॥೧೩॥

ವಿಷ್ಣುಕ್ಷೇತ್ರಾಣಿ ಯಾನ್ಯೇವ ತ್ವನ್ಮುಖಾಚ್ಚ ಶ್ರುತಂ ಮಯಾ ।
ಕಾವೇರ್ಯಾಶ್ಚ ಪ್ರಸಂಗೇ ತು ಸದ್ಮತ್ಯಾಗಲಯಾನಿ ಚ ॥೧೪॥

ವರ್ಣಯ ತ್ವಂ ಮಹಾದೇವಂ ಕಾವೇರ್ಯಾ ದಕ್ಷಿಣೇ ತಟೇ ।
ತಾಮ್ರಪರ್ಣ್ಯಾಸ್ತಟದ್ವಂದ್ವೇ ವದ ಕ್ಷೇತ್ರಾಣಿ ಶಂಕರ ॥೧೫॥

ಯಾನಿ ಕ್ಷೇತ್ರಾಣಿ ತೀರ್ಥಾನಿ ವಕ್ತುಮರ್ಹಸಿ ಮೇ ಪ್ರಭೋ ।
ಯಾಶ್ಚ ನದ್ಯೋ ನದಾಶ್ಚೈವ ಮುಕ್ತಿದಾಶ್ಚ ವೃಷಧ್ವಜ ॥೧೬॥

---

ಶಿಖರದಲ್ಲಿ ಒಂದುಸಾರಿ ಸುಖಾಸನದಲ್ಲಿ ಮಂಡಿಸಿದ್ದ ಪಾರ್ವತಿಯು ಪರಮೇಶ್ವರನನ್ನು ಕುರಿತು ಹೀಗೆ ಪ್ರಶ್ನೆಮಾಡಿದಳು. ||೧೨||

"ಯೋಗಿಗಳ ಮನಸ್ಸಿನಲ್ಲಿ ನೆಲಸಿರುವವನೂ, ಸಕಲ ಲೋಕಕ್ಕೂ ಸುಖಶಾಂತಿಗಳನ್ನೆಸಗುವವನೂ, ಮೂರು ಕಣ್ಣುಗಳಿಂದ ಲೋಕದಲ್ಲಿ ವಿರೂಪವಾದ ನೇತ್ರಗಳುಳ್ಳವನೆಂದು ಹೇಳಲ್ಪಡುವವನೂ, ಚಿನ್ಮಯಸ್ವರೂಪನೂ ಆದ ಶಂಕರನೇ, ಭೂಲೋಕದಲ್ಲಿ ನಿನ್ನ ಸಂಬಂಧವಾದ ಕ್ಷೇತ್ರಗಳೆಷ್ಟಿರುವುವು ? ನಿನ್ನ ಮುಖದಿಂದಲೇ ವಿಷ್ಣುಕ್ಷೇತ್ರಗಳ ವಿಷಯಗಳನ್ನೆಲ್ಲಾ ಹಿಂದೆ ಕೇಳಿರುವೆನು. ಕಾವೇರೀ ನದಿಯ ಮಾತಿನ ಪ್ರಸಂಗದಿಂದಲೇ ಆ ನದಿಯ ದಡದಲ್ಲಿರುವ ನಿನ್ನ ನಿಲಯಗಳು, ಅಲ್ಲಿ ಮಾಡಬೇಕಾದ ದಾನಗಳು, ಅದರಿಂದ ನಾಶವಾಗುವ ಪಾಪಗಳನ್ನೆಲ್ಲಾ ದಯೆಯಿಟ್ಟು ತಿಳಿಸುವನಾಗು. ||೧೩-೧೪||

ಶಂಕರಸ್ವಾಮಿಯೇ, ಕಾವೇರಿಯ ದಕ್ಷಿಣ ದಡದಲ್ಲಿಯೂ ಮತ್ತು ತಾಮ್ರಪರ್ಣೀ ನದಿಯ ಎರಡು ದಡಗಳಲ್ಲಿಯೂ ಇರುವ ದೇವತೋತ್ತಮನಾದ ನಿನ್ನ ಮಹಿಮೆಯನ್ನು ಪ್ರದರ್ಶಿಸುವ ಕ್ಷೇತ್ರಗಳನ್ನು ನನಗೆ ತಿಳಿಸು. ಓ ವೃಷಭಧ್ವಜನೇ, ಪ್ರಭುವಾದ ನೀನು ನನಗೆ ಹೇಳಲು ಯೋಗ್ಯವಾದ ಮತ್ತು ಮುಕ್ತಿಪ್ರದವಾದ ಕ್ಷೇತ್ರಗಳು, ತೀರ್ಥಗಳು, ನದಿ ಮತ್ತು ನದಗಳು, ಇವುಗಳ ವಿಷಯವನ್ನೆಲ್ಲಾ ವಿವರವಾಗಿ ಬೋಧಿಸು. ||೧೫-೧೬||

ಹಾಲಾಸ್ಯೇಶಸ್ಯ ಸದನಂ ವೇಣುನಾಥಂ ಶುಚೀಂದ್ರಕಂ ।
ಪುಣ್ಯಮುತ್ತರಕೋಶಶ್ಚ ತಥಾ ವಾತಪುರಂ ಹರಂ ॥೧೭॥

ಗಂಧಮಾದನಶೈಲೇ ಚ ರಾಮೇಶ್ವರಮಿತಿ ಸ್ಥಿತಂ ।
ಪುಣ್ಯಂ ಶಿವಧನುಷ್ಕೋಟಿಂ ವಕ್ತುಮರ್ಹಸಿ ಶಂಕರ ॥೧೮॥

॥ ಶ್ರೀ ಈಶ್ವರ ಉವಾಚ ॥

ಶೃಣು ದೇವಿ ಮಮ ಕ್ಷೇತ್ರಂ ಕಾವೇರೀಸೇತುಮಧ್ಯಗಂ ।
ತಾಮ್ರಪರ್ಣೀತಟೇ ಚಾಪಿ ಪುಣ್ಯಕ್ಷೇತ್ರಾಣಿ ಸಂತಿ ಮೇ ॥೧೯॥

ತಯೋರ್ವಿಂಶತಿಸಾಹಸ್ರಂ ಮಮ ಕ್ಷೇತ್ರಂ ಚ ತಿಷ್ಠತಿ ।
ವಿಷ್ಣೋಃ ಕ್ಷೇತ್ರಸಹಸ್ರಂ ವೈ ಪುರಾತನಮಹರ್ನಿಶಂ ॥೨೦॥

ಸುಬ್ರಹ್ಮಣ್ಯಮಹಾಕ್ಷೇತ್ರಂ ಷಟ್ಸಹಸ್ರಂ ಪ್ರತಿಷ್ಠಿತಂ ।
ವಿನಾಯಕಾಲಯಂ ಪಂಚಸಹಸ್ರಂ ಚ ಪ್ರಕೀರ್ತಿತಂ ॥೨೧॥

ಕಾಲೀಕ್ಷೇತ್ರಸಹಸ್ರಂ ವೈ ತಾಂಡವೇಶಸ್ಥಲಂ ಶತಂ ।
ತ್ರಿಸಹಸ್ರಂ ಚ ದುರ್ಗಾಯಾಃ ಶಾಕ್ತಕ್ಷೇತ್ರಾಯುತಂ ಶಿವೇ ॥೨೨॥

---

ಮಹಾದೇವನೇ, ಹಾಲಾಸ್ಯೇಶ್ವರನ ದೇವಾಲಯ, ವೇಣುನಾಥ, ಶುಚೀಂದ್ರಕ, ಪುಣ್ಯಕರವಾದ ಉತ್ತರಕೋಶ, ಹಾಗೆಯೇ ಹರನೆನಿಸಿದ ನಿನಗೆ ಆವಾಸವಾದ ವಾತಪುರ, ಗಂಧಮಾದನಪರ್ವತದಲ್ಲಿ ರಾಮೇಶ್ವರವೆಂದು ಪ್ರಸಿದ್ಧವಾಗಿರುವ ಶಿವಕ್ಷೇತ್ರ, ಪುಣ್ಯಕರವಾದ ಶಿವಧನುಷ್ಕೋಟಿ ಇವುಗಳ ವಿಷಯವನ್ನೆಲ್ಲಾ ನನಗೆ ಹೇಳಲು ನೀನೇ ಸಮರ್ಥನಿರುವೆ" ಎಂದು ಪಾರ್ವತಿಯು ಈಶ್ವರನನ್ನು ಪ್ರಾರ್ಥಿಸಿದಳು. ಆಗ ಪರಶಿವನು ಹೀಗೆಂದನು. ॥೧೭-೧೮॥

ದೇವಿಯೇ ಕೇಳು ; ಕಾವೇರೀ ನದಿಯಿಂದ ರಾಮಸೇತುವರೆಗಿನ ಮಧ್ಯಪ್ರದೇಶದಲ್ಲಿಯೂ, ತಾಮ್ರಪರ್ಣೀನದಿಯ ದಡದಲ್ಲಿಯೂ ನನ್ನ ಅನೇಕ ಪುಣ್ಯಕ್ಷೇತ್ರಗಳಿರುವುವು. ಅವುಗಳಲ್ಲಿ ಇಪ್ಪತ್ತುಮೂರುಸಾವಿರ ಶಿವಕ್ಷೇತ್ರಗಳಿರುವುವು. ಪ್ರಾಚೀನವಾದ ಸಾವಿರ ವಿಷ್ಣುವಿನ ಕ್ಷೇತ್ರಗಳಿರುವುವು. ಆರುಸಾವಿರ ಸುಬ್ರಹ್ಮಣ್ಯ ಮಹಾಕ್ಷೇತ್ರಗಳಿರುವುವು. ಐದುಸಾವಿರ ವಿನಾಯಕನ ದಿವ್ಯಕ್ಷೇತ್ರಗಳೂ, ಸಾವಿರ ಕಾಲಿಕಾ

ಏಕಾದಶಸಹಸ್ರಂ ವೈ ಕ್ಷುದ್ರಭೂತಾಲಯಂ ಭುವಿ ।
ಏತತ್ಸರ್ವಮಹಂ ಕ್ಷೇತ್ರಮಧಿಷ್ಠಾಯ ಪುರಾತನಂ ॥೨೩॥

ಚೋಲೇ ಪಾಂಡ್ಯೇ ಚ ಮುನಿಭಿರ್ದೇವೈರಪಿ ಸುಪೂಜಿತಂ ।
ಮಮ ಕ್ಷೇತ್ರೇಷು ಹರಿಣಾ ತ್ವಯಾ ಸಹ ಮಹೇಶ್ವರಿ ॥೨೪॥

ವಾಸಂ ಕರೋಮಿ ತಸ್ಯಾಪಿ ಕ್ಷೇತ್ರೇಷು ಚ ಹರೇರಹಂ ।
ನ ವಿಮುಂಚಾಮಿ ತತ್ಕ್ಷೇತ್ರಂ ಕಲ್ಪಾಂತೇಽಪಿ ಕದಾಚನ ॥೨೫॥

ತೇಷು ಶ್ರೇಷ್ಠಾನ್ಯಹಂ ವಕ್ಷ್ಯೇ ತ್ರ್ಯಕ್ಷಪ್ರೀತಾನಿ ಕಾನಿಚಿತ್ ।
ನ ಶಕ್ಯಂ ವಿಸ್ತರಾದ್ವಕ್ತುಂ ತೇ ಸರ್ವಕ್ಷೇತ್ರವೈಭವಂ ॥೨೬॥

ಮುಕ್ತಿಕ್ಷೇತ್ರಂ ಪ್ರವಕ್ಷ್ಯಾಮಿ ಶ್ರೀಕಂಠಂ ಜಂಬುಕೇಶ್ವರಂ ।
ರತ್ನಾದ್ರಿಮಾತ್ರಶಿಖರಂ ತೃಣಜ್ಯೋತೀಶ್ವರಂ ಶಿವೇ ॥೨೭॥

ಶ್ರೀ ವಾಂಛಂಚೈವ ಮಾಯೂರಂ ಕುಂಭೇಶಂ ತಾಲನಾಯಕಂ ।
ವೈದ್ಯನಾಥಂ ಪಂಚನದಂ ತೇಜನೀಶಂ ಚ ಸುಂದರಂ ॥೨೮॥

---

ಕ್ಷೇತ್ರಗಳೂ, ನೂರು ತಾಂಡವೇಶ್ವರನ ಕ್ಷೇತ್ರಗಳೂ, ಮೂರುಸಾವಿರ ದುರ್ಗಾ ಕ್ಷೇತ್ರಗಳೂ, ಹತ್ತುಸಾವಿರ ಶಾಕ್ತರ (ಶಕ್ತಿಯನ್ನಾರಾಧಿಸುವವರ) ಕ್ಷೇತ್ರಗಳೂ ಪ್ರಸಿದ್ಧವಾಗಿರುವುವು. ||೧೯-೨೦-೨೧-೨೨||

ಅದೇ ಭೂಮಿಯಲ್ಲಿ ಹನ್ನೊಂದುಸಾವಿರ ಇತರ ಕ್ಷುದ್ರದೇವತೆಗಳ ಆಲಯಗಳಿವೆ. ಪುರಾತನವಾದ ಈ ಕ್ಷೇತ್ರಗಳೆಲ್ಲವನ್ನೂ ನಾನು ಆಶ್ರಯಿಸಿ, ಚೋಲ ಮತ್ತು ಪಾಂಡ್ಯದೇಶಗಳಲ್ಲಿ ಮುನಿಗಳಿಂದಲೂ, ದೇವತೆಗಳಿಂದಲೂ ಪೂಜಿಸಲ್ಪಡುವ ಆ ದಿವ್ಯ ಕ್ಷೇತ್ರಗಳಲ್ಲಿ, ವಿಷ್ಣು ಮತ್ತು ನೀನು ಇಬ್ಬರೊಡನೆಯೂ ನಾನು ಯಾವಾಗಲೂ ವಾಸಮಾಡುತ್ತಿರುವೆನು. ಎಲೌ ಮಹೇಶ್ವರಿಯೇ, ಆ ವಿಷ್ಣುವಿನ ಕ್ಷೇತ್ರದಲ್ಲಿಯೂ ನಾನು ಎಡಬಿಡದೆ ನನ್ನ ಸಾನ್ನಿಧ್ಯವನ್ನಿಟ್ಟಿರುವೆನು. ಕಲ್ಪದ ಕೊನೆಯಲ್ಲಿಯೂ ನಾನು ಆ ಕ್ಷೇತ್ರವಾಸವನ್ನು ಬಿಡುವುದಿಲ್ಲ. ||೨೩-೨೪-೨೫||

ದೇವಿಯೇ, ಆ ಕ್ಷೇತ್ರಗಳಲ್ಲಿ ಶ್ರೇಷ್ಠವಾದ ಕೆಲವು ಕೆಲವು ಕ್ಷೇತ್ರಗಳ ಹೆಸರನ್ನು ಮಾತ್ರ ಹೇಳುತ್ತೇನೆ ಕೇಳು; ಅವುಗಳೆಲ್ಲವೂ ತ್ರಿಲೋಚನನೆನಿಸಿದ

ಮಾರ್ಕಂಡೇಶೇಶ್ವರಂ ಚಾಪಿ ದ್ರೋಣೀಪುರಮನುತ್ತಮಂ ।
ಪುತ್ರಪ್ರೇಶಂ ಚ ವಲ್ಮೀಕಂ ವೇದಾರಣ್ಯಮನುತ್ತಮಂ ॥೨೯॥

ದುರ್ಗೇಶಂ ಮಂಗಲಾಂಬೇಶಸ್ಥಲಂ ಪುಣ್ಯಾತ್ಮಕಂ ಪರಂ ।
ಚಂದ್ರೇಶ್ವರಂ ಚ ಕುದ್ದಾಲಂ ಗೋವಟಂ ನಲಪೂಜಿತಂ ॥೩೦॥

ತಂತ್ರೇಶ್ವರಂ ಮಹಾಪುಣ್ಯಂ ಗೋಕರ್ಣಮಪಿ ದಕ್ಷಿಣಂ ।
ಆತ್ಮನಾಥಂ ಚ ಸುಮಹತ್ಕನ್ಯಾಚಿತ್ರಸಭೇಶ್ವರಂ ॥೩೧॥

ದಕ್ಷಿಣೇ ಬದರೀನಾಥಂ ಸಾಕ್ಷೀನಾಥಂ ಧೃತೀಶ್ವರಂ ।
ಗರ್ಭರಕ್ಷಾಪುರೀಶಂ ಚ ಕಾಶ್ಯಾರಣ್ಯೇಶ್ವರಂ ತಥಾ ॥೩೨॥

ಕಾಲಕೂಟನಿಷಾದಂ ತ್ವಕ್ಷೀರಿಣೀಶಂ ತ್ರಿಕೋಟಿಕಂ ।
ಚಕ್ರೇಶಂ ಪುಣ್ಯಕೇಶಂ ಚ ಪಿತ್ರೇಶಂ ಮಾಧವೇಶ್ವರಂ ॥೩೩॥

ಅತ್ಯುನ್ನತಪ್ಲವೇಶಾಖ್ಯಂ ಕುಟಜೇಶ್ವರಮದ್ಭುತಂ ।
ತ್ರ್ಯಂಬಕೇಶಂ ಘಟೇಶಂ ಚ ಲಿಕುಚೇಶ್ವರಮೇವ ಚ ॥೩೪॥

---

ನನಗೆ ಪ್ರಿಯಂಕರವಾದುವು. ಎಲ್ಲಾ ಕ್ಷೇತ್ರಗಳ ವೈಭವವನ್ನೂ ವಿಸ್ತಾರವಾಗಿ ನಿನಗೆ ಹೇಳಲು ಈಗ ಸಾಧ್ಯವಿಲ್ಲ. ಅವುಗಳಲ್ಲಿ ಮುಕ್ತಿಪ್ರದವಾದ ಶಿವಕ್ಷೇತ್ರಗಳ ಹೆಸರನ್ನು ಮಾತ್ರ ಹೇಳುತ್ತೇನೆ. "ಶ್ರೀಕಂಠೇಶ್ವರಕ್ಷೇತ್ರ, ಜಂಬುಕೇಶ್ವರ, ರತ್ನಾದ್ರಿಶಿಖರದಲ್ಲಿರುವ ತೃಣಜ್ಯೋತೀಶ್ವರ, ಶ್ರೀ ವಾಂಛೇಶ್ವರ, ಮಾಯೂರಕ್ಷೇತ್ರ, ಕುಂಭೇಶ, ತಾಲನಾಯಕ, ವೈದ್ಯನಾಥ, ಪಂಚನದ, ಸುಂದರವಾದ ತೇಜನೀಶ, ಮಾರ್ಕಂಡೇಶ, ಅತ್ಯುತ್ತಮವಾದ ದ್ರೋಣೀಪುರ, ಪುತ್ರಪ್ರೇಶ, ವಲ್ಮೀಕ, ಉತ್ತಮವಾದ ವೇದಾರಣ್ಯ, ದುರ್ಗೇಶ, ಮಂಗಲಾಂಬೇಶಸ್ಥಲ; ಚಂದ್ರೇಶ್ವರ, ಕುದ್ದಾಲೇಶ್ವರ, ನಳಚಕ್ರವರ್ತಿಯಿಂದ ಪೂಜಿಸಲ್ಪಟ್ಟ ಗೋವಟಕ್ಷೇತ್ರ, ತಂತ್ರೇಶ್ವರ, ಮಹಾಪುಣ್ಯಕರವಾದ ದಕ್ಷಿಣಗೋಕರ್ಣ, ಆತ್ಮನಾಥೇಶ್ವರ, ಕನ್ಯಾಚಿತ್ರ ಸಭೇಶ್ವರ, ದಕ್ಷಿಣಬದರೀನಾಥ, ಸಾಕ್ಷೀನಾಥ, ಧೃತೀಶ್ವರ, ಗರ್ಭರಕ್ಷಾಪುರೀಶ, ಕಾಶ್ಯಾರಣ್ಯೇಶ್ವರ, ಕಾಲಕೂಟ ವಿಷಾದೇಶ್ವರ, ಅಕ್ಷೀರಿಣೀಶ, ತ್ರಿಕೋಟೀಶ, ಚಕ್ರೇಶ, ಪುಣ್ಯಕೇಶ, ಪಿತ್ರೇಶ, ಮಾಧವೇಶ್ವರ, ಉನ್ನತವಾದ ಪ್ಲವೇಶ್ವರ, ಅದ್ಭುತಮಹಿಯುಳ್ಳ ಕುಟಜೇಶ್ವರ, ತ್ರ್ಯಂಬಕೇಶ, ಘಟೇಶ, ಲಿಕುಚೇಶ್ವರ, ವ್ಯಾಘ್ರೇಶ್ವರ, ಖಂಡಿಕೇಶ, ವೇದಮನ್ನಾದ

ವ್ಯಾಘ್ರೇಶಂ ಖಂಡಿಕೇಶಂ ಚ ವೇದಮುನ್ಯಾದನೇಶ್ವರಂ ।
ಭಿಕ್ಷಾಟನೇಶ್ವರಕ್ಷೇತ್ರಂ ಶ್ವೇತಾರಣ್ಯಂ ಮನೋಹರಂ ॥೩೫॥

ಛಾಯಾವನಂ ಸಂಗಮೇಶಂ ಕುಶಾರಣ್ಯಮನುತ್ತಮಂ ।
ಶ್ರೀವತ್ಸವತ್ಸಲಾಖ್ಯಂ ವೈ ಕ್ಷೇತ್ರಾಣ್ಯೇತಾನಿ ಶೈಲಜೇ ॥೩೬॥

ಆಸಮಂತಾತ್ಸಹ್ಯಜಾಯಾಸ್ತಾಮ್ರಪರ್ಣ್ಯಾಸ್ತಟೇ ಶಿವೇ ।
ಏವಮಾದೀನಿ ಪುಣ್ಯಾನಿ ಸಹ್ಯಜಾತಟಯೋರ್ದ್ವಯೋಃ ॥೩೭॥

ಸಹ್ಯಸಾಗರಯೋರ್ಮಧ್ಯೇ ಕ್ಷೇತ್ರಾಣ್ಯತ್ಯುತ್ತಮಾನಿ ಮೇ ।
ತತ್ತತ್ತೀರೇ ಮಹಾಕ್ಷೇತ್ರಂ ಜ್ಞಾತಂ ಸ್ಯಾತ್ಸಹ್ಯಜಾತಟೇ ॥೩೮॥

ದೇವರ್ಷಿಸ್ಥಾಪಿತಂ ಮುಖ್ಯಂ ಸ್ವಯಂಭೂತಸಹಸ್ರಕಂ ।
ಅಜ್ಞಾನನಾಶಿನೀತೀರೇ ಕ್ಷೇತ್ರಾಣ್ಯನ್ಯಾನಿ ಶೈಲಜೇ ॥೩೯॥

---

ನೇಶ್ವರ, ಭಿಕ್ಷಾಟನೇಶ್ವರ, ಮನೋಹರವಾದ ಶ್ವೇತಾರಣ್ಯ, ಛಾಯಾವನ, ಸಂಗಮೇಶ, ಅತ್ಯುತ್ತಮವಾದ ಕುಶಾರಣ್ಯ, ಶ್ರೀವತ್ಸವತ್ಸಲಕ್ಷೇತ್ರ ಇವೇ ಮೊದಲಾದ ಕ್ಷೇತ್ರಗಳು ಕಾವೇರಿಯಿಂದ ತಾಮ್ರಪರ್ಣೀ ನದಿಯುವರೆಗೂ ಇರುವುವೆಂದು ತಿಳಿ. ಎಲೌ ಪರ್ವತರಾಜಕುಮಾರಿ, ಕಾವೇರೀ ಮತ್ತು ತಾಮ್ರಪರ್ಣೀನದಿಗಳ ಎರಡು ದಡಗಳಲ್ಲಿರುವ ಈ ಕ್ಷೇತ್ರಗಳು ತುಂಬಾ ಪುಣ್ಯಕರಗಳೆನಿಸುವುವು. ||೨೬-೨೭-೨೮-೨೯-೩೦-೩೧-೩೨-೩೩-೩೪-೩೫-೩೬-೩೭||

ದೇವಿ, ಸಹ್ಯಪರ್ವತಕ್ಕೂ ಮತ್ತು ಸಾಗರಕ್ಕೂ ಮಧ್ಯೇ ಅತ್ಯುತ್ತಮವಾದ ಇನ್ನೂ ಅನೇಕ ಶಿವಕ್ಷೇತ್ರಗಳಿರುವುವು. ಆಯಾಯಾ ನದಿಗಳ ದಡದಲ್ಲಿರುವುದೆಲ್ಲವೂ ಮಹಾಕ್ಷೇತ್ರಗಳೆಂದು ತಿಳಿಯಲ್ಪಡಬೇಕು. ಆ ಕಾವೇರೀನದಿಯ ದಡದಲ್ಲಿ ದೇವತೆಗಳಿಂದಲೂ ಮತ್ತು ಋಷಿಗಳಿಂದಲೂ ಸ್ಥಾಪಿಸಲ್ಪಟ್ಟಿರುವುವುಗಳು ದಿವ್ಯಕ್ಷೇತ್ರಗಳೆನಿಸುವುವು. ಗಿರಿರಾಜಕುಮಾರಿ, ಅಜ್ಞಾನನಾಶಿನೀನದಿಯ ದಡದಲ್ಲಿ ತಾವಾಗಿಯೇ ಉದ್ಭವಿಸಿದ ಶಿವಲಿಂಗಗಳಿಂದ ಕೂಡಿದ ಸಹಸ್ರಕ್ಷೇತ್ರಗಳಿರುವುವು. ಅವುಗಳಲ್ಲಿ ಐವತ್ತು ಕ್ಷೇತ್ರಗಳು ಭಕ್ತರಿಗೆ ಮುಕ್ತಿಪ್ರದಗಳೆನಿಸಿವೆ. ಅವುಗಳನ್ನು ಮಾತ್ರ ಹೇಳುತ್ತೇನೆ, ಕೇಳು. ||೩೮-೩೯||

ದೇವಿ ಪಂಚಶತಂ ಕ್ಷೇತ್ರಂ ತಸ್ಮಿನ್ಮಕ್ತಾ್ಯಲಯಂ ಶೃಣು ।
ಆಪದುದ್ಧಾರಣೇಶಾಖ್ಯಮಾನಂದೀಶ್ವರಮವ್ಯಯಂ ॥೪೦॥

ಐರಾವತೇಶ್ವರಂ ಸ್ಥಾನಂ ಬಾಣೇಶ್ವರಮತಿಪ್ರಭಂ ।
ನಟೇಶ್ವರಂ ಸುಗಂಧೇಶಂ ವಿಷ್ಣುನಾಥೇಶ್ವರಂ ತಥಾ ॥೪೧॥

ಬ್ರಹ್ಮಬೋಧೇಶ್ವರಂ ಚೈವ ಕಾಮರೂಪೇಶ್ವರಂ ತಥಾ ।
ತಥಾ ದಕ್ಷಿಣಗೋಕರ್ಣಂ ದಕ್ಷಿಣಾಮೂರ್ತಿಶಂಕರಂ ॥೪೨॥

ಪ್ರಣವೇಶಸ್ಥಲಂ ಪುಣ್ಯಂ ಚಂಪಕೇಶ್ವರಮದ್ಭುತಂ ।
ಪಾಂಡವೇಶಸ್ಥಲಂ ತತ್ರ ತಿಷ್ಠತ್ಯದ್ಯಾಪಿ ಮತ್ಪ್ರಿಯೇ ॥೪೩॥

ಅರ್ಕೇಶ್ವರಂ ಮಹಾಪುಣ್ಯಂ ವಂಶನಾಥೇಶ್ವರಂ ಮಹತ್ ।
ತಸ್ಯ ದಕ್ಷಿಣಭಾಗೇ ಚ ಖ್ಯಾತಾಸ್ಯಜ್ಞಾನನಾಶಿನೀ ॥೪೪॥

ತಸ್ಯಾಶ್ಚ ದಕ್ಷಿಣೇ ಭೂಮೌ ವಿಪುಲೇಶಸ್ಥಲಂ ಮಹತ್ ।
ಹರತೀರ್ಥೇಶ್ವರಂ ಸ್ಥಾನಂ ಶಾಂತಿನಾಥೇಶ್ವರಂ ತಥಾ ॥೪೫॥

ತಸ್ಯ ದಕ್ಷಿಣಭಾಗೇ ಚ ಖ್ಯಾತೇತಿಚ ಮಹೀತಿಚ ।
ಶ್ವೇತಲಿಂಗಾಂತರಾ ಶ್ವೇತಾ ನಿಸೃತಾಸೀನ್ಮಹಾನದೀ ॥೪೬॥

---

ಆಪದುದ್ಧಾರಣೇಶ್ವರ, ನಾಶರಹಿತನಾದ ಆ ನಂದೀಶ್ವರ, ಐರಾವತೇಶ್ವರ ಸ್ಥಾನ, ಕಾಂತಿಯುಕ್ತವಾದ ಬಾಣೇಶ್ವರಸ್ಥಾನ, ನಟೇಶ್ವರ, ಸುಗಂಧೇಶ್ವರ, ವಿಷ್ಣು ನಾಥೇಶ್ವರ, ಬ್ರಹ್ಮಬೋಧೇಶ್ವರ, ಕಾಮರೂಪೇಶ್ವರ, ದಕ್ಷಿಣಗೋಕರ್ಣ, ದಕ್ಷಿಣಾ ಮೂರ್ತಿಯೆನಿಸಿದ ಶಂಕರ, ಪುಣ್ಯಕರವಾದ ಪ್ರಣವೇಶ್ವರಸ್ಥಲ, ಅದ್ಭುತವಾದ ಚಂಪಕೇಶ್ವರ, ಪಾಂಡವೇಶಸ್ಥಲ, ಅರ್ಕೇಶ್ವರ, ಮಹಾಪುಣ್ಯಕರವಾದ ಮಹಾ ಗುಣಪೂರ್ಣನೆನಿಸಿದ ವಂಶನಾಥೇಶ್ವರ, ಈ ಹೆಸರಿನ ಪುಣ್ಯಕ್ಷೇತ್ರಗಳು ವಿಶೇಷ ಪ್ರಸಿದ್ಧವಾಗಿವೆ. ಈ ವಂಶನಾಥೇಶ್ವರಕ್ಷೇತ್ರದ ದಕ್ಷಿಣ ದಿಕ್ಕಿನಲ್ಲಿ ಪ್ರಸಿದ್ಧವಾದ ಅಜ್ಞಾನನಾಶಿನೀ ನದಿಯಿರುವುದು. ॥೪೦-೪೧-೪೨-೪೩-೪೪॥

ಆ ಅಜ್ಞಾನನಾಶಿನೀ ನದಿಯ ದಕ್ಷಿಣ ಭಾಗದಲ್ಲಿ ದೊಡ್ಡದಾದ ವಿಪುಲೇಶ್ವರ ಸ್ಥಳವಿರುವುದು. ಅಲ್ಲಿಯೇ ಹರತೀರ್ಥೇಶ್ವರ, ಶಾಂತಿನಾಥೇಶ್ವರನ ಸ್ಥಾನಗಳಿರುವುವು.

ಶ್ವೇತಾಚಲೇ ಮಹಾತೀರ್ಥಮಷ್ಟಾದಶ ಇತಿ ಸ್ಮೃತಂ।
ಬಿಲ್ವನಾಥೇಶ್ವರಂ ಕ್ಷೇತ್ರಂ ಶ್ರೀಮಚ್ಛ್ವೇತನದೀತಟೇ ॥೪೭॥

ಕಪಿತ್ಥೇಶಂ ಮಹಾಲಿಂಗಂ ದಂತಘಟ್ಟೇಶ್ವರಸ್ಥಳಂ।
ಗೋಮುಖೇಶಂ ಚ ರಂಧ್ರೇಶಂ ಶಿಖಾಗಿರಿಮಹೇಶ್ವರಂ ॥೪೮॥

ಕುಚಾಶ್ಲೇಷೇಶ್ವರಂ ಲಿಂಗಂ ಪುಣ್ಯಂ ಸ್ಥಾಣುವನೇಶ್ವರಂ।
ಭಕ್ತಿಪ್ರದೇಶ್ವರಂ ಚೋರನಾಥೇಶಂ ಮಂಡಲೇಶ್ವರಂ ॥೪೯॥

ಸತ್ಯಾಚಲೇಶ್ವರಂ ಸ್ಥಾನಂ ಮದೀಯಂ ವೈಷ್ಣವದ್ಯುತಿ।
ವಿಷ್ಣುನಾರಾಧಿತಂ ಪೂರ್ವಂ ತತ್ಕ್ಷೇತ್ರಂ ಮಮ ಚಾಪ್ಯುಮೇ ॥೫೦॥

ರಕ್ಷಾರ್ಥಂ ಕಲ್ಪಿತೋ ವಿಷ್ಣುಃ ವಿಷ್ಣುಃ ಶ್ರಾಂತೇನ ವಾರಣಂ।
ಮಯಾ ವೃತಶ್ಚ ತತ್ರೈವ ಕಾಲನೇಮಿವರೋಽಪರಾ ॥೫೧॥

ಹತ್ವಾ ತಮಸುರಂ ಘೋರಂ ಶ್ರಮಯುಕ್ತೋಽಭವದ್ಧರಿಃ।
ಸಮಭ್ಯರ್ಚ್ಯಾಥ ಮಾಂ ಸ್ತುತ್ವಾ ಷಡಾಗಾನ್ನಂ ತು ಪಾಲಿತಃ ॥೫೨॥

---

ಅವುಗಳ ದಕ್ಷಿಣ ದಿಕ್ಕಿನಲ್ಲಿ ಪ್ರಸಿದ್ಧವಾದ ದೊಡ್ಡ ಶ್ವೇತನದಿಯೆಂಬುದು ಶುಭ್ರವಾದ ಶಿವಲಿಂಗಗಳಿಂದ ವ್ಯಾಪೃತವಾಗಿ ಗೋಚರಿಸುತ್ತಾ ಹರಿಯುತ್ತಿರುವುದು. ॥೪೫-೪೬॥

ಪ್ರೇಯಸಿಯೇ, ಶ್ವೇತಾಚಲದಲ್ಲಿ ಹದಿನೆಂಟು ಮಹಾತೀರ್ಥಗಳಿರುವುವು. ಬಿಲ್ವನಾಥೇಶ್ವರಕ್ಷೇತ್ರವು ಸಂಪದ್ಭರಿತವಾದ ಶ್ವೇತಾನದಿಯ ದಡದಲ್ಲಿರುವುದು. ಕಪಿತ್ಥೇಶ್ವರಮಹಾಲಿಂಗ, ದಂತಘಟ್ಟೇಶ್ವರಸ್ಥಲ, ಗೋಮುಖೇಶ, ರಂಧ್ರೇಶ್ವರ, ಶಿಖಾಗಿರಿಮಹೇಶ್ವರ, ಕುಚಾಶ್ಲೇಷೇಶ್ವರಲಿಂಗ, ಪುಣ್ಯಕರವಾದ ಸ್ಥಾಣುವನೇಶ್ವರ, ಭಕ್ತಿಪ್ರದೇಶ್ವರ, ಚೋರನಾಥೇಶ್ವರ, ಮಂಡಲೇಶ್ವರ ಇವು ಅಲ್ಲಿನ ಶಿವಕ್ಷೇತ್ರಗಳು. ನನ್ನ ಭಕ್ತನಾದ ವಿಷ್ಣುವಿನ ತೇಜಸ್ಸಿನಿಂದ ಕೂಡಿ, ಹಿಂದೆ ನನ್ನನ್ನು ವಿಷ್ಣುವು ಆರಾಧಿಸಿದ ಸತ್ಯಾಚಲೇಶ್ವರಕ್ಷೇತ್ರವು ಈಗಲೂ ಪ್ರಖ್ಯಾತವಾಗಿರುವುದು. ॥೪೭-೪೮-೪೯-೫೦॥

ಹಿಂದೆ ನಾನು ಈ ಕ್ಷೇತ್ರವನ್ನು ಕಾಪಾಡುವುದಕ್ಕೋಸ್ಕರ ವಿಷ್ಣುವನ್ನು ನಿರ್ಮಿಸಿದೆನು. ವಿಷ್ಣುವು ಆ ಕೆಲಸದಲ್ಲಿ ತನಗೆ ತುಂಬಾ ಆಯಾಸವಾದಾಗ ಅದರ ನಿವಾರಣೆಗಾಗಿ ನನ್ನನ್ನು ಕುರಿತು ಈ ಕ್ಷೇತ್ರದಲ್ಲಿ ತಪಸ್ಸುಮಾಡಿ ವರವನ್ನು ಪಡೆಯುತ್ತಿದ್ದನು. ಹಿಂದೆ ಇದೇ ಕ್ಷೇತ್ರದಲ್ಲಿ ಕಾಲನೇಮಿಯೆಂಬ ಒಬ್ಬ ಭಯಂಕರ

ಸಂಗೃಹ್ಯ ಚ ಮಯಾ ದತ್ತಂ ಕ್ಷೇತ್ರಗೋಪಾಯ ವಿಷ್ಣವೇ ।
ತತೋ ನಾರದನಾಥೇಶಂ ಕಂಚುಕೇಶಸ್ಥಲಂ ಮಹತ್ ॥೫೩॥

ತಲೇಶ್ವರಂ ಚ ಖಡ್ಗೇಶಂ ವಂಚನೇಶಸ್ಥಲಂ ಮಹತ್ ।
ಧಾತ್ರೀಶ್ವರಂ ಮಹಾಕ್ಷೇತ್ರಂ ಡೋಲನಾಥೇಶ್ವರಂ ಮಹತ್ ॥೫೪॥

ಮಲ್ಲೀಪುರೇಶ್ವರಕ್ಷೇತ್ರಂ ಸ್ಕಂದತೇಜೋಮಯಸ್ಥಲಂ ।
ಅಕ್ಷಂ ವಟಮಹಾತೀರ್ಥಂ ಸಂಧೀಶಾಖ್ಯಸ್ಥಲಂ ಮಹತ್ ॥೫೫॥

॥ ಸ್ಕಂದ ಉವಾಚ ॥

ಅಂಭೋಧೀಶಮಹರ್ನಿಶಂ ಯದಿ ಭಜೇತ್ಕಲ್ಯಾಣಸೌಗಂಧಿಕಂ
ಕರ್ಪೂರೇಶ್ವರಮದ್ಭುತಂ ಮುನಿಶಿವಂ ಶ್ರೀಚಂದ್ರಬಿಲ್ವೇಶ್ವರಂ ।

---

ನಾದ ರಾಕ್ಷಸನನ್ನು ಸಂಹಾರಮಾಡಿ ಆ ವಿಷ್ಣುವು ತುಂಬಾ ಬಳಲಿ ಹೋದನು. ಆಗ ಅವನು ನನ್ನನ್ನು ಪೂಜಿಸಿ ಚೆನ್ನಾಗಿ ಸ್ತೋತ್ರಮಾಡಿದನು. ಆ ಸ್ತೋತ್ರದಿಂದ ಪ್ರಸನ್ನನಾದ ನಾನು ಕ್ಷೇತ್ರಪಾಲಕನಾದ ಆ ವಿಷ್ಣುವಿಗೆ ಮಧುರಾಮ್ಲ, ಕಟುಕಷಾಯತಿಕ್ತಲವಣರೂಪವಾದ ಷಡ್ರಸಭರಿತವಾದ ಅನ್ನವನ್ನು ಕೊಟ್ಟು ಅವನ ಆಯಾಸವನ್ನು ಪರಿಹರಿಸಿದೆನು. ॥೫೧-೫೨॥

ಇವಲ್ಲದೆ ನಾರದನಾಥೇಶ್ವರ, ದೊಡ್ಡದಾದ ಕಂಚುಕೇಶ್ವರಸ್ಥಲ, ತಲೇಶ್ವರ, ಖಡ್ಗೇಶ್ವರ, ಮಹಾಪುಣ್ಯವಿಶಿಷ್ಟವಾದ ವಂಚನೇಶಸ್ಥಲ, ಧಾತ್ರೀಶ್ವರ ಮಹಾಕ್ಷೇತ್ರ, ಡೋಲನಾಥೇಶ್ವರ ಮಹಾಕ್ಷೇತ್ರ, ಕುಮಾರಸ್ವಾಮಿಯ ತೇಜೋವಿಶಿಷ್ಟವಾದ ಸ್ಥಲವೆನಿಸಿದ ವಲ್ಲೀಪುರೇಶ್ವರಕ್ಷೇತ್ರ, ಅಕ್ಷಯವಟವೆಂಬ ಮಹಾತೀರ್ಥ, ಮಹತ್ತರವಾದ ಸಂಧೀಶಸ್ಥಲಗಳು ದಕ್ಷಿಣಭಾರತದಲ್ಲಿ ಪ್ರಸಿದ್ಧವಾಗಿರುವುವು. ॥೫೩-೫೪-೫೫॥

ಕಲ್ಯಾಣಗುಣಗಳೆಂಬ ಸುಗಂಧದಿಂದ ಸುವಾಸಿತವಾಗಿರುವ ಸಮುದ್ರೇಶ್ವರ ಕ್ಷೇತ್ರ, ಅದ್ಭುತಮಹಿಮನಾದ ಕರ್ಪೂರೇಶ್ವರ, ಮುನಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವ ಶ್ರೀ ಚಂದ್ರಬಿಲ್ವೇಶ್ವರ, ಪುಣ್ಯಪ್ರದವಾದ ಸತ್ಯಗಿರೀಶ್ವರ, ದೇವತೋತ್ತಮರಿಂದ ಸದಾ ಪೂಜಿಸಲ್ಪಟ್ಟು ಸ್ತೋತ್ರಮಾಡಲ್ಪಡುವ ಮನ್ಮಥಶತ್ರುವಾದ ಆ ಪರಮೇಶ್ವರಕ್ಷೇತ್ರ, ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಪೂರ್ಣ ತೇಜಸ್ಸಿನಿಂದ ಬೆಳಗುವ ದಿವ್ಯಸೂರ್ಯನಂತಹ ದೀಪ್ತಿಯುಳ್ಳ ಮಹೇಶ್ವರನನ್ನು ಹಗಲಿರುಳೂ

ಪುಣ್ಯಂ ಸತ್ಯಗಿರೀಶ್ವರಂ ಸುರವರೈರಾರಾಧಿತಂ ಸಂಸ್ತುತಂ
ಯೋ ವಾ ಕಾಮರಿಪುಂ ದಿನೇಶಮಖಿಲಂ ಸೋಽಪ್ಯೇವ ಮಾಂ ಯಾಸ್ಯತಿ
॥೫೬॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉಗ್ರಾಖ್ಯೇ ಉತ್ತರಭಾಗೇ
ಪ್ರಥಮೋಽಧ್ಯಾಯಃ

---

ಭಜಿಸುವವರು ಕೊನೆಗೆ ನನ್ನ ಸ್ವರೂಪವನ್ನೇ ಪಡೆಯುವರೆಂದು ಮಹೇಶ್ವರನು ಪಾರ್ವತಿಗೆ ಹೇಳಿದ್ದನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿ ಮುನಿಗಳಿಗೆ ತಿಳಿಯಪಡಿಸಿದನು. ॥೫೬॥

ಇಲ್ಲಿಗೆ ಶಿವರಹಸ್ಯದ ಏಳನೆಯ ಅಂಶದ ಉಗ್ರಸಂಜ್ಞಕವಾದ ಉತ್ತರಭಾಗದಲ್ಲಿ
ಮೊದಲನೆಯ ಅಧ್ಯಾಯವು ಸಮಾಪ್ತವಾದುದು.



|| ಶ್ರೀ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ದ್ವಿತೀಯೋಽಧ್ಯಾಯಃ

|| ಶ್ರೀ ಸೂತ ಉವಾಚ ||

ಏವಂ ಕ್ಷೇತ್ರಾಣಿ ಕಾವೇರ್ಯಾಸ್ತಾಮ್ರಪರ್ಣ್ಯಾಸ್ತಟದ್ವಯೇ ।
ದೇವ್ಯೈ ಕಥಯದೀಶಾನೋ ಮುನೇ ಕಥಿತವಾನ್ಸ್ತ್ವಹ ॥೧॥

|| ಶ್ರೀಸ್ಕಂದ ಉವಾಚ ||

ಕಥಯಾಮಾಸ ಕೈಲಾಸೇ ಪಾರ್ವತೀಂ ಪ್ರತಿ ಶಂಕರಃ ।
ತಾಮದ್ಯ ಸಂಪ್ರವಕ್ಷ್ಯಾಮಿ ತ್ರ್ಯಕ್ಷಕ್ಷೇತ್ರಜವೈಭವಂ ॥೨॥

ಶೃಣು ತ್ವಮೇಭಿರ್ಗಣಪೈರ್ಮುನಿಭಿಶ್ಚ ಸುರೈರಪಿ ।
ಮಯಾ ಶ್ರುತಂ ಮಹೇಶೇನ ಪಾರ್ವತ್ಯೈ ಪ್ರೋಕ್ತಮೀಶಿತುಃ ॥೩॥

---

## ಎರಡನೆಯ ಅಧ್ಯಾಯ

ಮುನಿಶ್ರೇಷ್ಠರೇ, ಹೀಗೆ ಕಾವೇರೀ ಮತ್ತು ತಾಮ್ರಪರ್ಣೀನದಿಗಳ ಎರಡು ದಡಗಳಲ್ಲಿಯೂ ಇರುವ ಶಿವಕ್ಷೇತ್ರಗಳನ್ನು ಪರಮೇಶ್ವರನು ಪಾರ್ವತೀದೇವಿಗೆ ಹೇಳಿದನು. ಅದನ್ನೇ ನಿನಗೆ ನಾನು ಹೇಳಿರುವೆನೆಂದು ಸೂತನು ವಾಜಶ್ರವಸಾದಿ ಮಹರ್ಷಿಗಳಿಗೆ ಮುಂದಿನ ಕಥಾಭಾಗವನ್ನು ವಿವರಿಸತೊಡಗಿದನು. ||೧||

ಒಂದುಸಾರಿ ಕೈಲಾಸಪರ್ವತದಲ್ಲಿ ಪರಶಿವನು ಪಾರ್ವತಿಯನ್ನು ಕುರಿತು ವಿವರಿಸಿದ ತ್ರಿಲೋಚನನೆನಿಸಿದ ತನ್ನ ಕ್ಷೇತ್ರವೈಭವವನ್ನೇ, ಈಗ ನಾನು ನಿನಗೆ ಹೇಳುತ್ತೇನೆ ಜೈಗೀಷವ್ಯನೇ, ನೀನು ಈ ಗಣಾಧಿಪತಿಗಳು, ಮುನಿಗಳು ಮತ್ತು

॥ ಪಾರ್ವತ್ಯುವಾಚ ॥

**ದೇವದೇವ ಮಹಾದೇವ ತ್ವಯೋಕ್ತಂ ಸಹ್ಯಜಾತಟೇ ।**
**ಚೋಲೋ ನಿಚೋಲಭೂತೋಽಯಂ ದೇವಾನಾಂ ತ್ರಿದಿವೌಕಸಾಂ ॥೪॥**

**ಕೃತ್ತಿವಾಸೋ ನಿವಾಸೋ ವೈ ಸಹ್ಯಪರ್ವತ ಉತ್ತಮಃ ।**
**ಮಹೇಂದ್ರಜಾ ತಾಮ್ರಪರ್ಣೀ ಅಪರ್ಣಾರಮಣಪ್ರಿಯಾ ॥೫॥**

**ನದ್ಯೋಸ್ತಟದ್ವಯಗತಂ ಕ್ಷೇತ್ರಂ ವರ್ಣಯ ಶಂಕರ ।**
**ಪಾರ್ವತ್ಯೈವಂ ಪುರಾ ಪೃಷ್ಟಃ ಉವಾಚಾಥ ತ್ರಿಲೋಚನಃ ॥೬॥**

॥ ಈಶ್ವರ ಉವಾಚ ॥

**ಶೃಣು ದೇವಿ ಮಮ ಕ್ಷೇತ್ರವೈಭವಂ ಸಹ್ಯಜಾತಟೇ ।**
**ಕ್ಷೇತ್ರಾಣಿ ಸಂತಿ ತತ್ತೀರೇ ಶತಶೋಽಥ ಸಹಸ್ರಶಃ ॥೭॥**

---

ದೇವತೆಗಳೊಡನೆ ಸಾವಧಾನದಿಂದ ಕೇಳುವನಾಗು. ನಾನು ಮಹೇಶ್ವರನು ಪಾರ್ವತಿಗೆ ಹೇಳಿದ ಶಿವಕ್ಷೇತ್ರವೈಭವವನ್ನು ಆ ಮಹೇಶ್ವರನಿಂದಲೇ ಕೇಳಿದ್ದೇನೆ. ಅದನ್ನೇ ನಿನಗೆ ತಿಳಿಸುವೆನು, ಎಂದೆನಿಸಿಂದು ಷಣ್ಮುಖನು ಶಿವಪಾರ್ವತಿಯರ ಪ್ರಶ್ನೋತ್ತರಗಳನ್ನೇ ಜೈಗೀಷವ್ಯನಿಗೆ ಹೇಳಲುಪಕ್ರಮಿಸಿದನು. ॥೨-೩॥

ಓ ದೇವೋತ್ತಮನಾದ ಮಹಾದೇವನೇ, ನೀನು ಹೇಳಿದ ಕಾವೇರೀನದಿಯ ದಡದಲ್ಲಿರುವ ಈ ಚೋಲದೇಶವು ಸಮಸ್ತ ದೇಶಗಳಲ್ಲಿಯೂ ಶ್ರೇಷ್ಠವೆನಿಸಿ ದೇವತೆಗಳ ವಾಸಕ್ಕೆ ರಕ್ಷಣಾಸ್ಥಾನದಂತಿರುವುದು (ಮೇಲುಹೊದಿಕೆಯಂತಿರುವುದು) ಗಜಚರ್ಮವನ್ನು ಹೊದ್ದಿರುವ ನಿನಗೆ ವಾಸಸ್ಥಾನವಾಗಿರುವ ಆ ಸಹ್ಯಪರ್ವತವೂ ಉತ್ತಮವೇ ಎನಿಸಿರುವುದು. ಮಹೇಂದ್ರಪರ್ವತದಲ್ಲಿ ಹುಟ್ಟುವ ತಾಮ್ರಪರ್ಣೀ ನದಿಯೂ ಅಪರ್ಣೆಯೆನಿಸಿದ ಗಿರಿಜೆಯ ರಮಣನಾದ ನಿನಗೆ ಪ್ರಿಯಕರವೇ ಆಗಿದೆ. ಓ ಶಂಕರನೇ, ಕಾವೇರಿ ಮತ್ತು ತಾಮ್ರಪರ್ಣೀನದಿಗಳೆರಡರ ದಡದಲ್ಲಿರುವ ಕ್ಷೇತ್ರ ಮಹಿಮೆಯನ್ನು ನನಗೆ ವರ್ಣಿಸೆಂದು ಪಾರ್ವತಿಯಿಂದ ಪ್ರಾರ್ಥಿಸಲ್ಪಟ್ಟ ಮಹೇಶ್ವರನು ಅವಳಿಗೆ ಹೀಗೆ ಉತ್ತರಕೊಟ್ಟನು. ॥೪-೫-೬॥

ದೇವಿಯೇ, ಈಗ ಕಾವೇರಿಯ ದಡದಲ್ಲಿರುವ ನನ್ನ ಕ್ಷೇತ್ರಗಳ ವೈಭವವನ್ನು ಕೇಳು—ಆ ನದಿಯ ದಡದಲ್ಲಿ ನೂರಾರು ಸಂಖ್ಯೆಯಲ್ಲಿ ಶಿವಕ್ಷೇತ್ರಗಳಿರುವುವು. ಎಲೌ ಪಾರ್ವತಿಯೇ, ಕಾವೇರಿನದಿಯಿಂದ ನೂರುನೂರು ಪ್ರಮಾಣದೂರದಲ್ಲಿ

ಸಹ್ಯಾಪಗಾಮುಖೇಷ್ವೇವ ಶತಮಾನೇಷು ಪಾರ್ವತೀ ।
ಮಹೇಂದ್ರಜಾ ತಾಮ್ರಪರ್ಣೀ ತತ್ರ ವೇಗವತೀಮುಖಾ ॥೮॥

ತಸ್ಯಾಷ್ಟಾದಶ ವಕ್ತ್ರಾಣಿ ಸಾಬ್ಧಿಗಾನಿ ಮಹೇಶ್ವರಿ ।
ಕಾವೇರ್ಯಾ ಸಂಗಮೇ ನದ್ಯೋ ಆಮ್ರಾಮತ್ಯಾ ನದೀ ಶಿವೇ ॥೯॥

ಅಖಂಡಾ ಸಹ್ಯಮೂಲೋತ್ಥಾ ರಾಜಾರಣ್ಯಪ್ರತೀಚ್ಯತಃ ।
ಸಾ ಕಾವೇರೀ ದ್ವಿಧಾ ಜಾತಾ ತದ್ದಕ್ಷಿಣಗತಾ ತಟೇ ॥೧೦॥

ಕ್ಷೇತ್ರಾಣಿ ಸಂತಿ ದಿವ್ಯಾನಿ ತೇಷೂತ್ಕೃಷ್ಟಾದಿವೈಭವಂ ।
ಸಮಾಸಾತ್ಕಥಯಿಷ್ಯಾಮಿ ಸುಗೋಪ್ಯಂ ಹೃದಿ ಧಾರ್ಯತಾಂ ॥೧೧॥

ಪುಣ್ಯೇ ಶಿವರಹಸ್ಯೇಽಸ್ಮಿನ್ಸಪ್ತಮಾಂಶೋತ್ತರಾರ್ಧಕೇ ।
ಸಹ್ಯೋದ್ಭವಾಂ ತಾಮ್ರಪರ್ಣೀಂ ಶೃಣೂತ್ಪತ್ತಿಂ ಮಯೋದಿತಾಂ ॥೧೨॥

---

ಮಹೇಂದ್ರಪರ್ವತದಲ್ಲಿ ಹುಟ್ಟಿದ ತಾಮ್ರಪರ್ಣೀ ನದಿಯು ವೇಗವತಿಯೆಂಬ ಮುಖನಾಮದಿಂದ ಹರಿಯುತ್ತಿರುವುದು. ||೭-೮||

ಎಲೌ ಮಹೇಶ್ವರಿಯೇ, ತಾಮ್ರಪರ್ಣೀನದಿಯು ಹದಿನೆಂಟು ಕವಲುಗಳಾಗಿ ಸಮುದ್ರಕ್ಕೆ ಸೇರುತ್ತದೆ. ಕಾವೇರಿಯು ಸಾಗರದೊಡನೆ ಸಂಗಮವಾಗುವ ಸ್ಥಳದಲ್ಲಿ ನಾನಾ ಹೆಸರಿನಿಂದ ಬೇರೆ ಬೇರೆ ಶಾಖೆಗಳಾಗಿ ಬಂದು ಸೇರುವುದು. ಮಂಗಳಾಂಗಿಯೇ, ಸಹ್ಯಪರ್ವತದಲ್ಲಿ ಹುಟ್ಟಿದ ಆ ಕಾವೇರೀನದಿಯು ಅಖಂಡವಾಗಿ ಹರಿದು ರಾಜಾರಣ್ಯಕ್ಕೆ ಪಶ್ಚಿಮದಿಕ್ಕಿನಲ್ಲಿ ಪ್ರವಹಿಸಿ ಅಮರಾವತೀ ನದಿಯೊಡನೆ ಸಮುದ್ರವನ್ನು ಸೇರುವುದು. ಅದೇ ಕಾವೇರಿಯು ದಕ್ಷಿಣಕ್ಕೆ ಹರಿಯುವಾಗ ಎರಡು ಭಾಗವಾಗುವುದು. ||೯-೧೦||

ಆ ತಾಮ್ರಪರ್ಣೀ ಮತ್ತು ಕಾವೇರೀನದಿಗಳ ದಡಗಳಲ್ಲಿ ದಿವ್ಯವೂ ಉತ್ಕೃಷ್ಟವೂ ಆಗಿ ಅತ್ಯಂತ ವೈಭವದಿಂದ ಕೂಡಿದ ಅನೇಕ ಶಿವಕ್ಷೇತ್ರಗಳಿರುವುವು. ಅತ್ಯಂತ ರಹಸ್ಯವಾಗಿರುವ ಅವುಗಳ ವಿಷಯವನ್ನು ಸಂಗ್ರಹವಾಗಿ ನಿನಗೆ ಈಗ ತಿಳಿಸುತ್ತೇನೆ, ಮನಸ್ಸಿನಲ್ಲಿ ನೆನಪಿಡು; ಪುಣ್ಯಕರವಾದ ಶಿವರಹಸ್ಯದ ಏಳನೆಯ ಅಂಶದ ಈ ಉತ್ತರಾರ್ಧದಲ್ಲಿ ಸಹ್ಯಪರ್ವತದಲ್ಲಿ ಹುಟ್ಟಿದ ಕಾವೇರೀ ನದಿಯು ಮತ್ತು ತಾಮ್ರಪರ್ಣೀನದಿಯ ಉತ್ಪತ್ತಿವಿಚಾರವನ್ನು ನಾನು ನಿನಗೆ ತಿಳಿಯಪಡಿಸುವೆನು. ಸಾವಧಾನದಿಂದ ಕೇಳು. ||೧೧-೧೨||

ನ ಶಕ್ಯನ್ಮಾಪಗಾಭ್ಯಾಂ ವೈ ತಟಲಿಂಗಾನುವರ್ಣನಂ ।
ಮುಕ್ತಿದಾನ್ಯೈಶಲಿಂಗಾನಿ ದರ್ಶನಾರ್ಚನತೋ ನೃಣಾಂ ॥೧೩॥

ಬಹುಜನ್ಮವತಾಮೇವ ಪುಣ್ಯೈರ್ನದ್ಯೋಸ್ತಟದ್ವಯೋಃ ।
ಕ್ಷೇತ್ರೇಷು ಲಭ್ಯತೇ ವಾಸಃ ಕೃತ್ತಿವಾಸಪ್ರಸಾದತಃ ॥೧೪॥

ವಕ್ಷ್ಯಾಮಿ ಚರಿತಂ ಕೃತ್ಸ್ನಂ ಕ್ಷೇತ್ರಾಣಾಂ ತೇ ಮಹೇಶ್ವರಿ ।
ಪುರಾ ವಿಮುಕ್ತಕೇ ದೇವಿ ಅಗಸ್ತ್ಯೋ ಘಟಸಂಭವಃ ॥೧೫॥

ಮಮ ಭಕ್ತೋ ಮಹಾತೇಜಾ ಮುನೀನಾಮುತ್ತಮೋ ಮುನಿಃ ।
ತ್ವತ್ಪಾಣಿಗ್ರಹಣೇ ಕಾಲೇ ಕೇದಾರೇ ಹಿಮವದ್ಗಿರೌ ॥೧೬॥

ದೇವಗಂಧರ್ವಯಕ್ಷಾದ್ಯಾ ವಿದ್ಯಾಧರಮಹೋರಗಾಃ ।
ದೈತ್ಯಾಃ ಕಿಂಪುರುಷಾಃ ಸಿದ್ಧಾ ನಾಗಾನಾಂ ಗಣಪಾಪ್ಸರಾಃ ॥೧೭॥

---

ಆ ಕಾವೇರೀ ಮತ್ತು ತಾಮ್ರಪರ್ಣಿ ನದಿಗಳ ದಡದಲ್ಲಿರುವ ಶಿವಲಿಂಗಗಳನ್ನು ವರ್ಣಿಸಲು ಅಸಾಧ್ಯ. ಆ ಈಶ್ವರನ ಲಿಂಗಗಳು, ದರ್ಶನ ಮತ್ತು ಪೂಜೆಗಳಿಂದ ಮಾನವರಿಗೆ ಮುಕ್ತಿಯನ್ನುಂಟುಮಾಡುವುವು. ಅನೇಕ ರೀತಿಯಲ್ಲಿ ಪುಣ್ಯವನ್ನು ಗಳಿಸಿದವರಿಗೇ ಎರಡು ನದಿಗಳ ದಡಗಳಲ್ಲಿರುವ ಕ್ಷೇತ್ರಗಳಲ್ಲಿ ಗಜಚರ್ಮಧಾರಿಯಾದ ಮಹೇಶನ ಅನುಗ್ರಹದಿಂದ ವಾಸಮಾಡುವ ಸೌಲಭ್ಯವುಂಟಾಗುವುದು. ॥೧೩-೧೪॥

ಮಹೇಶ್ವರಿಯೇ, ಆ ನದಿಗಳೆರಡರ ದಡಗಳಲ್ಲಿರುವ ಕ್ಷೇತ್ರಗಳ ಚರಿತ್ರೆಯನ್ನೆಲ್ಲಾ ಸ್ವಲ್ಪವೂ ಬಿಡದಂತೆ ನಿನಗೆ ಹೇಳುತ್ತೇನೆ ಲಾಲಿಸು ; ಹಿಂದೆ ಅವಿಮುಕ್ತ ಕ್ಷೇತ್ರದಲ್ಲಿ, ಗಡಿಗೆಯಲ್ಲಿ ಹುಟ್ಟಿದ ನನ್ನ ಭಕ್ತನೂ ತುಂಬಾ ತೇಜಸ್ವಿಯೂ ಮುನಿಗಳಲ್ಲಿ ಅತ್ಯುತ್ತಮನೆನಿಸಿದವನೂ ಆದ ಅಗಸ್ತ್ಯಮುನಿಯು ನಿನ್ನ ವಿವಾಹಕಾಲದಲ್ಲಿ ಹಿಮವತ್ಪರ್ವತದ ತಪ್ಪಲಲ್ಲಿರುವ ಕೇದಾರಕ್ಷೇತ್ರದಲ್ಲಿದ್ದನು. ಆ ನಿನ್ನ ಪಾಣಿಗ್ರಹಣ ಸಮಯಕ್ಕೆ ದೇವತೆಗಳೂ, ಗಂಧರ್ವರೂ, ಯಕ್ಷರೇ ಮೊದಲಾದವರೂ, ವಿದ್ಯಾಧರರೂ, ಮಹಾನಾಗರೂ, ದಿತಿಸುತರೂ, ಕಿಂಪುರುಷರೂ, ಸಿದ್ಧರೂ, ನಾಗರೂ, ಗಣಾಧಿಪತಿಗಳೂ, ಅಪ್ಸರಸ್ತ್ರೀಯರೂ, ವೃಕ್ಷ, ನದ, ನದಿ ಇವುಗಳೂ (ಇವುಗಳಭಿಮಾನ ದೇವತೆಗಳೂ) ಮುನಿಗಳೂ, ಮಾನವರೂ, ಪಕ್ಷಿಗಳೂ, ವಿಶ್ವೇದೇವತೆಗಳೂ, ಅಶ್ವಿನೀದೇವತೆಗಳೂ, ರುದ್ರಗಣಗಳೂ, (ಏಕಾದಶರುದ್ರರೂ) ಎಂಟುಮಂದಿ ವಸುಗಳೂ, ಏಳುಮಂದಿ ಮರುದ್ಗಣಗಳೂ, ಇಂದ್ರ, ಯಮ, ನಿಋತಿ, ಅಗ್ನಿ,

ವೃಕ್ಷಾ ಸಮಾಬ್ಧಯೋ ನದ್ಯೋ ಮುನಯೋ ಮಾನವೋಂಡಜಾಃ ।
ವಿಶ್ವೇಽಶ್ವಿನೌ ರುದ್ರಗಣಾ ವಸವೋಽರ್ಕಾ ಮರುದ್ಗಣಾಃ ॥೧೮॥

ಶಕ್ರೋ ಯಮೋ ನಿಋತಿಶ್ಚ ವಹ್ನಿರ್ವಾಯುಶ್ಚ ಯಕ್ಷರಾಟ್ ।
ಈಶಾನೋಽಪ್ಯರ್ಯಮಾ ಸೋಮೋ ನಕ್ಷತ್ರಾಣಿ ಧ್ರುವೋ ಭಗಃ ॥೧೯॥

ಸಪ್ತರ್ಷಯೋ ವಸಿಷ್ಠಾದ್ಯಾ ಶಾಕಿನೀಯಾದ್ರಿಣೀಗಣಾಃ ।
ಕೂಷ್ಮಾಂಡಭೈರವಾಶ್ಚೈವ ದುರ್ಗಾ ಯೋಗಿನಿಕಾಗಣಾಃ ॥೨೦॥

ಲಕ್ಷಕೋಟ್ಯೋ ಯಯುಸ್ತತ್ರ ಹಿಮಪಚ್ಛಿಖರೇ ತಥಾ ।
ಮದ್ವಿವಾಹಾಲೋಕನಾರ್ಥಂ ತದಾ ಭೂಗೋಲಮುನ್ನತಂ ॥೨೧॥

ದಕ್ಷಿಣಾಶಾಸು ಸ ಗಿರಿಃ ಸಾಬ್ಧಿದ್ವೀಪಸಮಭೂಚ್ಛಿನೇ ।
ತಂ ದೃಷ್ಟ್ವಾ ಚುಕ್ರುಶುಃ ಸರ್ವೇ ರಕ್ಷರಕ್ಷೇತಿ ಮಾಂ ತದಾ ॥೨೨॥

ತತ್ರ ಮತ್ಪಾರ್ಶ್ವಗಂ ಶಾಂತಮಗಸ್ತ್ಯಂ ತುಲ್ಯಮೀಶ್ವರಿ ।
ಮಯಾ ಸ ಭಕ್ತವರ್ಯೋಽಸೌ ಸಂಸ್ಥಿತೇಷು ಮುನಿಷ್ವಪಿ ॥೨೩॥

---

ವಾಯು, ಕುಬೇರ, ಈಶಾನ, ಆರ್ಯಮಾ (ಸೂರ್ಯ), ಚಂದ್ರ, ನಕ್ಷತ್ರಗಳೂ, ಧ್ರುವ, ಭಗ, ವಸಿಷ್ಠನೇ ಮೊದಲಾದ ಏಳುಮಂದಿ ಋಷಿಗಳೂ, ಶಾಕಿನೀಗಣ ಮತ್ತು ಅದ್ರಿಣೀ (ಪರ್ವತಸಂಬಂಧವಾದ) ಗಣಗಳು, ಕೂಷ್ಮಾಂಡ, ಭೈರವ ದೇವತೆಗಳೂ, ದುರ್ಗಾ ಮತ್ತು ಯೋಗಿನೀಗಣಗಳೂ ಇವರೆಲ್ಲರೂ ಒಟ್ಟು ಲಕ್ಷ ಕೋಟಿ ಸಂಖ್ಯೆಯಿಂದ ಆ ಹಿಮವತ್ಪರ್ವತದ ಶಿಖರಕ್ಕೆ ಬಂದಿದ್ದರು. ||೧೫-೧೬-೧೭-೧೮-೧೯-೨೦||

ಹೀಗೆ ಎಲ್ಲರೂ ನನ್ನ ಪರಿಣಯಮಹೋತ್ಸವವನ್ನು ನೋಡಲು ಹಿಮವತ್ಪರ್ವತಕ್ಕೆ ಬಂದಾಗ ಉನ್ನತವಾದ ಭೂಗೋಲವೆಲ್ಲವೂ ದಕ್ಷಿಣದಿಕ್ಕಿನಲ್ಲಿರುವ ಆ ವಿಂಧ್ಯಪರ್ವತದೊಡನೆ ಸಮುದ್ರ ಮತ್ತು ದ್ವೀಪಗಳೊಡನೆ ಆವರಿಸಿ ಬೆಳೆಯಲು ಪ್ರಾರಂಭಿಸಿತು. ವಿಂಧ್ಯಪರ್ವತದ ಆ ಔನ್ನತ್ಯವನ್ನು ನೋಡಿ ಎಲ್ಲರೂ ಹೆದರಿ, ಸ್ವಾಮಿಯೇ, ಕಾಪಾಡು; ಕಾಪಾಡೆಂದು ನನ್ನನ್ನು ಕುರಿತು ಗಟ್ಟಿಯಾಗಿ ಕೂಗಿಕೊಂಡರು. ||೨೧-೨೨||

ಆಗ ನಾನು ಪಕ್ಕದಲ್ಲಿಯೇ ಮಹಿಮೆಯಲ್ಲಿ ನನಗೆ ಸಮಾನನೆನಿಸಿದ್ದ ಶಾಂತ

ಭಕ್ತ ಏವ ಪರಾಮೂರ್ತಿರ್ಮಮ ನಿತ್ಯಂ ಮಹೇಶ್ವರಿ।
ತಸ್ಮಿನ್ ಸಂಪೂಜಿತೇ ಭಕ್ತ್ಯಾ ಮಮ ಪೂಜಾ ತು ಸಾಂಗಿಕಾ ॥೨೪॥

ತಮಹಂ ಪಾರ್ಶ್ವಗಂ ವೀಕ್ಷ್ಯ ವಾಚಮೇವಂ ಬ್ರುವೇ ತದಾ ॥೨೫॥

॥ ಶಿವ ಉವಾಚ ॥

ಲೋಕಾಃ ಸ್ವಸ್ಥಾ ಭವಂತ್ವದ್ಯ ಗಚ್ಛ ತ್ವಂ ದಕ್ಷಿಣಾಂ ದಿಶಂ।
ಮತ್ತುಲ್ಯವೀರ್ಯೋಽಸಿ ಮುನೇ ಮದ್ಭಕ್ತ್ಯಾ ಕುಂಭಸಂಭವ ॥೨೬॥

ಇತ್ಥಂ ಮದ್ವಚನಂ ಶ್ರುತ್ವಾ ಪ್ರಣಿಪತ್ಯಾಹ ಮಾಂ ಮುನಿಃ ॥೨೭॥

॥ ಅಗಸ್ತ್ಯ ಉವಾಚ ॥

ಭಗವನ್ಭೂತಭವ್ಯೇಶ ತವ ಪಾಣಿಗ್ರಹೋತ್ಸವಂ।
ಲೋಕೇ ಲೋಕೈಃ ಸ ಮುನಿಭಿಃ ಸುರಾಸುರಗಣೈರಪಿ ॥೨೮॥

---

ಗುಣಪೂರ್ಣನಾಗಿ ಭಕ್ತಾಗ್ರೇಸರನೆನಿಸಿದ್ದ ಅಗಸ್ತ್ಯಮುನಿಯನ್ನು ಇತರ ಋಷಿಗಳ ಮಧ್ಯದಲ್ಲಿ ನೋಡಿದೆನು. ಮಹೇಶ್ವರಿಯೇ, ಯಾವಾಗಲೂ ಭಕ್ತನೇ ನನಗೆ ಉತ್ಕೃಷ್ಟಮೂರ್ತಿಯೆನಿಸುವನು. ಆ ನನ್ನ ಭಕ್ತನನ್ನು ಭಕ್ತಿಯಿಂದ ಪೂಜೆ ಮಾಡಿದರೆ ನನ್ನನ್ನು ಸಾಂಗವಾಗಿ ಪೂಜೆಮಾಡಿದಂತೆಯೇ ಸರಿ. ಆದ್ದರಿಂದಲೇ ನಾನು ಸಮೀಪದಲ್ಲಿದ್ದ ಆ ಅಗಸ್ತ್ಯನನ್ನೇ ನೋಡಿ ಇಂತೆಂದೆನು. ॥೨೩-೨೪-೨೫॥

ಅಯ್ಯ, ಘಟದಲ್ಲಿ ಹುಟ್ಟಿದ ಅಗಸ್ತ್ಯಮುನಿಯೇ, ನನ್ನ ಅನುಗ್ರಹದಿಂದ ನನ್ನ ಸಮಾನನೇ ಆಗಿರುವ ನೀನು ಸಕಲ ಲೋಕಗಳನ್ನೂ ಉದ್ಧರಿಸುವುದಕ್ಕಾಗಿ ಇಲ್ಲಿಂದ ದಕ್ಷಿಣದಿಕ್ಕಿಗೆ ಪ್ರಯಾಣಮಾಡು? ಎಂದು ನಾನು ಆಜ್ಞಾಪಿಸಿದೆನು. ಆಗ ಆ ಅಗಸ್ತ್ಯಮುನಿಯು ನನ್ನ ಮಾತುಗಳನ್ನು ಕೇಳಿದೊಡನೆ ನನಗೆ ನಮಸ್ಕರಿಸಿ ಈ ರೀತಿ ನುಡಿದನು. ॥೨೬-೨೭॥

ಭೂತಭವಿಷ್ಯದ್ವರ್ತಮಾನರೂಪವಾದ ಪ್ರಪಂಚಗಳಿಗೆಲ್ಲಾ ಒಡೆಯನಾದ ಸ್ವಾಮಿಯೇ, ನಿನ್ನ ವಿವಾಹಮಹೋತ್ಸವವನ್ನು ಸಕಲ ಲೋಕಗಳಲ್ಲಿರುವ ಜನಗಳು, ಮುನಿಗಳು, ದೇವರಾಕ್ಷಸಗಣಗಳೆಲ್ಲರೂ ನೋಡುವರು. ಈ ನಿನ್ನ ದಿವ್ಯಮಹೋತ್ಸವವನ್ನು ನೋಡುವ ಅವರ ನೇತ್ರಗಳೆರಡೂ ನಿಜವಾಗಿಯೂ ಧನ್ಯವಾಗುವು

ಧನ್ಯಂ ಮನ್ಯೇ ನೇತ್ರಯುಗ್ಮಂ ಕಥಂ ವಾ ತ್ಯಕ್ತುಮಿಚ್ಛಸಿ ।
ವಿಭೂತ್ಯುದ್ಧೂಳಿತಾಂಗೋಽಹಂ ತ್ರಿಕಾಲಂ ಮುನಿಸಪ್ತಕೈಃ ॥೨೯॥

ತ್ರಿಯಾಯುಷಸ್ತ್ರಿಪುಂಡ್ರಾಂಕಸ್ತ್ರಿಕಾಲಮಪಿ ಸಾದರಂ ।
ತ್ರಿಯಂಬಕಾದಿಮನುಭಿಃ ಕರ್ಣಕಂಠಗಲೋದರೇ ॥೩೦॥

ಶಿರೋಬಾಹುಸ್ಕಂದಫಾಲಲಂಬಿರುದ್ರಾಕ್ಷಮನ್ವಹಂ ।
ಧಾರಯಾಮ್ಯಯುತಂ ಲಿಂಗಂ ತ್ರಿಕಾಲೇಷ್ವಪಿ ಸಾದರಂ ॥೩೧॥

ತ್ರಿವಾರಂ ಸ್ಫಾಟಿಕೇ ಲಿಂಗೇ ಬಿಲ್ವೈಃ ಸಂಪೂಜಯಾಮ್ಯಹಂ ।
ನಿಯಾಮಾನ್ನಕ್ತಶಕ್ತ್ಯೋಽಹಂ ಸದಾಶಿವಕಥಾದರಃ ॥೩೨॥

ಶಿವಕ್ಷೇತ್ರೇಷು ನಿಯಮಾದ್ಬಾಹ್ಯೇಽಹಂ ಸಂಸ್ಥಿತೋ ವಿಭೋ ।
ಕ್ಷೇತ್ರೇಷು ಸಿಕತಾಃ ಸರ್ವಾ ಲಿಂಗರೂಪಾ ಮಹೇಶ್ವರ ॥೩೩॥

---

ವೆಂದು ನನ್ನ ಭಾವನೆ. ಇಂತಹ ಸಂದರ್ಶನವನ್ನು ನನಗೆ ಇಲ್ಲದಂತೆ ಮಾಡಲು ಹೇಗೆ ನೀನು ಇಷ್ಟಪಡುತ್ತಿರುವೆ? ಸ್ವಾಮಿ, ವಿಭೂತಿಯನ್ನು ಅಂಗಾಂಗಗಳಿಗೆಲ್ಲಾ ಲೇಪನಮಾಡಿಕೊಂಡು ನಾನು ಪ್ರಾತಃ ಸಾಯಂಕಾಲ ಮತ್ತು ಮಧ್ಯಾಹ್ನಕಾಲಗಳಲ್ಲಿ ತಪ್ಪದೆ ನಿನ್ನನ್ನು ಸಪ್ತರ್ಷಿಗಳೊಡನೆ ಧ್ಯಾನಮಾಡುತ್ತಿರುವೆನು. ॥೨೮-೨೯॥

"ತ್ರ್ಯಾಯುಷಂ" ಎಂಬ ಮಂತ್ರೋಚ್ಚಾರಣೆಯಿಂದ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ಪ್ರಾತರ್ಮಧ್ಯಾಹ್ನಸಾಯಂಕಾಲಗಳೆಂಬ ತ್ರಿಕಾಲಗಳಲ್ಲಿಯೂ ಆದರದಿಂದ 'ತ್ರಿಯಂಬಕಂ ಯಜಾಮಹೆ' ಮುಂತಾದ ಮಂತ್ರಗಳನ್ನುಚ್ಚರಿಸುತ್ತಾ, ಕಿವಿ, ಕೊರಳು, ಹೊಟ್ಟೆ ಮುಂತಾದ ಜಾಗಗಳಲ್ಲಿ ವಿಭೂತಿಯನ್ನು ಧರಿಸಿದ್ದೆವು. ತಲೆ, ಬಾಹುಗಳು, ಹೆಗಲು, ಹಣೆ ಮುಂತಾದವುಗಳಲ್ಲಿ ಜೋಲಾಡುವ ರುದ್ರಾಕ್ಷಗಳನ್ನು ಅಲಂಕರಿಸಿಕೊಳ್ಳುತ್ತಿದ್ದೆನು. ಮೂರುಕಾಲಗಳಲ್ಲಿಯೂ ಆದರಪೂರ್ವಕವಾಗಿ ಹತ್ತುಸಾವಿರ ಲಿಂಗಗಳನ್ನು ಬಿಲ್ವಾದಿಪೂಜಾದ್ರವ್ಯಗಳಿಂದ ಆರಾಧಿಸುತ್ತಿದ್ದೆನು. ॥೩೦-೩೧॥

ನಿತ್ಯವೂ ನಾನು ಸ್ಫಟಿಕಮಯವಾದ ಶಿವಲಿಂಗಕ್ಕೆ ನಿಯಮದಿಂದ ಮೂರು ಸಲ ಬಿಲ್ವದಳಗಳಿಂದ ಪೂಜೆಮಾಡುತ್ತಿರುವೆನು. ರಾತ್ರಿವೇಳೆಯಲ್ಲಿ ನಕ್ತವ್ರತದಿಂದ ಸದಾಶಿವನೆನಿಸಿದ ನಿನ್ನ ಕಥಾಶ್ರವಣದಲ್ಲಿ ಆದರವುಳ್ಳವನಾಗಿದ್ದೇನೆ.

ತಂ ದೃಷ್ಟ್ವಾ ಪಾದನಿಕ್ಷೇಪಂ ಭೀತ್ಯಾಹಂ ಖಗಮುಸ್ಸದಾ ।
ಕ್ಷೇತ್ರೇಷು ನಿಶಿ ದೃಷ್ಟ್ವಾ ತ್ವಾಂ ವಸಾಮಿ ನಿಯಮಾದ್ವಿಭೋ ॥೩೪॥

ವೇದಾರಣ್ಯೇ ಚ ಹಾಲಾಸ್ಯೇ ಗೋಕರ್ಣೇ ಚೈವ ಸುಂದರೇ ।
ರಾಮೇಶ್ವರೇಽರುಣಾದ್ರೌ ಚ ವೃದ್ಧಾದ್ರೌ ಪುಂಡರೀಕಕೇ ॥೩೫॥

ಸದಾ ನಿಶಿ ನಿಶಾನಾಥ ಕಲಾಧರ ಪದೇಕ್ಷಣಃ ।
ಅವಿಮುಕ್ತೇ ತು ವಸತಾ ಉಪಸರ್ಗಃ ಕೃತೋ ಮಮ ॥೩೬॥

ವಿಂಧ್ಯಗರ್ವಾಪಹಾರಾಯ ತ್ವಂ ಗಚ್ಛೇತಿ ತ್ವದಾಜ್ಞಯಾ ।
ಗತೋ ಮಹೇಂದ್ರ ದೇವೇಶ ತ್ವದ್ಭಕ್ತಂ ಮಾಮುಪೇಕ್ಷಸೇ ॥೩೭॥

---

ಮಹೇಶ್ವರನೇ, ಶಿವಕ್ಷೇತ್ರಗಳಲ್ಲಿರುವ ಒಂದೊಂದು ಮರಳಿನಕಣವೂ ಲಿಂಗರೂಪವಾಗಿರುವುದರಿಂದ ನಾನು ನಿಯಮವಾಗಿ ಅಲ್ಲಿ ಕಾಲುಗಳನ್ನು ಸಹ ಇಡದೆ ಹೊರಗಡೆಯಲ್ಲಿಯೇ ವಾಸಿಸುತ್ತಿರುವೆನು. ॥೩೨-೩೩॥

ಅದನ್ನು ನೋಡಿ ನಾನು ಹೆಜ್ಜೆಯಿಟ್ಟು ಆ ಕ್ಷೇತ್ರಗಳಲ್ಲಿ ನಡೆಯಲು ಭಯಪಟ್ಟು ಯಾವಾಗಲೂ ಅಂತರಿಕ್ಷದಲ್ಲಿ ಸಂಚಾರಮಾಡುತ್ತಿರುವೆನು. ಎಲೈ ಸರ್ವವ್ಯಾಪಕನಾದ ಸ್ವಾಮಿಯೇ, ರಾತ್ರಿವೇಳೆಯಲ್ಲಿ ಕ್ಷೇತ್ರಗಳಲ್ಲಿ ನಿನ್ನನ್ನು ದರ್ಶನ ಮಾಡಿ ಅಲ್ಲಿಯೇ ಆ ರಾತ್ರಿ ತಂಗುವೆನು. ವೇದಾರಣ್ಯ, ಹಾಲಾಸ್ಯ, ಸುಂದರವಾದ ಗೋಕರ್ಣ, ರಾಮೇಶ್ವರ, ಅರುಣಾಚಲ, ವೃದ್ಧಾಚಲ ಮತ್ತು ಪುಂಡರೀಕಕ್ಷೇತ್ರಗಳಲ್ಲಿ ನಿನ್ನನ್ನು ನೋಡಿ ರಾತ್ರಿವೇಳೆ ಅಲ್ಲಿಯೇ ವಾಸಮಾಡುವೆನು. ॥೩೪-೩೫॥

ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುತ್ತಾ ಯಾವಾಗಲೂ ರಾತ್ರಿವೇಳೆ ಚಂದ್ರಕಲಾಧರನಾದ ನಿನ್ನ ಪಾದವನ್ನು ನೋಡಬೇಕೆಂಬ ಕುತೂಹಲದಿಂದ ನಾನು ನಿರೀಕ್ಷಿಸುತ್ತಿದ್ದಾಗ, ನನಗೆ ಅನೇಕ ಉಪದ್ರವಗಳೂ ಉಂಟಾದವು. ಎಲೈ ಮಹದೈಶ್ವರ್ಯಭರಿತನಾದ ದೇವತಾಸಾರ್ವಭೌಮನೇ, ಹೀಗಿರುವಾಗ, ವಿಂಧ್ಯಪರ್ವತದ ಗರ್ವವನ್ನಡಗಿಸಲು ನೀನು ಹೋಗೆಂದು ಹೇಗೆ ಅಪ್ಪಣೆಮಾಡುತ್ತಿರುವೆ? ಸ್ವಾಮಿ, ನಿನ್ನ ಪ್ಪಣೆಯಂತೆ ನಾನು ಹೋಗಲು ಸಿದ್ಧನಾಗಿರುವೆನು. ಆದರೆ ಇಂತಹ ಸಂದರ್ಭದಲ್ಲಿ ನನಗೆ ನಿನ್ನ ವಿವಾಹಮಹೋತ್ಸವವನ್ನು ನೋಡುವ ಸೌಭಾಗ್ಯವಿಲ್ಲದಂತೆ ನಿನ್ನ ಭಕ್ತನಾದ ನನ್ನನ್ನು ಉಪೇಕ್ಷೆಮಾಡುವುದುಚಿತವೆ? ॥೩೬-೩೭॥

ತ್ವನ್ನಾಮ್ನೈವ ಸದಾ ಶಂಭೋ ಚಾರುನಾಮಮನಾಮಹೇ ।
ಕಥಂ ಯಾಸ್ಯಾಮಿ ದೇವೇಶ ಹಿತ್ವಾ ಪಾಣಿಗ್ರಹೇಕ್ಷಣಂ ॥೩೮॥

ಸರ್ವಮಂಗಲಮಾಂಗಲ್ಯಂ ಮಂಗಲಾನಾಂ ಚ ಮಂಗಲಂ ।
ಶಂಭೋ ಪರಸ್ತ್ವಂ ಪುರುಷಃ ಶಿವಶಕ್ತೇಃ ಪರಾತ್ಪರಃ ॥೩೯॥

ಯುವಯೋರ್ಮಂಗಲಂ ಹಿತ್ವಾ ಕಥಂ ಗಚ್ಛಾಮ್ಯಭಾಗ್ಯಭಾಕ್ ।
ಅಹೋ ಮತ್ತೋಽಹ್ಯಭಾಗ್ಯೋಽಸ್ತಿ ತಿಷ್ಠತ್ಸು ಮುನಿಷು ಪ್ರಭೋ॥೪೦॥

ಯುವಯೋರ್ಮಂಗಲಂ ದ್ರಷ್ಟುಂ ವೈವಾಹಿಕಮನುತ್ತಮಂ ।
ದ್ವಿಲೋಚನಾಶ್ಚ ಮನ್ಯಂತೇ ಸಹಸ್ರಾಕ್ಷೇಽಪ್ಯಹೀನಕೇ ॥೪೧॥

ವರಿಷ್ಠತಾಂ ತೇ ಮನ್ಯಂತೇ ನವೋತ್ಸವವಿಲೋಕನಾತ್ ।
ನಾಹಂ ತ್ವಲ್ಲಿಂಗಸಾಮ್ಯಂ ನ ಪೂಜಯಾಮ್ಯನ್ಯದೇವತಾಃ ॥೪೨॥

---

ಶಂಭುವೇ, ನಿನ್ನ ದಿವ್ಯನಾಮವನ್ನೇ ಮನೋಹರವಾದ ನಾಮವೆಂದು ನಾನು ಯಾವಾಗಲೂ ಭಾವಿಸುತ್ತಿರುವೆನು. ದೇವತೋತ್ತಮನೇ, ಹೀಗಿರುವ ನಿನ್ನ ಪಾಣಿಗ್ರಹಣವನ್ನು ನೋಡದೇ ನಿನ್ನನ್ನು ಬಿಟ್ಟು ನಾನು ಹೇಗೆ ಹೋಗುವೆನು? ಶಂಭುವೇ, ಸಕಲ ಮಂಗಳಗಳಿಗೂ ಮಂಗಳಪ್ರದನೂ, ಸರ್ವಮಂಗಳೆಯೆನಿಸಿದ ಪಾರ್ವತಿಗೆ ಸಂತೋಷಪ್ರದನೂ, ಶಿವಶಕ್ತಿಗೆ ಆಶ್ರಯಸ್ಥಾನನೂ ಆದ ಪರಮ ಪುರುಷನೇ ನೀನಾಗಿರುವೆ. ॥೩೮-೩೯॥

ಪ್ರಭುವೇ, ನಿಮ್ಮಿಬ್ಬರ ವಿವಾಹರೂಪವಾದ ಮಂಗಳೋತ್ಸವವನ್ನು ಬಿಟ್ಟು ಭಾಗ್ಯಹೀನನಾದ ನಾನು ಇಲ್ಲಿಂದ ಹೇಗೆ ಹೋಗುವೆನು ? ಅಯ್ಯೋ ! ಇಷ್ಟೊಂದು ಮಂದಿ ಮುನಿಗಳೆಲ್ಲರೂ ಇದ್ದಾಗ್ಯೂ ನನಗೆ ಮಾತ್ರ ಇಂತಹ ಸ್ಥಿತಿಯೊದಗುವಾಗ ನನಗಿಂತಲೂ ಭಾಗ್ಯಹೀನನು ಮತ್ತಾರು ತಾನೇ ಇರುವನು? ನಿಮ್ಮಿಬ್ಬರ ಅತ್ಯುತ್ತಮವಾದ ವಿವಾಹಮಂಗಳವನ್ನು ನೋಡಲು, ಎರಡು ಕಣ್ಣುಳ್ಳ ಈ ದೇವತೆಗಳೇ ಮೊದಲಾದವರು ಸಾವಿರಕಣ್ಣುಗಳಿದ್ದರೂ ಸಾಲದಲ್ಲಾ ಎಂದು ತಿಳಿಯುತ್ತಿರುವರು. ಮತ್ತು ಇಂತಹ ಸಮಯದಲ್ಲಿ ಸಾವಿರಕಣ್ಣುಗಳಾದರೂ ನಮಗೆ ಇರಬಾರದಾಗಿತ್ತೇ ಎಂದು ಅಪೇಕ್ಷಿಸುತ್ತಿರುವರು. ॥೪೦-೪೧॥

ಎಲ್ಲರು ಹೊಸದಾದ ಈ ಪರಿಣಯೋತ್ಸವವನ್ನು ನೋಡುವುದರಿಂದ ತಾವು ಧನ್ಯರು, ಶ್ರೇಷ್ಠರು, ಎಂದು ತಿಳಿಯುತ್ತಾರೆ. ದೇವ, ನಾನು ನಿನ್ನ ಶಿವಲಿಂಗಕ್ಕೆ

ಭೂತಿತ್ರಿಪುಂಡ್ರರುದ್ರಾಕ್ಷ ರುದ್ರಪಂಚಾಕ್ಷರಾದಯಃ ।
ನ ಲಿಂಗಾರ್ಚನಹೀನೋಽಹಂ ಪಿಬಾಮ್ಯಂಬುಫಲಂ ತು ವಾ ॥೪೩॥

ನಾರ್ಪಿತಂ ತವ ಶಂಭೋ ನಾ ಧ್ಯಾತಂ ತೇ ನ ಪದಾಂಬುಜಂ ।
ಕಂ ಕಂ ದ್ರೋಹಂ ತವ ವಿಭೋ ದೃಷ್ಟ್ವಾ ಮಾಂ ತ್ಯಕ್ತುಮಿಚ್ಛಸಿ ॥೪೪॥

ಹಾಹಾ ಶಂಭೋ ಕಥಂ ಮಾಂ ತ್ವಂ ನಿಯೋಜಯಸಿ ಶಂಕರ ।
ತಿಷ್ಠತ್ಸು ಸರ್ವಮುನಿಷು ಸುರಾಸುರಗಣೇಷು ಚ ॥೪೫॥

ಇತ್ಯುಕ್ತ್ವಾ ಪ್ರಾರುದನ್ಮಂದಂ ಬಾಷ್ಪಾಂಬುಕ್ಲಿನ್ನಭೂತಲಃ ।
ಲುಠಂತಮವನೀಭಾಗೇ ತಮುತ್ಥಾಪ್ಯಾಹಮೀಶ್ವರಿ ॥೪೬॥

ತನ್ಮುಖಂ ಪರಿಮೃಜ್ಯಾಹಂ ವಾಚಮಾನೋಚಯಾಮ್ಯಹಂ ॥೪೭॥

---

ಸಮಾನವಾಗಿ ಇತರ ಯಾವ ದೇವತೆಗಳನ್ನೂ ಪೂಜೆಮಾಡುವುದಿಲ್ಲ. ಭಸ್ಮ ತ್ರಿಪುಂಡ್ರ, ರುದ್ರಾಕ್ಷಗಳನ್ನು ಧರಿಸದೇ ಶ್ರೀರುದ್ರ, ಶಿವಪಂಚಾಕ್ಷರ ಮೊದಲಾದ ನಿನ್ನ ಮಂತ್ರಗಳನ್ನು ಜಪಮಾಡದೇ ಶಿವಲಿಂಗವನ್ನೂ ಪೂಜಿಸದೇ ನಾನು ನೀರನ್ನೂ ಸಹ ಕುಡಿಯುವುದಿಲ್ಲ. ಹಣ್ಣುಕಾಯಿಗಳನ್ನಂತೂ ತಿನ್ನುವುದೇ ಇಲ್ಲ. ॥೪೨-೪೩॥

ಶಂಭುವೇ, ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷವೇ ಮುಂತಾದುವುಗಳನ್ನು ಧರಿಸದೇ ನಿನಗೆ ಯಾವ ಹಣ್ಣುಹಂಪಲನ್ನೂ ಸಮರ್ಪಣೆ ಮಾಡಲಿಲ್ಲ. ಧ್ಯಾನವನ್ನೂ ನೆರವೇರಿಸಲಿಲ್ಲ. ದೇವ, ನಿನ್ನ ಪಾದಕಮಲಗಳಿಗೆ ನಮಸ್ಕಾರವನ್ನು ಮಾಡುವಾಗಲೂ ನಾನು ಭಸ್ಮಾದಿಗಳನ್ನು ಧರಿಸದೇ ಇರಲಿಲ್ಲ. ಎಲೈ ಸರ್ವವ್ಯಾಪಕನಾದ ಸ್ವಾಮಿಯೇ, ಹೀಗಿರಲು ಮತ್ತಾವ ಅಪರಾಧವನ್ನು ನನ್ನಲ್ಲಿ ಕಂಡು ನನ್ನನ್ನು ತ್ಯಾಗಮಾಡಲು ಇಚ್ಛಿಸುತ್ತಿದ್ದೀಯೆ ? ಸ್ವಾಮಿ, ಸಕಲ ಮುನಿಗಳೂ, ದೇವ ರಾಕ್ಷಸ ಗಣಗಳೂ ಸಹ ನಿನ್ನೆದುರಿಗೇ ನಿಂತಿರಲು, ಎಲೈ ಶಂಭುವೇ, ಜಗನ್ಮಂಗಳಕರನಾದ ನೀನು ನನ್ನನ್ನೇ ಈ ಕಾರ್ಯದಲ್ಲೇಕೆ ನಿಯಮಿಸುತ್ತಿದ್ದೀಯೆ ? ಅಯ್ಯೋ! ನನ್ನ ದುರದೃಷ್ಟವೆಂತಹದೋ ಕಾಣೆನು. ॥೪೪-೪೫॥

ದೇವಿ, ಈರೀತಿ ಹೇಳಿ ಅಗಸ್ತ್ಯಮುನಿಯು ಮೆಲ್ಲನೆ ಅಳುತ್ತಾ, ಕಣ್ಣೀರಿನಿಂದ ತೊಯ್ದ ನೆಲವುಳ್ಳವನಾಗಿ ಭೂಮಿಯಲ್ಲಿ ಬಿದ್ದು ಹೊರಳುತ್ತಿರಲು, ಆಗ ನಾನು ಆ

## ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉಗ್ರಾಖ್ಯೇ ಉತ್ತರಭಾಗೇ ದ್ವಿತೀಯೋಽಧ್ಯಾಯಃ

ಅಗಸ್ತ್ಯಮುನಿಯನ್ನು ಮೇಲಕ್ಕೇಳಿಸಿ, ಮುಖವನ್ನೊರೆಸಿ ಪ್ರೀತಿಯಿಂದ ಆಶ್ವಾಸನೆ ಮಾಡಿದೆನೆಂದು ಶಂಕರನು ಪಾರ್ವತಿಗೆ ಹೇಳಿದನು. ||೪೬-೪೭||

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಏಳನೆಯ ಅಂಶದ ಉತ್ತರಭಾಗದಲ್ಲಿ
ಅಗಸ್ತ್ಯಮುನಿಯು ಶಿವನನ್ನು ಪ್ರಾರ್ಥನೆ ಮಾಡಿದನೆಂಬಲ್ಲಿಗೆ
ಎರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ತೃತೀಯೋಽಧ್ಯಾಯಃ

|| ಈಶ್ವರ ಉವಾಚ ||

ಉತ್ತಿಷ್ಠಾಗಸ್ತ್ಯ ಭಕ್ತ ತ್ವಂ ಮಯಾ ತುಲ್ಯೋಽಸಿ ಸತ್ತಮ ।
ತ್ವಯಾ ಕಾರ್ಯ ಮಹತ್ಕಾರ್ಯಂ ತ್ವಂ ಮೇ ಭಕ್ತೋಽಸಿ ಶಾಂಕರ ॥೧॥

ಏತೇ ಮುನಿಗಣಾ ಭಕ್ತಾ ನ ತ್ವತ್ತುಲ್ಯಾ ಘಟೋದ್ಭವ ।
ಕೇದಾರೇ ಹಿಮವನ್ಮೌಲೌ ಷಟ್ಷಷ್ಟಿಕೋಟಿತೀರ್ಥಕಂ ॥೨॥

ಗಂಗಾ ಚ ಯಮುನಾ ಚೈವ ನದ್ಯೋಽಯುತಕಸಂಖ್ಯಕಾಃ ।
ಸಪ್ತಾಬ್ಧಯಃ ಸುಧಾಬ್ಧಿಶ್ಚ ಸರ್ವೇತ್ರೈವ ಸಮಾಗತಾಃ ॥೩॥

---

## ಮೂರನೆಯ ಅಧ್ಯಾಯ

"ಮಗನೇ, ಭಕ್ತನೇ, ಮೇಲೇಳು. ಎಲೈ ಸಾಧುವರ್ಯ, ನೀನು ನನಗೆ ಸಮಾನನು- ನನ್ನ ಭಕ್ತನಾಗಿ ಶಾಂಕರನೆನಿಸಿರುವ ನಿನ್ನಿಂದ ನನಗೆ ಒಂದು ಮಹಾ ಕಾರ್ಯವಾಗಬೇಕಾಗಿದೆ. ಅಗಸ್ತ್ಯನೇ, ನನ್ನ ಭಕ್ತರಾಗಿರುವ ಈ ಮುನಿಸಮೂಹ ವೆಲ್ಲವೂ ನಿನಗೆ ಮಹಿಮೆಯಲ್ಲಿ ಸಮವಾಗಲಾರದು. ಹಿಮವತ್ಪರ್ವತದಲ್ಲಿರುವ ಈ ಕೇದಾರಕ್ಷೇತ್ರದಲ್ಲಿ ಅರುವತ್ತಾರುಕೋಟಿ ತೀರ್ಥಗಳಿರುವುವು. ||೧-೨||

ಗಂಗಾ, ಯಮುನಾನದಿಗಳೂ ಮತ್ತು ಇನ್ನೂ ಇತರ ಹತ್ತುಸಾವಿರ ನದಿಗಳೂ, ಕ್ಷೀರಸಾಗರವೇ ಮೊದಲಾದ ಏಳು ಸಮುದ್ರಗಳೂ ಇಲ್ಲಿಯೇ ಬಂದಿರುವುವು. ನನ್ನ ವಿವಾಹಮಹೋತ್ಸವವನ್ನು ನೋಡಲು ಬಂದಿರುವ ಈ ತೀರ್ಥಗಳ

ಮದುತ್ಸವಾಲೋಕನಾರ್ಥಂ ತ್ವಂ ಘಟೇ ಗೃಹ್ಯ ತತ್ಪಯಃ ।
ಸಹ್ಯಮೌಲಿಂ ಸಮಾಯಾಹಿ ನಾನಾದ್ರುಮಲತಾಕುಲಂ ॥೪॥

ದಕ್ಷಿಣಾಂಭೋನಿಧೇಸ್ತೀರೇ ವೇದಾರಣ್ಯೇಶ್ವರಾಂತಿಕೇ ।
ಪಶ್ಚಾದ್ಭಾಗೇ ತು ಕಲ್ಯಾಣವೇಷಂ ತೇ ದರ್ಶಯಾಮ್ಯಹಂ ॥೫॥

ಮಾಶುಚೋ ಗಚ್ಛ ಭದ್ರಂತೇ ಘಟೋದ್ಭವ ಮಹಾಮುನೇ ।
ಸಹ್ಯೋದ್ಭವಾ ಭವಿತ್ರೀಯಂ ತ್ವದ್ಘಟೇ ಪೂರಿತಾಂಭಸಾ ॥೬॥

ತಸ್ಯ ಖಂಡದ್ವಯೇ ಭಾವಿ ತತ್ರ ಶೇತೇ ಹರಿಃ ಸ್ವಯಂ ।
ಗಜಾರಣ್ಯಾಧಿಪಂ ಮಾಂ ತು ದೃಷ್ಟ್ವಾ ಸಂಪೂಜ್ಯ ಮಾಂ ಹರಿಃ ॥೭॥

ಸಹ್ಯಪರ್ವತಮೂಲೇ ತು ಧಾತ್ರೀರೂಪಸ್ತ್ವಹಂ ಸ್ಥಿತಃ ।
ತನ್ಮೂಲೇ ಸಂಸ್ಥಿತೋ ಬ್ರಹ್ಮಾ ತನ್ಮಧ್ಯೇ ಸಂಸ್ಥಿತೋ ಹರಿಃ ॥೮॥

ತದಗ್ರೇ ಸಂಸ್ಥಿತೋಽಸ್ಮ್ಯದ್ಯ ತತ್ಪತ್ರಾಣಿ ಸುರಾ ದ್ವಿಜ ।
ತನ್ಮೌಲಿಲಿಂಗಂ ದೃಷ್ಟ್ವಾ ತು ಸಹ್ಯೇಶ್ವರಮನುತ್ತಮಂ ॥೯॥

---

ನೀರನ್ನೆಲ್ಲಾ ನೀನು ಒಂದು ಗಡಿಗೆಯಲ್ಲಿ ತುಂಬಿಕೊಂಡು ಅನೇಕ ಮರಬಳ್ಳಿಗಳಿಂದ ಶೋಭಿಸುತ್ತಿರುವ ಸಹ್ಯಾದ್ರಿಯ ಶಿಖರಕ್ಕೆ ಹೋಗುವನಾಗು. ॥೩ ೪॥

ದಕ್ಷಿಣಸಮುದ್ರದ ದಡದಲ್ಲಿರುವ ವೇದಾರಣ್ಯೇಶ್ವರನ ಸಮೀಪದಲ್ಲಿಯೂ ಮತ್ತು ಅದರ ಪಶ್ಚಾದ್ಭಾಗದಲ್ಲಿಯೂ ನಿನಗೆ ನಾನು ನನ್ನ ಮಂಗಳಸ್ವರೂಪವನ್ನು ತೋರಿಸುತ್ತೇನೆ. ಮುನಿಶ್ರೇಷ್ಠನಾದ ಅಗಸ್ತ್ಯನೇ, ನೀನೇನೂ ದುಃಖಪಡಬೇಡ. ಇಲ್ಲಿಂದ ಹೊರಡು. ನಿನಗೆ ಮಂಗಳವಾಗಲಿ. ನೀನು ತೆಗೆದುಕೊಂಡು ಹೋಗುವ ಗಡಿಗೆಯಲ್ಲಿ ತುಂಬಿದ ಸಕಲ ಕ್ಷೇತ್ರಗಳ ತೀರ್ಥದಿಂದ ಸಹ್ಯಾದ್ರಿಯಲ್ಲಿ ಒಂದು ನದಿಯು ಆವಿರ್ಭವಿಸುವುದು. ॥೫-೬॥

ಆ ನದಿಯು ಎರಡು ಕವಲುಗಳಾಗಿ ಒಡೆದು ಹರಿಯುವ ಸ್ಥಳದಲ್ಲೆಲ್ಲಾ ಮಹಾವಿಷ್ಣುವು ಸ್ವತಃ ಮಲಗಿರುವನು. ಗಜಾರಣ್ಯಕ್ಕೆ ಸ್ವಾಮಿಯಾದ ನನ್ನ ದರ್ಶನ ಮಾಡಿ ಪೂಜಿಸಿದ ನಂತರ ಈ ವಿಷ್ಣುವು ಅಲ್ಲಿಯೇ ನೆಲಸುತ್ತಾನೆ. ಆ ಸಹ್ಯಪರ್ವತದ ಬುಡದಲ್ಲಿ ನಾನು ಧಾತ್ರೀರೂಪದಿಂದ (ನೆಲ್ಲೀಕಾಯಿಯ ಮರ) ಇರುವೆನು. ಆ ವೃಕ್ಷದ ಆದಿಯಲ್ಲಿ ಬ್ರಹ್ಮನೂ, ಅದರ ಮಧ್ಯದಲ್ಲಿ ವಿಷ್ಣುವೂ, ಅಂತ್ಯದಲ್ಲಿ ನಾನೂ

ಸರ್ವಪಾಪೈಃ ಪ್ರಮುಚ್ಯೇತ ತುಲಾಸಂಸ್ಥೇ ದಿವಾಕರೇ ।
ಸಹ್ಯಕುಂಡಂ ಚ ತತ್ರಾಸ್ತಿ ಹ್ಯಸಂಖ್ಯಾಘನಿವಾರಣಂ ॥೧೦॥

ತತ್ರಾಪ್ಲುತಾ ನರಾ ಯಾಂತಿ ದಿವಿಷತ್ಸದನಂ ಮುನೇ ।
ತುಲಾಗತೇ ದಿನಾನಾಥೇ ತತ್ಕುಂಡೇ ಸರಿತೋಽಬ್ಧಯಃ ॥೧೧॥

ಷಟ್ಷಷ್ಟಿಕೋಟಿತೀರ್ಥಾನಿ ಸಮಾಯಾಂತಿ ಮದಾಜ್ಞಯಾ ।
ತಸ್ಮಿನ್ಕುಂಡೇ ನರಃ ಸ್ನಾತ್ವಾ ಸಹ್ಯಮೌಲೌ ಘಟೋದ್ಭವ ॥೧೨॥

ಗಂಗಾದಿಸರ್ವಸರಿತಾಂ ಸಪ್ತಾಬ್ಧೀನಾಂ ತು ಸಂಪ್ಲವೇ ।
ಷಟ್ಷಷ್ಟಿಕೋಟಿತೀರ್ಥೇಷು ಸ್ನಾನಾದ್ಯತ್ಫಲಮಾಪ್ನುಯಾತ್ ॥೧೩॥

ತತ್ಫಲಂ ಕೋಟಿಗುಣಿತಂ ಸಹ್ಯಕುಂಡಾಪ್ಲುತೋ ಭವೇತ್ ।
ತುಲಾಗತೇ ಪದ್ಮಮಿತ್ರೇ ಪವಿತ್ರೇಯಂ ಸರಿದ್ವರಾ ॥೧೪॥

---

ನೆಲಸಿರುವೆವು. ಧಾತ್ರೀವೃಕ್ಷದಲ್ಲಿರುವ ಎಲೆಗಳೆಲ್ಲವೂ ದೇವತಾಸ್ವರೂಪಗಳೇ ಆಗಿರುವುವು. ಸೂರ್ಯನು ತುಲಾರಾಶಿಗೆ ಬಂದಾಗ, ಅಂದರೆ ತುಲಾಮಾಸದಲ್ಲಿ ಆ ಸಹ್ಯಾಚಲದ ಶಿಖರದಲ್ಲಿರುವ ಅತ್ಯುತ್ತಮವಾದ ಸಹ್ಯೇಶ್ವರನ ಲಿಂಗವನ್ನು ದರ್ಶನಮಾಡುವವರು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವರು.॥೭-೮-೯॥

ಸಹ್ಯಾಚಲದಲ್ಲಿ ಅಸಂಖ್ಯಾತವಾದ ಪಾಪಗಳನ್ನು ನಾಶಮಾಡುವ ಸಹ್ಯಕುಂಡವಿರುವುದು. ಅಯ್ಯ ಮುನಿಯೇ, ಅಲ್ಲಿ ಸ್ನಾನಮಾಡಿದ ಮಾನವರು ದೇವಲೋಕವನ್ನೈದುವರು. ಸೂರ್ಯನು ತುಲಾರಾಶಿಗೆ ಬಂದಾಗ ಅಂದರೆ ತುಲಾಮಾಸದಲ್ಲಿ ಆ ಕುಂಡದಲ್ಲಿ ನದಿಗಳು, ಸಮುದ್ರ ಮುಂತಾದ ಅರುವತ್ತುಕೋಟಿ ತೀರ್ಥಗಳೂ ನನ್ನ ಅಪ್ಪಣೆಯಿಂದ ಬಂದು ಸೇರುವುವು. ಎಲೈ ಅಗಸ್ತ್ಯಮುನಿಯೇ, ಸಹ್ಯಪರ್ವತದ ಶಿಖರದಲ್ಲಿರುವ ಆ ಕುಂಡದಲ್ಲಿ ಮಾನವನು ಸ್ನಾನಮಾಡಿ ಪಾಪಮುಕ್ತನಾಗುವನು. ॥೧೦-೧೧-೧೨॥

ಗಂಗಾ ಮುಂತಾದ ಸಮಸ್ತ ನದಿಗಳಲ್ಲಿ, ಏಳು ಸಮುದ್ರಗಳಲ್ಲಿ, ಮತ್ತು ಅರುವತ್ತಾರುಕೋಟಿ ತೀರ್ಥಗಳಲ್ಲಿ, ಸ್ನಾನಮಾಡಿದ್ದಕಿಂತ ಕೋಟಿಪಾಲು ಹೆಚ್ಚು ಪುಣ್ಯವನ್ನು ಸಹ್ಯಕುಂಡದಲ್ಲಿ ಸ್ನಾನಮಾಡಿದುದರಿಂದ ಮಾನವನು ಪಡೆಯುತ್ತಾನೆ. ಕಮಲಬಂಧುವೆನಿಸಿದ ಸೂರ್ಯನು ತುಲಾರಾಶಿಗೆ ಬಂದಾಗ ಈ ಶ್ರೇಷ್ಠವಾದ ನದಿಯು ಪಾವಿತ್ರ್ಯದಲ್ಲಿ ಅಗ್ರಸ್ಥಾನವನ್ನು ಪಡೆಯುವುದು. ॥೧೩-೧೪-॥

ತಪಸ್ಯತೋ ಸಹ್ಯಮೌಲೌ ತ್ವದ್ಘಟಸ್ಥೇಯಮಾಪಗಾ ।
ಭವಿತ್ರೀಯಂ ಕವೇರಸ್ಯ ನೃಪತೇಶ್ಚ ತನೂದ್ಭವಾ ॥೧೫॥

ಸರ್ವಲೋಕಹಿತಾರ್ಥಾಯ ಸಹ್ಯಮೌಲೇರ್ವಿನಿಃಸರೇತ್ ।
ಅಂತರ್ಹಿತಾ ಕ್ವಚಿದ್ದೂರಂ ತ್ವಯಾಹೂತಾ ಸರಿದ್ವರಾ ॥೧೬॥

ಪುನಸ್ತೇ ದರ್ಶನಂ ವಿಪ್ರ ದದಾತೀಯಂ ತ್ವಂಮಾಶುಚಃ ।
ಅಖಂಡೇನ ಪ್ರವಾಹೇಣ ಪ್ರವಹೇತ್ಸಾ ಮರುದ್ವೃಧಾ ॥೧೭॥

ಪುನಶ್ಚ ಸಂಗತಾ ಪ್ರಾಚ್ಯಾಂ ಅಮ್ರವತ್ಯಾ ಚ ಮತ್ಸ್ಯಯಾ ।
ನದೀಭ್ಯಾಂ ಸಂಗತಾ ಪ್ರಾಚ್ಯಾಂ ಪ್ರವಹೇತ್ಸಹ್ಯಜಾ ಪುನಃ ॥೧೮॥

ಗಾಯತ್ರ್ಯಾ ಚ ತಪಸ್ತಪ್ತಂ ನದೀಮಧ್ಯೇಽಭವಚ್ಛಿಲಾ ।
ತಚ್ಛಿಲಾಸ್ಥೋ ದ್ವಿಜೋ ಜಪ್ತ್ವಾ ಗಾಯತ್ರೀಂ ಮತ್ಪ್ರಸಾದತಃ ॥೧೯॥

---

ಎಲೈ ಬ್ರಹ್ಮಜ್ಞಾನಿಯೇ, ಸಹ್ಯಪರ್ವತದ ಶಿಖರದಲ್ಲಿ ತಪಸ್ಸು ಮಾಡುತ್ತಿರುವ ನಿನ್ನ ಗಡಿಗೆಯಿಂದ ಶ್ರೇಷ್ಠವಾದ ಆ ನದಿಯು ಹುಟ್ಟಿ ಕವೇರನೆಂಬ ರಾಜನ ಮಗಳೆಂದು ಪ್ರಸಿದ್ಧಿ ಪಡೆದು, ಸಕಲ ಲೋಕಗಳ ಹಿತಕ್ಕೋಸ್ಕರ ಸಹ್ಯಾದ್ರಿಯ ಶಿಖರದಿಂದ ಹರಿದು ಬರುತ್ತದೆ. ಈ ಉತ್ತಮ ನದಿಯು ಸ್ವಲ್ಪದೂರ ಗುಪ್ತ ಗಾಮಿನಿಯಾಗಿ ಯಾರಿಗೂ ಗೋಚರಿಸದೇ, ಅನಂತರ ನಿನ್ನಿಂದ ಆಹ್ವಾನಿಸಲ್ಪಟ್ಟು ನಿನಗೆ ದರ್ಶನ ಕೊಡುತ್ತದೆ. ಅಯ್ಯ ವಿಪ್ರನೇ, ಇದಕ್ಕಾಗಿ ನೀನು ದುಃಖಪಡಬೇಡ. ||೧೫-೧೬||

ಈ ಕಾವೇರಿಯು ಕೇವಲ ವಾಯುವಿನಿಂದಲೇ ಪೂರ್ಣಪ್ರವಾಹವನ್ನು ಪಡೆದು ಹರಿಯುತ್ತಾ ಪೂರ್ವದಿಕ್ಕಿನಲ್ಲಿ ಅಮರಾವತೀ ಮತ್ತು ಮತ್ಸ್ಯವೆಂಬ ಉಪ ನದಿಗಳಿಂದ ಬೆರೆತು, ತಿರುಗಿ ಮುಂದಕ್ಕೆ ಪ್ರವಾಹದಿಂದ ಪೂರ್ಣವಾಗಿ ಹರಿಯು ತ್ತದೆ. ||೧೭-೧೮||

ಮುಂದೆ ಗಾಯತ್ರೀದೇವಿಯೂ ಈ ನದಿಯ ಮಧ್ಯದಲ್ಲಿ ತಪಸ್ಸು ಮಾಡಿ ಆ ಗಾಯತ್ರಿಯು, ನದಿಯ ಮಧ್ಯದಲ್ಲಿ ಶಿಲಾರೂಪವನ್ನು ಹೊಂದುವಳು. ಗಾಯತ್ರೀಶಿಲೆಯ ಆಶ್ರಯದಲ್ಲಿ ಬ್ರಾಹ್ಮಣನಾದವನು ಜಪಮಾಡಿ ಸಂಸಾರ ದುಃಖನಾಶಕವಾದ ' ಭರ್ಗ ' ಶಬ್ದೋಚ್ಚಾರದಿಂದ ಸಂಸಾರದ ದುಃಖಗಳಿಗೆ ಬೀಜ

ಸಂಸಾರದುಃಖಬೀಜಾನಾಂ ಭರ್ಗಶಬ್ದೇನ ಭರ್ಜನಂ ।
ಕರೋತಿ ದ್ವಿಜರಾಣ್ಮೌಲಿಪ್ರಸಾದಂ ದ್ವಿಜಬಂಧುವಾನ್ ॥೨೦॥

ತತ್ರ ಶ್ರೀಕಂಠಮುತ್ಕಂಠಂ ಕ್ಷೇತ್ರಮಸ್ತ್ಯೇಕಮುತ್ತಮಂ ।
ತೀರೇ ಕವೇರಜಾತಾಯಾಃ ತತ್ಸ್ಮೃತಿಃ ಸಹ್ಯಜಾಪ್ಲವೇ ॥೨೧॥

ವರಿಷ್ಠಾನಾಂ ಚ ಪಾಪಾನಾಂ ನಾಶಃ ಶ್ರೀಕಂಠಸಂಸ್ಮೃತಿಃ ।
ಖಂಡದ್ವಯೇ ಹರಿಃ ಶೇತೇ ಪ್ರಾಚ್ಯಾಂ ಶ್ರೀಜಂಬುಕೇಶ್ವರಂ ॥೨೨॥

ಅಖಿಲಾಂಡಗತ ಪ್ರಾಣಿರಕ್ಷಿಣೀ ತತ್ರ ಪಾರ್ವತೀ ।
ತದ್ದಕ್ಷಿಣೇ ಮಾತೃಗಿರಿಃ ರತ್ನಾದ್ರಿಸ್ತತ್ಪ್ರತೀಚ್ಯತಃ ॥೨೩॥

ತದುತ್ತರೇ ಮರಕತಃ ಶಂಕರಸ್ತೃಣಶಂಕರಃ ।
ಕಾವೇರೀ ಸರಿತಾಂ ಶ್ರೇಷ್ಠಾ ತಸ್ಯಾಸ್ತೀರದ್ವಯೇಽಪ್ಯಹಂ ॥೨೪॥

---

ಭೂತವಾಗಿರುವ ಕ್ಲೇಶಗಳನ್ನೆಲ್ಲಾ ಹೊಡೆದೋಡಿಸುತ್ತಾನೆ. ಇದರಿಂದ ಚಂದ್ರಮೌಳಿಯಾದ ನನ್ನ ಅನುಗ್ರಹವೂ ಅವನಿಗುಂಟಾಗಿ ಅವನು ಬ್ರಾಹ್ಮಣೋತ್ತಮನೆನಿಸುವನು. ಅಲ್ಲಿ ಶ್ರೀಕಂಠಸಂಜ್ಞಕವಾದ ಒಂದು ಅತ್ಯುತ್ತಮವಾದ ಕ್ಷೇತ್ರವು ಕಾವೇರಿಯ ದಡದಲ್ಲಿ ವಿರಾಜಿಸುವುದು. ಆ ಕಾವೇರೀ ನದಿಯಲ್ಲಿ ಸ್ನಾನಮಾಡಿ ಆ ಶ್ರೀಕಂಠೇಶ್ವರನನ್ನು ಸ್ಮರಣೆ ಮಾಡಿದವರು ನನ್ನ ಅನುಗ್ರಹವನ್ನು ಪಡೆಯುವರು.॥೧೯-೨೦-೨೧॥

ಶ್ರೀಕಂಠಸ್ಮರಣೆಯು ಅತಿಘೋರವಾದ ಪಾಪಗಳನ್ನೂ ನಾಶಮಾಡುವುದು. ಆ ಕಾವೇರಿಯು ಎರಡು ಭಾಗವಾಗಿ ಒಡೆಯುವ ಸ್ಥಳಗಳಲ್ಲಿ ವಿಷ್ಣುವು ಮಲಗುತ್ತಾನೆ. ಪೂರ್ವದಿಕ್ಕಿನಲ್ಲಿ ಶ್ರೀ ಜಂಬುಕೇಶ್ವರಕ್ಷೇತ್ರವಿರುವುದು. ಅಲ್ಲಿ ಸಕಲ ಬ್ರಹ್ಮಾಂಡದ ಪ್ರಾಣಿಗಳನ್ನೂ ತಾಯಿಯಂತೆ ಕಾಪಾಡುವ ಪಾರ್ವತೀದೇವಿಯು ನೆಲಸಿರುವಳು. ಅದಕ್ಕೆ ದಕ್ಷಿಣದಲ್ಲಿ 'ಮಾತೃಗಿರಿ'ಯೂ, ಪಶ್ಚಿಮದಲ್ಲಿ 'ರತ್ನಾಚಲ'ವೂ ಇರುವುವು. ॥೨೨-೨೩॥

ಅದಕ್ಕೆ ಉತ್ತರದಲ್ಲಿ ಮರಕತಮಣಿಯಿಂದ ರಚಿತವಾದ ಶಿವಲಿಂಗದಲ್ಲಿ ತೃಣಶಂಕರನೆಂಬ ಹೆಸರಿನಿಂದ ನಾನು ನೆಲಸಿರುವೆನು. ಈ ಕಾವೇರಿಯು ಎಲ್ಲಾ ನದಿಗಳಲ್ಲಿಯೂ ಶ್ರೇಷ್ಠವಾದುದು. ನಾನು ಅದರ ಎರಡು ತೀರಗಳಲ್ಲಿಯೂ ನೆಲಸಿ, ಕೆಲವು ಕ್ಷೇತ್ರಗಳಲ್ಲಿ ವಿಷ್ಣುವಿನಿಂದ ಸೇವಿಸಲ್ಪಡುತ್ತಾ ವಾಸಮಾಡುತ್ತಿರುವೆನು.

ಕ್ವಚಿತ್ಕ್ಷೇತ್ರೇಷು ಹರಿಣಾ ಸೇವಿತೋ ನಿವಸಾಮ್ಯಹಂ ।
ಯಥಾ ತ್ರಿಪಥಗಾ ಗಂಗಾ ಯಮುನಾ ಚ ಸರಸ್ವತೀ ॥೨೫॥

ಆರ್ಯಾವರ್ತೋತ್ತರೇ ಭಾಗೇ ಪಾವನಾಃ ಸರಿತೋ ವರಾಃ ।
ತಥಾ ವಿಂಧ್ಯಾದ್ದಕ್ಷಿಣತೋ ಸಹ್ಯಜಾತಾ ಚ ಪಾರ್ವತಿ ॥೨೬॥

ಅಮ್ರಾವತ್ಯಾ ಮತ್ಸ್ಯಯಾ ಚ ಸಂಗತಾ ಜನತಾಘಹೃತ್ ।
ನಿಚೋಲಭೂತಾ ಚೋಲೋ ವೈ ತತ್ಸ್ಯಾದುತ್ಕಟಜಪ್ಯಕಂ ॥೨೭॥

ತದ್ದಕ್ಷಿಣೇ ಕ್ರೋಶಮಾತ್ರಂ ತಂಜೇಶ್ವರಮನುತ್ತಮಂ ।
ಯತ್ರಾನಂದಮಹಾವಲ್ಯಾ ನಿಹತಸ್ತಂಜಿತಾಸುರಃ ॥೨೮॥

ಜಪ್ಯೇಶ್ವರೇ ರುದ್ರಜಪ್ಯಾನ್ನಂದೀಶೋ ಮತ್ಪದಂ ಯಯೌ ।
ಶ್ವೇತಾರಣ್ಯೇಽಂತಕಂ ಹತ್ವಾ ಶ್ವೇತಂ ನೃಪಮರಕ್ಷಯತ್ ॥೨೯॥

---

ಎಲೌ ಪಾರ್ವತಿಯೇ, ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿಯೂ ಮೂರು ರೀತಿಯಿಂದ ಪ್ರವಹಿಸುವ ಗಂಗೆ, ಯಮುನಾ ಮತ್ತು ಸರಸ್ವತೀ ನದಿಗಳು ಆರ್ಯಾವರ್ತದ ಉತ್ತರಭಾಗದಲ್ಲಿ ಪ್ರಸಿದ್ಧವಾಗಿರುವಂತೆ, ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿ ಸಹ್ಯಪರ್ವತದಲ್ಲಿ ಹುಟ್ಟಿದ ಈ ಕಾವೇರೀನದಿಯು ಪ್ರಖ್ಯಾತವೂ ಪಾವನವೂ ಆಗುವುದು. ||೨೪-೨೫-೨೬||

ಅಮರಾವತೀ ಮತ್ತು ಮತ್ಸ್ಯವೆಂಬ ನದಿಗಳಿಂದ ಕೂಡಿ, ಸಕಲ ಜನಗಳ ಪಾಪಗಳನ್ನೂ ಪರಿಹರಿಸುವ ಕಾವೇರಿಯು, ಚೋಲದೇಶದಲ್ಲಿ ಹರಿದು, ಚೋಲದೇಶದ ಜನಗಳಿಗೆ ರಕ್ಷಾಕವಚದಂತೆ ಸುಖವನ್ನುಂಟುಮಾಡುವುದು. ಆ ಚೋಲದೇಶವು ಜಪಮಾಡಲು ಅತ್ಯುತ್ತಮಕ್ಷೇತ್ರವಾಗಿರುವುದು. ಅದಕ್ಕೆ ದಕ್ಷಿಣ ದಿಕ್ಕಿನಲ್ಲಿ ಒಂದು ಕ್ರೋಶ (ಹರಿದಾರಿ) ದಲ್ಲಿ ಆನಂದಮಹಾವಲಿಯಿಂದ ತಂಜಕಾಸುರನು ಸಂಹರಿಸಲ್ಪಟ್ಟು ಅದು ಅತ್ಯುತ್ತಮವಾದ ತಂಜೇಶ್ವರಕ್ಷೇತ್ರವೆನಿಸಿರುವುದು. ||೨೭-೨೮||

ಜಪ್ಯೇಶ್ವರಕ್ಷೇತ್ರದಲ್ಲಿ ರುದ್ರಮಂತ್ರಜಪಮಾಡಿ ನಂದಿಕೇಶ್ವರನು ನನ್ನ ಸಾನ್ನಿಧ್ಯವನ್ನು ಹೊಂದಿದನು. ಅವನು ಶ್ವೇತಾರಣ್ಯದಲ್ಲಿ ಯಮನನ್ನು ನಿಗ್ರಹಿಸಿ ಶ್ವೇತನೆಂಬ ರಾಜನನ್ನು ಕಾಪಾಡಿದನು. ಛಾಯಾವನೇಶ್ವರಕ್ಷೇತ್ರದಲ್ಲಿ ನನ್ನನ್ನು

ಛಾಯಾವನೇಶೇ ಮತ್ಪೂಜಾಪ್ರಭಾವಾಚ್ಛಾಯಕಾಧವಃ ।
ಸರ್ವದಾ ಮಾಂ ಸಮಾರಾಧ್ಯ ಕಾಲೇ ತೇಜಃಪರೋಽಭವತ್ ॥೩೦॥

ಸಹ್ಯಜಾತಾಬ್ಧಿಸಂಗೇಽಪಿ ಸಂಗಮೇಶಂ ವಿಲೋಕ್ಯ ಚ ।
ಸರ್ವಪಾಪಾದ್ರಿಭಂಗಾಯ ಕುಲಿಶೋ ಜಾಯತೇ ನರಃ ॥೩೧॥

ಚೋಲೇಶತನ್ಮುಖೀ ಸಹ್ಯಾಜ್ಞಾತಾ ತತ್ರಾಬ್ಧಿಸಂಗತಾ ।
ತದಾ ತನ್ಮುಖತೀರೇಷು ಕ್ಷೇತ್ರಾಣಿ ಬಹುಶೋ ಮಮ ॥೩೨॥

ಮುಕ್ತಿದಾನಿ ಮುನಿಶ್ರೇಷ್ಠ ದರ್ಶನಾದಘಸಂಕ್ಷಯಃ ।
ಭವಂತ್ಯೇವ ನ ಸಂದೇಹಃ ಕಾನಿಚಿತ್ಪ್ರವದಾಮ್ಯಹಂ ॥೩೩॥

ಪೂರ್ವಮಸ್ಮಿನ್ಸಪ್ತಮಾಂಶೇ ಕುಂಭಘೋಣೇಽರ್ಜುನೇ ಶಿವೇ ।
ಚೋಲೇಽತ್ರ ಸಹ್ಯಜಾತೀರೇ ವೈಭವಂ ಪ್ರೋಕ್ತಮೇವ ಹಿ ॥೩೪॥

---

ಪೂಜಿಸಿ ಛಾಯಾದೇವಿಯ ರಮಣನಾದ ಸೂರ್ಯನು ಆ ಪೂಜಾಮಹಿಮೆಯಿಂದ ಸಕಾಲದಲ್ಲಿ ತೇಜಶ್ಶರೀರಿಯಾದನು. ॥೨೯-೩೦॥

ಈ ಕಾವೇರಿಯು ಸಮುದ್ರದಲ್ಲಿ ಸಂಗಮವಾಗುವ ಸ್ಥಳವನ್ನೂ ಮತ್ತು ಅಲ್ಲಿರುವ ಸಂಗಮೇಶ್ವರನನ್ನೂ ದರ್ಶನಮಾಡಿದ ಮಾನವನು ಸಕಲ ಪಾಪಗಳೆಂಬ ಪರ್ವತಗಳನ್ನೋಡಿಸುವುದರಲ್ಲಿ ವಜ್ರಾಯುಧಕ್ಕೆ ಸಾಟಿಯಾಗುವನು. ಈ ಕಾವೇರೀ ನದಿಯು ಚೋಲೇಶಕ್ಷೇತ್ರಕ್ಕಿಂತ ಮುಂದೆ ಹರಿದು ಸಮುದ್ರದಲ್ಲಿ ಸಂಗಮವಾಗುತ್ತದೆ. ಹಾಗೆ ಚೋಲೇಶಕ್ಷೇತ್ರಕ್ಕಿಂತಲೂ ಸಮುದ್ರಸಂಗಮವಾಗುವವರೆಗೆ ಇರುವ ಈ ನದಿಯ ದಡದಲ್ಲಿ ಅನೇಕ ನನ್ನ ಕ್ಷೇತ್ರಗಳಿರುವುವು. ॥೩೧-೩೨॥

ಎಲೈ ಮುನಿಶ್ರೇಷ್ಠನೇ, ಆ ಕ್ಷೇತ್ರಗಳೆಲ್ಲವೂ ಮುಕ್ತಿಪ್ರದವೇ ಆಗಿರುವುವು. ಕೇವಲ ಅವುಗಳ ದರ್ಶನಮಾತ್ರದಿಂದಲೇ ಭಕ್ತರ ಪಾಪವೆಲ್ಲವೂ ನಾಶವಾಗುವುದರಲ್ಲಿ ಸಂದೇಹವೇ ಇಲ್ಲ. ಅವುಗಳಲ್ಲಿ ಕೆಲವನ್ನು ಮಾತ್ರ ನಿನಗೆ ಹೇಳುವೆನು ಕೇಳು, ಹಿಂದೆ ಈ ಸಪ್ತಮಾಂಶದಲ್ಲಿ ಕುಂಭಘೋಣ, ಅರ್ಜುನ, ಮತ್ತು ಇತರ ಚೋಲ ಕ್ಷೇತ್ರಗಳು ಕಾವೇರಿಯ ತೀರದಲ್ಲಿರುವುವೆಂದು ಹೇಳಿ ಅವುಗಳ ವೈಭವವನ್ನೂ ಹೇಳಿರುವೆನು. ॥೩೩-೩೪॥

ಹಾಲಾಸ್ಯೇ ತಾಮ್ರಪರ್ಣ್ಯಾಶ್ಚ ತೀರೇ ವೇಗವತೀತಟೇ ।
ಮಾಕುಚೋ ಗಚ್ಛ ಭದ್ರಂ ತೇ ತತ್ರ ಪಾಂಡ್ಯೇ ತಟಾತಕಾ ॥೩೫॥

ಮಲಯಧ್ವಜಜಾತಾಯಾಃ ಪಾಣಿಂ ಗೃಹ್ಣಾಮಿ ಕುಂಭಜ ।
ನೃತ್ಯಸ್ತನೃತ್ಯಮಪಿ ತೇ ದರ್ಶಯಾಮಿ ಸಭಾತಲೇ ॥೩೬॥

ಕಲಧೌತಮಯೇ ವಿಪ್ರ ಯಥಾ ರತ್ನಸಭಾತಟೇ ।
ಜಾತರೂಪಮಯೇ ತತ್ರ ವ್ಯಾಘ್ರಪಾದಪತಂಜಲೀ ॥೩೭॥

ತಥಾ ತ್ವಂ ತತ್ರ ಹಾಲಾಸ್ಯೇ ಕಲಧೌತಸಭಾತಟೇ ।
ಮುನಿಭಿಸ್ಸಹ ನೃತ್ಯಂ ಮೇ ನೃತ್ಯಸ್ತಂ ಪಶ್ಯ ಕುಂಭಜ ॥೩೮॥

ತಾಮ್ರಪರ್ಣ್ಯಾ ಮಾರ್ಗಶೀರ್ಷೇ ಸ್ನಾಹಿ ಸರ್ವಾಘಭೇದಿನೀ ।
ಯಥಾ ವಿವಾಹಂ ಮೇಽದ್ಯೈವ ಹಿಮವದ್ಗಿರಿಮಸ್ತಕೇ ॥೩೯॥

ತಥಾ ಹಾಲಾಸ್ಯನಗರೇ ಮಲಯಧ್ವಜಕನ್ಯಯಾ ।
ಮೀನಾಕ್ಷ್ಯಾಶ್ಚ ವಿವಾಹಂ ಮೇ ಪಶ್ಯ ಧನ್ಯೇನ ಚಕ್ಷುಷಾ ॥೪೦॥

---

ಹಾಲಾಸ್ಯ ಕ್ಷೇತ್ರ, ತಾಮ್ರಪರ್ಣೀ, ಮತ್ತು ವೇಗವತೀ ನದಿಗಳ ತೀರಗಳಲ್ಲಿ ಹೋಗಿ ನೆಲಸು. ಎಲೈ ಮಂಗಳಕರನೇ, ನಿನಗೆ ಅಲ್ಲೆಲ್ಲಾ ಮಂಗಳವಾಗಲಿ. ಅಲ್ಲಿಯೇ ಪಾಂಡ್ಯದೇಶದಲ್ಲಿ ನಾನು ಮುಂದೆ ಮಲಯಧ್ವಜಕುಮಾರಿಯ ಪಾಣಿಗ್ರಹಣವನ್ನು ಮಾಡಿಕೊಳ್ಳುತ್ತೇನೆ. ಅಗಸ್ತ್ಯಮುನಿಯೇ, ಆಗ ನಿನಗೆ ಇಲ್ಲಿಗೆ ಬದಲಾಗಿ ನನ್ನ ನಾಟ್ಯವನ್ನು ಆ ಸಭಾಂಗಣದಲ್ಲಿಯೇ ತೋರಿಸುವೆನು. ||೩೫-೩೬||

ಅಯ್ಯ ಅಗಸ್ತ್ಯನೇ, ಸುವರ್ಣ ಮತ್ತು ರಜತಗಳಿಂದ ನಿರ್ಮಿತವಾಗಿರುವ ಸಭಾಂಗಣದಲ್ಲಿ ಹಿಂದೆ ವ್ಯಾಘ್ರಪಾದ ಮತ್ತು ಪತಂಜಲಿ ಮಹರ್ಷಿಗಳು ನನ್ನ ನಾಟ್ಯವನ್ನು ನೋಡಿ ಮುಕ್ತರಾದಂತೆ, ನೀನು ಹಾಲಾಸ್ಯಕ್ಷೇತ್ರದಲ್ಲಿ ಸುವರ್ಣ ಮಯವಾದ ಸಭಾಂಗಣದಲ್ಲಿ ಮುನಿಗಳೊಡನೆ ನನ್ನ ವಿಚಿತ್ರತರವಾದ ನರ್ತನವನ್ನು ನೋಡುವೆ. ಆದರಿಂದ ಬ್ರಹ್ಮಾನಂದವನ್ನು ಹೊಂದುವೆ. ||೩೭-೩೮||

ಮಾರ್ಗಶಿರಮಾಸದಲ್ಲಿ ತಾಮ್ರಪರ್ಣೀ ನದಿಯ ಸ್ನಾನವು ಸಕಲ ಪಾಪಗಳನ್ನೂ ಹೋಗಲಾಡಿಸುವುದು. ಎಲೈ ಅಗಸ್ತ್ಯಮುನಿಯೇ, ಈಗ ಹಿಮಾಲಯ ಪರ್ವತದ ಶಿಖರದಲ್ಲಿ ನಡೆಯುವ ನನ್ನ ವಿವಾಹದಂತೆಯೇ ಹಾಲಾಸ್ಯನಗರದಲ್ಲಿ

ಮಾ ಶೋಕಂ ಕುರು ಭದ್ರಂ ತೇ ದಿಶಂ ಗಚ್ಛಾಶು ದಕ್ಷಿಣಾಂ ।
ಪಾಪನಾಶಂ ಚ ಕುದ್ದಾಲಂ ಜ್ಞಾನವಾಟೀಶ್ವರಂ ಮುನೇ ॥೪೧॥

ತಾಮ್ರಪರ್ಣ್ಯಾಸ್ತಟೇ ಪಶ್ಯ ವೇಗವತ್ಯಾಶ್ಚ ಪಾವನೇ ।
ತಟಯೋಃ ಪುಣ್ಯಕ್ಷೇತ್ರಾಣಿ ಮಹೇಂದ್ರಜನುಷಾತಟೇ ॥೪೨॥

ಪುರಾ ವೈ ವೃತ್ರಹಾಂ ಹಂತುಂ ವಜ್ರೇಣೈವ ಶತಕ್ರತುಃ ।
ತತ್ರಾರಾಧ್ಯ ಮಹಾದೇವಂ ಶುಚಿರಿಂದ್ರೋಽಭವತ್ಪುರಾ ॥೪೩॥

ತದಾಪ್ರಭೃತಿ ತತ್ಕ್ಷೇತ್ರಂ ಶುಚೀಂದ್ರಮಭವನ್ಮುನೇ ।
ವಿಷ್ಣುಶ್ಚಾಪಿ ಸ್ಥಿತಸ್ತತ್ರ ತೋತಾದ್ರೌ ಶರ್ವಭಾವಿತಃ ॥೪೪॥

ಹಾಲಾಸ್ಯೇಽಪಿ ಚತುಷ್ಷಷ್ಟಿಲೀಲಾಕಾರಿ ಮಯಾ ಮುನೇ ।
ತಸ್ಮಾಲ್ಲೋಕೋಪಕಾರಾಯ ಗಚ್ಛ ತ್ವಂ ದಕ್ಷಿಣಾಂ ದಿಶಂ ॥೪೫॥

---

ಮಲಯಧ್ವಜಕುಮಾರಿಯಾದ ಮೀನಾಕ್ಷಿಯೊಡನೆ ಮುಂದೆ ನಡೆಯುವ ನನ್ನ ವಿವಾಹಮಹೋತ್ಸವವನ್ನು ನಿನ್ನ ಕಣ್ಣುಗಳಿಂದ ನೋಡಿ ಧನ್ಯನಾಗುವೆ. ॥೩೯-೪೦॥

ಪ್ರಿಯಭಕ್ತನೇ, ಶೋಕಪಡಬೇಡ. ನಿನಗೆ ಮಂಗಳವಾಗಲಿ. ದಕ್ಷಿಣ ದಿಕ್ಕಿಗೆ ಪ್ರಯಾಣಮಾಡು. ಮುನಿವರ್ಯ, ಪಾಪನಾಶಕರವಾದ ಕುದ್ದಾಲ, ಜ್ಞಾನವಾಟೀಶ್ವರಕ್ಷೇತ್ರಗಳನ್ನೂ ತಾಮ್ರಪರ್ಣೀ, ವೇಗವತೀ ನದಿಗಳ ಪಾವನವಾದ ದಡಗಳನ್ನೂ, ಆ ದಡಗಳಲ್ಲಿರುವ ಪುಣ್ಯಕ್ಷೇತ್ರಗಳನ್ನೂ ದರ್ಶನಮಾಡು. ಅಲ್ಲದೇ, ॥೪೧-೪೨॥

ಅದೇ ತಾಮ್ರಪರ್ಣೀ ತೀರದಲ್ಲಿ ಮಹೇಂದ್ರನು ವೃತ್ರಾಸುರನನ್ನು ವಜ್ರಾಯುಧದಿಂದ ಕೊಲ್ಲಲು ಅಲ್ಲಿ ಮಹಾದೇವನನ್ನು ಪೂಜೆಮಾಡಿ ಪರಿಶುದ್ಧನಾದನು. ಅಲ್ಲಿಂದ ಮುಂದೆ ಆ ಕ್ಷೇತ್ರವು 'ಶುಚೀಂದ್ರವೆಂದು' ಪ್ರಖ್ಯಾತವಾಯಿತು. ಅಯ್ಯ ಮುನಿಯೇ, ಅಲ್ಲಿಯೇ ಇರುವ ತೋತಾದ್ರಿ ಕ್ಷೇತ್ರದಲ್ಲಿ ವಿಷ್ಣುವೂ ಸಹ ಶರ್ವನೆನಿಸಿದ ನನ್ನಲ್ಲಿ ಭಕ್ತಿತೋರಿಸುತ್ತಾ ಮಂದಹಾಸಯುಕ್ತನಾಗಿ ನೆಲಸಿರುವನು." ॥೪೩-೪೪॥

ಅಯ್ಯ ಮುನಿಯೇ, ಆ ಹಾಲಾಸ್ಯಕ್ಷೇತ್ರದಲ್ಲಿಯೂ ನಾನು ಅರುವತ್ತುನಾಲ್ಕು ಲೀಲೆಗಳನ್ನೂ ಮಾಡಿತೋರಿಸಿರುವೆನು. ಅದೂ ನನಗೆ ಪ್ರಿಯಕರವಾದ ಕ್ಷೇತ್ರವೆಂದೇ ತಿಳಿ. ಆದ್ದರಿಂದ ನೀನು ಲೋಕೋಪಕಾರಕ್ಕೋಸ್ಕರ ದಕ್ಷಿಣದಿಕ್ಕಿಗೆ

ಇತ್ಯುಕ್ತ್ವೋಽಸೌ ಮಯಾ ತತ್ರ ಘಟಜೋಽಥ ಪ್ರಣಮ್ಯ ಮಾಂ ।
ಸಾದ್ರಾರ್ಂಬುಲೋಚನೋಽಭ್ಯಾಗಾದ್ದೃಷ್ಟ್ವಾ ದೃಷ್ಟ್ವಾ ಪುನಶ್ಚ ಮಾಂ॥೪೬॥

॥ ಸ್ಕಂದ ಉವಾಚ ॥

ತದಾ ಯಯೌ ಸ್ವೈರ್ಮುನಿಭಿಃ ಪರೀವೃತೋ
ದ್ರಷ್ಟುಂ ಮುನಿಃ ಸಹ್ಯಗಿರಿಂ ಘಟೋದ್ಭವಃ ।
ಘಟೇ ಸ್ವಕೀಯೇಽಂಬು ಸಮಸ್ತತೀರ್ಥ್ಯೈಃ
ಸಂಪೂರ್ಯ ನಾನಾದ್ರುಮಪುಣ್ಯಖಂಡಂ ॥೪೭॥

ಸಮನ್ವಿತಂ ಸಹ್ಯಗಿರಿಂ ಮುನಿರ್ಯಯೌ
ನದೀರ್ವಿಲಂಘ್ಯಾಥ ಗಿರಿಂ ಸುದೇಶಂ ।
ಅಪಶ್ಯದಿಂದ್ರಸ್ಥಲಮುತ್ತಮಂ ಮುನಿಃ
ಪ್ರಸನ್ನಚಿತ್ತೇನ ಸದಾ ಹರಂ ಸ್ಮರನ್ ॥೪೮॥

---

ಪ್ರಯಾಣಮಾಡುವನಾಗು ? ಅಲ್ಲಿಯೂ ನನ್ನ ಸಾನ್ನಿಧ್ಯವು ನಿನಗೆ ದೊರೆಯು ವುದು. ಎಂದು ನನ್ನಿಂದ ಹೇಳಲ್ಪಟ್ಟ ಆ ಅಗಸ್ತ್ಯಮುನಿಯು ನನಗೆ ನಮಸ್ಕಾರ ಮಾಡಿ, ಕಣ್ಣಿನಲ್ಲಿ ನೀರು ಸುರಿಸುತ್ತಾ ಪದೇ ಪದೇ ನನ್ನನ್ನು ನೋಡುತ್ತಾ ದಕ್ಷಿಣಕ್ಕೆ ಹೊರಟನು. ॥೪೫-೪೬॥

ಅನಂತರ ಅಗಸ್ತ್ಯಮುನಿಯು ತನ್ನ ಶಿಷ್ಯರಾದ ಮುನಿಗಳಿಂದ ಪರಿವೃತನಾಗಿ ತನ್ನ ಘಟದಲ್ಲಿ ಸಕಲ ತೀರ್ಥಗಳ ನೀರನ್ನೂ ಪುಣ್ಯಪ್ರದವಾದ ನಾನಾವೃಕ್ಷಗಳ ಪಲ್ಲವಗಳನ್ನೂ ತುಂಬಿಕೊಂಡು ಸಹ್ಯಪರ್ವತವನ್ನು ನೋಡಲು ಪ್ರಯಾಣ ಮಾಡಿದನು. ॥೪೭॥

ಅಗಸ್ತ್ಯಮುನಿಯು ನಾನಾದ್ರುಮಗಳಿಂದ ಕೂಡಿ ವಿರಾಜಿಸುವ ಕಾನನ ಪ್ರದೇಶಗಳನ್ನೂ ನಿರ್ಮಲೋದಕದಿಂದ ಪ್ರವಹಿಸುವ ಅನೇಕ ನದಿಗಳನ್ನೂ ದಾಟಿ ಪರಿಶುದ್ಧವಾದ ಸಹ್ಯಾದ್ರಿಯನ್ನು ನೋಡಿದ ಮೇಲೆ ಅಗಸ್ತ್ಯಮುನಿಯು ನಿರ್ಮಲ ವಾದ ಮನಸ್ಸಿನಿಂದ ಪರಮೇಶ್ವರನನ್ನು ಸ್ಮರಣೆಮಾಡುತ್ತಾ ಅತ್ಯುತ್ತಮವಾದ ಇಂದ್ರಸ್ಥಲವನ್ನು (ಶುಚೀಂದ್ರಕ್ಷೇತ್ರವನ್ನು) ಪ್ರವೇಶಿಸಿದನು. ॥೪೮॥

ಶ್ರೀಪರ್ವತಂ ತ್ರ್ಯಂಬಕಶೋಣವೃದ್ಧ
ಗಿರಿಂ ತದಾ ದಭ್ರಸಭಾಂ ಪ್ರಣಮ್ಯ ।
ಶ್ರೀ ಕಾಲಹಸ್ತೀಶ್ವರಗೋನಜೇಶಂ
ಗೋಕರ್ಣಮೀಶಂ ಸ ತದಾ ಘಟೋದ್ಭವಃ ॥೪೯॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಸಹ್ಯಾದ್ರಿಂ ಪ್ರತ್ಯಗಸ್ತ್ಯಗಮನಂ ನಾಮ
ತೃತೀಯೋಽಧ್ಯಾಯಃ

---

ಅಲ್ಲಿಂದ ಮುಂದೆ ಆ ಅಗಸ್ತ್ಯಮುನಿಯು ಶ್ರೀ ಪರ್ವತ (ತಿರುಪತಿ) ತ್ರ್ಯಂಬಕಪರ್ವತ, ಶೋಣಾಚಲ ಮತ್ತು ವೃದ್ಧಾಚಲಗಳನ್ನು ದರ್ಶನಮಾಡಿ ದಭ್ರಸಭಾನಾಥನಿಗೆ ನಮಸ್ಕರಿಸಿದನಂತರ ಶ್ರೀ ಕಾಲಹಸ್ತೀಶ್ವರ, ಗೋನಜೇಶ್ವರ, ಗೋಕರ್ಣೇಶ್ವರ ಮೊದಲಾದ ಅನೇಕ ಶಿವಕ್ಷೇತ್ರ ದರ್ಶನಗಳನ್ನೂ ಮಾಡಿದನು. ||೪೯||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಮೂರನೆಯ
ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಚತುರ್ಥೋಽಧ್ಯಾಯಃ

|| ಶಿವ ಉವಾಚ ||

ಏವಂ ಸ ಘಟಜಸ್ತಸ್ಮಾದ್ದುಃಖಿತೋ ಹಿಮವನ್ನಗಾತ್ ।
ಅವತೀರ್ಯ ಸುತೀರ್ಥಾಂಭಃ ಕುಂಡಿಕಾಂ ಪೂರಿತಾಂ ದಧತ್ ॥೧॥

ಯಯೌ ಸಭಾರ್ಯೋ ಮುನಿಭಿಃ ಕ್ಷೇತ್ರಾಣಿ ಚ ಮಹೇಶಿತುಃ ।
ನತ್ವಾ ಕೇದಾರಮೀಶಾನಂ ಹರಕಾಕೋದರಂ ಹರಂ ॥೨॥

ಗೌರೀತೀರ್ಥೇ ಚ ಸಂಸ್ನಾಯ ಗಂಗಾಸಾಗರಮಾಪ್ಯ ಚ ।
ಷಡಶೀತಿಮುಖೇ ತತ್ರ ಸ್ನಾತ್ವಾ ಶ್ರೀಸಾಗರೇಶ್ವರಂ ॥೩॥

---

## ನಾಲ್ಕನೆಯ ಅಧ್ಯಾಯ

ಶಿವನು ಪಾರ್ವತಿಗೆ ಅಗಸ್ತ್ಯನು ಕೇದಾರದಿಂದ ದಕ್ಷಿಣದಿಕ್ಕಿಗೆ ಪ್ರಯಾಣ ಮಾಡಿದ ವಿಷಯವನ್ನು ವಿವರವಾಗಿ ತಿಳಿಯಪಡಿಸುತ್ತಾ ಹೀಗೆಂದನು :—ಅಗಸ್ತ್ಯ ಮುನಿಯು ದುಃಖಿತನಾಗಿ ಹಿಮಾಲಯಪರ್ವತದಿಂದ ಇಳಿದು, ಪವಿತ್ರವಾದ ತೀರ್ಥಗಳ ನೀರನ್ನೆಲ್ಲಾ ತುಂಬಿದ ಗಡಿಗೆಯನ್ನು ಹಿಡಿದು, ತನ್ನ ಹೆಂಡತಿಯೊಡನೆಯೂ ಮತ್ತು ಮುನಿಗಳೊಡನೆಯೂ ಹೊರಟು, ಆ ಮಹೇಶ್ವರನ ಕ್ಷೇತ್ರಗಳನ್ನು ನೋಡಲು ಮುಂದೆ ಪ್ರಯಾಣ ಮಾಡಿದನು. ಆಗ ಪಾಪನಾಶಕನೂ, ಸರ್ಪಭೂಷಣನೂ ಆದ ಆ ಕೇದಾರೇಶ್ವರನಿಗೆ ನಮಸ್ಕಾರ ಮಾಡುತ್ತಾ ಮುಂದುವರಿದನು. ||೧-೨||

ಅನಂತರ ಗೌರೀತೀರ್ಥದಲ್ಲಿ ಸ್ನಾನಮಾಡಿ, ಅಲ್ಲಿಂದ ಗಂಗಾಸಾಗರಕ್ಕೆ ಬಂದು ಅಲ್ಲಿ ಷಡಶೀತಿಪುಣ್ಯಕಾಲದಲ್ಲಿ ಸ್ನಾನಮಾಡಿ, ಶ್ರೀ ಸಾಗರೇಶ್ವರನಿಗೆ ವಂದಿಸಿ,

ಪ್ರಣಮ್ಯ ಪ್ರಯಯೌ ತತ್ರ ವನಖಂಡಂ ಚ ಪಾವನಂ ।
ಮಾಘೇ ವೈ ಶಿವರಾತ್ರ್ಯಾಂ ತು ವೈದ್ಯನಾಥಂ ತು ಕಾಮದಂ ॥೪॥

ಕಾಮಾರ್ಥಿಜನಕಾಮಾನಾಂ ಪೂರಕಂ ಪಾಪಹಾರಕಂ ।
ಕೇದಾರೇ ಚ ಹರಿದ್ವಾರಾದ್ಗಂಗಾಂಭಃ ಪೂರಿತೈರ್ಘಟೈಃ ॥೫॥

ಸೇಚಯಾಮಾಸ ರುದ್ರೈಶ್ಚ ವೈದ್ಯನಾಥಂ ಮಹೇಶ್ವರಂ ।
ಧೂಪೈರ್ದೀಪೈರ್ಬಿಲ್ವಪತ್ರೈಃ ಫಲೈರ್ಭಕ್ಷ್ಯೈರ್ನಿವೇದ್ಯ ತಂ ॥೬॥

ಮಹೇಶ್ವರಂ ವೈದ್ಯನಾಥಂ ತುಷ್ಟಾವಾಥ ಘಟೋದ್ಭವಃ ॥೭॥

॥ ಘಟಜೋವಾಚ ॥

ಶ್ರೀವೈದ್ಯನಾಥ ಗಿರಿರಾಜಸುತಾಕಲತ್ರ
ಪಾಹಿ ತ್ರಿನೇತ್ರ ಸುಚರಿತ್ರ ದಯಾರ್ದ್ರನೇತ್ರ ।
ಕರ್ಪೂರಗಾತ್ರ ಪರಿಶೋಭಿತಮಿತ್ರನೇತ್ರ
ಗೋತ್ರಾತ್ಮಜಾಪತಿಸುಪೂತ ಸುಗಾತ್ರ ಶಂಭೋ ॥೮॥

---

ಅಲ್ಲಿಂದ ಪವಿತ್ರವಾದ ವನಖಂಡಕ್ಕೆ ಪ್ರಯಾಣ ಮಾಡಿದನು. ಆಮೇಲೆ ಮಾಘ ಮಾಸದಲ್ಲಿ ಶಿವರಾತ್ರಿಯ ದಿವಸ ಭಕ್ತರ ಮನೋರಥಗಳನ್ನು ಈಡೇರಿಸುವವನೂ, ಇಷ್ಟಾರ್ಥಗಳನ್ನು ಬಯಸುವ ಜನರ ಕೋರಿಕೆಗಳನ್ನೆಲ್ಲಾ ಸಲ್ಲಿಸುತ್ತಾ ಸಕಲ ಪಾಪಗಳನ್ನೂ ನಾಶಮಾಡುವವನೂ ಆದ ವೈದ್ಯನಾಥನಿಗೆ, ಕೇದಾರಕ್ಷೇತ್ರದಿಂದಲೂ, ಹರಿದ್ವಾರದಿಂದಲೂ ತಂದಿದ್ದ ಗಂಗಾಜಲದ ಗಡಿಗೆಗಳನ್ನು ಸಿದ್ಧಪಡಿಸಿಕೊಂಡು 'ರುದ್ರಾಧ್ಯಾಯ' ಮಂತ್ರಪೂರ್ವಕವಾಗಿ ಅಭಿಷೇಕ ಮಾಡಿದನು. ಅಭಿಷೇಕವಾದ ಮೇಲೆ ಧೂಪ, ದೀಪಗಳಿಂದರ್ಚಿಸಿ, ವಿಧಿವತ್ತಾಗಿ ಬಿಲ್ವದಳಗಳಿಂದ ಪೂಜೆ ಮಾಡಿದ ಮೇಲೆ, ವೈದ್ಯನಾಥನಿಗೆ ಹಣ್ಣುಗಳನ್ನೂ ಮತ್ತು ಭಕ್ಷ್ಯಗಳನ್ನೂ ನಿವೇದನ ಮಾಡಿದನು. ಹೀಗೆ ಪೂಜೆಯು ಮುಗಿದಮೇಲೆ ಆ ಅಗಸ್ತ್ಯಮುನಿಯು ವೈದ್ಯನಾಥೇಶ್ವರನನ್ನು ಕುರಿತು ಹೀಗೆ ಸ್ತೋತ್ರಮಾಡಿದನು. ॥೩-೪-೫-೬-೭॥

ಪರ್ವತರಾಜಕುಮಾರಿಯ ರಮಣನೂ, ತ್ರಿಲೋಚನನೂ, ಪಾವನಚರಿತನೂ, ದಯಾಮಯದೃಷ್ಟಿಯುಳ್ಳವನೂ, ಕರ್ಪೂರದಂತೆ ಶುಭ್ರವಾದ ದೇಹವುಳ್ಳವನೂ, ಶೋಭಿಸುತ್ತಿರುವ ಸೂರ್ಯನನ್ನೇ ಕಣ್ಣಾಗಿ ಉಳ್ಳವನೂ, ಗಿರಿರಾಜಕುಮಾರೀ

ವಿಶ್ವೇಶ ವಿಶ್ವಾಧಿಕ ಸಾಮಿಸೋಮುಲಸದ್ಕಪರ್ದೋರುಭರಾಪ್ತತುಂಗ ।
ಗಂಗಾಂಭಸಾ ಪ್ಲಾವಿತದಿವ್ಯಲಿಂಗ ಮಾತಂಗಕೃತ್ತಿವಿಲಸತ್ಸುಮಹಾಂಗ
ಸಂಗ ॥೯॥
ಗಂಗಾಂಗನಾಂಗ ಪರಿಪಾಹಿ ಚ ವೈದ್ಯಲಿಂಗ ।
ಭಕ್ತಾರ್ತಿಭಂಜನ ಮಹೇಶ್ವರ ಕಾಲ ಕಾಲ ॥೧೦॥

ಇತ್ಥಂ ಸಂಸ್ತುತ್ಯ ನಿರಗಾದಗಸ್ತ್ಯಃ ಸ ಕೃತಾಂಜಲಿಃ ।
ಕಾಮದಂ ತೀರ್ಥಮಾಸಾದ್ಯ ನಿರಗಾದುರಗೌಜಸಾ ॥೧೧॥

ಅವಿಮುಕ್ತಂ ಸಮಾಸಾದ್ಯ ದೃಷ್ಟ್ವಾ ಶ್ರೀಮಣಿಕರ್ಣಿಕಾಂ ।
ಸಂಸ್ನಾಯ ಘಟಜಸ್ತಸ್ಯಾಂ ಸಂತರ್ಪ್ಯ ಪಿತೃದೇವತಾಃ ॥೧೨॥

ಜ್ಞಾನವಾಪೀಂ ಸಮಾಸಾದ್ಯ ಸ್ನಾತ್ವಾ ಸ ನಿಯಮೇನ ಚ ।
ಮುಕ್ತಿಮಂಡಪಮಾಸಾದ್ಯ ಸಮಾಸಾದ್ಯ ಮಹೇಶ್ವರಂ ॥೧೩॥

---

ಕಾಂತನೂ, ಪಾವನನೂ, ಸ್ತೋತ್ರಕ್ಕೆ ಪಾತ್ರನಾಗಿರುವವನೂ, ಶಂಭುವೂ, (ಜಗತ್ತಿಗೆ ಸುಖವನ್ನುಂಟುಮಾಡುವವನೂ) ಆಗಿರುವ ವೈದ್ಯನಾಥಸ್ವಾಮಿಯೇ, ನನ್ನನ್ನು ಕಾಪಾಡು. ॥೮॥

ಎಲೈ ಜಗದೀಶ್ವರನೇ, ನೀನು ಜಗತ್ತಿನಲ್ಲೆಲ್ಲಾ ಅಧಿಕನೆನಿಸಿರುವೆ. ನಿನ್ನ ಜಟಾಜೂಟದಲ್ಲಿ ಚಂದ್ರನು ಪ್ರಕಾಶಿಸುತ್ತಿರುವನು. ಉನ್ನತವಾದ ನಿನ್ನ ಜಡೆಯಲ್ಲಿ ಗಂಗಾನದಿಯು ನೆಲಸಿ ಪ್ರವಾಹದಿಂದ ಯುಕ್ತಳಾಗಿರುವಳು. ಆ ಗಂಗಾನದಿಯ ಸಂಗದಿಂದ ನೀನು ಪರಮಪವಿತ್ರನೂ ಅತ್ಯುನ್ನತನೂ ಎನಿಸಿರುವೆ. ಗಂಗಾನದಿಯಿಂದ ಅಭಿಷೇಕಮಾಡಲ್ಪಟ್ಟ ದಿವ್ಯಲಿಂಗವುಳ್ಳವನೇ! ನಿನ್ನ ಉತ್ತಮವಾದ ಅವಯವಗಳಲ್ಲಿ ಆನೆಯ ಚರ್ಮವು ಶೋಭಿಸುತ್ತಿರುವುದು. ಗಂಗಾದೇವಿಯನ್ನು ತಲೆಯಲ್ಲಿ ಧರಿಸಿದವನೇ, ಭಕ್ತರ ತೊಂದರೆಗಳನ್ನು ಹೋಗಲಾಡಿಸುವ ಸಕಲೈಶ್ವರ್ಯಭರಿತನೂ, ಯಮಾಂತಕನೂ ಆದ ವೈದ್ಯಲಿಂಗನೇ, ನನ್ನನ್ನು ಕಾಪಾಡು. ॥೯-೧೦॥

ಅಗಸ್ತ್ಯಮುನಿಯು ಕೈಮುಗಿದುಕೊಂಡು ಹೀಗೆ ಸ್ತೋತ್ರಮಾಡಿದನಂತರ ಅಲ್ಲಿಂದ ಮುಂದೆ ಹೊರಟು ಸಕಲ ಇಷ್ಟಾರ್ಥಗಳನ್ನೂ ಕೊಡುವ ಗಂಗಾತೀರ್ಥವನ್ನು ಹೊಂದಿದನು. ಅವಿಮುಕ್ತಕ್ಷೇತ್ರಕ್ಕೆ ಬಂದು ಅಲ್ಲಿ ಮಣಿಕರ್ಣಿಕಾಘಟ್ಟದಲ್ಲಿ ಸ್ನಾನಮಾಡಿ, ಅಲ್ಲಿಯೇ ಪಿತೃಗಳಿಗೂ ದೇವತೆಗಳಿಗೂ ತರ್ಪಣಮಾಡಿ

ವಿಶ್ವೇಶ್ವರಂ ಮಹಾದೇವಂ ಪೂಜ್ಯ ಬಿಲ್ವೈಃ ಸಮರ್ಚ್ಯ ಚ ।
ಗಂಗಾಂಭಸಾ ರುದ್ರಸೂಕ್ತೈರಭಿಷಿಚ್ಯ ಮಹೇಶ್ವರಂ ॥೧೪॥

ಅನ್ನಪೂರ್ಣಾಂ ಕೃಪಾಪೂರ್ಣಾಂ ಸಂಪೂಜ್ಯಾಪ್ಯಥ ಢುಂಢಿನಂ ।
ತುಷ್ಟಾವ ದೇವಂ ವಿಶ್ವೇಶಮನ್ನಪೂರ್ಣಾಂ ಚ ಢುಂಢಿನಂ ॥೧೫॥

ಹೇ ವಿಶ್ವನಾಥ ಮಮ ನಾಥ ಸನಾಥಯಾಶು
ಹೇ ಮನ್ಮಥಾಂತಕ ಮಹೇಶ ದಯಾನಿಧಾನ ।
ವಿಶ್ವೇಶ್ವರ ತ್ರಿಪುರಸೂದನ ಶಂಕರೇಶ
ಪಾಹಿ ಪ್ರಸೀದ ಪರಮೇಶ್ವರ ಪಂಚವಕ್ತ್ರ ॥೧೬॥

ಸ್ವರ್ಗಸ್ಥಿತಿಪ್ರಭವನಾಶಕರಾವ್ಯಯೇಶ
ಶ್ರೀವ್ಯೋಮಕೇಶ ಪುರಸೂದನ ಕೋರಕಾಶ ।
ಆಕಾಶಪಾಶ ವಿಧಿನಾ ಹರ ಸಾವಕಾಶ
ನಿಷ್ಪೇವಿಶಿಷ್ಟಮಹಸಾಂ ನಿಧಯೇ ನಮಸ್ತೇ ॥೧೭॥

---

ದನು. ಅನಂತರ ಜ್ಞಾನವಾಪಿಗೆ ಬಂದು ಅಲ್ಲಿಯೂ ನಿಯಮದಿಂದ ಸ್ನಾನಮಾಡಿ, ಮುಕ್ತಿಮಂಡಪಕ್ಕೆ ಬಂದು ಅಲ್ಲಿ ಮಹೇಶ್ವರನನ್ನು ದರ್ಶನಮಾಡಿದನು. ಜಗದೊಡೆಯನಾದ ಮಹಾದೇವನನ್ನು ಬಿಲ್ವದಳಗಳಿಂದ ಪೂಜಿಸಿ, ಗಂಗಾನದಿಯ ನೀರಿನಿಂದ ರುದ್ರಸೂಕ್ತವನ್ನುಚ್ಚರಿಸುತ್ತಾ ಅಭಿಷೇಕಮಾಡಿದನು. ಆಮೇಲೆ ದಯಾಮಯಳಾದ ಅನ್ನಪೂರ್ಣಾದೇವಿಯನ್ನೂ ಮತ್ತು ಢುಂಡಿರಾಜಗಣಪತಿಯನ್ನೂ ಪೂಜಿಸಿ, ಆವರಿಬ್ಬರನ್ನೂ ಹೀಗೆ ಸ್ತುತಿಸಿದನು. ॥೧೧-೧೨-೧೩-೧೪-೧೫॥

ಎಲೈ ಜಗದೊಡೆಯನೇ, ಮನ್ಮಥಶತ್ರುವೂ, ದಯಾನಿಧಿಯೂ ಆದ ಮಹೇಶ್ವರನೇ, ನನ್ನೊಡೆಯನಾದ ನೀನು ಅನಾಥನಾದ ನನ್ನನ್ನು ಕಾಪಾಡು. ಜಗದೀಶ್ವರನೂ, ತ್ರಿಪುರಾಸುರರನ್ನು ಧ್ವಂಸಮಾಡಿದವನೂ, ಜಗನ್ಮಂಗಳಕರನೂ, ಐಶ್ವರ್ಯಭರಿತನೂ, ಐದು ಮುಖವುಳ್ಳವನೂ ಆದ ಮಹೇಶ್ವರನೇ, ನನ್ನಲ್ಲಿ ಅನುಗ್ರಹಮಾಡಿ ಕಾಪಾಡುವನಾಗು. ॥೧೬॥

ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನಡೆಸುವವನೂ, ನಾಶರಹಿತನೂ, ಈಶ್ವರನೂ, ಅಂತರಿಕ್ಷವನ್ನೇ ಕೇಶವನ್ನಾಗಿ ಮಾಡಿರುವವನೂ, ತ್ರಿಪುರಾಂತಕನೂ, ದಿಕ್ಕುಗಳನ್ನೇ ವೊಗ್ಗುಗಳನ್ನಾಗಿ ಉಳ್ಳವನೂ, ಆಕಾಶವೆಂಬ ಪಾಶವುಳ್ಳವನೂ, ಭಕ್ತರ

ಕಾಶೀವಾಸಿನಿಸರ್ಗಪೂರಣಪಗೇ ಶ್ರೀಕೃತ್ತಿವಾಸಪ್ರಿಯೇ
ರಾಕೇಂದುಪ್ರತಿಮಾನನೇ ವರಕೃಪಾಪೂರ್ಣೇಽನ್ನಪೂರ್ಣೇ ನಮಃ ।
ಸಂಪೂರ್ಣಂ ಕುರು ಕಾಮನಾಂ ಮಮ ಸದಾ ಪೂರ್ಣಾಂ ಗೃಹಾದ್ಯಂ ಕೃಪಾ
ಸಂಪೂರ್ಣಂ ಪಶುಪುತ್ರಧಾನ್ಯನಿಕರೈಸ್ತ್ವತ್ಪೂರ್ಣವೋದಾದ್ಭವೇತ್ ॥೧೮॥

ಹೇ ಢುಂಢಿರಾಜ ಧೃತಮಸ್ತಕ ಸೋಮರಾಜ
ನ್ವೈರಾಜಸೋಮ ಪರಿತೋಷಿತ ವಿಶ್ವನಾಥ ।
ವಿಘ್ನಾನಿ ಸಂಹರ ಹರಾತ್ಮಜ ಕಾಶಿವಾಸಿನ್
ಲೋಕಾನ್ವಿಲೋಕಯ ದೃಶಾ ಶಿವಪಾದಸಕ್ತ ॥೧೯॥

---

ಪಾಪಗಳೆಲ್ಲವನ್ನೂ, ಕೊಂಚವೂ ಅವಕಾಶವೇ ಇಲ್ಲದಂತೆ, ವಿಧಿಪೂರ್ವಕವಾಗಿ ನಿನ್ನನ್ನು ಪೂಜಿಸುವುದರಿಂದ ನಾಶಮಾಡುವವನೂ, ತೇಜಸ್ಸಿಗೆಲ್ಲಾ ಆಶ್ರಯನೂ ಆದ ದೇವದೇವನೇ, ನಿನಗೆ ನಮಸ್ಕಾರಮಾಡುತ್ತೇನೆ. ॥೧೭॥

ಕಾಶೀಕ್ಷೇತ್ರದಲ್ಲಿ ವಾಸಮಾಡುವ ಜನಗಳ ಇಷ್ಟಾರ್ಥವನ್ನು ಸ್ವಭಾವವಾಗಿ ಪೂರ್ತಿಗೊಳಿಸುವುದರಲ್ಲಿ ನಿರತಳಾದವಳೇ, ಸಂಪದ್ಭರಿತಳೇ, ಆನೆಯ ಚರ್ಮವನ್ನು ಹೊದಿಯುವ ಶಿವನಿಗೆ ಪ್ರೀತಿಪಾತ್ರಳಾಗಿರುವವಳೇ, ಪೂರ್ಣಚಂದ್ರನಿಗೆ ಸಮಾನ ವಾದ ಮುಖವುಳ್ಳವಳೇ, ಉತ್ಕೃಷ್ಟಳೂ, ದಯಾಪೂರ್ಣಳೂ ಎನಿಸಿದ ಎಲೌ ಅನ್ನಪೂರ್ಣಾದೇವಿಯೇ, ನಿನಗೆ ನಮಸ್ಕಾರಮಾಡುತ್ತೇನೆ. ದೇವಿ, ಯಾವಾಗಲೂ ನನ್ನ ಇಷ್ಟಾರ್ಥಗಳನ್ನು ಪೂರ್ತಿಗೊಳಿಸುವಳಾಗು. ನಿನ್ನ ಪೂರ್ಣವಾದ ಅನುಗ್ರಹ ದಿಂದ ನನ್ನ ಮನೆ, ಮಠ ಮುಂತಾದವುಗಳೆಲ್ಲವೂ ಪಶು, (ಹಸು, ಕರು) ಮಕ್ಕಳು ಮತ್ತು ಧಾನ್ಯರಾಶಿಗಳಿಂದ ಯಾವಾಗಲೂ ಪೂರ್ಣವಾಗಿ ಕಂಗೊಳಿಸಲಿ. ॥೧೮॥

ತಲೆಯಲ್ಲಿ ಚಂದ್ರನನ್ನು ಧರಿಸಿ ಶೋಭಿಸುತ್ತಿರುವ ಎಲೈ ಧುಂಡಿರಾಜನೇ, ವಿರಾಟ್ಸ್ವರೂಪನೂ, ಚಂದ್ರನಂತೆ ತೇಜಸ್ವಿಯೂ, ತನ್ನ ಸೇವೆಯಿಂದ ವಿಶ್ವನಾಥ ನನ್ನು ಸಂತೋಷಪಡಿಸಿರುವವನೂ ನೀನಾಗಿರುವೆ. ಪರಶಿವನ ಕುವರನಾದ ಸ್ವಾಮಿಯೇ, ನನ್ನ ಸಕಲ ವಿಘ್ನಗಳನ್ನೂ ನಾಶಮಾಡು. ಎಲೈ ಕಾಶೀಪಟ್ಟಣದಲ್ಲಿ ವಾಸಮಾಡುವ ದೇವದೇವನೇ, ಶಿವನ ಪಾದಸೇವೆಯಲ್ಲಿಯೇ ನಿರತನಾದ ನೀನು ಕರುಣಾದೃಷ್ಟಿಯಿಂದ ಈ ಲೋಕಗಳನ್ನೆಲ್ಲಾ (ಜನಗಳನ್ನೆಲ್ಲಾ) ನೋಡು. ॥೧೯॥

ಶ್ರೀವಕ್ರತುಂಡರದಖಂಡಿತ ವಿಘ್ನಕುಂಡ
ಗಂಡಾಂತರಾಗಲಿತ ದಾನತತಿಪ್ರಕಾಂಡ ।
ಕಾಕೋದರಾವಲಿಲಸತ್ಸುಬೃಹತ್ಪಿಚಂಡ
ಚಂಡಾಘಪಾಟನಕರೋಽದ್ಧೃತರುಕ್ಮದಂಡ ॥೨೦॥

ಶ್ರೀದಂಡಪಾಣೇ ನತಶೂಲಪಾಣೇ
ಕೃಪಾಣಪಾಣೇ ಧೃತಹಸ್ತಬಾಣೇ ।
ತ್ವದ್ಭಕ್ತವರ್ಯಾ ನಿವಸಂತಿ ಯೇಽಯಾಃ
ಚರ್ಯಾಸು ರಕ್ತಾನವ ನಃ ಸದೈವ ॥೨೧॥

ಹೇ ಭೈರವಾವ ಶಿವಕಾಶಿನಿವಿಷ್ಟಭಾವಾಂ
ಭಾವಾಂ ಭವೌಕಶರಣಾಂ ಮರಣಕ್ಷಣೇಽಪಿ ।
ತ್ವಂ ತಾರಯಾಶು ನಿಯತಂ ಭವಸಾಗರಾಂತ
ರ್ನೋಮುಹ್ಯಮಾನಜನತಾಂ ವಿನತಾಂ ತವಾಂಘ್ರೇಃ ॥೨೨॥

---

ವಕ್ರವಾದ (ಮುರಿದುಹೋಗಿರುವುದರಿಂದ ವಕ್ರವಾಗಿರುವ) ದಂತವುಳ್ಳ ಸ್ವಾಮಿಯೇ, ತುಂಡಾದ ಆ ದಂತದ ತುಂಡಿನಿಂದಲೇ ನೀನು ವಿಘ್ನರಾಶಿಗಳನ್ನೆಲ್ಲಾ ಹೊಡೆದೋಡಿಸುತ್ತಿರುವೆ. ಶ್ರೇಷ್ಠವಾದ ನಿನ್ನ ಗಂಡಸ್ಥಳದಿಂದ ಅನವರತವೂ ಮದೋದಕವನ್ನು ಸುರಿಸುತ್ತಿರುವವನೇ, ನಿನ್ನ ದೊಡ್ಡ ಹೊಟ್ಟೆಯಮೇಲೆ ಸರ್ಪ ರೂಪವಾದ ಸೊಂಟದ ಪಟ್ಟಿಯು ಶೋಭಿಸುತ್ತಿರುವುದು. ಪ್ರಬಲವಾದ ಪಾಪ ಗಳನ್ನೂ ಸಹ ನಿರ್ಮೂಲಮಾಡುವುದಕ್ಕೋಸ್ಕರ ಬದ್ಧಕಂಕಣನಾಗಿ ಚಿನ್ನದ ಕೋಲನ್ನು ಹಿಡಿದುಕೊಂಡಿರುವೆ; ಸ್ವಾಮಿ. ॥೨೦॥

ಆ ಪರಶಿವನಿಗೆ ನಮಸ್ಕಾರಮಾಡುತ್ತಾ, ಕೈಗಳಲ್ಲಿ ಕತ್ತಿ ಮತ್ತು ಬಾಣಗಳನ್ನು ಧರಿಸಿ ನಿಂತಿರುವ ಎಲೈ ದಂಡಪಾಣಿಯೇ, ನಿನ್ನ ಭಕ್ತಾಗ್ರೇಸರರಾದ ನಾವು ನಿನ್ನನ್ನು ಸೇವಿಸುವುದಕ್ಕೋಸ್ಕರವೇ ತೊಡಗಿರುವೆವು. ದೇವ, ಇಂತಹ ನಮ್ಮನ್ನು ಯಾವಾಗಲೂ ಕಾಪಾಡು, ದೇವ. ॥೨೧॥

ಎಲೈ ಭೈರವೇಶ್ವರನೇ, ಶಿವಕಾಶಿಯಲ್ಲಿಯೇ ಇಡಲ್ಪಟ್ಟ ಮನೋಭಾವನೆ ಯುಳ್ಳವರಾಗಿ, ಭವನೆನಿಸಿದ (ಸಕಲ ಜಗದುತ್ಪತ್ತಿಕಾರಣಭೂತನಾದ) ನಿನ್ನೊಬ್ಬ ನನ್ನೇ ಅನನ್ಯ ಮನಸ್ಸಿನಿಂದ ಮರೆಹೊಕ್ಕಿರುವ ಈ ಜನಗಳ ಸಮೂಹವು

ಹೇ ಬಿಂದುಮಾಧವ ಉಮಾಧವಪಾದಸಕ್ತ
ಭಕ್ತಾನುರಕ್ತ ಹೃದಯಾಂತರಮುಕ್ತಿಸಕ್ತ ।
ಪುಣ್ಯಾವಿಮುಕ್ತಸದನೇ ಮದನಾಂತಕಾರ್ಚ್ಯ
ವಿದ್ರಾವಿತಾಘನಿಚಯೋ ಶುಚಯೋ ಭವೇ ಹೇ ॥೨೩॥

ತ್ವಂ ಕಾಪಿ ಜ್ಞಾನವಾಪಿ ತ್ವದಮಲವಿಲಸತ್ಪಾತ್ರಗಾತ್ರಃ ಪವಿತ್ರೋ
ಭೂಯಾಲ್ಲೋಕೇ ಪವಿತ್ರಃ ಕಿಮು ಮನುಜಭವೋ ಭಕ್ತವರ್ಯಸ್ತ್ರಿನೇತ್ರೇ ।
ಪಾಪಧ್ವಾಂತನಿವಾರಣಾಯ ವಿಲಸತ್ಸದ್ದೀಪಿಕಾ ಭಾಸಿಕಾ
ತ್ವನ್ನೀರ ಪ್ಲಾವಿತಾಂಗಂ ಯದಿ ನರಹೃದಯಂ ಲಿಂಗಸಂಗಂ ಲಭಂತೇ ॥೨೪॥

---

ಯಾವಾಗಲೂ ಮೋಹಗೊಂಡು, ಸಂಸಾರವೆಂಬ ಸಾಗರದಲ್ಲಿ ಬಿದ್ದು ಕೊನೆಗಾಣದೇ ಬಳಲುತ್ತಿರುವುದು. ದೇವ, ಈಗ ನಿನ್ನ ಪಾದಗಳಿಗೆ ವಿನಯದಿಂದ ನಮಸ್ಕರಿಸಿರುವ ಇವರನ್ನು ಜಾಗ್ರತೆಯಾಗಿ ತಪ್ಪದೇ ಕಾಪಾಡು, ಸ್ವಾಮಿ. ॥೨೨॥

ಉಮಾಕಾಂತನ ಪಾದಸೇವೆಯಲ್ಲಿ ನಿರತನಾಗಿರುವ ಎಲೈ ಬಿಂದುಮಾಧವ ಸ್ವಾಮಿಯೇ, ಭಕ್ತಿಯಿಂದ ನಿನ್ನಲ್ಲಿ ಅನುರಕ್ತರಾಗಿ ಶಿವನ ಮನಸ್ಸಿನಲ್ಲಿ ನೆಲಸಿರುವ ವರಿಗೆ ಮುಕ್ತಿಯನ್ನು ಕರುಣಿಸಲು ತತ್ಪರನಾಗಿರುವ ನೀನು, ಪುಣ್ಯಕರವಾದ ಅವಿಮುಕ್ತಕ್ಷೇತ್ರದಲ್ಲಿ ಮನ್ಮಥಾಂತಕನಾದ ಶಿವನನ್ನು ಪೂಜಿಸುತ್ತಿರುವೆ. ದೇವ, ಈ ಸೇವೆಯಿಂದ ಸಕಲ ಪಾಪರಾಶಿಗಳೂ ನಾಶವಾಗಿ, ಇಹದಲ್ಲಿ ಪರಿಶುದ್ಧನೆನಿಸಿರುವೆ. ನಿನ್ನಂತೆಯೇ ನಿನ್ನ ಭಕ್ತರನ್ನೂ ಪಾವನರನ್ನಾಗಿ ಮಾಡು. ॥೨೩॥

ಎಲೈ ಜ್ಞಾನವಾಪಿಯೇ, ನಿನ್ನ ಪ್ರಭಾವವು ವಿಲಕ್ಷಣವಾದುದು. ನಿರ್ಮಲ ವಾಗಿ ಹೊಳೆಯುತ್ತಿರುವ ನಿನ್ನ ಪಾತ್ರವು ಅತಿ ಪವಿತ್ರವಾಗಿರುವುದು. ಇಂತಹ ಸ್ಥಳದಲ್ಲಿ ಸ್ನಾನಮಾಡುವ ಮಾನವನ ದೇಹವು ಪವಿತ್ರವಾದುದಲ್ಲದೇ ಅವನು ಆ ಮುಕ್ಕಣ್ಣನ ಭಕ್ತರಲ್ಲಿ ಶ್ರೇಷ್ಠನೆನಿಸುವುದರಲ್ಲಿ ಆಶ್ಚರ್ಯವೇನು ? ಪಾಪಗಳೆಂಬ ಅಂಧಕಾರವನ್ನು ಹೋಗಲಾಡಿಸುವುದರಲ್ಲಿ ನೀನು ಪ್ರಕಾಶಿಸುತ್ತಿರುವ ದೀಪದ ಜ್ವಾಲೆಯಂತಿರುವೆ. ನಿನ್ನ ನೀರಿನಲ್ಲಿ ಸ್ನಾನಮಾಡಿದರೆ ಮಾನವನ ಸಕಲ ಅವಯವಗಳೂ ಮತ್ತು ಹೃದಯವೂ ಶಿವಲಿಂಗದ ಸಂಬಂಧವನ್ನು ಹೊಂದುತ್ತದೆ. ಅಂದರೆ ಅವನು ಶಿವಸಾರೂಪ್ಯವನ್ನೇ ಪಡೆಯುವನು. ॥೨೪॥

ಗಂಗೋತ್ತುಂಗತರಂಗಸಂಘವಿಲಸತ್ಪದ್ಮಾಲಿ ಮಾಲಾವೃತೇ
ರಾಜದ್ಬಾಲಮೃಗಾಂಕಶೇಖರಮಹಾಲಿಂಗೌಘಸಂಘೇ ನಮಃ ।
ಪಾಪಾದ್ರಿಪ್ರಶಮಾಯ ರಂಗಿತಜಲೇ ಸಂಸ್ನಾಯತಾಂ ತ್ವತ್ಪಯಃ
ಪೂರಾಪ್ಲಾವಿತ ದಿವ್ಯದೇಹವಿಭವಾ ಭಾವಾ ಭವೇನ್ನಿಸ್ಪೃಹಾಃ ॥೨೫॥

ತ್ವನ್ನೀರಾಗತವಾತಪೂತತನವೋ ದೇವಾ ನರಾಃ ಪಾಮರಾಃ
ಸರ್ವಂ ಸಾಮ್ಯಪದಂ ಪ್ರಯಾಂತಿ ವಿಮಲಾಶ್ಚಾಂತೇ ಭವಂತೇ ಭವಾಃ ।
ಮೌಲೌ ಚಂದ್ರಕಲಾಃ ತೃತೀಯನಯನಾಃ ಕಂಠೇ ಗರಾರ್ಧಾಂಗನಾ
ವ್ಯೆಯ್ಯಾಘ್ರತ್ವಗಲಂಕೃತಾಃ ಫಣಿಮಹಾಹಾರಾವಿಭೂತ್ಯಾದರಾಃ ॥೨೬॥

ವೇದೋಪಗೀತಮಿದಮೇವ ಸದಾ ವಿಮುಕ್ತಂ
ಮುಕ್ತ್ಯೈ ಪ್ರಸೇವ್ಯಮಮಲಂ ಶಿವಭಕ್ತವರ್ಯೈಃ ।

---

ಗಂಗಾನದಿಯೇ, ನೀನು ದೊಡ್ಡ ದೊಡ್ಡ ಅಲೆಗಳ ಸಮೂಹದಿಂದ ಶೋಭಿಸುತ್ತಿರುವೆ. ತಾವರೇಹೂಗಳ ಗುಂಪಿನಿಂದ ಆವೃತಳಾಗಿ ವಿರಾಜಿಸುತ್ತಿರುವೆ. ಎಳೆಯ ಚಂದ್ರನನ್ನು ತಲೆಯಲ್ಲಿ ಧರಿಸಿರುವ ಆ ಪರಶಿವನ ದೊಡ್ಡ ಲಿಂಗರಾಶಿಗಳಿಂದ ಯುಕ್ತಳಾಗಿರುವೆ. ಇಂತಹ ನಿನಗೆ ನಮಸ್ಕಾರ ಮಾಡುವೆನು. ಭಕ್ತರ ಪಾಪಗಳೆಂಬ ಬೆಟ್ಟಗಳನ್ನು ನಾಶಮಾಡುವುದಕ್ಕೋಸ್ಕರ ಬಣ್ಣಬಣ್ಣವಾಗಿರುವ ನೀರುಳ್ಳವಳೇ, ನಿನ್ನ ನೀರಿನಲ್ಲಿ ಸ್ನಾನಮಾಡಿ ಆ ನೀರಿನ ಪ್ರವಾಹದಿಂದ ತೊಯ್ದ ದೇಹವುಳ್ಳವರು ದಿವ್ಯವಾದ ದೇಹವೈಭವವುಳ್ಳವರಾಗಿ ನಿಸ್ಪೃಹರೂ (ಪ್ರಾಪಂಚಿಕ ವ್ಯಾಪಾರದಲ್ಲಿ ವಿರಕ್ತರೂ) ಶೈವೀಸಂಪತ್ತನ್ನು ಪಡೆಯುವವರೂ ಆಗಿರುವರು. ॥೨೫॥

ನಿನ್ನ ನೀರಿನ ಮೇಲೆ ಬೀಸುವ ವಾಯುಸಂಪರ್ಕದಿಂದ ದೇವತೆಗಳು, ಮಾನವರು, ಎಷ್ಟೇ ಪಾಮರರಾಗಿದ್ದರೂ ಪಾವನರಾಗುವರು. ಹೀಗೆ ಪಾಪಮುಕ್ತರಾದ ಅವರು ತಮಗೆ ಅನುರೂಪವಾದ ಉತ್ತಮ ಸ್ಥಾನಗಳನ್ನು ಹೊಂದಿ ಕೊನೆಯಲ್ಲಿ ಪರಶಿವನ ಸಾರೂಪ್ಯವನ್ನೇ ಹೊಂದುವರು. ಆಗ ಅವರಿಗೆ ತಲೆಯಲ್ಲಿ ಚಂದ್ರಕಲೆಗಳೂ, ಮೂರನೆಯದಾದ ಅಗ್ನಿನೇತ್ರವೂ, ಕೊರಳಲ್ಲಿ ವಿಷಚಿಹ್ನೆಯೂ, ಅರ್ಧನಾರೀಶ್ವರ ದೇಹವೂ, ಮೈಮೇಲೆ ಹುಲಿಯಚರ್ಮವೂ, ಸರ್ಪಹಾರವೂ ಭಸ್ಮತ್ರಿಪುಂಡ್ರವೂ, ಲಭಿಸಿ ಸದಾ ಶಿವಸ್ವರೂಪದಿಂದ ಪ್ರಕಾಶಿಸುವರು. ॥೨೬॥

ಶೈವಧರ್ಮಾನುಯಾಯಿಗಳಿಂದ ಮುಕ್ತಿಪ್ರಾಪ್ತಿಗೋಸ್ಕರ ಸೇವಿಸಲ್ಪಡುವ ನಿರ್ಮಲವಾದ ಈ ಅವಿಮುಕ್ತಕ್ಷೇತ್ರವನ್ನೇ ವೇದಗಳು ಯಾವಾಗಲೂ ಹೊಗಳು

ಪ್ರಾಪ್ಯಂ ಪಚೇಲಿಮತಪಃಫಲತೋಽಂತಕಾಲೇ
ಜನ್ಮಾಪಹಂ ಶಿವಸುರೂಪಮಿದಂ ಸುಧನ್ಯಂ ॥೨೭॥

ಕ್ಷೇತ್ರೇಷ್ವನ್ಯೇಷು ಶಂಭೋರ್ಯಮನಿಯಮಮಹಾಯೋಗಯಾಗಾದ್ಯಭೇದ
ವಿದ್ಯಾವೇದಾಂತವಾಕ್ಯೈರಪಿ ಗಹನತರಾ ಪ್ರಾಪ್ಯತೇಽತ್ರಾಂತಕಾಲೇ ।
ವಾಸಾದನ್ಯತ್ರ ಕುತ್ರಾಪ್ಯಖಿಲತನುಭೃತಾಮಂತಕಾಲೇ ಮಹೇಶೋ
ದದ್ಯಾತ್ಪಂಚಾಕ್ಷರೀಂ ತಾಂ ಶ್ರವಣಪುಟತಲೇ ಸವ್ಯಕೇಽನ್ಯತ್ರ ಸಾಂಬಃ॥೨೮॥

ತೇನೈತೇ ಶಿವರೂಪಭಾಗಿನ ಉಮೇ ಭೋಗೈರ್ಯುತಾ ದಕ್ಷಿಣೇ
ಕೈಲಾಸೇ ನಿವಸಂತಿ ಸಂತತಮುಮಾಕಾಂತಾರ್ಚಕಾಃ ಶಾಂಕರಾಃ ।
ಈಶಾನೇನ ಸುಪೂಜಿತಾಃ ಪ್ರಮಥಯಾ ಜನ್ಮಾನಿ ಯಾಂತ್ಯೇವ ತೇ
ಭೂಲೋಕೇ ಕ್ಷಿತಿಪಾಲಕಾಃ ಸುಖಯುತಾಃ ಪುತ್ರೈಶ್ಚ ದಾರೈರ್ಯುತಾಃ ॥೨೯॥

---

ತ್ತಿರುವುವು. ಈ ಕ್ಷೇತ್ರವು ಪಕ್ವವಾದ ತಪಸ್ಸಿನ ಫಲದಿಂದ ಮಾತ್ರ ದೊರೆಯು ವುದು. ಶಿವಸಾರೂಪ್ಯವನ್ನು ಹೊಂದಿ ಧನ್ಯವೆನಿಸಿರುವ ಈ ಅವಿಮುಕ್ತಕ್ಷೇತ್ರದಲ್ಲಿ ಮರಣಕಾಲ ಲಭ್ಯವಾದರೆ ಅವರಿಗೆ ಪುನರ್ಜನ್ಮವೇ ಉಂಟಾಗದಂತಹ ಮುಕ್ತಿಯು ಲಭಿಸುವುದು. ॥೨೭॥

ಸಾಮಾನ್ಯ ಶಿವಕ್ಷೇತ್ರಗಳಲ್ಲಿ ಯಮ (ಇಂದ್ರಿಯನಿಗ್ರಹ) ನಿಯಮ (ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸುಗಳು) ಯೋಗಾಭ್ಯಾಸ, ಅನೇಕ ಯಾಗಾನುಷ್ಠಾನ ಮತ್ತು ಗಹನವಾದ ವೇದಾಂತವಿದ್ಯಾಭ್ಯಾಸವೇ ಮೊದಲಾದುವುಗಳಿಂದ ಕಷ್ಟಸಾಧ್ಯ ವಾದ ಮೋಕ್ಷವಿದ್ಯೆಯು ಪ್ರಾಪ್ತವಾಗುತ್ತದೆ. ಈ ಅವಿಮುಕ್ತಕ್ಷೇತ್ರದಲ್ಲಾದರೋ ಕೊನೆಗಾಲದಲ್ಲಿ ಕೇವಲ ವಾಸಮಾಡುವುದರಿಂದಲೇ ಸಕಲ ಪ್ರಾಣಿಗಳಿಗೂ ಆ ಮಹೇಶ್ವರನು ಮರಣಕಾಲದಲ್ಲಿ ತಾನೇ ಬಂದು ಬಲಗಿವಿಯಲ್ಲಿ ಶಿವಪಂಚಾಕ್ಷರ ಮಹಾಮಂತ್ರವನ್ನುಪದೇಶಿಸಿ ಅನಾಯಾಸವಾಗಿ ಮೋಕ್ಷವನ್ನು ಕರುಣಿಸುವನು. ॥೨೮॥

ಎಲೌ ಉಮೆಯೇ, ಕಾಶೀಮರಣದಿಂದ ಮುಕ್ತರಾದವರು ದಕ್ಷಿಣಕೈಲಾಸ ವನ್ನು ಸೇರಿ ಅಲ್ಲಿ ಅನವರತವೂ ಉಮಾರಮಣನಾದ ಶಂಕರನನ್ನೇ ಪೂಜಿಸುತ್ತಾ ಶಿವರೂಪವನ್ನೇ ತಾಳಿ ಸಕಲ ಭಾಗ್ಯಗಳಿಂದಲೂ ಯುಕ್ತರಾಗಿ ವಿರಾಜಿಸುತ್ತಿರುವರು. ಇವರು ಈಶಾನನಿಂದಲೂ ಪ್ರಮಥಗಣಗಳಿಂದಲೂ ಪೂಜಿಸಲ್ಪಟ್ಟು ಪದೇ ಪದೇ

ಕಾಶ್ಯಾಂ ಯೇ ತ್ವಂತಕಾಲೇ ಶಿವಭಜನರತಾಃ ಪಾಪಯುಕ್ತಾ ನರಾ ಯೇ
ಸರ್ವೇ ವಿಶ್ವೇಶವಕ್ತ್ರೋತ್ಥಿತ ವಿಮಲಮಹಾರಮ್ಯಮೋಂಕಾರನಾದಂ ।
ಶ್ರುತ್ವಾ ಮುಕ್ತಾಶ್ಚ ಭಕ್ತಾಃ ಶ್ರುತಿಹೃದಯಮಹಾಸಾರತಾರಂ ಲಭಂತೇ
ಪಾಪಾಸ್ತೇ ಘಟಿಕಾತ್ರಯೇಣ ಸುಮಹಾಬುದ್ಧೇಷು ಯಾಮ್ಯಾಂದಿಶಾಂ ॥೩೦॥

ಯಾಂ ಪ್ರಾಪ್ಸ್ಯಂತಿ ತತೋಽಪಿ ಭೈರವಕಶಾಘಾತೇನ ಶುದ್ಧಾ ನರಾಃ
ಯಾಂತ್ಯೇವಾಶು ಮಹೇಶ್ವರಸ್ಯ ಸುಮಹಾಕೈಲಾಸವಾಸಾ ನರಾಃ ।
ವಿಷ್ಣುಬ್ರಹ್ಮಾದ್ಯಲಭ್ಯಂ ಸುಕೃತವಿಧಿಕೃತೈಸ್ತಲ್ಲಭೇತ್ತತ್ರ ಸತ್ಯಂ ॥೩೧॥

ಯತ್ರಾವಿಮುಕ್ತೇ ಮರಣೋತ್ತರಕಾಲಕಾಲೇ
ಕಾಲಾಂತಕಸ್ಯ ಪರಿಕೀರ್ತಿತತಾರಶಬ್ದಂ ।

---

ಆ ದೇವನಪ್ಪಣೆಯಂತೆ ಭೂಲೋಕದಲ್ಲಿ ರಾಜರಾಗಿ ಅವತರಿಸಿ, ಪತ್ನೀಪುತ್ರರೊಡಗೂಡಿ ಸುಖದಿಂದ ವಾಸಿಸುವರು. ॥೨೯॥

ಪಾಪಯುಕ್ತರಾದ ಮಾನವರು ಕಾಶಿಯಲ್ಲಿ ತಮ್ಮ ಮರಣಸಮಯದಲ್ಲಿ ಶಿವಭಜನನಿರತರಾಗಿ, ಎಲ್ಲರೂ ಆ ವಿಶ್ವೇಶ್ವರನ ಮುಖದಿಂದ ಬರುವ ನಿರ್ಮಲವೂ ಮನೋಹರವೂ ಆದ ಓಂಕಾರಧ್ವನಿಯನ್ನು ಕೇಳುತ್ತಾ ಮುಕ್ತಿಹೊಂದುವರು. ಭಕ್ತರಾದ ಅವರೆಲ್ಲರೂ ವೇದದ ಹೃದಯವೆನಿಸಿದ ಉಪನಿಷತ್ತಿನಲ್ಲಿ ಹೇಳಿರುವ ಪರಬ್ರಹ್ಮಸ್ವರೂಪವನ್ನೇ ಹೊಂದುವರು. ಎಂತಹ ಪಾಪಿಗಳಾದರೂ ಕಾಶೀಮರಣದ ಮೂರು ಗಳಿಗೆಯೊಳಗಾಗಿ ದಕ್ಷಿಣಕೈಲಾಸಕ್ಕೆ ಹೋಗುವರು. ಅನಂತರ ಮುಕ್ತರಾಗಿ ಮಹಾಜ್ಞಾನಶಾಲಿಗಳಂತೆಯೇ ಶಿವಸಾರೂಪ್ಯವನ್ನೈದುವರು. ॥೩೦॥

ಆ ದಕ್ಷಿಣಕೈಲಾಸದಲ್ಲಿ ಸೇರಿದವರೂ ಕೂಡ ಅಲ್ಲಿರುವ ಭೈರವೇಶನ ಚಾವಟಿಯ ಏಟಿನಿಂದ ಪರಿಶುದ್ಧರಾಗಿ, ಅದರ ಫಲದಿಂದ ಜಾಗ್ರತೆಯಾಗಿ ಆ ಮಹೇಶ್ವರನ ಮಹಾಕೈಲಾಸವನ್ನು ಹೊಂದಿ ಅಲ್ಲಿ ವಾಸಮಾಡುವರು. ವಿಷ್ಣು, ಬ್ರಹ್ಮ ಮೊದಲಾದವರಿಂದಲೂ ಹೊಂದಲಸಾಧ್ಯವಾದ ಅಂತಹ ಪರಶಿವನ ಕೈಲಾಸವಾಸವನ್ನು ತಮ್ಮ ಪುಣ್ಯವಿಶೇಷದಿಂದಲೂ ಅದೃಷ್ಟಪರಿಪಾಕದಿಂದಲೂ ಅವರು ಸತ್ಯವಾಗಿ ಪಡೆಯುತ್ತಾರೆ. ॥೩೧॥

ಈ ಅವಿಮುಕ್ತಕ್ಷೇತ್ರದಲ್ಲಿ ಮರಣಹೊಂದಿದ ಉತ್ತರಕ್ಷಣದಲ್ಲಿಯೇ ಯಮಾಂತಕನಾದ ಪರಶಿವನು ಉಪದೇಶಿಸುವ ಶಿವಪಂಚಾಕ್ಷರರೂಪವಾದ ತಾರಕ

ಪ್ರಾಪ್ಯಾತ್ಮರೂಪಮಮಲಾಃ ಕಲಧೌತಶೈಲ
ವಾಸಾಯ ತೇ ಗಣತಮಾಃ ಪ್ರಭವಂತಿ ಸತ್ಯಂ ॥೩೨॥

ನಿಃಶ್ರೇಣೀವ ವಿರಾಜಿತೇ ಭಗವತೀ ಸಾರೂಪ್ಯದಾತ್ರೀ ತ್ವಿಯಂ
ದಿವ್ಯಾ ಶ್ರೀಮಣಿಕರ್ಣಿಕಾ ಶಿವಮಹಾಕೈಲಾಸಶೈಲಸ್ಯ ಹಿ ।
ಸ್ನಾತಾನಾಮಘಹಾರಿಣೀ ಜನಿಭೃತಾಂ ಸಂತಾರಿಣೀ ಕಾರಿಣೀ
ಪುಣ್ಯಾನಾಂ ಜಲಧೇರ್ಭವಸ್ಯ ಶಿವಸದ್ಭಕ್ತಸ್ಯ ತಸ್ಯೈ ನಮಃ ॥೩೩॥

ಇತ್ಯುಕ್ತ್ವಾ ಘಟಜೋಽಸ್ಯಾಗಾದ್ವಿಶ್ವೇಶ್ವರಮುದೀಕ್ಷಿತುಂ ।
ವೀರೇಶಕುಂಡೇ ಸಂಸ್ನಾಯ ಭಸ್ಮರುದ್ರಾಕ್ಷಭೂಷಣಃ ॥೩೪॥

ಬಿಲ್ವಪತ್ರೈಸ್ಸಮಭ್ಯರ್ಚ್ಯ ತುಷ್ಟಾವೇಶಂ ಕೃಪಾನಿಧಿಂ ॥೩೫॥

---

ಮಂತ್ರವನ್ನು ಕೇಳಿ, ತಮ್ಮ ನಿಜಸ್ವರೂಪವನ್ನು ಹೊಂದಿ, ಪಾವನರಾಗಿ ಶಿವನ ಗಣಗಳಲ್ಲಿ ಉತ್ಕೃಷ್ಟರೆನಿಸಿ, ಮಾನವರು ಆ ಕೈಲಾಸಪರ್ವತದಲ್ಲಿ ವಾಸಮಾಡಲು ಶಕ್ತರಾಗುತ್ತಾರೆ. ॥೩೨॥

ದಿವ್ಯವಾದ ಈ ಮಣಿಕರ್ಣಿಕಾಕ್ಷೇತ್ರವು ಷಡ್ಗುಣೈಶ್ವರ್ಯಸಂಪನ್ನಳಾಗಿ, ಪರಶಿವನ ಸಾರೂಪ್ಯವನ್ನು ಕೊಡುವವಳೂ, ಆಗಿ ಪರಶಿವನ ಮಹಾಕೈಲಾಸಪರ್ವತಕ್ಕೆ ಹತ್ತಿಸುವ ಏಣಿಯಂತೆ ಶೋಭಿಸುತ್ತಿರುವಳು. ಈ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನ ಮಾಡುವವರಿಗೆ ಪುನಃ ಜನ್ಮವಿಲ್ಲದಂತೆ ಸಂಸಾರಬಂಧನದಿಂದ ಉದ್ಧಾರಮಾಡುತ್ತಾ, ಪುಣ್ಯಗಳಿಗೆ ಸಮುದ್ರಪ್ರಾಯಳಾಗಿ ಶ್ರೇಷ್ಠಳೆನಿಸಿರುವ ಗಂಗಾದೇವಿಯೇ, ನೀನು ನಿಜವಾಗಿ ಆ ಮಹಾದೇವನ ಭಕ್ತಳಾಗಿರುವೆ. ಅಂತಹ ನಿನಗೆ ನಮಸ್ಕಾರ ಮಾಡುವೆನು. ॥೩೩॥

ಆ ಅಗಸ್ತ್ಯಮುನಿಯು ಹೀಗೆ ನುಡಿದು, ಅಲ್ಲಿಂದ ಮುಂದೆ ವೀರೇಶ್ವರನನ್ನು ದರ್ಶನಮಾಡಲು ಹೊರಟು, ಆ ವೀರೇಶನ ಕುಂಡದಲ್ಲಿ ಸ್ನಾನಮಾಡಿ ಭಸ್ಮ, ರುದ್ರಾಕ್ಷಿಗಳನ್ನಲಂಕರಿಸಿಕೊಂಡು ದಯಾನಿಧಿಯಾದ ಆ ಈಶ್ವರನನ್ನು ಬಿಲ್ವದಳಗಳಿಂದ ಪೂಜೆಮಾಡಿ, ಆ ದೇವದೇವನನ್ನು ಇಂತು ಸ್ತೋತ್ರಮಾಡಿದನು. ॥೩೪-೩೫॥

॥ ಅಗಸ್ತ್ಯ ಉವಾಚ ॥

**ಹೇ ವೀರೇಶ್ವರ ಪಾಹಿ ದೇವ ದಯಯಾ ಹಾರೀಕೃತಾಹೀಶ್ವರ**
**ಗಂಗಾಚಂದ್ರಕಲಾಧರಾಂತಕ ಹರ ಪಾಹೀಶ ಸರ್ವೇಶ್ವರ ।**
**ತ್ವತ್ಕಾಶ್ಯಾಂ ವಿಶದಂ ಭುವಂ ಚ ಸ್ಪೃಶತಾಮನ್ಯತ್ರ ಸಂಯಾಸ್ಯತಾಂ**
**ನೋ ತೇಷಾಂ ಯಮಯಾತನಾ ಪ್ರಭವತೇ ತೇ ಭೈರವಾಜ್ಞಾಪರಾಃ ॥೩೬॥**

**ಸ್ವಾಮಿನ್ತ್ರಿಲೋಚನ ವಿಭೋ ಪರಿಪಾಹಿ ಮಂದಂ**
**ಮಂದಪ್ರದೋಷಪರಿಪೂಜನತಸ್ತವಾಹಂ ।**
**ನಾಹಂ ಸುರಾನ್ ನ ಗಣಯಾಮಿ ಗಣೇಶ್ವರತ್ವ**
**ಲಾಭೇನ ತೇ ಚರಣಯೋರ್ನಿಶಿ ದರ್ಶನೇನ ॥೩೭॥**

**ಕೇದಾರ ಕಾಕೋದರಹಾರ ಶಂಭೋ**
**ಕೇದಾರವಂತಸ್ಸ್ತವದಾಃ ಪ್ರಣಾಮಾಃ ।**

---

ಎಲೈ ವೀರೇಶ್ವರದೇವನೇ, ಸರ್ಪರಾಜನನ್ನು ಹಾರವನ್ನಾಗಿ ಮಾಡಿಕೊಂಡಿರುವವನೇ, ದಯವಿಟ್ಟು ನಮ್ಮನ್ನು ಸಲಹು. ಗಂಗಾ ಮತ್ತು ಚಂದ್ರಕಲೆಗಳನ್ನು ಧರಿಸಿ, ಯಮನನ್ನು ನಿಗ್ರಹಿಸಿರುವ ಸಕಲ ಜಗದೇಕಸ್ವಾಮಿಯೇ, ಸರ್ವೈಶ್ವರ್ಯ ಸಂಪನ್ನನಾದ ನೀನು ನನ್ನನ್ನು ಕಾಪಾಡು. ನಿನ್ನ ಈ ಕಾಶೀಪಟ್ಟಣದಲ್ಲಿರುವ ವಿಶಾಲವೂ ನಿರ್ಮಲವೂ ಆದ ಭೂಮಿಯನ್ನು ಮುಟ್ಟಿ, ಬೇರೆಡೆಗಳಲ್ಲಿ ವಾಸಮಾಡುವವರಿಗೆ ಎಂದೆಂದಿಗೂ ಯಮನಿಂದುಂಟಾಗುವ ಯಾತನೆಗಳಿರುವುದಿಲ್ಲ. ಅವರೆಲ್ಲರೂ ಆ ಭೈರವೇಶನ ಆಜ್ಞಾನುಸಾರಿಗಳಾಗಿಯೇ ನಡೆಯುತ್ತಿರುವರು. ॥೩೬॥

ಎಲೈ ತ್ರಿಲೋಚನನೂ ಸರ್ವಸಮರ್ಥನೂ ಆದ ಸ್ವಾಮಿಯೇ, ಮೆಲ್ಲಮೆಲ್ಲಗೆ ನಮ್ಮನ್ನು ನಿನ್ನ ಕೃಪಾದೃಷ್ಟಿಬೀರಿ ರಕ್ಷಿಸುವವನಾಗು. ಪ್ರದೋಷಕಾಲಗಳಲ್ಲಿ ಮೆಲ್ಲಗೆ ನಿನ್ನನ್ನು ಪೂಜೆಮಾಡುವುದರಿಂದಲೂ, ರಾತ್ರಿವೇಳೆ ನಿನ್ನ ಪಾದಗಳನ್ನು ದರ್ಶನಮಾಡುವುದರಿಂದಲೂ, ಗಣಾಧಿಪತಿಗಳ ಪದವಿಯೇ ನನಗೆ ದೊರೆಯುವುದರಿಂದ ಇತರ ದೇವತ್ವವನ್ನು ನಾನು ಎಂದಿಗೂ ಗಣಿಸುವುದಿಲ್ಲ. ॥೩೭॥

ಎಲೈ ಸರ್ಪಹಾರನಾದ ಕೇದಾರೇಶ್ವರನೇ, ಉತ್ತಮವಾದ ಕ್ಷೇತ್ರವುಳ್ಳವರೆಲ್ಲರೂ ನಿನ್ನನ್ನು ಸ್ತುತಿಸುತ್ತಾ ನಮಸ್ಕಾರ ಮಾಡುತ್ತಿರುವರು. ಪೂಜ್ಯನಾದ ಎಲೈ

ಕೇದಾರವಾಪನಪರಾತ್ವಥ ಮುಕ್ತಿಬೀಜ
ತ್ವದ್ದರ್ಶನೇನ ಭಗವನ್ಸತತಂ ನಮಸ್ತೇ ॥೩೮॥

ಹೇ ಕೃತ್ತಿವಾಸ ಧೃತಚಂದ್ರಕಲಾವತಂಸ
ಗೌರೀಮುಖಾಂಬುಜವಿಲೋಕನಮಂದಹಾಸ ।
ಪಾಹಿ ಪ್ರಸೀದ ಭಗವನ್ತವ ದೇಹಿ ಭಕ್ತಿಂ
ಸಕ್ತಿಂ ನಿವಾರಯ ಭವೇ ಮಮ ದೇಹಿ ಮುಕ್ತಿಂ ॥೩೯॥

ಹೇ ತ್ರ್ಯಕ್ಷ ರಕ್ಷ ಗರಭಕ್ಷ ಮಹೋಕ್ಷವಾಹ
ದಕ್ಷೇಶ ಯಕ್ಷೇಶ್ವರ ಪಾಪಭಕ್ಷ ।
ಶ್ರೀ ಕ್ರುದ್ಧಕಾಲಪಶುಪಾಶವಿನಾಶಕೇಶ
ರತ್ನೇಶ ಬ್ರಹ್ಮೇಶ್ವರ ಪಾಹಿ ಮಾಂ ಸದಾ ॥೪೦॥

---

ಭಗವಂತನೇ, ಅನವರತವೂ ನಿನ್ನ ದರ್ಶನದಿಂದ ನಿನ್ನ ಭಕ್ತರೆಲ್ಲರೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮುಕ್ತಿರೂಪವಾದ ಬೀಜಗಳನ್ನು ಬಿತ್ತಿ ನಿನ್ನ ಸನ್ನಿಧಿಯನ್ನೈದುತ್ತಿರುವರು. ದೇವದೇವನೇ, ನಿನಗೆ ನಮಸ್ಕಾರಮಾಡುವೆನು. ॥೩೮॥

ಎಲೈ ಗಜಚರ್ಮವನ್ನು ಹೊದ್ದಿರುವವನೇ, ಚಂದ್ರನನ್ನು ಶಿರೋಭೂಷಣವನ್ನಾಗಿ ಧರಿಸಿರುವ ಸ್ವಾಮಿಯೇ, ಶುಭ್ರವರ್ಣಳಾದ ದೇವಿಯು ಮುಖಕಮಲವನ್ನು ನೋಡುತ್ತಾ ಮಂದಹಾಸವನ್ನು ಬೀರುತ್ತಿರುವವನೇ, ಪೂಜ್ಯನಾದ ನೀನು ನನ್ನಲ್ಲಿ ಪ್ರಸನ್ನನಾಗಿ ನನ್ನನ್ನು ಕಾಪಾಡು. ದೇವ, ನನಗೆ ನಿನ್ನ ಭಕ್ತಿಯು ಶಾಶ್ವತವಾಗಿ ನೆಲಸುವಂತೆ ಅನುಗ್ರಹಮಾಡು. ಈ ಸಂಸಾರ ಬಂಧನದಲ್ಲಿ ನನಗಿರುವ ಆಸಕ್ತಿಯನ್ನು ಹೋಗಲಾಡಿಸಿ, ನನಗೆ ಶಾಶ್ವತವಾದ ಮುಕ್ತಿಯನ್ನು ಕರುಣಿಸುವನಾಗು. ॥೩೯॥

ಎಲೈ ತ್ರಿಲೋಚನನೇ, ವಿಷವನ್ನು (ಸಮುದ್ರಮಥನಕಾಲದಲ್ಲಿ ಜಗದ್ರಕ್ಷಣೆಗಾಗಿ ಕಾಪಾಡಿದವನು) ಭಕ್ಷಣೆಮಾಡಿದವನೇ, ದಕ್ಷಾಧಿಪತಿಯೇ, ಯಕ್ಷರಿಗೆಲ್ಲಾ ಸ್ವಾಮಿಯಾದವನೇ, ನಿನ್ನ ಭಕ್ತರ ಪಾಪಗಳನ್ನೆಲ್ಲಾ ಬಿಡದೇ ಭಕ್ಷಿಸುವ ಸ್ವಾಮಿಯೇ, ಮಹಾವೃಷಭವಾಹನನಾದ ನೀನು ನನ್ನನ್ನು ಕಾಪಾಡು. ಕೋಪಹೊಂದಿದ ಯಮನೆಂಬ ಪಶುವನ್ನು ಅವನ ಪಾಶದೊಡನೆ ನಾಶಮಾಡಿದವನೇ, (ಅಥವಾ ಯಮನ ಮೇಲಿನ ಕೋಪದಿಂದ ತನ್ನ ಭಕ್ತರಿಗೆಲ್ಲಾ ಯಮದರ್ಶನವೇ ಉಂಟಾಗದಂತೆ

ಹೇ ಭಾರಭೂತ ತವ ಪಾದವಿಲೋಕಿನೋ ಯೇ
ತೇ ವೈ ಭವಂ ಫಲಮತೋಽಖಿಲಸಾರಭೂತಾಃ ।
ಅನ್ಯೇ ತವಾರ್ಚನನತಿಸ್ತುತಿಹೀನಚಿತ್ತಾಃ
ತೇ ವೈ ಭುವಿ ಪ್ರಶಿಥಿಲಾಖಿಲಭಾರಭೂತಾಃ ॥೪೧॥

ಹೇ ಜ್ಞಾನೇಶ ಮಹೇಶ ತಾರಕವಿಭೋ ಸಂತಾರಕಸ್ತ್ವಂ ನೃಣಾಂ
ಪಾಪಾರಣ್ಯಭವಾಂಬುಧೇಃ ಪ್ರಣಮತಾಂ ಮುಕ್ತಿಪ್ರದೋಽಂತರ್ಗೃಹಾತ್ ।
ದೇವಾವಿಮುಕ್ತೇಶ್ವರಮುಕ್ತಭಕ್ತಸಂಸೇವ್ಯಪಾದಯುಗಲಾಮಲದಿವ್ಯಲಿಂಗ
ಹೇ ಕರ್ದಮೇಶ್ವರ ಮಹೇಶ್ವರ ಸಂಗಮೇಶ ತ್ವಲ್ಲಿಂಗಸಂಗತದೃಶಾ
ಪ್ರಭವಂತಿ ಮುಕ್ತಾಃ ॥೪೩॥

---

ಸಾಂಸಾರಿಕ ಬಂಧನವನ್ನು ಹೋಗಲಾಡಿಸುವವನೇ) ರತ್ನೇಶ್ವರನೇ, ಬ್ರಹ್ಮನಿಗೂ ಒಡೆಯನಾದ ಈಶ್ವರನೇ, ನನ್ನನ್ನು ಯಾವಾಗಲೂ ತಪ್ಪದೇ ಕಾಪಾಡುವನಾಗು, ಪ್ರಭೋ. ||೪೦||

ಪರಮಪೂಜ್ಯನಾದ ಸ್ವಾಮಿಯೇ, ನಿನ್ನ ಪಾದವನ್ನು ದರ್ಶನ ಮಾಡುವವರು ಮಾತ್ರ ಈ ಸಂಸಾರ ಪ್ರಪಂಚದಲ್ಲಿ ಉತ್ತಮವಾದ ಫಲವನ್ನು ಹೊಂದಿ ಸಾರಭರಿತ ರೆಂದು ಹೇಳಿಸಿಕೊಳ್ಳುವರು. ನಿನ್ನ ಪೂಜಾ, ನಮಸ್ಕಾರ ಮತ್ತು ಸ್ತೋತ್ರಗಳಿಂದ ಬಿಡಲ್ಪಟ್ಟ ಮನಸ್ಸುಳ್ಳ (ಅಂದರೆ ಅವುಗಳನ್ನು ಮಾಡದ) ಇತರರಾದರೋ ಕೇವಲ ವ್ಯರ್ಥಜೀವಿಗಳೆನಿಸಿ ಭೂಭಾರಭೂತರೆನಿಸುವರು. ||೪೧||

ಎಲೈ ಜ್ಞಾನಕ್ಕೆ ಅಧಿಪತಿಯಾದ ಮಹೇಶನೇ, ತಾರಕಮಂತ್ರಸ್ವರೂಪನಾದ ನೀನು ಸಕಲ ಮಾನವರನ್ನೂ ಉದ್ಧಾರಮಾಡುತ್ತಿರುವೆ. ನಿನ್ನ ಅಂತರ್ಗೃಹವನ್ನು ಮೋಕ್ಷಪ್ರದವೆಂದು ತಿಳಿದು ನಮಸ್ಕರಿಸುವ ಜನಗಳನ್ನು ಪಾಪವೆಂಬ ಅಡವಿಯಿಂದ ತಪ್ಪಿಸಿ, ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವವರನ್ನು ಉದ್ಧಾರಮಾಡು ತ್ತಿರುವೆ. ಎಲೈ ಅವಿಮುಕ್ತೇಶ್ವರದೇವನೇ, ಮುಕ್ತಿಪಡೆದ ನಿನ್ನ ಭಕ್ತರಿಂದ ಸೇವಿಸ ಲ್ಪಡುವ ಪಾದಯುಗ್ಮಗಳುಳ್ಳವನೇ, ನಿರ್ಮಲವೂ ದಿವ್ಯವೂ ಆದ ಲಿಂಗಸ್ವರೂಪನೇ, ಕರ್ದಮೇಶ್ವರ, ಮಹೇಶ್ವರ, ಸಂಗಮೇಶ್ವರ, ಮುಂತಾದ ದಿವ್ಯನಾಮಗಳಿಂದ ನಿನ್ನ ಲಿಂಗಪೂಜೆಮಾಡಿ ನಿನ್ನ ದಿವ್ಯದೃಷ್ಟಿಯಿಂದ ಅನೇಕರು ಮುಕ್ತರಾಗಿರುವರು. ||೪೨-೪೩||

ಆಮರ್ದಕೇಶ್ವರ ಮಹೇಶ್ವರ ಶಂಕರೇಶ
ಶ್ರೀ ಜಂಬುಕೇಶ್ವರ ಮಹೇಶ್ವರ ಸೋಮನಾಥ ।
ಪಾಹೀಶ್ವರ ತ್ರಿದಶನಾಥ ಸುಸಿದ್ಧಕೇಶ
ದುರ್ಗೇಶ ದುರ್ಗಮನುತಾರಯ ಚಂದ್ರಮೌಳೇ ॥೪೪॥

ಅತ್ರಾಂತರ್ಗೃಹಯಾತ್ರಯಾ ಪ್ರತಿದಿನಂ ವಿಶ್ವೇಶ್ವರಾರ್ಚಾನತಿಃ
ಸ್ತೋತ್ರಪ್ರಕ್ರಮತೋ ಮಹೇಶ್ವರಮಹಾಲಿಂಗಾವಲೋಕೇನ ಮೇ ।
ಭೂಯೋಪ್ಯಕ್ಷೇऽಪಿ ದಕ್ಷೈಃ ಸ್ವಕತನುಕರಣೈಃ ಸಾರ್ಥಕೀ ತೈಃ ಕೃತಾರ್ಥಃ
ಸ್ಯಾದೇವಂ ಭೂರಿಪುಣ್ಯೈರ್ಯಮನಿಯಮಮಹಾಪ್ರಾಣಸಂಗೇಥ ಯೋಗ್ಯೈಃ
॥೪೫॥

ಪಂಚಕ್ರೋಶಪ್ರಕ್ರಮೋ ಪಂಚಪಾಪಧ್ವಾಂಕ್ಷಧ್ವಂಸಾಯ ದಕ್ಷಾಃ ।
ಬುಧವಿಬುಧನರಾಸ್ತ್ರ್ಯಕ್ಷಂ ವೀಕ್ಷ್ಯ ಕೃತಾರ್ಥಾಃ ॥೪೬॥

---

ಆಮರ್ದಕೇಶ್ವರ, ಮಹೇಶ್ವರ, ಶಂಕರ, ಈಶ, ಶ್ರೀ ಜಂಬುಕೇಶ್ವರ, ಮಹೇಶ್ವರ, ಸೋಮನಾಥೇಶ್ವರ ಮೊದಲಾದ ನಾಮಗಳಿಂದ ಪ್ರಸಿದ್ಧನಾದ ಸ್ವಾಮಿಯೇ, ನಮ್ಮನ್ನು ಕಾಪಾಡು. ದೇವತೆಗಳೂ, ಸಿದ್ಧಪುರುಷರೂ ಮೊದಲಾದವರಿಗೆಲ್ಲಾ ಒಡೆಯನೇ, ದುರ್ಗಾರಮಣನೇ, ಚಂದ್ರಶೇಖರನಾದ ನೀನು ಈ ಸಂಸಾರವೆಂಬ ದುರ್ಗದಿಂದ ನನ್ನನ್ನು ಉದ್ಧಾರಮಾಡು. ॥೪೪॥

ಮಹೇಶ್ವರನೇ, ಇಲ್ಲಿ ನಿನ್ನ ಅಂತರ್ಗೃಹಯಾತ್ರೆಯನ್ನು ಪ್ರತಿದಿನವೂ ನಡೆಸುತ್ತಾ ವಿಶ್ವೇಶ್ವರನೆನಿಸಿದ ನಿನ್ನ ಪೂಜಾ, ನಮಸ್ಕಾರ ಮತ್ತು ಸ್ತೋತ್ರ ಮುಂತಾದವುಗಳಿಂದ ಸೇವೆಮಾಡುತ್ತಾ ನಿನ್ನ ಶಿವಲಿಂಗವನ್ನು ದರ್ಶನಮಾಡುತ್ತಿರುವುದರಿಂದ ಈ ನನ್ನ ದೇಹ ಮತ್ತು ಇಂದ್ರಿಯಗಳಿಗೆ ಸಾರ್ಥಕತೆಯುಂಟಾಯಿತು. ಅಲ್ಲದೇ ನಾನೂ ಕೃತಾರ್ಥನಾದೆನು. ಯಮ (ಇಂದ್ರಿಯ ನಿಗ್ರಹ) ನಿಯಮ (ಕೃಚ್ಛ್ರ ಚಾಂದ್ರಾಯಣಾದಿ ತಪೋರೂಪವಾದ ನಿಯಮಗಳು) ಮಹಾಪ್ರಾಣಾಯಾಮ ಮುಂತಾದ ಯೋಗಾನುಷ್ಠಾನರೂಪವಾದ ಪುಣ್ಯಪರಿಪಾಕದಿಂದ ಮಾತ್ರ ಈ ರೀತಿ ನಿನ್ನ ದಿವ್ಯದರ್ಶನವಾಗುವುದಲ್ಲದೇ ಸಾಮಾನ್ಯರಾದವರಿಗೆಂದಿಗೂ ಆಗಲಾರದು. ॥೪೫॥

ಕಾಶೀಕ್ಷೇತ್ರವನ್ನು ಪ್ರದಕ್ಷಿಣೆಮಾಡುವ ಒಂದು ಯಾತ್ರೆಯೇ ಪಂಚಕ್ರೋಶ ಯಾತ್ರೆ. ಮಾನವನ ಬ್ರಹ್ಮಹತ್ಯಾದಿ ಪಂಚಮಹಾಪಾತಕಗಳನ್ನು ಆ ಪಂಚ

ಜಾನನ್ನಹೋ ಸ್ವೇದೃಶಭಾಗ್ಯಗೌರವಂ
ಶಿವಾಜ್ಞಯಾ ಯಾತಿ ದಿಶಂ ತು ದಕ್ಷಿಣಾಂ ।
ಪ್ರಾಪ್ಯ ಸ್ವಹಸ್ತಸ್ಥಮುಪಾಸ್ಯ ಪಾಯಸಂ
ಭಿಕ್ಷಾಶನಂ ವಾಂಛತಿ ಮಾನಸಂಯುತಃ ॥೪೭॥

ನಿರ್ಯಾಂತಮಸ್ಮಾಚ್ಚ ಮಹೇಶಸದ್ಮತೋ
ಕಾಶ್ಯಾಂ ವಸತ್ಯತ್ರ ಗಣಃ ಸತಾಲಂ ।
ಜ್ಞಾತ್ವಾಪ್ಯಯಂ ಯಾತಿ ಚ ಕುಂಭಜೋ ಮುನಿಃ
ಮಹೇಶಮಾಯಾಪರಿಮೋಹಿತೋಽದ್ಯ ॥೪೮॥

ಅನ್ಯತ್ರ ನೃಣಾಂ ಕಿಮುಭಕ್ತಿಭಾವ್ಯಂ ।
ಶ್ರುತ್ವೇತಿ ವಾಚಂ ನಿರಗಾತ್ಸುದುಃಖಿತಃ ॥೪೯॥

---

ಕ್ರೋಶಯಾತ್ರೆಯು ತಪ್ಪದೆ ಹೋಗಲಾಡಿಸುವುದು. ಇಂತಹ ಪವಿತ್ರ ಯಾತ್ರೆಯನ್ನು ವಿದ್ವಾಂಸರೂ, ದೇವತೆಗಳೂ ಭಕ್ತಿಪೂರ್ವಕವಾಗಿ ನೆರವೇರಿಸಿ ಅದರಿಂದ ಪರಮೇಶ್ವರಾನುಗ್ರಹವನ್ನು ಸಂಪಾದಿಸಿ ಶಿವಸನ್ನಿಧಿಯನ್ನು ಪಡೆದಿರುವರು. ॥೪೬॥

ತನಗೆ ಆ ಮಹೇಶ್ವರನ ಅನುಗ್ರಹದಿಂದಲೇ ಇಷ್ಟೊಂದು ಭಾಗ್ಯ ಮತ್ತು ಗೌರವಗಳುಂಟಾಗಿ, ಕೊನೆಗೆ ಆ ಶಿವನ ಅಪ್ಪಣೆಯಿಂದಲೇ ತಾನು ದಕ್ಷಿಣ ದಿಕ್ಕಿಗೆ ಪ್ರಯಾಣಮಾಡುತ್ತೇನೆ (ಮರಣಹೊಂದುತ್ತೇನೆ) ಎಂಬುದನ್ನು ತಿಳಿದಿದ್ದರೂ ಮಾನವನು ನನ್ನನ್ನು ಭಜಿಸದೆ, ತನ್ನ ಕೈಗೆ ಬಂದಿರುವ ಪಾಯಸವಿದ್ದರೂ ಅದನ್ನು ಪಾನಮಾಡದೆ ಬಿಟ್ಟು, ಅಹಂಕಾರಯುಕ್ತನಾಗಿ ಭಿಕ್ಷೆಬೇಡಲು ಅಪೇಕ್ಷಿಸುತ್ತಾನಲ್ಲ! ಇದೆಂತಹ ಆಶ್ಚರ್ಯ! ॥೪೭॥

ಮಹೇಶ್ವರನೆನಿಸಿದ ನನ್ನ ನೆಲೆಮನೆಯಾಗಿರುವ ಕೈಲಾಸಪರ್ವತದಿಂದ ನನ್ನ ಅಪ್ಪಣೆಯಿಂದಲೇ ಹೊರಟ ಅಗಸ್ತ್ಯಮುನಿಯು, ಕಾಶೀಪಟ್ಟಣದಲ್ಲಿ ಶಿವನ ಗಣಗಳೆಲ್ಲಾ ತಾಲವಾದನ ಮಾಡುತ್ತಾ ವಾಸಮಾಡುತ್ತಿರುವುದೆಂಬುದನ್ನು ತಿಳಿದಿದ್ದರೂ ಆ ಅಗಸ್ತ್ಯಮುನಿಯು ಶಿವಮಾಯೆಯಿಂದ ಮೋಹಿತನಾಗಿ ಅಲ್ಲಿಂದ ಬಿಟ್ಟು ಹೊರಡಲು ಆ ದಿನ ಬಹಳವಾಗಿ ಚಿಂತಾಕ್ರಾಂತನಾದನು. ॥೪೮॥

ಯಾವಾಗಲೂ ಶಿವಭಕ್ತಿನಿರತರಾಗಿರುವ ಮಾನವರಿಗೆ ಬೇರೆಡೆಗಳಲ್ಲಿ ದೊರೆಯದಿರುವ ವಸ್ತುವೊಂದುಂಟೆ? ಎಂದು ನುಡಿದ ಶಿವವಾಕ್ಯವನ್ನು ಕೇಳಿ

## ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉಗ್ರಾಖ್ಯೇ ಉತ್ತರಾರ್ಧೇ ಅಗಸ್ತ್ಯಕಾಶೀದೇವತಾಸ್ತುತಿರ್ನಾಮ ಚತುರ್ಥೋಽಧ್ಯಾಯಃ

---

ಅಗಸ್ತ್ಯಮುನಿಯು ದುಃಖಿತನಾದರೂ ಧೈರ್ಯದಿಂದ ಅಲ್ಲಿಂದ ಹೊರಟುಹೋದನು. ಎಂದು ಕುಮಾರಸ್ವಾಮಿಯು ಅಗಸ್ತ್ಯಮಹಾಮುನಿಯ ಭಕ್ತಿನಿಷ್ಠತೆಯನ್ನು ಸಂತೋಷದಿಂದ ವಿವರಿಸಿ ಹೇಳಿದನು. ||೪೯||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಪಂಚಮೋಽಧ್ಯಾಯಃ

॥ ಷಡಾನನ ಉವಾಚ ॥

ತತೋಽವಿಮುಕ್ತಾನ್ನಗರಾದಗಸ್ತ್ಯೋ ಮುನಿಸತ್ತಮಃ ।
ಗಯಾಮುಥಾಯಯೌ ತತ್ರ ಪಿತೄಣಾಂ ತೃಪ್ತಿದಾಯಿನೀಂ ॥೧॥

ಫಲ್ಗುತೀರ್ಥೇ ಕೃತಸ್ನಾನೋ ಗಯಾಶೀರ್ಷಂ ವಿಲೋಕ್ಯ ಚ ।
ಸಂಕಲ್ಪ್ಯಾಷ್ಟಗಯಾಂ ಚಕ್ರೇ ಧರ್ಮಾರಣ್ಯಾದಿಸತ್ತಮಃ ॥೨॥

ಪ್ರೇತಪರ್ವತಮಾರುಹ್ಯ ತಿಲಾನುತ್ಕೀರ್ಯ ತತ್ರ ವೈ ।
ಈಶಾನಾದಿಪದೇಷ್ವೇವ ಪಿಂಡಂ ದತ್ವಾ ಪೃಥಕ್ಪೃಥಕ್ ॥೩॥

---

## ಐದನೆಯ ಅಧ್ಯಾಯ

ಆಮೇಲೆ ಮುನಿಪುಂಗವನಾದ ಅಗಸ್ತ್ಯಮುನಿಯು ಅವಿಮುಕ್ತಕ್ಷೇತ್ರದಿಂದ ಹೊರಟು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವ ಗಯಾಕ್ಷೇತ್ರಕ್ಕೆ ಬಂದನು. ಅನಂತರ ಫಲ್ಗುನೀತೀರ್ಥದಲ್ಲಿ ಸ್ನಾನಮಾಡಿ, ಗಯಾಶೀರ್ಷವನ್ನು ನೋಡಿದನಂತರ ಆ ಶ್ರೇಷ್ಠನಾದ ಅಗಸ್ತ್ಯಮುನಿಯು ಗಯಾಕ್ಷೇತ್ರದ ಧರ್ಮಾರಣ್ಯವೇ ಮೊದಲಾದ ಎಂಟು ಕಡೆಗಳಲ್ಲಿ ಸಂಕಲ್ಪಮಾಡಿದನು. ॥೧-೨॥

ಪ್ರೇತಪರ್ವತವನ್ನೇರಿ ಅಲ್ಲಿ ತಿಲತರ್ಪಣಮಾಡಿ, ಪ್ರತ್ಯೇಕಪ್ರತ್ಯೇಕವಾಗಿ ಈಶಾನವೇ ಮೊದಲಾದ ಸ್ಥಾನಗಳಲ್ಲಿ ಪಿತೃಗಳಿಗೆ ಪಿಂಡಪ್ರದಾನಮಾಡಿ, ಅಕ್ಷಯ

ವಟಮೂಲೇ ಮುನಿಃ ಶ್ರಾದ್ಧಂ ಶ್ರದ್ಧಯೈವ ಸಮಾಕರೋತ್ ।
ವನ್ಯೈರ್ಮೂಲಫಲೈಸ್ತತ್ರ ಪಿತೄಣಾಮನೃಣೋಽಭವತ್ ॥೪॥

ಏತದರ್ಥಂ ಹಿ ಪಿತರೋ ಪುತ್ರಾನುತ್ಪಾದಯಂತಿ ಹಿ ।
ಯದ್ಯೇಕೋಽಪಿ ಗಯಾಂ ಗತ್ವಾ ಪಿಂಡದಾತಾ ಭವೇದಿತಿ ॥೫॥

॥ ಅಗಸ್ತ್ಯ ಉವಾಚ ॥

ಗಯೇಯಂ ಪಿತೄಣಾಂ ಪರಾ ತೃಪ್ತಿದಾತ್ರೀ
ಪವಿತ್ರೀ ನಿಹಂತ್ರೀ ಮಹಾಘಸ್ಯ ಪುಣ್ಯಾ ।
ಭವಿತ್ರೀ ನರಸ್ಥಸುರಾಣಾಂ ಪದೇಷ್ವಸ್ಯ ಪುತ್ರತ್ವತಾಸ್ಯ
ನರಕಭೇದನಾದಾರಪಿಂಡಂ ದತ್ವಾ ಸರಾಣ (?) ॥೬॥

---

ವಟದ ಬುಡದಲ್ಲಿ ಅಗಸ್ತ್ಯಮುನಿಯು ಶ್ರದ್ಧೆಯಿಂದ ಕಾಡಿನಲ್ಲಿ ಬೆಳೆದ ಕಂದಮೂಲ ಫಲಗಳೇ ಮುಂತಾದುವುಗಳಿಂದ ಶ್ರಾದ್ಧಮಾಡಿ ಪಿತೃಋಣದಿಂದ ಮುಕ್ತನಾದನು. ॥೩-೪॥

ಇದಕ್ಕೋಸ್ಕರವಾಗಿಯೇ ಮಾತಾಪಿತೃಗಳು ಪುತ್ರಸಂಪತ್ತನ್ನು ಬಯಸುವರು. ಅನೇಕ ಮಂದಿ ಮಕ್ಕಳಲ್ಲಿ ಒಬ್ಬನಾದರೂ ಗಯೆಗೆ ಹೋಗಿ ನಮಗೆ ಪಿಂಡವನ್ನು ಹಾಕಿ ತನ್ಮೂಲಕ ನಮಗೆ ಮೋಕ್ಷವನ್ನು ಕೊಡಿಸುವನೇ? ಎಂಬುದೇ ಅವರ ಹಿರಿಯಾಸೆಯಾಗಿರುವುದು. ಏಕೆಂದರೆ ಈ ಗಯಾಶ್ರಾದ್ಧವು ಸಮಸ್ತ ಪಿತೃಗಳನ್ನೂ ಮುಕ್ತರನ್ನಾಗಿ ಮಾಡುವುದು. ॥೫॥

ಈ ಗಯಾಕ್ಷೇತ್ರವು ಪಿತೃಗಳಿಗೆ ಹೆಚ್ಚಾದ ತೃಪ್ತಿಯನ್ನುಂಟುಮಾಡುವುದು. ಮಹಾಪಾಪಗಳನ್ನೆಲ್ಲಾ ಹೋಗಲಾಡಿಸಿ ಪುಣ್ಯಪ್ರದವಾಗಿರುವುದು. ಇಲ್ಲಿ ಪಿಂಡ ಪ್ರದಾನ ಮಾಡುವುದರಿಂದ ನರಕದಲ್ಲಿ ಬಿದ್ದಿರುವ ಪಿತೃದೇವತೆಗಳೆಲ್ಲಾ ಉದ್ಧಾರ ವಾಗುವರು. ಅವರಿಗೆ ಅದು ಅನಾಯಾಸವಾಗಿ ಸ್ವರ್ಗಲೋಕವನ್ನೈದಿಸುವುದು. ಸಂತಾನಪ್ರಾಪ್ತಿಯಿಂದಲೂ ಪಿತೃಗಳಿಗುಂಟಾಗಿರುವ ನರಕಬಂಧನವನ್ನು ಕತ್ತರಿಸು ವುದರಲ್ಲಿಯೂ ಈ ಗಯಾಶ್ರಾದ್ಧವೊಂದೇ ಶಕ್ತವೆನಿಸುವುದು ಎಂದು ಅಗಸ್ತ್ಯಮಹಾ ಮುನಿಯು ಗಯಾಕ್ಷೇತ್ರವನ್ನು ಬಹುವಾಗಿ ಶ್ಲಾಘಿಸಿದನು. ॥೬॥

ಇತ್ಯುಕ್ತ್ವಾ ನಿರ್ಯಯೌ ಮಾಘೇ ಮಕರಸ್ಥೇ ದಿವಾಕರೇ ।
ಪ್ರಯಾಗವನಮಾಸಾದ್ಯ ಗಂಗಾಯಮುನಾಸಂಗಮೇ ॥೭॥

ಮಾಸಮುಷ್ಣ್ಯ ಮುನಿಃ ಸಸ್ನಾ ಸಶಿಷ್ಯೋ ಭಾರ್ಯಯಾ ಸಹ ।
ಕೃತ್ವೋಟಜಂ ಚ ತತ್ತೀರೇ ಅನ್ಯೈರ್ಮುನಿಗಣೈರ್ಯುತಃ ॥೮॥

ತೀರ್ಥರಾಜಂ ಸಮಾಸಾದ್ಯ ಸದ್ಯಃ ಪಾಪೌಘನಾಶನಂ ।
ಸಿತಾಸಿತೇ ಸರಿತೇ ಪ್ರಯಾಗೇ ಕಿಲ ಸಂಗತೇ ॥೯॥

ತತ್ರಾಪ್ಲುತ್ಯ ದಿವಂ ಯಾತಿ ಮೃತೋ ಯಾತ್ಯಮೃತತ್ವತಾಂ ।
ಶೂಲಟಂಕೇಶ್ವರಂ ದೃಷ್ಟ್ವಾ ಮಾಧವಂ ತ್ವಭಿಪೂಜ್ಯ ಚ ॥೧೦॥

ನರಶ್ಚ ಕೃತಕೃತ್ಯಃ ಸ್ಯಾನ್ಮಾಸಾಂತೇ ಸ್ನಾನಕೃದ್ಭವೇತ್ ॥೧೧॥

---

ಹೀಗೆ ಗಯಾಕ್ಷೇತ್ರವನ್ನು ಹೊಗಳಿ, ಸೂರ್ಯನು ಮಕರರಾಶಿಯಲ್ಲಿದ್ದಾಗಲೇ ಮಾಘಮಾಸದಲ್ಲಿ ಗಂಗಾ, ಯಮುನಾ ನದಿಗಳ ಸಂಗಮರೂಪವಾಗಿರುವ ಪ್ರಯಾಗ ಕ್ಷೇತ್ರಕ್ಕೆ ಬಂದು, ಆ ಸಂಗಮಸ್ಥಳದಲ್ಲಿ ಒಂದು ತಿಂಗಳಕಾಲ ಸ್ನಾನಮಾಡುತ್ತಾ, ನಿತ್ಯಕರ್ಮಾನುಷ್ಠಾನತತ್ಪರನಾಗಿ, ತನ್ನ ಹೆಂಡತಿಯೊಡನೆಯೂ, ಶಿಷ್ಯರೂ ಮತ್ತು ಇತರ ಮುನಿಗಳೊಡನೆಯೂ ಆ ನದಿಯ ದಡದಲ್ಲಿಯೇ ಪರ್ಣಶಾಲೆಯನ್ನು ಮಾಡಿಕೊಂಡು ವಾಸಮಾಡಿದನು. ॥೭-೮॥

ಪ್ರತಿದಿನವೂ ಸಕಲ ಪಾಪರಾಶಿಗಳನ್ನೂ ನಾಶಮಾಡುವ ತೀರ್ಥರಾಜಸ್ಥಳವನ್ನು ಹೊಂದಿ, ಸಿತಾ (ಗಂಗಾ) ಅಸಿತಾ (ಯಮುನಾ) ನದಿಗಳು ಸಂಗಮವಾಗುವ ಆ ಪ್ರಯಾಗದಲ್ಲಿ ಸ್ನಾನಮಾಡಿದನು. ಅಲ್ಲಿ ಸ್ನಾನಮಾಡಿದವನು ನಿಜವಾಗಿಯೂ ಸ್ವರ್ಗವನ್ನೈದುವನು (ಅಲ್ಲಿ ಮೃತನಾಗುವನು ಅಮರನಾಗುವನು). ಅಂತಹ ಪ್ರಯಾಗ ಕ್ಷೇತ್ರದಲ್ಲಿ ಅಗಸ್ತ್ಯಮುನಿಯು ಸ್ನಾನಮಾಡಿದ ನಂತರ ಶೂಲಟಂಕೇಶ್ವರನನ್ನು ದರ್ಶನಮಾಡಿ ಮಾಧವನನ್ನು ಪೂಜೆಮಾಡಿದನು. ಈ ಪ್ರಯಾಗದಲ್ಲಿ ಅಮಾವಾಸ್ಯೆಯ ದಿನ ಯಾರು ಸಂಗಮಸ್ನಾನಮಾಡುವರೋ ಅಂತಹವರಿಗೆ ದೇಹತ್ಯಾಗಾನಂತರ ಮೋಕ್ಷವೇ ದೊರೆಯುವುದು. ॥೯-೧೦-೧೧॥

॥ ಅಗಸ್ತ್ಯ ಉವಾಚ ॥

ನ ಯೋಗಯಾಗೈರ್ನಿಯಮೈರ್ಯಮೈರ್ವಾ
ಗೋಭೂಹಿರಣ್ಯಾನ್ನಮಹೋರುದಾನೈಃ ।
ಲಭ್ಯೋ ವಿಮುಕ್ತಿಪ್ರದ ಏಷ ಪುಣ್ಯೋ
ನದ್ಯೋಶ್ಚ ಸಂಭೇದಹಿತಃ ಪ್ರಯಾಗಃ ॥೧೨॥

ತೀರ್ಥಾನ್ಯಥೈಕತ್ರ ಮಹಾಪಗಾಶ್ಚ
ಷಟ್ಷಷ್ಟಿಕೋಟೀನಿ ಸುಪರ್ವಕಾಲೇ ।
ರಾಹುಗ್ರಹೇ ವೈ ರವಿಸೋಮಬಿಂಬಯೋಃ
ತ್ರಿಪುಷ್ಕರೇ ವೈ ಕುರು ಜಾಂಗಲಸ್ಥಲಾತ್ ॥೧೩॥

ವರಿಷ್ಠ ಏಷ ಪ್ರವಿರಾಜತೇಽತ್ರ
ಮಾಘೇ ಚ ನಕ್ರೇ ರವಿಣಾ ಸಮೇತಃ ।
ವಿರಾಗಿಣಾಮಪ್ಯಥ ರಾಗಿಣಾಂ ವಾ
ಸಮಂ ಫಲಂ ದಾಸ್ಯತಿ ವೈ ಪ್ರಯಾಗಃ ॥೧೪॥

---

ಅನೇಕ ಯೋಗ, ಯಾಗ, ನಿಯಮ, ಇಂದ್ರಿಯನಿಗ್ರಹ, ಗೋವು, ಭೂಮಿ, ಸುವರ್ಣ ಮತ್ತು ಅನ್ನವೇ ಮೊದಲಾದ ದೊಡ್ಡದಾನಗಳು ಇವುಗಳನ್ನು ಆಚರಿಸುವುದರಿಂದಲೇ ಸದ್ಯಃ ಮೋಕ್ಷವನ್ನುಂಟುಮಾಡುವ ಪುಣ್ಯಕರವಾದ ಈ ಗಂಗಾ ಯಮುನಾ ನದಿಗಳ ಸಂಗಮರೂಪವಾದ ಪ್ರಯಾಗಕ್ಷೇತ್ರವು ಲಭಿಸುತ್ತದೆ. ಅನ್ಯಥಾ ದೊರೆಯಲಾರದು. ॥೧೨॥

ಒಂದೇ ಕಡೇ ಸಕಲತೀರ್ಥಗಳೂ, ದೊಡ್ಡದೊಡ್ಡ ನದಿಗಳೂ, ಅರುವತ್ತಾರು ಕೋಟಿ ತೀರ್ಥಗಳೂ ಸಹ ನೆಲಸಿದಂತೆ, ಪವಿತ್ರವಾದ ಪರ್ವಕಾಲಗಳಲ್ಲಿ ಸೂರ್ಯ ಚಂದ್ರಗ್ರಹಣಕಾಲದಲ್ಲಿ ಗಂಗಾಯಮುನಾ ಸರಸ್ವತೀ ನದಿಗಳ ಸಂಗಮಸ್ಥಾನವಾದ ಈ ಪುಷ್ಕರಕ್ಷೇತ್ರವು ತನ್ನಲ್ಲಿ ಸ್ನಾನಮಾಡುವ ಮಾನವರಿಗೆ ಎಲ್ಲಾ ಫಲಗಳನ್ನೂ ತಪ್ಪದೇ ಕೊಡಲು ಸಿದ್ಧವಾಗಿರುವುದು. ಪರ್ವಕಾಲಗಳಲ್ಲಿ ಈ ಸಂಗಮಸ್ನಾನವು ವಿಶೇಷ ಪುಣ್ಯಪ್ರದವಾಗುವುದೆಂಬುದರಲ್ಲಿ ಸಂಶಯವಿಲ್ಲ. ॥೧೩॥

ಮಾಘಮಾಸದಲ್ಲಿ ಮತ್ತು ಸೂರ್ಯನು ಮಕರರಾಶಿಗೆ ಬಂದಿರುವಾಗ ಸರ್ವ ಶ್ರೇಷ್ಠನಾದ ಮಹಾದೇವನು ಈ ಕ್ಷೇತ್ರದಲ್ಲಿ ಪ್ರಕಾಶಿಸುತ್ತಾ, ನೆಲಸುವನು. ಆ

ಶ್ರೀ ಶೂಲಟಂಕೇಶ್ವರ ದೃಕ್ಪವಿತ್ರೋ
ಹಿಮಾಚಲಸ್ಥಾಂಬುಜಮಿತ್ರಜಾಯುತಃ ।
ಸೋಮೇಶ್ವರಸ್ಯಾಂತಿಕಪಾವನತ್ವತಃ
ಪುನಾತಿ ಲೋಕಂ ಹರಿಣಾ ಸಮೇತಃ ॥೧೫॥

ಉಮಾಧವಂ ಪೂಜಯತಿ ಪ್ರದೋಷೇ
ಶ್ರೀಶೂಲಟಂಕಪ್ರಭವೇದಟಂಕಂ ।
ತ್ರಿವೇಣಿಜಾಂಭೋಽಸ್ಯಭಿಷಿಚ್ಯ ಬಿಲ್ವೈ
ಸ್ತಿಷ್ಠತ್ಯಯಂ ದೇವವರಶ್ಚ ಮಾಧವಃ ॥೧೬॥

ವೇಣೀ ಯತ್ರ ವಿರಾಜತೇ ಭಗವತೀ ಭೂಮ್ಯಂಗನಾಯಾ ಸದಾ
ನಿಃಶ್ರೇಣೀವ ಭವೇತ್ಸದಾ ದಿವಿಷದಾಂ ಲೋಕಂ ಸಮಾಕ್ರಮ್ಯತಾಂ ।

---

ಸಮಯದಲ್ಲಿ ಈ ಪ್ರಯಾಗಕ್ಷೇತ್ರಕ್ಕೆ ಬರುವ ವೈರಾಗ್ಯಶಾಲಿಗಳಿಗೂ, ಸಂಸಾರಿಗಳಿಗೂ (ಸಾಂಸಾರಿಕಬಂಧನವುಳ್ಳವರಿಗೂ) ಈ ಕ್ಷೇತ್ರವು ಒಂದೇ ಸಮನಾದ ಫಲವನ್ನು ಕೊಡುತ್ತಿರುವುದು. ಎಲ್ಲವನ್ನೂ ಮುಕ್ತರನ್ನಾಗಿ ಮಾಡಲು ಸಮರ್ಥವಾಗುವುದು. ||೧೪||

ಶ್ರೀಶೂಲಟಂಕೇಶ್ವರನ ದೃಷ್ಟಿಯಿಂದ ಪವಿತ್ರವಾಗಿ, ಗಂಗಾ ಮತ್ತು ಯಮುನಾ ನದಿಗಳ ಸಂಗಮದಿಂದ ಶೋಭಿಸುತ್ತಾ, ಸೋಮೇಶ್ವರನ ಸಮೀಪದಲ್ಲಿರುವುದರಿಂದ ಈ ಪ್ರಯಾಗಕ್ಷೇತ್ರವು ಮಹಾವಿಷ್ಣುವಿನ ಸನ್ನಿಧಾನದಿಂದಲೂ ಕೂಡಿದ್ದಾಗಿ ಲೋಕವನ್ನೆಲ್ಲಾ ಪಾವನಗೊಳಿಸುತ್ತಿದೆ. ||೧೫||

ಪ್ರದೋಷವೇಳೆಗಳಲ್ಲಿ ಲಕ್ಷ್ಮೀಕಾಂತನಾದ ವಿಷ್ಣುವು ಉಮಾರಮಣನಾದ ಶ್ರೀ ಶೂಲಟಂಕೇಶನೆಂದು ಪ್ರಸಿದ್ಧನಾಗಿರುವ ಮಹಾದೇವನನ್ನು ಗಂಗಾ, ಯಮುನಾ ಮತ್ತು ಸರಸ್ವತೀ ನದಿಗಳ ಸಂಗಮವಾದ ತ್ರಿವೇಣೀ ಸಂಗಮಜಲದಿಂದ ಅಭಿಷೇಕ ಮಾಡಿ ಬಿಲ್ವದಳಗಳಿಂದ ಪೂಜಿಸಿ, ತಾನು ದೇವಶ್ರೇಷ್ಠನೆನಿಸಿಕೊಳ್ಳುವನು. ||೧೬||

ಭೂದೇವಿಯ ವೇಣಿಯಂತೆ (ಮೂರು ಕಾಲಿನಿಂದ ಹೆಣೆದ ಜಡೆಯಂತೆ) ಪೂಜ್ಯಳಾದ ತ್ರಿವೇಣಿಯು ಈ ಪ್ರಯಾಗಕ್ಷೇತ್ರದಲ್ಲಿ ಪ್ರಕಾಶಿಸುತ್ತಿರುವಳು. ದೇವಲೋಕವನ್ನು ಪ್ರವೇಶಮಾಡುವವರಿಗೆ ಈ ತ್ರಿವೇಣೀ ಸಂಗಮವು ಏಣಿಯ ಮೆಟ್ಟಲಿನಂತಿರುವುದು. ಸರಸ್ವತೀ ನದಿಯ ಸಂಗಮದಿಂದ ಅತಿಶಯ ವೈಭವ

ವಾಣೀಘಾಣಿತವೈಭವಾ ತ್ರಿಜಗತಾಂ ಧರ್ಮಸ್ಯ ವಿಶ್ರಾಣಿಕಾ
ವೇಣೀಯಂ ಸ್ವಕನೀರಪೋತಸುತರಾಂ ಧತ್ತೇ ಕೃಪಾಣೀವ ಸಾ ॥೧೭॥

ಸಂಸ್ತೂಯೇತ್ಥಂ ಪ್ರಯಾಗಂ ಸ ಓಂಕಾರಂ ಪ್ರಾಪ್ಯ ಕುಂಭಜಃ ।
ರುದ್ರಕೋಟೀಮಪಿ ಸ್ತೌತಿ ಶಿವಸದ್ಭಾವಭಾವಿತಃ ॥೧೮॥

ನರ್ಮದಾಂ ಶರ್ಮದಾಂ ಸ್ತುತ್ವಾ ಭಸ್ಮರುದ್ರಾಕ್ಷಭೂಷಣಃ ॥೧೯॥

॥ ಮುನಿರುವಾಚ ॥

ಹೇ ನರ್ಮದೇ ಶರ್ಮದಪುಣ್ಯದಾತ್ರೀ
ದುಷ್ಕರ್ಮಹಂತ್ರೀ ಸುರಸಂಘಪಾತ್ರೀ ।
ತ್ರಿನೇತ್ರಲಿಂಗಾಮಲದಿವ್ಯಗಾತ್ರೀ
ನಮೋಽಸ್ತು ಭೂಯೋಽಪಿ ನಮೋ ನಮಸ್ತೇ ॥೨೦॥

---

ಯುತವಾಗಿ ಮೂರು ಲೋಕದ ಜನಗಳಿಗೂ ಮೋಕ್ಷವನ್ನು ಕೊಡುವುದರಲ್ಲಿ ನಿರತಳಾಗಿರುವ ಈ ತ್ರಿವೇಣಿಯು ತನ್ನ ಜಲವೆಂಬ ನಾವೆಯಲ್ಲಿ ಪಾಪಿಗಳನ್ನು ಸುಖವಾಗಿ ಕುಳ್ಳಿರಿಸಿಕೊಂಡು, ಅವರನ್ನುದ್ಧರಿಸಲು ಜತೆಯಲ್ಲಿ ಕತ್ತಿಹಿಡಿದು ಪಹರಿ ನಡೆಸುತ್ತಿರುವಳೋ ಎಂಬಂತಿರುವಳು. ಅಂದರೆ ಸರ್ವ ರಕ್ಷಣೆಯನ್ನೂ ನೀಡುತ್ತಾ ತ್ರಿವೇಣಿಯು ಭಕ್ತರನ್ನು ಮುಕ್ತರನ್ನಾಗಿ ಮಾಡುವಳು. ॥೧೭॥

ಅಗಸ್ತ್ಯಮುನಿಯು ಹೀಗೆ ಆ ಪ್ರಯಾಗಕ್ಷೇತ್ರವನ್ನು ಸ್ತೋತ್ರಮಾಡಿ ಅನಂತರ ಓಂಕಾರಕ್ಷೇತ್ರಕ್ಕೆ ಬಂದು, ಅಲ್ಲಿ ರುದ್ರಕೋಟಿಯನ್ನು ನೋಡಿ ಶಿವಭಕ್ತಿಯಿಂದ ಪುಲಕಿತನಾಗಿ ಸ್ತೋತ್ರಮಾಡಿದನು. ಹಾಗೆಯೇ ಭಸ್ಮ, ರುದ್ರಾಕ್ಷಗಳನ್ನಲಂಕರಿಸಿ ಸರ್ವರ ದುಃಖವನ್ನೂ ಹೋಗಲಾಡಿಸಿ ಅವರಿಗೆ ಸುಖವನ್ನುಂಟುಮಾಡುವ ನರ್ಮದಾ ನದಿಯನ್ನೂ ಈ ರೀತಿ ಸ್ತುತಿಸಿದನು. ॥೧೮-೧೯॥

ಎಲೈ ನರ್ಮದಾನದಿಯೇ, ನಿನ್ನನ್ನಾಶ್ರಯಿಸುವವರಿಗೆ ಸುಖವನ್ನೂ ಪುಣ್ಯವನ್ನೂ ಸುಲಭವಾಗಿ ಕರುಣಿಸುವೆ. ದುಷ್ಟವಾದ ಪಾಪಗಳನ್ನೆಲ್ಲಾ ನಾಶಮಾಡಿ ದೇವತೆಗಳ ಸಮೂಹಕ್ಕೆ ರಕ್ಷಕಳಾಗಿರುವೆ. ಈಶ್ವರಲಿಂಗಗಳ ಸನ್ನಿಧಾನದಿಂದ ನಿರ್ಮಲವಾಗಿರುವ ದೇಹವುಳ್ಳವಳಾಗಿರುವೆ. ಎಲೌ ಪಾವನೆಯಾದ ನರ್ಮದೆಯೇ, ಇಂತಹ ಪೂಜ್ಯಳಾದ ನಿನಗೆ ಬಾರಿಬಾರಿಗೂ ನಮಸ್ಕಾರಮಾಡುತ್ತೇನೆ. ॥೨೦॥

ಓಂಕಾರಂ ಪೂಜಯಾಮಾಸ ರೇವಾನೀರೈಃ ಸುಮೈಃ ಫಲೈಃ ।
ತುಷ್ಟಾವಾಷ್ಟಾಕೃತಿಂ ದೇವಮೋಂಕಾರಮಮರೇಶ್ವರಂ ॥೨೧॥

॥ ಅಗಸ್ತ್ಯ ಉವಾಚ ॥

ಹೇ ದೇವದೇವ ಗರಕಂಧರ ಪಾಪಹಾರ
ವೀರಾದಿವೀರ ಸುಕುಮಾರ ಪಿತುರ್ನಮಸ್ತೇ ।
ಗೌರೀವಿಹಾರ ಸುಶರೀರ ವಿದಗ್ಧಮಾರ
ಕರ್ಪೂರಗೌರ ಹರ ಶಂಕರ ತಾರಹಾರ ॥೨೨॥

ಇತ್ಥಂ ಸ್ತುತ್ವಾ ಯಯೌ ತಸ್ಮಾದೋಂಕಾರಂ ಬಹುಧಾ ತಟೇ ।
ರುದ್ರಕೋಟೀಶ್ವರಂ ದೇವಂ ಸಂಪೂಜ್ಯ ಜಲಸೇಚನೈಃ ॥೨೩॥

ಬಿಲ್ವೈಃ ಪದ್ಮೈಃ ಸಮಭ್ಯರ್ಚ್ಯ ರುದ್ರಕೋಟಿಂ ಪ್ರತುಷ್ಟುವೇ ॥೨೪॥

---

ಆ ಅಗಸ್ತ್ಯಮುನಿಯು ರೇವಾನದಿಯ ನೀರಿನಿಂದ ಓಂಕಾರೇಶ್ವರನಿಗೆ ಅಭಿಷೇಕಮಾಡಿ, ಹೂವು, ಹಣ್ಣುಗಳಿಂದ ಪೂಜೆಮಾಡಿದ ಮೇಲೆ, ಅಷ್ಟಮೂರ್ತಿಯೂ (ಪೃಥಿವಿ, ಅಪ್, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ, ಮತ್ತು ಯಜಮಾನರೂಪಗಳೇ ಮಹೇಶನ ಅಷ್ಟಮೂರ್ತಿಗಳು) ದೇವತೋತ್ತಮನೂ ಆದ ಓಂಕಾರೇಶ್ವರನನ್ನು ಹೀಗೆ ಸ್ತೋತ್ರಮಾಡಿದನು. ॥೨೧॥

ಎಲೈ ದೇವಾದಿದೇವನೇ, ಸಮುದ್ರಮಥನ ಕಾಲದಲ್ಲಿ ಪ್ರಪಂಚವನ್ನೆಲ್ಲಾ ಸುಡುತ್ತಿದ್ದ ಮಹಾವಿಷವನ್ನು ಲೋಕರಕ್ಷಣೆಗಾಗಿ ನುಂಗಿ ಕೊರಳಲ್ಲಿ ಧರಿಸಿದವನೇ, ಪಾಪನಾಶಕನಾದ ನೀನು ಎಲ್ಲಾ ವೀರಾದಿವೀರರಿಗೂ ಶೂರನೆನಿಸಿದ ಕುಮಾರಸ್ವಾಮಿಯ ತಂದೆಯಾಗಿರುವೆ; ದೇವ, ನಿನಗೆ ನಮಸ್ಕಾರಮಾಡುತ್ತೇನೆ. ಗೌರೀದೇವಿಯೊಡನೆ ವಿಹರಿಸುವ ಸ್ವಾಮಿಯೇ, ದಿವ್ಯವಾದ ಶರೀರವುಳ್ಳ ನೀನು, ಸುಂದರಾಂಗನೆನಿಸಿದ ಮನ್ಮಥನನ್ನು ಸುಟ್ಟುಹಾಕಿರುವೆ. ಕರ್ಪೂರದಂತೆ ಬಿಳುಪಾದ ಮೈಬಣ್ಣವುಳ್ಳವನೂ, ನಕ್ಷತ್ರಮಾಲಿಕಾಲಂಕೃತನೂ ಆದ ಶಂಕರನೇ, ನೀನು ನಮ್ಮ ಪಾಪಗಳನ್ನೆಲ್ಲಾ ಪರಿಹರಿಸುವ ತಂದೆಯಾಗಿರುವೆಯಲ್ಲವೆ! ॥೨೨॥

ಹೀಗೆ ಓಂಕಾರೇಶ್ವರನನ್ನು ಬಹಳ ರೀತಿಯಿಂದ ರೇವಾನದಿಯ ದಡದಲ್ಲಿ ಸ್ತೋತ್ರಮಾಡಿ, ಅಲ್ಲಿಂದ ಹೊರಟು, ರುದ್ರಕೋಟೀಶ್ವರ ದೇವನನ್ನು ಪೂಜೆಮಾಡಿ,

॥ ಮುನಿರುವಾಚ ॥

ಹೇ ರುದ್ರಕೋಟೀಶ್ವರ ವಿಷ್ಣುಕೋಟಿ
ಸಮರ್ಚಿತಸ್ತ್ವತ್ರ ತ ಏವ ಲಿಂಗೇ।
ತಾಂ ದರ್ಶಯಸ್ವೈಕಬಹುತ್ವಸಂಖ್ಯಾಂ
ನಮೋಽಸ್ತು ತುಭ್ಯಂ ಮಮಲಿಂಗಮೂರ್ತೇ ॥೨೫॥

ಕ್ಷಿಪ್ರಾತೀರೇ ತದಾ ತಸ್ಯಾಂ ಸ್ನಾತ್ವೋತ್ಥಾಯ ಸ ಕುಂಭಭೂಃ।
ಮಹಾಕಾಲಂ ಸಮಭ್ಯರ್ಚ್ಯ ತುಷ್ಟಾವೈವಂ ಕಪರ್ದಿನಂ ॥೨೬॥

॥ ಅಗಸ್ತ್ಯ ಉವಾಚ ॥

ಶ್ರೀಮನ್ಮಹಾಕಾಲ ಗಲಾಹಿಮಾಲ
ವಿಶಾಲಶೂಲೋದ್ಧೃತಹಸ್ತಮೂಲ।
ಪ್ರಸೀದ ಫಾಲಾನಲಕಾಲದಕ್ಷಾ
ಧ್ವರಧ್ವಂಸನಚಾರುಶೀಲ ॥೨೭॥

---

ಜಲಾಭಿಷೇಕ, ಬಿಲ್ವದಳ ಮತ್ತು ತಾವರೆಯ ಹೂಗಳಿಂದ ಆ ರುದ್ರಕೋಟೀಶ್ವರನಿಗೆ ಪೂಜೆಮಾಡಿದ ಮೇಲೆ ಆ ದೇವನನ್ನು ಈ ರೀತಿ ಸ್ತೋತ್ರಮಾಡಿದನು. ॥೨೩-೨೪॥

ಎಲೈ ವಿಷ್ಣುಕೋಟೀಶ್ವರಸ್ವಾಮಿಯೇ, ನಿನ್ನ ಈ ದಿವ್ಯಲಿಂಗವು ಅನೇಕ ವಿಷ್ಣುಕೋಟಿಗಳಿಂದ ಪೂಜಿಸಲ್ಪಟ್ಟಿರುವುದು. ಅದ್ವಿತೀಯನೂ, ಅಪರಿಮಿತ ಪ್ರಭಾವನೂ ಆದ ಸ್ವಾಮಿಯೇ, ನಿನ್ನ ಕೋಟ್ಯಂತರ ರೂಪಗಳಲ್ಲಿ ಒಂದನ್ನಾದರೂ ನನಗೆ ತೋರಿಸು. ಪ್ರಭೋ, ಲಿಂಗಸ್ವರೂಪಿಯಾದ ದೇವನೇ, ನಿನಗೆ ನಮಸ್ಕಾರ ಮಾಡುತ್ತೇನೆಂದು ಅಗಸ್ತ್ಯ ಮುನಿಯು ರುದ್ರಕೋಟೀಶ್ವರನನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ॥೨೫॥

ಅನಂತರ ಅಗಸ್ತ್ಯಮುನಿಯು ಕ್ಷಿಪ್ರಾನದಿಯ ದಡದಲ್ಲಿದ್ದ ಜಟಾಧಾರಿಯಾದ ಮಹಾಕಾಲನೆಂದು ಪ್ರಸಿದ್ಧನಾದ ಶಿವಲಿಂಗವನ್ನು ದರ್ಶನಮಾಡಿ, ಅದೇ ತೀರ್ಥದಲ್ಲಿ ಸ್ನಾನಮಾಡಿ ಎದ್ದು ನಿಯಮದಿಂದ ಪೂಜೆಮಾಡಿ, ಹೀಗೆ ಸ್ತೋತ್ರಮಾಡಿದನು. ॥೨೬॥

ಕೊರಳಲ್ಲಿ ಸರ್ಪಮಾಲೆಯನ್ನೂ, ಕೈಮೂಲದಲ್ಲಿ ವಿಶಾಲವಾದ ಶೂಲವನ್ನೂ ಧರಿಸಿರುವ ತೇಜೋಯುಕ್ತನಾದ ಮಹಾಕಾಲಸ್ವಾಮಿಯೇ, ಹಣೆಗಣ್ಣಿನ

॥ ಶ್ರೀ ಸ್ಕಂದ ಉವಾಚ ॥

**ಇತ್ಥಂ ಸಂಸ್ತುತ್ಯ ಶಂಭುಂ ನಿಖಿಲಸುರಗಣಾರಾಧ್ಯಮಾರಾಧ್ಯಮೀಶಂ**
**ರುಂಧಂತಂ ರವಿಸೋಮಋಕ್ಷಪಥಮಪ್ಯಾಕ್ರಮ್ಯ ವಿಂಧ್ಯಂ ಸ್ಥಿತಂ ।**
**ದೇವೈಃ ಪ್ರಾರ್ಥಿತ ಏಷ ಕುಂಭಜಮುನಿಸ್ತಚ್ಚಾಲುಲೋಕೇ ನಗಂ**
**ಮೇರೋಃ ಸ್ಪರ್ಧತಯಾ ಸಹಸ್ರಶಿಖರೈರ್ವರ್ಧಂತಮಾಶಾಮುಖಂ ॥೨೮॥**

**ಸಂಚಾರಾದುಪಗಮ್ಯ ವಾಚಮವದಲ್ಲೋಕೋಪಕಾರಾಯ ಸಃ ॥೨೯॥**

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಅಗಸ್ತ್ಯಕೃತ ಗಯಾಪ್ರಯಾಗ ನರ್ಮದಾದಿ ಯಾತ್ರಾದೇವತಾಸ್ತುತಿರ್ನಾಮ ಪಂಚಮೋಽಧ್ಯಾಯಃ**

---

ಬೆಂಕಿಯಿಂದ ದಕ್ಷಬ್ರಹ್ಮನ ಯಾಗವನ್ನು ನಾಶಮಾಡುವುದರಲ್ಲಿ ಮನೋಹರವಾದ ಸ್ವಭಾವವುಳ್ಳ ಶಂಕರನೇ, ನನ್ನಲ್ಲಿ ಅನುಗ್ರಹಮಾಡುವನಾಗೆಂದು ಅಗಸ್ತ್ಯಮುನಿಯು ಮಹಾಕಾಲನನ್ನು ಪ್ರಾರ್ಥಿಸಿಕೊಂಡನು. ॥೨೭॥

ಈ ರೀತಿ ಆ ಅಗಸ್ತ್ಯಮುನಿಯು ಸಕಲ ದೇವತಾಗಣಗಳಿಂದ ಆರಾಧಿಸಲ್ಪಡುತ್ತಾ ಪೂಜಾರ್ಹನಾಗಿರುವ ಆ ಈಶ್ವರನನ್ನು ಸ್ತೋತ್ರಮಾಡಿ, ಹಾಗೆಯೇ ಮುಂದೆ ಹೊರಟು ಸೂರ್ಯ, ಚಂದ್ರ ಮತ್ತು ನಕ್ಷತ್ರಗಳ ಗಮನವನ್ನು ತಡೆದು, ಮೇರುಪರ್ವತದ ಮೇಲಿನ ಹಟದಿಂದ ಸಾವಿರಾರು ಶಿಖರಗಳನ್ನೊಳಗೊಂಡು ದಿಕ್ಕುಗಳನ್ನೆಲ್ಲಾ ಆವರಿಸಿ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು, ದೇವತೆಗಳ ಪ್ರಾರ್ಥನೆಯಿಂದ ನೋಡಿ ಲೋಕೋಪಕಾರಮಾಡಬೇಕೆಂದು ಬಯಸಿ, ಮೆಲ್ಲನೆ ಸಂಚರಿಸುತ್ತಾ ಆ ಸ್ಥಳಕ್ಕೆ ಬಂದಾಗ ವಿಂಧ್ಯಾಚಲವನ್ನು ಕುರಿತು ಕೆಲವು ಮಾತುಗಳನ್ನಾಡಿದನು. ॥೨೮-೨೯॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಷಷ್ಠೋಽಧ್ಯಾಯಃ

॥ ಮುನಯ ಊಚುಃ ॥

**ವಿಂಧ್ಯಂ ದದರ್ಶ ಸ ಮುನಿರಾದರ್ಶಮಿವ ನಿರ್ಮಲಂ ।**
**ಅಸಂಖ್ಯಶಿಖರೋಪೇತಂ ನಾನಾದ್ರುಮಲತಾವೃತಂ ॥೧॥**

**ಕೂಜತ್ಪತತ್ರಿನಿವಹಂ ವನದಾವಧೂಮ**
**ಲೇಖೋನ್ಮುಖಪ್ರತಿನಿಬದ್ಧರವೀಂದುಮಾರ್ಗಂ ।**
**ಸ್ವಾಧ್ಯಾಯಮಾತ್ರತನುಶೋಷಣಕೃಚ್ಛ್ರಜಾಲೈ**
**ರ್ವೈಖಾನಸೈರ್ಮುನಿಗಣೈರ್ವಿಹಿತಾವಗಾಹಂ ॥೨॥**

---

## ಆರನೆಯ ಅಧ್ಯಾಯ

ವಿಂಧ್ಯಾದ್ರಿನಿವಾಸಿಗಳಾದ ಮಹಾಮುನಿಗಳು ಅಗಸ್ತ್ಯಮಹರ್ಷಿಯು ವಿಂಧ್ಯ ಪರ್ವತದಲ್ಲಿ ಕಂಡ ವೈಭವವನ್ನು ಈ ರೀತಿ ವರ್ಣಿಸಿದರು. ಆ ಅಗಸ್ತ್ಯಮುನಿಯು ಕನ್ನಡಿಯಂತೆ ನಿರ್ಮಲವಾಗಿ ಲೆಕ್ಕವಿಲ್ಲದಷ್ಟು ಶಿಖರಗಳಿಂದಲೂ, ನಾನಾ ಮರಬಳ್ಳಿಗಳಿಂದಲೂ ಶೋಭಿಸುತ್ತಿರುವ ವಿಂಧ್ಯಪರ್ವತವನ್ನು ನೋಡಿದನು. ಆ ವಿಂಧ್ಯ ಪರ್ವತದಲ್ಲಿ ಪಕ್ಷಿಗಳು ಗುಂಪುಗುಂಪಾಗಿ ಧ್ವನಿಮಾಡುತ್ತಿದ್ದುವು. ಕಾಡುಗಿಚ್ಚಿನ ಹೊಗೆಯು ಅಂತರಿಕ್ಷವನ್ನು ವ್ಯಾಪಿಸಿ, ಸೂರ್ಯಚಂದ್ರರ ಸಂಚಾರಮಾರ್ಗವನ್ನು ತಡೆಯುತ್ತಿದ್ದಿತು. ಆ ಪರ್ವತದ ತಪ್ಪಲಿನ ವನಗಳಲ್ಲಿ ವೇದಾಧ್ಯಯನದಲ್ಲಿಯೇ ತಮ್ಮ ಶರೀರವನ್ನೆಲ್ಲಾ ಕೃಶಮಾಡುತ್ತಾ ಮುನಿಗಣಗಳು ವೈಖಾನಸಾಶ್ರಮವನ್ನು ಸ್ವೀಕರಿಸಿ, ವಿಧಿಪ್ರಕಾರವಾಗಿ ತಮ್ಮ ಆಶ್ರಮಧರ್ಮವನ್ನು ನಡೆಸಿಕೊಂಡು ಸ್ನಾನ ಪಾನಾದಿಗಳಿಂದ ಕಾಲಕಳೆಯುತ್ತಿದ್ದರು. ॥೧-೨॥

ರಮ್ಯಾಶ್ರಮಭ್ರಮಣಪೋತಮೃಗಾನುಧಾವನ್
ಮಾತಂಗಶಂಬರಶಶೈಶ್ಚಮರೈಶ್ಚ ಕೋಲೈಃ ।
ಉತ್ಕೃಷ್ಟಪಾದಪಶಿಲಾತಲಸುಪ್ತಸರ್ಪಂ
ಸರ್ಪಾಸ್ಯಫೂತ್ಕೃತಿವಿಷಾರ್ದಿತಭೂಪ್ರದೇಶಂ ॥೩॥

ಅಗರುತಗರುವಂಶದೇವದಾರೂ
ದ್ಭವದಾವಾನಲದಗ್ಧಪಾದಪದ್ಮಂ ।
ವನಸುಮಘರ್ಘರಮಾರುತೋಪನೀತಂ
ವರಗಂಧಾಯುಧಧೂಮದಿಜ್ಮುಖಾಂಧಂ ॥೪॥

ಕೈರವಕುಮುದೋತ್ಪಲಾಬ್ಜಷಂಡೈ
ರ್ನಿಭೃತಾನ್ಯೇವ ಸರಾಂಸಿ ವಿಂಧ್ಯಮೌಲೌ ।

---

ಮನೋಹರವಾದ ಮಹರ್ಷಿಗಳ ಆಶ್ರಮಗಳ ಹತ್ತಿರ ಸುಳಿದಾಡುವ ಜಿಂಕೆಗಳನ್ನು ಅಟ್ಟಿಸಿಕೊಂಡು ಬೇಡರು ಬೇಟೆಯಾಡುತ್ತಿದ್ದರು. ಹಾಗೆಯೇ ಮೊಲ, ಚಮರೀಮೃಗ ಮತ್ತು ಕಾಡುಹಂದಿಯೇ ಮೊದಲಾದ ಕಾಡುಮೃಗಗಳೂ ಈ ಬೇಡರ ಬೇಟೆಗೆ ತುತ್ತಾಗುತ್ತಿದ್ದುವು. ದೊಡ್ಡ ದೊಡ್ಡ ಕಲ್ಲುಬಂಡೆಗಳ ಮೇಲೆ ಸರ್ಪಗಳು ಸ್ವೇಚ್ಛೆಯಾಗಿ ಮಲಗಿದ್ದವು. ಆ ಹಾವುಗಳು ಫೂತ್ಕಾರಮಾಡುತ್ತಿರುವುದರಿಂದಲೇ ಆ ವಿಂಧ್ಯಪರ್ವತದ ಸುತ್ತಲಿನ ಭೂಪ್ರದೇಶವೆಲ್ಲವೂ ವಿಷದಿಂದ ವ್ಯಾಪ್ತವಾಗುತ್ತಿದ್ದಿತು. ॥೩॥

ಅಗರು, ತಗರು, ಬಿದಿರು ಮತ್ತು ದೇವದಾರುಮರಗಳಿಂದ ಹುಟ್ಟಿದ ಕಾಳ್ಗಿಚ್ಚಿನ ಜ್ವಾಲೆಯಿಂದ ಸುಡಲ್ಪಟ್ಟ ತಪ್ಪಲು ಪ್ರದೇಶದಲ್ಲಿ ಬೆಳೆದ ತಾವರೆಹೂಗಳು ಕಾಂತಿಹೀನವಾಗಿರುವುವು. ಕಾಡಿನಲ್ಲಿ ಬೆಳೆದ ಹೂಗಳ ಮೇಲೆ ವಾಯುವು ಘರ್ಘರ ಧ್ವನಿಮಾಡುತ್ತಾ ಅವುಗಳಲ್ಲಿರುವ ಉತ್ತಮವಾದ ಸುಗಂಧವನ್ನೆಲ್ಲಾ ಎತ್ತಿಕೊಂಡು ಬೀಸುತ್ತಿರುವುದು. ಅಲ್ಲಲ್ಲೇ ಋಷ್ಯಾಶ್ರಮಗಳಲ್ಲಿ ಉಂಟಾಗುವ ಹೋಮಧೂಮಗಳೂ ಸುವಾಸನೆಯನ್ನು ಎರಚುತ್ತಿದ್ದುವು. ಈ ರೀತಿಯಾಗಿ ವನಕುಸುಮಗಂಧವೂ, ಹೋಮಧೂಮವೂ ಸಹ ಎಲ್ಲ ದಿಕ್ಕುಗಳಿಗೂ ವ್ಯಾಪಿಸಿ ಕತ್ತಲೆಗವಿದಂತಿದ್ದಿತು. ॥೪॥

ವಿಂಧ್ಯಪರ್ವತದ ಶಿಖರದಲ್ಲಿರುವ ಸರೋವರಗಳಲ್ಲೆಲ್ಲಾ ಕೈರವ, ಕುಮುದ, ಉತ್ಪಲ (ಇವು ಮೂರು ನೈದಿಲೆಯ ಭೇದಗಳು) ಮತ್ತು ತಾವರೆಯ ಹೂವಿನ

ಶುಕಪಿಕಕಂಕಕೋಕಕೂಜನಾದ್ಯೈ
ರ್ವರಕೇಕೋತ್ತಮಹಂಸನಾದ್ಯೈಃ ॥೫॥

ವಿರಟತ್ಕರಿಣೀ ವನಾನುಧಾವ
ದ್ವಿಸ್ರಾವಿಮದ್ಯೈರ್ಮದೇಭಸಂಘೈಃ ।
ಸುರಕಿಂನರನಾಗವಿದ್ಯಾಧರಗಂಧರ್ವ
ಸುಗೀತವಾದ್ಯಶಬ್ದೈಃ ॥೬॥

ಪ್ರತಿಶಬ್ದಾಯುತದಿಙ್ಮುಖಂ ಗೃಹಾಂತ
ರ್ವಿಬಭಾತ್ಯೇಷ ನಗೋ ವನಸ್ಥಗೋಭಿಃ ।
ಕ್ವಣಿತವೃಷಭಾನುನಾದಪಾದೋತ್ಥಿ
ತಜೋ ಘೃಷ್ಟರಜಃ ಪ್ರಸಾದಿತಾರ್ಕಂ ॥೭॥

---

ಗುಂಪು ಸಾಂದ್ರವಾಗಿ ಗೋಚರಿಸುತ್ತಿದ್ದುವು. ಆ ಸರೋವರದ ದಡದಲ್ಲಿ ಗಿಣಿ, ಕೋಗಿಲೆ, ಹದ್ದು, ಚಕ್ರವಾಕ ಮೊದಲಾದ ಪಕ್ಷಿಗಳು ಮನೋಹರವಾಗಿ ಕೂಗುತ್ತಾ ಸಂಚರಿಸುತ್ತಿದ್ದುವು. ಶ್ರೇಷ್ಠವಾದ ನವಿಲುಗಳ ಕೇಕಾನಾದವೂ, ಹಂಸಗಳ ಧ್ವನಿಯೂ ಎಲ್ಲೆಲ್ಲಿಯೂ ವ್ಯಾಪಿಸಿದ್ದಿತು. ॥೫॥

ಆ ವಿಂಧ್ಯಾಚಲದ ತಪ್ಪಲಿನ ಕಾಡುಗಳಲ್ಲಿ ಹೆಣ್ಣಾನೆಯು ಚೀತ್ಕಾರ ಮಾಡುತ್ತಾ ಓಡಾಡುತ್ತಿದ್ದಿತು. ಮದಿಸಿದ ಸಲಗಗಳು ಗುಂಪುಗುಂಪಾಗಿ ತಮ್ಮ ಮದೋದಕವನ್ನು ಸುರಿಸುತ್ತಾ ಆ ಹೆಣ್ಣು ಆನೆಗಳನ್ನು ಹಿಂಬಾಲಿಸಿಕೊಂಡು ಹೋಗುತ್ತಿದ್ದುವು. ದೇವತೆಗಳು, ಕಿಂನರರು, ನಾಗರು, ವಿದ್ಯಾಧರರೂ ಮತ್ತು ಗಂಧರ್ವರೂ ಮನೋಹರವಾಗಿ ಹಾಡುತ್ತಾ ಮೃದಂಗಾದಿ ವಾದ್ಯಗಳನ್ನು ಬಾರಿಸುತ್ತಾ ವನವನ್ನೆಲ್ಲಾ ಶಬ್ದಾಯಮಾನವನ್ನಾಗಿ ಮಾಡುತ್ತಿದ್ದರು. ॥೬॥

ಈ ವಿಂಧ್ಯಪರ್ವತದ ಕಾಡಿನಲ್ಲಿರುವ ಹಸುಗಳ ಧ್ವನಿಯಿಂದ ನಾಲ್ಕು ದಿಕ್ಕುಗಳೂ ಶಬ್ದಾಯಮಾನವಾಗಿರಲು ಆ ಪರ್ವತವು ಮನೆಯ ಒಳಗಿನಿಂದ ಪ್ರತಿಧ್ವನಿಮಾಡುತ್ತಿರುವಂತೆ ತೋರುತ್ತಿದ್ದಿತು. ತಪ್ಪಲುಪ್ರದೇಶದಲ್ಲಿ ಗೂಳಿಗಳು ನಾದಮಾಡುತ್ತಾ ಗಂಭೀರವಾಗಿ ಬೆಟ್ಟವನ್ನೇ ಮೊಳಗಿಸುತ್ತಿದ್ದುವು. ಈ ಗೂಳಿಗಳು ವನಭೂಮಿಯಲ್ಲಿ ಸಂಚರಿಸುತ್ತಾ ಇರುವಾಗ ಅವುಗಳ ಗೊರಸುಗಳಿಂದುಂಟಾದ ಧೂಳು ಸೂರ್ಯನನ್ನೇ ಮುಚ್ಚುವಂತೆ ವ್ಯಾಪಿಸಿದ್ದಿತು ॥೭॥

ಮದಮುದಿತವನ್ಯನಾದಜಾತಹರ್ಷೋ ।
ತ್ಥಿತಕೇಕಾರವನೃತ್ಯಸಚ್ಛಿಖಂಡಿ ॥೮॥

ಸನ್ನಾರಿಕೇಲಪನಸಾಮ್ರಕದಂಬಸರ್ಜ
ಲೋಧ್ರಪ್ರಿಯಂಗುಕದಲೀತರುಶಿಂಶುಪಾಭಿಃ ।
ಪುನ್ನಾಗನಾಗಬಕುಲಾರ್ಜುನದೇವದಾರ್ವೈಃ
ಸದ್ವಾರಣೈಃ ಶುಕಕಪಿತ್ಥಕಕರ್ಣಿಕಾರ್ವೈಃ ॥೯॥

ಮಂದಾರಬಿಲ್ವಾಮಲಕಾಶ್ಯಕಕೋವಿದಾರೈಃ
ಪೂಗದ್ರುಮೈರ್ಬಹುಗಣೈಃ ಸರಲೈರ್ಮಧೂಕೈಃ ।
ಸತ್ಸಾಲತಾಲಸುರಸಾಲಕಪಿಪ್ಪಲೈಶ್ಚ
ಸತ್ಪಾಟಲೈರ್ವಟಗಣಾಕೃತನುಸ್ತಕಾಂತಂ ॥೧೦॥

ತಕ್ಕೇತಕೋಧ್ರಕಬಿಭೀತಕಜಂಬುನಿಂಬ
ಶಾಖಾಗಲಂ ಮಧುಕುಲೈರಭಿಷಿಕ್ತಮೌಲಿಂ ॥೧೧॥

---

ನವಿಲುಗಳು ಮದಹೊಂದಿ ಸಂತುಷ್ಟವಾಗಿ, ಕಾಡಿನಲ್ಲೆಲ್ಲಾ ಸಂತೋಷದಿಂದ ಧ್ವನಿಮಾಡುತ್ತಾ ತಮ್ಮ ಕೇಕಾರವವನ್ನು ಬೀರಿ ನಾಟ್ಯವಾಡುತ್ತಿದ್ದುವು. ॥೮॥

ಉತ್ತಮವಾದ ತೆಂಗು, ಹಲಸು, ಮಾವು, ಈಚಲು, ಸರ್ಜ, ಲೋಧ್ರ, ಪ್ರಿಯಂಗು, ಬಾಳೇ, ಶಿಂಶುಪ, ಪುನ್ನಾಗ, ನಾಗಸಂಪಿಗೆ, ವಕುಲ, ಮತ್ತಿ, ದೇವದಾರು, ವಾರುಣ, ಬೇಲ, ಕಣಿಗಲೆ, ಪಾರಿಜಾತ, ಬಿಲ್ವ, ನಿರ್ಮಲವಾದ ಕಾಶ್ಯಕ, ಕಂಚುವಾಳ, ಅಡಕೆ, ಸರಲ, ಹಿಪ್ಪೆ, ಸಾಲ, ದೇವ, ದೇವಸರ್ಜವೃಕ್ಷ, ಹಿಪ್ಪಲಿ, ಪಾಟವ, ಆಲ ಮುಂತಾದ ಗಿಡಮರಗಳು ಈ ವಿಂಧ್ಯಪರ್ವತದ ಶಿಖರದ ತುದಿಯವರೆಗೂ ಗುಂಪುಗುಂಪಾಗಿ ಬೆಳೆದಿದ್ದುವು. ॥೯-೧೦॥

ತಾಳೆ, ಲೋಧ್ರ, ಕೊಡಸಿಗೆ, ನೇರಳೆ, ಬೇವು, ಮೊದಲಾದ ಮರಗಳು ಆ ವಿಂಧ್ಯಾದ್ರಿಯ ಶಿಖರದಲ್ಲಿ ಸೊಂಪಾಗಿ ಬೆಳೆದಿದ್ದವು. ಆ ಮರಗಳ ಕೊಂಬೆಗಳಿಗೆ ಜೇನು ಹುಳುಗಳು ಜೋತುಬಿದ್ದು ಗೂಡುಕಟ್ಟಿಕೊಂಡು ತೂಗಾಡುತ್ತಿದ್ದುವು.॥೧೧॥

ಭ್ರಮದ್ಭ್ರಮರಝುಂಕೃತಿಪ್ರಸೃತವಾತಪೋತೋತ್ಥಿತಂ
ಪತತ್ಕುಸುಮಮಂಜರೀಗಲಿತಪುಷ್ಪರೇಣುದ್ರುಮಂ ।
ನಗೋರ್ಧ್ವಶಿಖರಾವಲಿಂ ವಸದಪಾರವರ್ಣಾಕೃತಿಂ
ಪ್ರಸ್ಫುರೋಜಸ್ತು(?)ರೀತಿಭಿಃ ಪ್ರತಮುಪಾರಜಂತ್ವಾಸ್ರಕಂ ॥೧೨॥

ಸಂಫುಲ್ಲಮಲ್ಲೀಗಣವಲ್ಲರೀಲಸ
ತ್ಸುಜಾತಿಯೂಥೀವರಮಾಲತೀನಾಂ ।
ಸದ್ವಲ್ಲರೀವಲ್ಲಿತಮೌಲಿಭಾಗಂ
ವಿಂಧ್ಯಂ ದದರ್ಶ ಶ್ರಮಭಾರನಾಶಂ ॥೧೩॥

ಉನ್ಮತ್ತಕುಂಭೀಕಟಯುಗ್ಮಮದೋರುಧಾರಾ
ಸಂಪಾತವತ್ಸ್ವಶಿಖರಾದಪನಿಸ್ಸೃತೇ ದ್ವೇ ।
ನದ್ಯೌ ಚ ಕೌಶಿಕಸುಗಂಡಕಿಗಂಡಭಾಗೋ
ವಾಮಾತಿವಿಂಧ್ಯಶಿಖರೀಕರಟೀವ ಮತ್ತಃ ॥೧೪॥

---

ಮೊರೆಯುತ್ತಿರುವ ದುಂಬಿಗಳ ಝೇಂಕಾರವನ್ನು ಎಲ್ಲೆಡೆಯಲ್ಲಿಯೂ ವ್ಯಾಪಿಸುವಂತೆ ಮಂದಮಾರುತವು ಮಂದವಾಗಿ ಬೀಸುತ್ತಿದ್ದಿತು. ಹೂಗಿಡಗಳಲ್ಲಿ ಸೊಂಪಾಗಿ ಬೆಳೆದಿರುವ ಪುಷ್ಪಗಳ ಜೊಂಪೆಗಳು ತಮ್ಮ ಪರಾಗವನ್ನು ಸುರಿಸುತ್ತಾ ಉದುರುತ್ತಿರುವುವು. ಆ ವಿಂಧ್ಯಪರ್ವತದ ಎತ್ತರವಾದ ಶಿಖರದವರೆಗೂ ನಾನಾವರ್ಣಗಳ ಮೃಗಗಳು ವಾಸಮಾಡುತ್ತಿರುವುವು. ಕ್ರೂರವಾದ ಪ್ರಾಣಿಗಳು ಅಲ್ಪಪ್ರಾಣಿಗಳ ಮೇಲೆ ಹಾರಿ ಅವುಗಳ ಶರೀರವನ್ನು ಬಗೆದು, ಅವುಗಳ ಕರುಳನ್ನು ಈಚೆಗೆ ಎಳೆಯುತ್ತಿದ್ದುವು. ॥೧೨॥

ಚೆನ್ನಾಗಿ ಅರಳಿದ ಮಲ್ಲಿಗೆ ಹೂವಿನ ಗೊಂಚಲುಗಳು ಗುಂಪುಗುಂಪಾಗಿ ಶೋಭಿಸುತ್ತಿರುವುವು. ಜಾಜೀಹೂಗಳೂ, ಶ್ರೇಷ್ಠವಾದ ಮಾಲತೀಹೂಗಳೂ ಸಹ ಜೊಂಪೆಗಳಿಂದ ಕಂಗೊಳಿಸುತ್ತಾ ಆ ವಿಂಧ್ಯಪರ್ವತದ ಶಿಖರ ಭಾಗವನ್ನು ಅಲಂಕರಿಸಿದ್ದುವು. ಎಂತಹ ಶ್ರಮವಿದ್ದರೂ ನೋಡಿದ ಮಾತ್ರದಿಂದಲೇ ಆಯಾಸವನ್ನೆಲ್ಲಾ ಹೋಗಲಾಡಿಸುವ ಇಂತಹ ವಿಂಧ್ಯಪರ್ವತವನ್ನು ಆ ಅಗಸ್ತ್ಯಮುನಿಯು ಸಂತೋಷದಿಂದ ದರ್ಶನಮಾಡಿದನು. ॥೧೩॥

ಮದದಿಂದ ಕೊಬ್ಬಿದ ಆನೆಯು ಎರಡು ಕುಂಭಸ್ಥಳಗಳಿಂದ ಸುರಿಯುತ್ತಿರುವ ದಾನೋದಕದಂತೆ, ಈ ವಿಂಧ್ಯಪರ್ವತದ ಶಿಖರದಿಂದ ಕೌಶಿಕ ಮತ್ತು ಗಂಡಕಿ

**ವಿಂಧ್ಯಃ ಕ್ಷ್ಮಾಪತಿವದ್ವಿಭಾತಿ ನಿತರಾಂ ಸತ್ಕೇಕಿಬಂದಿಸ್ತವೈಃ**
**ಉತ್ಪುಚ್ಛೈಶ್ಚಮರೈರ್ನಿಧಾವತಿ ಮುಹುರ್ನ್ಯಗ್ರೋಧಸಚ್ಛತ್ರಧೃತ್ ।**
**ಸನ್ಮಂತ್ರಿಪ್ರವರೈಃ ಪತತ್ರಿನಿವಹೈಃ ಸೈನ್ಯೈರ್ಮೃಗಾಲಿದ್ರುಮೈಃ**
**ಮೇರುಂ ಧಿಕ್ಕುರುತೇ ಸ್ವಭಾಗ್ಯನಿವಹೈರ್ಧನ್ಯೈಃ ಸ್ವಮೌಲಿಸ್ಥಿತೈಃ ॥೧೫॥**

**ತಂ ದೃಷ್ಟ್ವಾ ವಿಂಧ್ಯಶಿಖರಮಗಸ್ತ್ಯಃ ಪ್ರವಿಲೋಕ್ಯ ಚ ।**
**ನಮಂತಂ ಪಾದಯೋರ್ಮೂರ್ಧ್ನಾ ತಸ್ಯ ಪಾಣಿಂ ದದೌ ತದಾ ॥೧೬॥**

**ಉವಾಚ ವಿನತಂ ವಿಂಧ್ಯಂ ಪ್ರೀತ್ಯಾ ವಾಚಂ ತದಾ ಮುನಿಃ ॥೧೭॥**

---

ಎಂಬ ಎರಡು ನದಿಗಳು ಧಾರಾಕಾರವಾದ ನೀರಿನಿಂದ ತುಂಬಿ ಸದಾ ಹರಿಯುತ್ತಿದ್ದುವು. ಇಂತಹ ಎರಡು ನದಿಗಳೆಂಬ ಮದಧಾರೆಗಳಿಂದ ಯುಕ್ತವಾದ ಈ ವಿಂಧ್ಯಪರ್ವತವು ಮದಿಸಿದ ಆನೆಯಂತೆ ಪ್ರಕಾಶಿಸುತ್ತಿದ್ದಿತು. ॥೧೪॥

ಉತ್ತಮವಾದ ನವಿಲುಗಳು ಸ್ತೋತ್ರಪಾಠಕರಂತೆ ವಿಂಧ್ಯಗಿರಿಯ ಮಹಿಮೆಯನ್ನು ಕೇಕಾನಾದರೂಪವಾಗಿ ಸ್ತೋತ್ರಮಾಡುತ್ತಿದ್ದುವು. ದಪ್ಪದಪ್ಪ ಬಾಲಗಳಿಂದ ಶೋಭಿಸುವ ಚಮರೀಮೃಗಗಳು ಎಲ್ಲೆಡೆಯಲ್ಲಿಯೂ ಓಡಾಡುತ್ತಾ ತಮ್ಮ ಬಾಲಗಳಿಂದ ಚಾಮರಸೇವೆಯನ್ನೆಸಗುತ್ತಿದ್ದುವು. ಪದೇ ಪದೇ ಆಲದಮರಗಳನ್ನೇ ಛತ್ರಿಯ ಸ್ಥಾನದಲ್ಲಿ ಧರಿಸಿ, ಪಕ್ಷಿಗಳ ಸಮೂಹವೇ ಉತ್ತಮರಾದ ಮಂತ್ರಿಗಳಂತೆ ತೋರುತ್ತಿದ್ದಿತು. ಮೃಗಗಳ ಸಮೂಹವು ಸೈನ್ಯಸ್ಥಾನದಲ್ಲಿ ಕಾಣುತ್ತಿದ್ದಿತು. ಈ ರೀತಿಯಾಗಿ ತನ್ನ ಶಿಖರದಲ್ಲಿ ಬೆಳೆದಿರುವ ಮರಗಿಡಬಳ್ಳಿಗಳಿಂದಲೂ ಮತ್ತು ವಾಸಮಾಡುತ್ತಿರುವ ಪ್ರಾಣಿಗಳಿಂದಲೂ ಈ ವಿಂಧ್ಯಪರ್ವತವು ರಾಜನಂತೆ ಶೋಭಿಸುತ್ತಾ ತನ್ನ ಈ ಭಾಗ್ಯಸಂಪತ್ತಿನಿಂದ ಮೇರುಪರ್ವತವನ್ನೂ ಸಹ ಧಿಕ್ಕಾರಮಾಡುತ್ತಿದ್ದಿತು. ॥೧೫॥

ಈ ರೀತಿಯಾದ ವೈಭವದಿಂದ ಶೋಭಿಸುತ್ತಿರುವ ವಿಂಧ್ಯಪರ್ವತವನ್ನು ನೋಡಿ, ಹಾಗೆಯೇ ಅಗಸ್ತ್ಯಮುನಿಯು ಅದರ ಶಿಖರವನ್ನು ನೋಡಲು, ಆಗ ವಿಂಧ್ಯನು ಆ ಅಗಸ್ತ್ಯಮುನಿಯ ಕಾಲುಗಳಿಗೆ ವಿನಯದಿಂದ ನಮಸ್ಕಾರಮಾಡಿದನು. ಹೀಗೆ ನಮಸ್ಕರಿಸಿರುವ ವಿನೀತನಾದ ವಿಂಧ್ಯನ ಮೇಲೆ ಆ ಅಗಸ್ತ್ಯಮುನಿಯು ತನ್ನ ಕೈಗಳನ್ನಿಟ್ಟು, ಪ್ರೀತಿಯಿಂದ ಹೀಗೆ ಮಾತನಾಡಿದನು. ॥೧೬-೧೭॥

ಧನ್ಯೋಽಸಿ ಕೃತಕೃತ್ಯೋಽಸಿ ಮಾನ್ಯೋಽಸಿ ತ್ವಂ ಗಿರಿಷ್ವಹೋ ।
ನ ತ್ವತ್ತುಲ್ಯೋಽಪ್ಯಯಂ ಮೇರುರ್ವೃದ್ಧೋ ಹಿ ಹಿಮವಾನ್ನಗಃ॥೧೮॥

ಅನ್ಯೇ ಕುಲಾಚಲಾಸ್ಸರ್ವೇ ನ ಸಮಾಸ್ತವ ವೈ ಗಿರೇ ।
ಮಹಾಕೈಲಾಸ ಏವೈಕೋ ನ ದೃಷ್ಟೋ ವಿಶ್ವವಾಸಿಭಿಃ ॥೧೯॥

ವಿಶ್ವಾಧಿಕನಿವಾಸೋ ವೈ ಸಂಶ್ರುತೋ ನೈವ ಲೋಕ್ಯತೇ ।
ತಪೋಭಿರ್ವಾ ಮಹದ್ಭಿಶ್ಚ ಸ ನ ಪ್ರಾಪ್ಯೋಽಸ್ಮದಾದಿಭಿಃ ॥೨೦॥

ತಪಸ್ವಿಶರಣೋ ನಿತ್ಯಂ ಪುಣ್ಯನದ್ಯೋಶ್ಚ ಸಂಭವಃ ।
ತಸ್ಮಾಲೌ ವಿಂಧ್ಯನಿಲಯಾತ್ಕೌಶಿಕೀ ನಿತ್ಯವಾಹಿನೀ ॥೨೧॥

ತ್ವತ್ತೋ ಧನ್ಯತಮೋ ನಾನ್ಯೋ ಮಾರ್ಗಂ ವಿಂಧ್ಯ ಪ್ರದೇಹಿ ಮೇ ।
ತದಾ ವಿಂಧ್ಯಸ್ತಸ್ಯ ವಚಃ ಶ್ರುತ್ವಾ ಪ್ರಾಂಜಲಿರಬ್ರವೀತ್ ॥೨೨॥

---

ಎಲೈ ವಿಂಧ್ಯನೇ, ನೀನೇ ಧನ್ಯನೂ, ಕೃತಾರ್ಥನೂ ಆಗಿರುವೆ. ಪರ್ವತಗಳಲ್ಲೆಲ್ಲಾ ನೀನೇ ಮಾನ್ಯನೆನಿಸಿರುವೆ. ನಿನ್ನ ಪ್ರಭಾವವು ಅತ್ಯಾಶ್ಚರ್ಯವಾಗಿರುವುದು. ಈ ಮೇರುವು ನಿನಗೆ ಎಂದಿಗೂ ಸಾಟಿಯಾಗಲಾರದು. ಆ ಹಿಮವತ್ಪರ್ವತವಾದರೋ ಬಹಳ ವೃದ್ಧಾವಸ್ಥೆಯಲ್ಲಿರುವುದು. 'ಮಹೇಂದ್ರ, ಮಲಯ, ಸಹ್ಯ, ಮಾಲ್ಯವಾನ್, ಪಾರಿಯಾತ್ರ, ಈ ಉಳಿದ ಕುಲಪರ್ವತಗಳಾದರೋ ನಿನಗೆಂದೆಂದಿಗೂ ಸಮಾನವೆನಿಸಲಾರವು. ಎಲೈ ವಿಂಧ್ಯಪರ್ವತನೇ, ಒಂದುವೇಳೆ ನಿನಗೆ ಸಮನೆನಿಸುವ ಆ ಮಹಾಕೈಲಾಸಪರ್ವತವೊಂದು ಮಾತ್ರ ಈ ಪ್ರಪಂಚದಲ್ಲಿರುವುದು. ಆದರೆ ಅದು ಭೂವಾಸಮಾಡುತ್ತಿರುವ ಮಾನವರಿಗೆ ಕಾಣುವುದೇ ಇಲ್ಲವಷ್ಟೆ. ॥೧೮-೧೯॥

ಜಗಚ್ಛ್ರೇಷ್ಠನಾದ ಪರಶಿವನಿಗೆ ಆವಾಸಭೂಮಿಯೆಂದು ಪ್ರಸಿದ್ಧವಾಗಿರುವ ಆ ಮಹಾಕೈಲಾಸವು ಮಾನವರಿಗೆ ಎಂದೂ ಗೋಚರವಾಗುವುದಿಲ್ಲ. ದೊಡ್ಡ ತಪಸ್ಸನ್ನು ಮಾಡಿದರೂ ನಮ್ಮಂಥವರಿಗೆ ಅದು ಲಭ್ಯವಾಗಲಾರದು. ನೀನು ಯಾವಾಗಲೂ ತಪಸ್ಸುಮಾಡುವವರಿಗೆ ಆಶ್ರಯದಾತನಾಗಿ ಪುಣ್ಯಕರಗಳಾದ ನದಿಗಳಿಗೆ ಉತ್ಪತ್ತಿಸ್ಥಾನನಾಗಿರುವೆ. ನಿನ್ನ ಪರ್ವತದ ಶಿಖರದಿಂದ 'ಕೌಶಿಕೀ' ಎಂಬ ನದಿಯು ನಿತ್ಯವೂ ಹರಿಯುತ್ತಿರುವುದು. ಎಲೈ ವಿಂಧ್ಯನೇ, ನಿನಗಿಂತಲೂ ಶ್ರೇಷ್ಠನೆನಿಸಿದವನು ಯಾರೂ ನನಗೆ ತೋರನು. ಅಯ್ಯ ಧನ್ಯನೇ, ನನಗೆ

|| ವಿಂಧ್ಯ ಉವಾಚ ||

ಧನ್ಯೋಽಸ್ಮ್ಯಹಂ ಕೃತಾರ್ಥೋಽಸ್ಮಿ ಸಂಪ್ರಾಪ್ಯ ತವ ದರ್ಶನಂ ।
ನ ಮನ್ಯಾಮಿ ಗಿರಿಂ ಮೇರುಂ ತ್ವದಾಜ್ಞಾಂ ಕರವಾಣ್ಯಹಂ ||೨೩||

ತದಾ ವಿಂಧ್ಯಸ್ಯ ವಚಸಾ ಸಂತುಷ್ಟೋ ಮುನಿಪುಂಗವಃ ।
ವಿವರ್ಧಮಾನಂ ತಂ ವಿಂಧ್ಯಮುವಾಚ ಪ್ರೀತಿಪೂರ್ವಕಂ ||೨೪||

|| ಅಗಸ್ತ್ಯ ಉವಾಚ ||

ದೇವಾನಾಂ ಕಾರ್ಯಸಿದ್ಧ್ಯರ್ಥಂ ಯಾವದಾಗಮನಂ ಮಮ ।
ಮಾ ವೃದ್ಧೋ ಭವ ಹೇ ವಿಂಧ್ಯ ಮದಾಜ್ಞೇಯಂ ಪ್ರಪಾಲ್ಯತಾಂ ||೨೫||

ತಥೇತ್ಯನುಮತಸ್ತೇನ ಯಯೌ ಮುನಿರುದಾರಧೀಃ ।
ಸುರಾಶ್ಚ ಹರ್ಷಮಾಪೇದುಃ ಸೂರ್ಯೇಂದ್ವೋರ್ಮಾರ್ಗತಾದೃಶಃ ||೨೬||

---

ದಾರಿಕೊಡು ಎಂದು ಆಗಸ್ತ್ಯಮುನಿಯು ವಿಂಧ್ಯಪರ್ವತವನ್ನು ಕೇಳಿಕೊಳ್ಳಲು ಆ ಮಾತುಗಳನ್ನು ಕೇಳಿ, ವಿಂಧ್ಯನು ಕೈಮುಗಿದು ಹೀಗೆ ನುಡಿದನು. ||೨೦-೨೧-೨೨||

ಮಹಾಮುನಿಯೇ, ತಮ್ಮ ದರ್ಶನಪಡೆದು ನಾನಿಂದು ಧನ್ಯನೂ ಕೃತಾರ್ಥನೂ ಆಗಿರುವೆನು. ಈಗ ಮೇರುಪರ್ವತವನ್ನು ಗಣನೆಮಾಡದೆ ಮೊದಲು ನಿಮ್ಮ ಅಪ್ಪಣೆಯನ್ನು ನಡೆಸುವುದಕ್ಕೋಸ್ಕರ ದಾರಿಬಿಡುತ್ತೇನೆಂದು ವಿನಯದಿಂದ ಬಗ್ಗಿ ನಿಂತಿರಲು, ಆ ವಿಂಧ್ಯನ ಮಾತುಗಳಿಂದ ಸಂತೋಷಭರಿತನಾದ ಮುನಿಪುಂಗವನು ತನಗೆ ದಾರಿಬಿಟ್ಟ ಮೇಲೆ ಪುನಃ ಹಿಂದಿನಂತೆಯೇ ಮೇರುಪರ್ವತದ ಮೇಲಿನ ಸ್ಪರ್ಧೆಯಿಂದ ಬೆಳೆಯುತ್ತಿರುವ ವಿಂಧ್ಯನನ್ನು ನೋಡಿ, ಪ್ರೀತಿಪುರಸ್ಸರವಾಗಿ ಇಂತೆಂದನು. ||೨೩-೨೪||

ಎಲೈ ವಿಂಧ್ಯನೇ, ನಾನು ದೇವತೆಗಳ ಕೆಲಸವನ್ನು ಮಾಡುವುದಕ್ಕೋಸ್ಕರ ಹೋಗುತ್ತಿರುವೆನು. ನಾನು ಬರುವವರೆಗೂ ನೀನು ಬೆಳೆಯದೇ ಈಗಿರುವ ಹಾಗೆಯೇ ಇರು. ಈ ನನ್ನ ಅಪ್ಪಣೆಯನ್ನು ನೀನು ಅವಶ್ಯವಾಗಿ ಕಾಪಾಡೆಂದು ಆಗಸ್ತ್ಯಮುನಿಯು ಹೇಳಲು, ಆ ವಿಂಧ್ಯನು ಹಾಗೆಯೇ ಆಗಲೆಂದು ಅನುಮತಿಸಿದನು. ಉದಾರಮನಸ್ಸುಳ್ಳ ಅಗಸ್ತ್ಯಮುನಿಯೂ ಅಲ್ಲಿಂದ ಮುಂದೆ ಸಂತೋಷದಿಂದ ಪ್ರಯಾಣಮಾಡಿದನು. ದೇವತೆಗಳು ಸಂತೋಷಹೊಂದಿದರು. ಇದರಿಂದ

ವಿಂಧ್ಯಶೈಲೇ ಸಮಾಸಾದ್ಯ ದತ್ವಾ ಸ್ನಾತ್ವಾ ಸ ಕುಂಭಜಃ ।
ಪಾವನಂ ತೀರ್ಥಮಾಸಾದ್ಯ ನದ್ಯೋದಪ್ರಭವಂ ಸರಃ ॥೨೭॥

ದಕ್ಷಿಣೇ ಚೋದಭೂತ್ಪುಣ್ಯಾ ಕೌಶಿಕೀ ಪುಣ್ಯಗಾಮಿನೀ ।
ದೇವ್ಯಾಃ ಕೇಶಸಮುದ್ಭೂತಾ ಕೌಶಿಕೀತಿ ಪ್ರಕೀರ್ತಿತಾ ॥೨೮॥

ತಸ್ಯೋತ್ತರೇ ಸಾ ವಿಂಧ್ಯಸ್ಯ ಗಂಡಕೀ ನಿಸ್ಸೃತಾಭವತ್ ।
ನದ್ಯೋ ನೀರೇ ಸ ಸಂಸ್ನಾಯ ದಶಯೋಜನವಿಸ್ತೃತೇ ॥೨೯॥

ದದರ್ಶ ವಿಂಧ್ಯಶಿಖರೇ ವಿಂಧ್ಯೇಶಾಲಯಮುತ್ತಮಂ ।
ಸ ವಿಂಶದ್ಯೋಜನಾದೂರ್ಧ್ವಂ ಕ್ರೋಶತೀರ್ಥೇ ಮಹತ್ತರೇ ॥೩೦॥

ವೈಖಾನಸೈರ್ಮುನಿಗಣೈಃ ಪೂಜಿತೋಽನ್ಯೈಃ ಸಹಾದರಾತ್ ।
ವಿಂಧ್ಯೇಶಂ ಕೌಶಿಕೀತೀರೇ ತನ್ನೀರೈರಭಿಷಿಚ್ಯ ಚ ॥೩೧॥

ಸೂರ್ಯಚಂದ್ರರ ಸಂಚಾರವು ನಿರ್ವಿಘ್ನವಾಗಿ ನಡೆಯುವಂತೆ ಏರ್ಪಾಡಾಯಿತು. ||೨೫-೨೬||

ವಿಂಧ್ಯಪರ್ವತವನ್ನು ಹತ್ತಿ ಅಲ್ಲಿ ಸ್ನಾನಾದಿಗಳನ್ನು ತೀರಿಸಿ ಯಥೋಚಿತವಾಗಿ ತರ್ಪಣಾದಿಗಳನ್ನು ನೆರವೇರಿಸಿ, ಆ ವಿಂಧ್ಯಪರ್ವತದಲ್ಲಿ ಹುಟ್ಟುವ ನದಿಗಳ ಸಂಬಂಧದಿಂದುಂಟಾದ ಪವಿತ್ರವಾದ ಸರೋವರದಲ್ಲಿಯೂ ತೀರ್ಥಗಳಲ್ಲಿಯೂ ಸ್ನಾನಮಾಡುತ್ತಾ, ಆ ವಿಂಧ್ಯಾಚಲದ ದಕ್ಷಿಣ ದಿಕ್ಕಿನಲ್ಲಿದ್ದ ಪುಣ್ಯಕರವಾದ ಕೌಶಿಕೀ ನದಿಯ ಸಮೀಪಕ್ಕೆ ಬಂದನು. ಆ ಕೌಶಿಕೀನದಿಯು ದೇವಿಯ ಕೂದಲುಗಳಿಂದಲೇ ಹುಟ್ಟಿ ಆ ಹೆಸರಿನಿಂದ ಪ್ರಸಿದ್ಧವಾಗಿತ್ತು. ||೨೭-೨೮||

ಆ ವಿಂಧ್ಯಪರ್ವತಕ್ಕೆ ಉತ್ತರ ದಿಕ್ಕಿನಲ್ಲಿ ಗಂಡಕೀನದಿಯು ಹುಟ್ಟುತ್ತದೆ. ಹತ್ತು ಯೋಜನ ವಿಸ್ತಾರವಾಗಿರುವ ಆ ನದಿಗಳ ನೀರಿನಲ್ಲಿ ಸ್ನಾನಮಾಡಿ ಆ ಅಗಸ್ತ್ಯಮುನಿಯು ವಿಂಧ್ಯಪರ್ವತದ ಶಿಖರದಲ್ಲಿ ಉತ್ತಮವಾದ ವಿಂಧ್ಯೇಶ್ವರನ ದೇವಾಲಯವನ್ನು ದರ್ಶನಮಾಡಿದನು. ಆ ದೇವಾಲಯವು ಇಪ್ಪತ್ತು ಯೋಜನದ ದೂರದಲ್ಲಿ ಪರ್ವತದ ಮೇಲ್ಗಡೆ ಇದ್ದಿತು. ಅಲ್ಲಿ ಅತಿ ದೊಡ್ಡದಾದ ಕ್ರೋಶತೀರ್ಥವೆಂಬುದಿರುವುದು. ||೨೯-೩೦||

ವೈಖಾನಸವೃತ್ತಿಯನ್ನು ಅವಲಂಬಿಸಿದ ಮುನಿಗಳೂ ಮತ್ತಿತರ ಋಷಿಗಳೂ ಇವರೊಡನೆ ಆದರದಿಂದ ಆ ಕೌಶಿಕೀನದಿಯ ದಡದಲ್ಲಿ ವಾಸಮಾಡುತ್ತಾ ಅದರ

ಬಿಲ್ವಪತ್ರೈಃ ಸಮಭ್ಯರ್ಚ್ಯ ತುಷ್ಟಾವೇಶಂ ಕಪರ್ದಿನಂ ॥೩೨॥

॥ ಮುನಿರುವಾಚ ॥

ವಿಂಧ್ಯೇಶ ಸಂಧ್ಯಾಸು ತವೇಷ್ಟಲಿಂಗ
ವಿಲೋಕಿನೋ ಯೇಽತ್ರ ತ ಏವ ಸಾಧ್ಯಾಃ ।
ಅವಂಧ್ಯಭಾಗ್ಯಾಸ್ತವ ಸುಪ್ರಸಾದಾತ್
ನೋದಂತಿ ವರ್ಧಂತಿ ಭುವಿ ಪ್ರಸಿದ್ಧಾಃ ॥೩೩॥

ತದುತ್ತರೇ ಮಹಾದೇವೀಂ ಕೌಶಿಕೀಂ ವಿಂಧ್ಯವಾಸಿನೀಂ ।
ಪ್ರಪೂಜ್ಯ ಭಕ್ತಿಭಾವೇನ ವನ್ಯೈರ್ಮೂಲಫಲೈರ್ಮುನಿಃ ॥೩೪॥

ಧೂಪೈರ್ದೀಪೈಶ್ಚ ನೈವೇದ್ಯೈರ್ಭಕ್ಷ್ಯೈಶ್ಚ ವಿವಿಧೈಸ್ತದಾ ।
ತುಷ್ಟಾವ ದೇವೀಂ ಹೃಷ್ಟಾತ್ಮಾ ಕೌಶಿಕೀಂ ವಿಂಧ್ಯವಾಸಿನೀಂ ॥೩೫॥

---

ನೀರಿನಿಂದಲೇ ಆ ವಿಂಧ್ಯೇಶ್ವರನಿಗೆ ಅಭಿಷೇಕಮಾಡಿ ಅನಂತರ ಬಿಲ್ವದಳಗಳಿಂದ ಪೂಜೆಮಾಡಿ, ಆಮೇಲೆ ಜಟಾಧಾರಿಯಾದ ಈಶ್ವರನನ್ನು ಈ ರೀತಿ ಸ್ತೋತ್ರ ಮಾಡಿದನು. ॥೩೧-೩೨॥

ಎಲೈ ವಿಂಧ್ಯೇಶ್ವರನೇ, ನಿನ್ನ ಇಷ್ಟವಾದ ಈ ಶಿವಲಿಂಗವನ್ನು ಸಂಧ್ಯಾಕಾಲಗಳಲ್ಲಿ ನಿತ್ಯವೂ ನೋಡುವವರೇ ಸಿದ್ಧಪುರುಷರೆನಿಸುವರು. ಅವರು ಭೂಮಿಯಲ್ಲಿ ನಿನ್ನ ಉತ್ತಮವಾದ ಅನುಗ್ರಹವನ್ನು ಪಡೆದು ಪ್ರಸಿದ್ಧರೆನಿಸಿ ನಿರ್ದುಷ್ಟವಾದ ಭಾಗ್ಯವನ್ನು ಹೊಂದಿ ಯಾವಾಗಲೂ ಸಂತೋಷದಿಂದ ಅಭಿವೃದ್ಧಿಹೊಂದುತ್ತಿರುವರು. ॥೩೩॥

ವಿಂಧ್ಯೇಶ್ವರನಿಗೆ ಉತ್ತರದಲ್ಲಿ ಅದೇ ವಿಂಧ್ಯಪರ್ವತವಾಸಿಯಾದ ಕೌಶಿಕೀ ಮಹಾದೇವಿಯನ್ನು ಆ ಅಗಸ್ತ್ಯಮುನಿಯು ಕಂದಮೂಲಫಲಾದಿಗಳಿಂದಲೇ ಭಕ್ತಿಪೂರ್ವಕವಾಗಿ ಪೂಜೆಮಾಡಿ, ಧೂಪ, ದೀಪ ಮತ್ತು ನಾನಾ ಬಗೆಯ ಭಕ್ಷ್ಯಭೋಜ್ಯರೂಪವಾದ ನೈವೇದ್ಯವನ್ನು ಸಮರ್ಪಣೆಮಾಡಿದ ನಂತರ ಮುನಿವರ್ಯನು ಸಂತುಷ್ಟನಾಗಿ ಆ ಕೌಶಿಕೀದೇವಿಯನ್ನು ಈ ರೀತಿ ಸ್ತೋತ್ರಮಾಡಿದನು. ॥೩೪-೩೫॥

॥ ಅಗಸ್ತ್ಯ ಉವಾಚ ॥

ಹೇ ಕೌಶಿಕಿ ತ್ರಿದಶವರ್ಗ ವಿಶೇಷಪೂಜ್ಯೇ
ದೈತ್ಯೇಂದ್ರದರ್ಪಪರಿಹಾರಕಸರ್ಪಕೋಪೇ ।
ದುರ್ಧರ್ಷಹರ್ಷಪರಿಕರ್ಷಿತದೀಪ್ತಶೂಲ
ಪ್ರೋತೋರುಹೇಷಮಹಿಷೋತ್ತಮಕೃತ್ತವಕ್ತ್ರೇ ॥೩೬॥

ಹೇ ಚಂಡಮುಂಡಪರಿಖಂಡನ ಹಸ್ತಶಬ್ದ
ಕೋದಂಡಕಾಂಡಗಣಶೌಂಡಮಹಾಟ್ಟಹಾಸೇ ।
ದಂಭಪ್ರದಾನ ಸುರಶತ್ರುನಿಶುಂಭ ಶುಂಭ.
ಪ್ರಾಣಪ್ರಯಾಣಶಿರಸೋಽಬ್ಜಸುಪೂಜಿತಾಂಘ್ರೇ ॥೩೭॥

ದುರ್ದಾಂತಶೇಖರ ಮಹಾಸುರರಕ್ತದಂತ-
ಧ್ವಾಂತಪ್ರಮಾಥಿನಿ ಶಿವೇ ಸತತಂ ನಮೋಽಸ್ತು ॥೩೮॥

---

ಎಲೌ ಕೌಶಿಕೀದೇವಿಯೇ, ನೀನು ದೇವತೆಗಳ ಸಮೂಹಗಳಿಂದ ಯಾವಾಗಲೂ ಪೂಜಿಸಲ್ಪಡುವೆ. ರಾಕ್ಷಸಶ್ರೇಷ್ಠರ ಅಹಂಕಾರವನ್ನು ಮುರಿಯುವುದರಲ್ಲಿ ಹಾವಿನಂತೆ ತೀಕ್ಷ್ಣವಾದ ಕೋಪವುಳ್ಳವಳು. ಸರ್ವದಾ ಒಂದೇ ರೀತಿಯಿಂದಿರುವ ಸಂತೋಷದಿಂದ ಶೋಭಿಸುತ್ತಾ, ಪ್ರಕಾಶಿಸುತ್ತಿರುವ ತ್ರಿಶೂಲವನ್ನು ಧರಿಸಿ, ಆ ಶೂಲಕ್ಕೆ ಧ್ವನಿಮಾಡುತ್ತಿರುವ ದೊಡ್ಡದೊಡ್ಡ ಕೋಣಗಳ ತಲೆಯನ್ನು ಮಾಲೆಯಂತೆ ತೂಗಹಾಕಿ, ಭಯಂಕರಗಳಾಗಿ ಕಾಣುವ ನಿನಗೆ ನಮಸ್ಕಾರಮಾಡುತ್ತೇನೆ. ॥೩೬॥

ಚಂಡ, ಮುಂಡ ಎಂಬ ರಾಕ್ಷಸರನ್ನು ಸಂಹರಿಸಿ, ತನ್ನ ಕೈಯ್ಯಲ್ಲಿ ಹಿಡಿದಿರುವ ಬಿಲ್ಲನ್ನು ಧ್ವನಿಮಾಡುತ್ತಾ ತನ್ನ ಶ್ರೇಷ್ಠವಾದ ಗಣಗಳೊಡನೆ ಕೂಡಿ, ದೊಡ್ಡದಾಗಿ ಅಟ್ಟಹಾಸಮಾಡುತ್ತಿರುವ ದೇವಿಯೇ, ಅಹಂಕಾರವೇ ಮುಖ್ಯವಾದ ದೇವತೆಗಳಿಗೆ ಕಂಟಕಪ್ರಾಯರಾಗಿದ್ದ ನಿಶುಂಭ ಮತ್ತು ಶುಂಭರೆಂಬ ರಾಕ್ಷಸರ ಪ್ರಾಣಗಳನ್ನು ಕಳೆದು (ಸಂಹರಿಸಿ) ಅವರ ತಲೆಗಳೆಂಬ ಕಮಲಗಳಿಂದ ಪೂಜಿಸಲ್ಪಟ್ಟ ಪಾದವುಳ್ಳ ನಿನಗೆ ನಮಸ್ಕಾರಮಾಡುವೆನು. ॥೩೭॥

ಎಲೌ ಮಂಗಳಾಂಗಿಯೇ, ದುಷ್ಟರಲ್ಲಿ ಅಗ್ರಗಣ್ಯನೆನಿಸಿದ ರಕ್ತದಂತನೆಂಬ ದೊಡ್ಡ ರಾಕ್ಷಸನನ್ನು ಸಂಹಾರಮಾಡಿ, ಜಗತ್ತಿಗೆ ಅವನಿಂದುಂಟಾಗಿದ್ದ ಕತ್ತಲೆಯನ್ನು ಹೋಗಲಾಡಿಸಿದ ನಿನಗೆ ಯಾವಾಗಲೂ ನಮಸ್ಕಾರವಿರಲಿ. ॥೩೮॥

ಸ್ಫೂರ್ಜದ್ಗರ್ಜನತರ್ಜಿತಾಸುರಗಣ ಪ್ರಾವರ್ಷಿಬಾಣೋತ್ತರೈಃ ।
ಭೂಮೌ ಭರ್ಜಿತಪಾತಕಾದ್ರಿನಿವಹೇ ಹೇ ಕೌಶಿಕಿ ತ್ರಾಹಿ ಮಾಂ ॥೩೯॥

(ದಂಡಕಂ)

ಉದ್ಭಟ ಸುರಮುನಿ ಪಾಟಿತಸ್ತುತಿನತಿ ಅಪಚಿತಿಜಾತ-
ಸುಸಂಭ್ರಮುಪೋಷಿತವಿಷ್ಟಪ ಪಾಲಕ ಪೂಜಿತ ಪಾದಯುಗೇ ॥೪೦॥

ಹೇ ಜಗದಂಬ ವನಪ್ರಿಯ ಶಿವ ಹರ ಸಂಗಭುಜಂಗ
ಘನವಿಂಧ್ಯಶಿಖರೋಧಿವಾಸಿನಿ ಪಾತಕಶೋಷಿಣಿ ಪಾಹಿ ಶಿವೇ ।
ತವ ಪದಸಕ್ತ ಸುಭಕ್ತ ಹೃದಯಾಂತರವಾಸವಾಸಿನಿ ಸೂಕ್ತಿಪರೇ
ಮುಕ್ತಿಕರೇ ಸಿತಶೂಲಧರೇ ಪರಮೇಶ್ವರಿ ಶಂಕರಿ ಪಾಹಿ ಶಿವೇ ॥೪೧॥

---

ಹೆಚ್ಚಾಗಿ ಗರ್ಜನೆಮಾಡುತ್ತಾ ತನ್ನ ಗರ್ಜನೆಯಿಂದ ಸಕಲ ರಾಕ್ಷಸ ಸಮೂಹವನ್ನೂ ಬೆದರಿಸಿ ಅವರಮೇಲೆ ಬಾಣಗಳ ಮಳೆಯನ್ನೇ ಸುರಿಸಿದವಳೂ, ಭೂಮಿಯಲ್ಲಿ ಪಾಪಗಳೆಂಬ ಬೆಟ್ಟಗಳ ಸಮೂಹವನ್ನು ಧ್ವಂಸಮಾಡಿದವಳೂ ಆಗಿರುವ ಕೌಶಿಕೀದೇವಿಯೇ, ನನ್ನನ್ನು ಕಾಪಾಡು. ||೩೯||

ದೊಡ್ಡದೊಡ್ಡ ಸೈನಿಕರು, ದೇವತೆಗಳು ಮತ್ತು ಮುನಿಗಳಿಂದ ಮಾಡಲ್ಪಟ್ಟ ಸ್ತೋತ್ರ ಮತ್ತು ನಮಸ್ಕಾರಗಳುಳ್ಳವಳೇ, ತನ್ನನ್ನು ಪೂಜಿಸಿದುದರಿಂದುಂಟಾದ ವಿಶೇಷವಾದ ಸಂಭ್ರಮದಿಂದ ಕಾಪಾಡಲ್ಪಟ್ಟ ಲೋಕಪಾಲಕರುಳ್ಳವಳಾಗಿ, ಅವರಿಂದ ಯಾವಾಗಲೂ ಪೂಜೆಹೊಂದುತ್ತಿರುವ ಪಾದಯುಗ್ಮಗಳುಳ್ಳವಳೇ, ನಿನ್ನ ಕಟಾಕ್ಷಗಳೆಂಬ ಅಲೆಗಳಿಗೆ ಸಿಕ್ಕಿರುವ ಮುನಿಜನಗಳನ್ನು ಕಾಪಾಡಿ, ಅನುಗ್ರಹಿಸಿ, ತೃಪ್ತಿಯನ್ನೂ ಉಂಟುಮಾಡುವಂತಹ ಪವಿತ್ರವಾದ ತೀರ್ಥವುಳ್ಳ ದೇವಿಯೇ, ನಿನಗೆ ನಮಸ್ಕಾರಮಾಡುವೆನು. ||೪೦||

ಎಲೌ ಜಗದಂಬಿಕೆಯೇ, ವನವಾಸದಲ್ಲಿ ಪ್ರೀತಿಯುಳ್ಳ ಜಗನ್ಮಂಗಳಕರನಾದ ಪರಶಿವನ ಸಹಚಾರಿಣಿಯಾದ ನೀನು ಗಂಭೀರವಾದ ಈ ವಿಂಧ್ಯಪರ್ವತದ ಶಿಖರದಲ್ಲಿ ವಾಸಮಾಡುತ್ತಿರುವೆ. ಮಂಗಳಾಂಗಿಯೇ, ಪಾಪಗಳನ್ನೆಲ್ಲಾ ನಾಶಮಾಡುವ ನೀನು, ನನ್ನನ್ನು ಕಾಪಾಡು. ನೀನು ನಿನ್ನ ಪಾದಸೇವೆಯಲ್ಲಿಯೇ ನಿರತರಾಗಿರುವ ಉತ್ತಮಭಕ್ತರ ಹೃದಯಮಧ್ಯದಲ್ಲಿ ವಾಸಮಾಡುವವಳು. ಉಚಿತವಚನಗಳನ್ನು ನುಡಿಯುವುದರಲ್ಲಾಸಕ್ತಳು. ಮೋಕ್ಷಪ್ರದಳೂ, ಶುಭ್ರವಾದ ಶೂಲಾಯುಧವನ್ನು

॥ ಸ್ಕಂದ ಉವಾಚ ॥

**ಏವಂ ವಿಂಧ್ಯನಿವಾಸಿನೀಂ ಭಗವತೀಂ ಸ್ತುತ್ವಾ ಮುನಿಃ ಕುಂಭಭೂಃ**
**ಸಹ್ಯಂ ಭೂಧರಮಾಸಸಾದ ಸ ತದಾ ಶ್ರೀಶೈಲಮಾಲೋಕ್ಯ ಚ ।**
**ಗೋಕರ್ಣಂ ಸಮವಾಪ್ಯ ತೂರ್ಣಫಲದಂ ಪೂರ್ಣಂ ಮುನೀನಾಂ ಗಣೈ**
**ಸ್ತತ್ರಾಭ್ಯರ್ಚ್ಯ ಮಹೇಶ್ವರಂ ತ್ರಿಜಗತಾಮೀಶಂ ಮಹೇಶಂ ಶಿವಂ ॥೪೨॥**

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ವಿಂಧ್ಯಪರ್ವತ**
**ವರ್ಣನೇ ಅಗಸ್ತ್ಯಕೃತ ವಿಂಧ್ಯೇಶ್ವರಕೌಶಿಕೀಸ್ತುತಿರ್ನಾಮ**
**ಷಷ್ಠೋಽಧ್ಯಾಯಃ**

---

ಧರಿಸಿದವಳೂ, ಪರಮೈಶ್ವರ್ಯಭರಿತಳೂ, ಜಗನ್ಮಂಗಳಕರಳೂ ಆದ ದೇವಿಯೇ, ನಮ್ಮನ್ನು ಕಾಪಾಡು. ॥೪೧॥

ಆ ಅಗಸ್ತ್ಯಮುನಿಯು ಹೀಗೆ ವಿಂಧ್ಯಪರ್ವತವಾಸಿನಿಯಾದ ಕೌಶಿಕೀದೇವಿಯನ್ನು ಸ್ತೋತ್ರಮಾಡಿ ಶ್ರೀಶೈಲವನ್ನು ನೋಡಿದಮೇಲೆ, ಮುನಿಗಳ ಸಮೂಹದಿಂದ ವಿರಾಜಿಸುತ್ತಾ ಜಾಗ್ರತೆಯಾಗಿ ಸಕಲ ಫಲಗಳನ್ನೂ ಕೊಡುವ ಗೋಕರ್ಣಕ್ಷೇತ್ರಕ್ಕೆ ಬಂದು ಅಲ್ಲಿ ಮೂರು ಲೋಕಗಳಿಗೂ ಒಡೆಯನೂ, ಮಹೇಶ್ವರನೂ, ಯೋಗಿಗಳ ಹೃದಯದಲ್ಲಿ ಯಾವಾಗಲೂ ನೆಲಸಿರುವವನೂ ಆದ ಮಹೇಶ್ವರನನ್ನು ಪೂಜೆಮಾಡಿದ ನಂತರ ಸಹ್ಯಪರ್ವತಕ್ಕೆ ಪ್ರಯಾಣ ಮಾಡಿದನು. ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೪೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶ್ರೀ ವಿಂಧ್ಯಪರ್ವತವರ್ಣನೆಯಲ್ಲಿ ಅಗಸ್ತ್ಯಮುನಿಯು ಮಾಡಿದ
ವಿಂಧ್ಯೇಶ್ವರ ಮತ್ತು ಕೌಶಿಕೀದೇವಿಯರ ಸ್ತೋತ್ರವೆಂಬ
ಆರನೆಯ ಅಧ್ಯಾಯವು ಮುಗಿಯಿತು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಸಪ್ತಮೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಮುನಿಃ ಶ್ರೀಶೈಲಮಗಮನ್ನಾನಾಧಾತುಸಮನ್ವಿತಂ ।
ಫಲಪಾದಪಸಂಕೀರ್ಣಂ ಗಿರಿನಿರ್ಝರಶೋಭಿತಂ ॥೧॥

ಕೋಕಿಲಾಕಾಕಲೀರಾವವಿರಾವಿತಗುಹಾಮುಖಂ ।
ಶಿಖಂಡಿತಾಂಡವಾರಾವ ಕ್ಷಿಪ್ತಚಂದ್ರಕಭೂತಲಂ ॥೨॥

ಉತ್ಪುಚ್ಛಚಮರೀಯೂಥೈರ್ವನೇಽಪಿ ಸುರಭಿರ್ಮೃಗೈಃ ।
ಮಾಲೂರಶ್ರೀಪಾದಪಂ ಚ ದದರ್ಶ ಶ್ರೀಗಿರಿಂ ಮುನಿಃ ॥೩॥

---

## ಏಳನೆಯ ಅಧ್ಯಾಯ

ಅಲ್ಲಿಂದ ಮುಂದೆ ಅಗಸ್ತ್ಯಮುನಿಯು ಶ್ರೀಶೈಲಪರ್ವತಕ್ಕೆ ಬಂದನು. ಆ ಶ್ರೀಶೈಲವು ಅನೇಕ ಗೈರಿಕಾದಿ ಧಾತುಗಳಿಂದ ಯುಕ್ತವಾಗಿ, ಹಣ್ಣು ಕಾಯಿಗಳಿಂದ ಶೋಭಿಸುವ ಮರಗಳಿಂದ ಪೂರ್ಣವಾಗಿದ್ದಿತು. ಬೆಟ್ಟದ ಮೇಲಿನಿಂದ ಹರಿಯುವ ಝರಿಗಳು ನಾನಾರೀತಿಯಿಂದ ಶೋಭಿಸುತ್ತಿದ್ದವು. ಕೋಗಿಲೆಗಳು ತಮ್ಮ ಮನೋಹರವಾದ ಮೃದುಧ್ವನಿಗಳಿಂದ ಕೂಗುತ್ತಾ' ಗುಹೆಗಳ ಮುಂಭಾಗದಲ್ಲೆಲ್ಲಾ ಪ್ರತಿಧ್ವನಿ ಗೈಯುತ್ತಿದ್ದವು. ನವಿಲುಗಳು ತಾಂಡವವಾಡುತ್ತಾ (ಜಾಗರ ಮಾಡುತ್ತಾ) ಧ್ವನಿಮಾಡಿಕೊಂಡು ಆಡುತ್ತಿದ್ದಾಗ ಅವುಗಳ ಗರಿಗಳೆಲ್ಲಾ ನೆಲದ ಮೇಲೆ ಬಿದ್ದು ಚಿತ್ರವಿಚಿತ್ರವಾಗಿ ಕಾಣುತ್ತಿದ್ದವು. ||೧-೨||

ಆ ಶ್ರೀಶೈಲಪರ್ವತದ ಕಾಡುಗಳಲ್ಲಿ ದಪ್ಪದಪ್ಪ ಬಾಲಗಳಿಂದ ಶೋಭಿಸುವ ಚಮರೀಮೃಗಗಳು ಗುಂಪುಗುಂಪಾಗಿ ಬಾಲಗಳನ್ನೆತ್ತಿಕೊಂಡು ಓಡಾಡುತ್ತಿದ್ದುವು.

ಶ್ರೀಪರ್ವತೋತ್ತಮಾಂಗಾಂ ತತ್ಕೃಷ್ಣಾಂ ತೃಷ್ಣಾಹತಾಂ ಮುನಿಃ ।
ಸ್ನಾತ್ವಾ ಶ್ರೀಶೈಲಶಿಖರಂ ಸಮಾರುಹ್ಯ ಮುನಿವ್ರಜೈಃ ॥೪॥

ಭಸ್ಮರುದ್ರಾಕ್ಷಧೃಗ್ಭೂತ್ವಾ ಪಂಚಾಕ್ಷರಪರಾಯಣಃ ।
ರುದ್ರಮಾವರ್ತಯನ್ತಸ್ಥೌ ಶ್ರೀಶೈಲೇಶಾರ್ಚನೇ ರತಃ ॥೫॥

ಬಿಲ್ವೈಃ ಫಲೈಸ್ತಥಾ ಪುಷ್ಪೈರ್ಧೂಪೈರ್ದೀಪೈರ್ನಿವೇದನೈಃ ।
ಶ್ರೀಪರ್ವತೇಶಶಿಖರಂ ದೃಷ್ಟ್ವಾನಂದಮವಾಪ್ಯ ಸಃ ॥೬॥

ಸ್ವಜನ್ಮ ಸಫಲಂ ಮೇನೇ ಕುಂಭಜೋ ಮುನಿಭಿಃ ಸಹ ।
ಶ್ರೀಶೈಲೇಶಂ ಸ ತುಷ್ಟಾವ ಭ್ರಮರಾಂಬಾಂ ಮಹಾಮುನಿಃ ॥೭॥

---

ಸುವಾಸನೆಯನ್ನು ಬೀರುವ ಅನೇಕ ಮೃಗಗಳು (ಕಸ್ತೂರೀಮೃಗ ಮತ್ತು ಪುಣುಗಿನ ಬೆಕ್ಕು ಮುಂತಾದವುಗಳು) ಅಲ್ಲಿ ವಾಸವಾಗಿದ್ದುವು. ಅಗಸ್ತ್ಯಮುನಿಯು ಅಲ್ಲಿದ್ದ ಬಿಲ್ವವೃಕ್ಷರಾಜಿಯನ್ನೂ ಈ ಪರ್ವತದಲ್ಲಿರುವ ಮೃಗಪಕ್ಷಿಗಳನ್ನೂ, ತರುರಾಜಿಗಳ ಸಂಪತ್ತನ್ನೂ ನೋಡಿದನು. ಅನಂತರ ಶ್ರೀಶೈಲದ ನೆತ್ತಿಯಮೇಲೆ ಹರಿಯುತ್ತಾ ಸಕಲ ಕ್ಲೇಶಗಳನ್ನೂ ಪರಿಹಾರಮಾಡುವ ಕೃಷ್ಣಾನದಿಯನ್ನು ನೋಡಿ, ಅದರಲ್ಲಿ ಸ್ನಾನಮಾಡಿ, ಇತರ ಮುನಿಗಳ ಗುಂಪಿನೊಡನೆ ಆ ಶ್ರೀಶೈಲಪರ್ವತದ ಶಿಖರಕ್ಕೆ ಬಂದನು. ॥೩-೪॥

ಅನಂತರ ಅಗಸ್ತ್ಯಮುನಿಯು ಭಸ್ಮ ಮತ್ತು ರುದ್ರಾಕ್ಷಗಳನ್ನು ಧರಿಸಿ, ಪಂಚಾಕ್ಷರಮಂತ್ರ ಪರಾಯಣನಾಗಿ, ರುದ್ರಾಧ್ಯಾಯ ಮಂತ್ರವನ್ನು ಆವೃತ್ತಿ ಮಾಡುತ್ತಾ ಶ್ರೀಶೈಲೇಶ್ವರನ ಪೂಜೆಯಲ್ಲಿ ನಿರತನಾದನು. ಬಿಲ್ವಪತ್ರೆ, ಹಣ್ಣು ಕಾಯಿಗಳು, ಹೂವು, ಧೂಪ, ದೀಪ ಮತ್ತು ನೈವೇದ್ಯವೇ ಮುಂತಾದವುಗಳಿಂದ ಆ ಮಹೇಶ್ವರನನ್ನು ಪೂಜೆಮಾಡಿ, ಶ್ರೀಶೈಲೇಶ್ವರನ ದೇವಾಲಯ ಶಿಖರವನ್ನು ನೋಡಿ, ಆ ಅಗಸ್ತ್ಯಮುನಿಯು ಮುನಿಗಳೊಡನೆ ತನ್ನ ಜನ್ಮವು ಇಂದು ಸಫಲ ವಾಯಿತೆಂದು ತಿಳಿದನು. ಪೂಜೆಮಾಡಿದ ನಂತರ ಅಗಸ್ತ್ಯನು ಶ್ರೀಶೈಲೇಶ್ವರನನ್ನೂ ಮತ್ತು ಭ್ರಮರಾಂಬೆಯನ್ನೂ ಈರೀತಿ ಸ್ತೋತ್ರಮಾಡಿದನೆಂದು ಷಣ್ಮುಖನು ಜೈಗೀಷವ್ಯಾದಿಮುನಿಗಳಿಗೆ ತಿಳಿಸಿದನು. ॥೫-೬-೭॥

॥ ಅಗಸ್ತ್ಯ ಉವಾಚ ॥

ಶ್ರೀಶೈಲೇಶ ಮಹೇಶ ಶಂಕರ ವಿಭೋ ವಿಶ್ವೇಶ ವಿಶ್ವಾಧಿಕ
ಸ್ವಾಮಿನ್ಪರ್ವತಸಾರ್ವಭೌಮತನಯಾಜಾನೇ ನ ಜಾನೇಪರಂ ।
ತ್ವತ್ತೋ ವೇದ್ಮಿ ಸುರಾಂತರಂ ಕರುಣಯಾ ಮಾಂ ಪಾಹಿ ಶಂಭೋ ಸದಾ
ಸಾಂಬಸ್ತ್ವಂ ಗಿರಿಜಾಪತೇ ಶಶಿಕಲಾಮೌಲೇ ನಮಸ್ತೇ ನಮಃ ॥೮॥

ಮನ್ಮಾತರ್ಭ್ರಮರಾಂಬಿಕೇ ಸುರಗಣಾರಾಧ್ಯೇ ಮಹೇಶಪ್ರಿಯೇ
ದುರ್ಗೇ ದುರ್ಗತಮಾರ್ತಿನಾಶಕಪದದ್ವಂದ್ವೇ ಸ್ವಭಕ್ತೇಷ್ಟದೇ ।
ಕಾರುಣ್ಯೈಕನಿಕೇತನೇ ಭಗವತಿ ತ್ರ್ಯಕ್ಷೇಂದುಬಿಂಬಾನನೇ
ಚಂದ್ರಾರ್ಧಾಂಕಿತಮಸ್ತಕೇ ತ್ರಿಜಗತಾಮೀಶೇ ನಮಸ್ತೇ ನಮಃ ॥೯॥

---

ಶ್ರೀಶೈಲಸ್ವಾಮಿಯಾದ ಮಹೇಶ್ವರನೇ, ಜಗನ್ಮಂಗಳಕರನಾದ ವಿಭುವೇ, ಜಗದೊಡೆಯನೂ, ಜಗಚ್ಛ್ರೇಷ್ಠನೂ ಆದ ಸ್ವಾಮಿಯೇ, ಪರ್ವತರಾಜಕುಮಾರಿಯಾದ ಪಾರ್ವತಿಯ ರಮಣನೆನಿಸಿದ ಶಂಕರನೇ, ನಿನಗಿಂತಲೂ ಬೇರೆಯ ದೇವತೆಗಳನ್ನಾರನ್ನೂ ಶ್ರೇಷ್ಠರೆಂದು ನಾನು ತಿಳಿಯಲಾರೆನು. ಶಂಭುವೇ, ಗಿರಿಜಾರಮಣನೂ, ಅಂಬಿಕಾ ಸಹಚಾರಿಯೂ, ಚಂದ್ರಕಲಾಧಾರಿಯೂ ಆದ ನಿನಗೆ ಅನೇಕ ನಮಸ್ಕಾರಗಳು. ॥೮॥

ಭ್ರಮರಾಂಬಿಕಾದೇವಿಯೇ, ನೀನೇ ನನ್ನ ಜನನಿ. ದೇವತೆಗಳಿಂದ ಪೂಜ್ಯಳೂ, ಮಹೇಶ್ವರನ ಪ್ರೀತಿಗೆ ಪಾತ್ರಳೂ ಆದ ದುರ್ಗಾದೇವಿಯೂ ನೀನೇ ಆಗಿರುವೆ. ನಿನ್ನ ಪಾದಗಳು ತನಗೆ ನಮಸ್ಕಾರ ಮಾಡುವವರಲ್ಲಿ ಎಂತಹ ಭಯಂಕರ ದುಃಖಗಳಿದ್ದರೂ ಹೋಗಲಾಡಿಸುವುವು. ತನ್ನ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವ ತಾಯಿಯೇ, ನೀನು ಕೇವಲ ದಯಾಮಯಳು; ಷಡ್ಗುಣೈಶ್ವರ್ಯಸಂಪನ್ನಳು; ಮೂರು ಕಣ್ಣುಗಳಿಂದ ವಿರಾಜಿಸುವವಳು; ಚಂದ್ರಬಿಂಬದಂತೆ ಸುಂದರವೂ, ವರ್ತುಲವೂ ಆದ ಮುಖವುಳ್ಳವಳು; ದೇವಿಯೇ, ನೀನು ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವೆ; ಅಲ್ಲದೇ ಮೂರು ಲೋಕಗಳಿಗೂ ಒಡೆಯಳಾಗಿರುವೆ. ಜಗನ್ಮಾತೆಯೇ, ನಿನಗೆ ನಮಸ್ಕಾರ ಮಾಡುತ್ತೇನೆ. ॥೯॥

ಸಂಸ್ತುತ್ಯೈವಂ ಮುನಿಶ್ರೇಷ್ಠಃ ಶ್ರೀಶೈಲೇಶಂ ಮಹೇಶ್ವರಂ ।
ಭ್ರಮರಾಂಬಾಮಪಿ ಮುದಾ ಶಿಖರೇಶೇಶಮಸ್ತಕೇ ॥೧೦॥

ಸಂಪೂಜ್ಯ ಬಿಲ್ವೈಃ ಕುಸುಮೈಃ ಕುಸುಮೇಷು ರಿಪುಂ ಹರಂ ।
ಘಂಟಾಕರ್ಣೇಶ್ವರಂ ಚಾಪಿ ದೃಷ್ಟ್ವಾ ನತ್ವಾ ಸ ಕುಂಭಜಃ ॥೧೧॥

ಹೇ ದೇವದೇವ ಶಿಖರೇಶ್ವರ ಶೈಲವಾಸ
ಖ್ಯಾತಃ ಶ್ರುತೌ ಗಿರಿಶ ಇತ್ಯಪಿ ಚಂದ್ರಮೌಳೇ ।
ದೇವ ತ್ವಮೇವ ಭುವನೇಶ್ವರ ವಿಶ್ವಮೂರ್ತೇ
ಗೌರೀಪತೇ ಗುರು ಹರಾಘಭರಂ ಹರಸ್ವ ॥೧೨॥

ಹೇ ಘಂಟಾಕರ್ಣ ಶಂಭೋ ಶಶಧರಮಕುಟಾಲಂಕೃತ ಸ್ವೋತ್ತಮಾಂಗ
ಹೇ ಗಂಗಾಧರ ಸರ್ಪಭೂಷ ಕ್ಷಿತಿರಥ ನಿಗಮಾಸ್ವಾಂತ ಸಂವೇದ್ಯಮೂರ್ತೇ।

---

ಮುನಿಶ್ರೇಷ್ಠನಾದ ಅಗಸ್ತ್ಯಮುನಿಯು ಹೀಗೆ, ಶ್ರೀಶೈಲೇಶ್ವರನಾದ ಮಹೇಶ್ವರ, ಭ್ರಮರಾಂಬಿಕೆ ಇವರಿಬ್ಬರನ್ನೂ ಸ್ತೋತ್ರಮಾಡಿ, ಅನಂತರ ಶ್ರೀಶೈಲದ ಶಿಖರದಲ್ಲಿ ನೆಲಸಿರುವ ಶಿಖರೇಶ್ವರನನ್ನೂ, ಮನ್ಮಥಶತ್ರುವಾದ ಘಂಟಾಕರ್ಣೇಶ್ವರನನ್ನೂ, ಬಿಲ್ವದಳ ಮತ್ತು ಹೂಗಳಿಂದ ಪೂಜಿಸಿ, ನಮಸ್ಕರಿಸಿದ ನಂತರ ಹೀಗೆ ಸ್ತೋತ್ರಮಾಡಿದನು. ॥೧೦-೧೧॥

ಎಲೈ ದೇವದೇವನಾದ ಶಿಖರೇಶ್ವರಸ್ವಾಮಿಯೇ, ಪರ್ವತವಾಸಿಯಾದ ನೀನು ವೇದದಲ್ಲಿ 'ಗಿರಿಶ' (ಯಾವಾಗಲೂ ಬೆಟ್ಟದಲ್ಲಿಯೇ ನೆಲಸಿರುವನೆಂದು) ಪ್ರಸಿದ್ಧಿ ಪಡೆದಿರುವೆ. ಚಂದ್ರಮೌಳಿಯಾದ ಸ್ವಾಮಿಯೇ, ಸಕಲ ಲೋಕಗಳಿಗೂ ಸ್ವಾಮಿಯಾದ ನೀನು ಜಗತ್ಸ್ವರೂಪನಾಗಿರುವೆ. ಜಗತ್ತೆಲ್ಲವೂ ನಿನ್ನ ರೂಪವೇ ಆಗಿರುವುದರಿಂದ ಎಲ್ಲರ ಮೂರ್ತಿಯೂ ನೀನೇ ಆಗಿ ವಿಶ್ವಮೂರ್ತಿಯೆಂಬ ಹೆಸರು ನಿನಗೆ ಸಂದಿರುವುದು. ಗೌರೀರಮಣನಾದ ಎಲೈ ಶಂಕರನೇ, ಸದ್ಗುರುವೂ, ಪಾಪನಾಶಕನಾಗಿ ಹರನೆಂಬ ಹೆಸರಿನಿಂದ ಪ್ರಖ್ಯಾತನಾಗಿರುವವನೂ ಆದ ನೀನು ನಮ್ಮ ಪಾಪರಾಶಿಯನ್ನೆಲ್ಲಾ ನಾಶಮಾಡು. ॥೧೨॥

ಎಲೈ ಘಂಟಾಕರ್ಣಸಂಜ್ಞಕನಾದ ಶಂಭುವೇ, ಚಂದ್ರನೆಂಬ ಕಿರೀಟದಿಂದ ಅಲಂಕರಿಸಲ್ಪಟ್ಟ ತಲೆಯುಳ್ಳವನೂ, ಗಂಗೆಯನ್ನೇ ಜಡೆಯಲ್ಲಿ ಧರಿಸಿರುವವನೂ ಆದಿಶೇಷನನ್ನು ಆಭರಣವನ್ನಾಗಿ ಮಾಡಿಕೊಂಡಿರುವವನೂ ಆದ ನೀನು ತ್ರಿಪುರ

ಪಾಪಧ್ವಾಂತನಿವಾರಣಾರ್ಕ ಭಗವನ್ ಶಂಭೋ ಪ್ರಸೀದಸ್ವ ಮೇ
ತ್ವತ್ಪಾದಾರ್ಚಕಮಾದರಾದ್ಧರ ವಿಭೋ ತ್ವಂ ರಕ್ಷ ರಕ್ಷಾಧುನಾ ॥೧೩॥

ಶ್ರೀಶೈಲಶಿಖರೇ ಮಾಸಮುವಾಸ ಶಿವವೀಕ್ಷಕಃ ।
ಭ್ರಮರಾಂಬಾಂ ನಮಸ್ಕೃತ್ಯ ಶಿಖರೇಶ್ವರಮರ್ಚಯನ್ ॥೧೪॥

ಘಂಟಾಕರ್ಣಹ್ರದೇ ಸ್ನಾತ್ವಾ ಘಂಟಾಕರ್ಣೇಶ್ವರಾರ್ಚಕಃ ।
ಶ್ರೀಮಲ್ಲಿಕಾರ್ಜುನೇಶಾನಮರ್ಚನ್ಬಿಲ್ವೈಃ ಸದಾ ಮುನಿಃ ॥೧೫॥

ಮಾಸಮುಷ್ಯ ತತೋಽಭ್ಯಾಗಾತ್ತ್ರ್ಯಂಬಕಂ ಗೌತಮೀತಟೇ ।
ಗೋದಾವರ್ಯಾಂ ತತಃ ಸ್ನಾತ್ವಾ ಮಾಸಂ ಸಿಂಹೇ ಬೃಹಸ್ಪತೌ ॥೧೬॥

ಗೋದಾವರೀಜಲೇ ಸ್ನಾತ್ವಾ ತ್ರ್ಯಂಬಕೇಶಂ ಸುಮೈಃ ಫಲೈಃ ।
ತ್ರಿಕಾಲಮರ್ಚಯನ್ಮಾಸಮುವಾಸ ಘಟಜೋ ಮುನಿಃ ॥೧೭॥

---

ಸಂಹಾರಕಾಲದಲ್ಲಿ ಭೂಮಿಯನ್ನೇ ತೇರನ್ನಾಗಿ ಮಾಡಿಕೊಂಡಿರುವೆ. ಎಲೈ ವೇದಾಂತ ಪ್ರತಿಪಾದ್ಯವಾದ ಮೂರ್ತಿಯುಳ್ಳ ಸ್ವಾಮಿಯೇ, ಪಾಪವೆಂಬ ಅಂಧಕಾರವನ್ನು ಹೊಡೆದೋಡಿಸುವುದರಲ್ಲಿ ನೀನು ಸೂರ್ಯನಂತಿರುವೆ; ಭಗವಂತನಾದ ಶಂಭುವೇ, ನನ್ನ ವಿಷಯದಲ್ಲಿ ಪ್ರಸನ್ನನಾಗು : ಸರ್ವವ್ಯಾಪಕನಾದ ಎಲೈ ಸ್ವಾಮಿಯೇ, ನಿನ್ನ ಪಾದಪೂಜೆಮಾಡುವ ನನ್ನನ್ನು ಉದ್ಧಾರಮಾಡಿ ರಕ್ಷಿಸು, ಸ್ವಾಮಿ ; ॥೧೩॥

ಅಗಸ್ತ್ಯಮುನಿಯು ಶ್ರೀಶೈಲಪರ್ವತದ ಶಿಖರದಲ್ಲಿದ್ದ ಶಿವಲಿಂಗವನ್ನು ದರ್ಶನಮಾಡುತ್ತಾ ಒಂದು ತಿಂಗಳಕಾಲ ವಾಸಮಾಡಿದನು. ಆ ಕಾಲದಲ್ಲಿ ಭ್ರಮರಾಂಬಿಕೆಯನ್ನೂ ಶಿಖರೇಶ್ವರನನ್ನೂ ನಮಸ್ಕರಿಸಿ ಪೂಜೆಮಾಡುತ್ತಾ ಘಂಟಾಕರ್ಣ ಮಡುವಿನಲ್ಲಿ ಸ್ನಾನಮಾಡಿ ಘಂಟಾಕರ್ಣೇಶ್ವರನನ್ನೂ ತಪ್ಪದೆ ಆರಾಧಿಸುತ್ತಿದ್ದನು. ಹಾಗೆಯೇ ಯಾವಾಗಲೂ ಬಿಲ್ವದಳಗಳಿಂದ ಅಗಸ್ತ್ಯಮುನಿಯು ಮಲ್ಲಿಕಾರ್ಜುನೇಶ್ವರನನ್ನೂ ಪೂಜೆಮಾಡುತ್ತಾ ಅಲ್ಲಿ ಒಂದುತಿಂಗಳಕಾಲ ವಾಸಮಾಡಿ ಅಲ್ಲಿಂದ ಹೊರಟು, ಗೌತಮೀನದಿಯ ದಡದಲ್ಲಿರುವ ತ್ರ್ಯಂಬಕಕ್ಷೇತ್ರಕ್ಕೆ ಬಂದನು. ‘ಗುರುವು ಸಿಂಹರಾಶಿಯಲ್ಲಿದ್ದಾಗ’ ಆ ಗೋದಾವರೀ ನದಿಯಲ್ಲಿ ಸ್ನಾನಮಾಡಿ, ಅಲ್ಲಿದ್ದ ತ್ರ್ಯಂಬಕೇಶನಿಗೆ ಆ ನದಿಯ ನೀರಿನಿಂದಲೇ ಅಭಿಷೇಕಮಾಡಿದನಂತರ ಹೂವು ಮತ್ತು ಹಣ್ಣುಗಳಿಂದ, ಬೆಳಗ್ಗೆ ಮಧ್ಯಾಹ್ನ ಮತ್ತು ಸಾಯಂಕಾಲಗಳೆಂಬ ಮೂರು

ತುಷ್ಟಾವ ವರದಂ ದೇವಂ ಮೌನೀವ ಪ್ರಾಂಜಲಿಸ್ತದಾ ॥೧೮॥

॥ ಮುನಿರುವಾಚ ॥

ಶ್ರೀಮತ್ತ್ರ್ಯಂಬಕ ಅಂಬಿಕಾಸಖ ವಿಭೋ ಭರ್ಗಾಹಿಭೂಷಾನತ
ದೇವೇಂದ್ರಾದಿಸುರಾಸುರಾ ನರವರಾಃ ಶಂಭೋ ಮುನಿನಾಂ ಗಣಾಃ ।
ತ್ವನ್ಮೌಲ್ಯುತ್ಥಿತಪೂತಗೌತಮಿಜಲೈಃ ಸ್ನಾತ್ವಾ ಹರಿಸ್ಥೇ ಗುರೌ
ಯಾಂತ್ಯೇವಾಕ್ಷಯ ಪಾಪವರ್ಜಿತ ನಮೋ ಲೋಕಾಸ್ತ್ವದಾಲೋಕಿನಃ ॥೧೯

ಇತ್ಯುಕ್ತ್ವಾ ನಿರ್ಗತೋ ವಿಪ್ರೋ ಗೋಕರ್ಣಂ ಪಶ್ಚಿಮಾಬ್ಧಿಗಂ ।
ತರಂಗಮಾಲಾಕಲಿತಂ ಮಹಾದೇವಮೃಷಿಂಗಣಂ ॥೨೦॥

ಮಹಾಬಲೇಶಂ ಮಾಘೇ ತು ಶಿವರಾತ್ರ್ಯಾಂ ಸಮರ್ಚಯನ್ ।
ಬಿಲ್ವೈಃ ಪದ್ಮೈಶ್ಚತುರ್ಯಾಮ್ಯಂ ವಿಶ್ವಾಧಿಕಮುಮಾಸಖಂ ॥೨೧॥

---

ಹೊತ್ತಿನಲ್ಲಿಯೂ ಅಗಸ್ತ್ಯಮುನಿಯು ವಿಧಿವತ್ತಾಗಿ ಪೂಜಿಸುತ್ತಾ ಕೈಮುಗಿದು ಕೊಂಡು, ಮೌನದಿಂದ ವರಪ್ರದನಾದ ಆ ದೇವನನ್ನು ಆಗಾಗ ಹೀಗೆ ಸ್ತೋತ್ರ ಮಾಡುತ್ತಿದ್ದನು. ||೧೪-೧೫-೧೬-೧೭-೧೮||

ಅಂಬಿಕಾಸಹಚಾರಿಣಿಯಾದ ಶ್ರೀತ್ರ್ಯಂಬಕೇಶನೇ, ಸರ್ವಸಮರ್ಥನಾದ ನೀನು, ಪ್ರಳಯಕಾಲದಲ್ಲಿ ಸಕಲ ಪ್ರಾಣಿಗಳನ್ನೂ ನಾಶಮಾಡುವವನು (ಭರ್ಗನು) ಸರ್ಪಭೂಷಣನಾದ ನಿನಗೆ ದೇವೇಂದ್ರನೇ ಮೊದಲಾದ ದೇವತೆಗಳೂ, ರಾಕ್ಷಸರೂ, ಮಾನವಶ್ರೇಷ್ಠರೂ ಮತ್ತು ಮುನಿಗಳ ಸಮೂಹವೂ ಸಹ ಅನವರತವೂ ನಮಸ್ಕರಿಸುವರು. ಎಲೈ ಶಂಭುವೇ, ನಿನ್ನ ಶಿಖರದಲ್ಲಿ ಹುಟ್ಟಿದ ಪವಿತ್ರವಾದ ಗೌತಮೀ ನದಿಯ ಜಲದಲ್ಲಿ ಗುರುವು ಸಿಂಹರಾಶಿಯಲ್ಲಿದ್ದಾಗ ಸ್ನಾನಮಾಡಿದ ಮಾನವರು ತಮ್ಮ ಶರೀರದ ಪಾಪಗಳನ್ನೆಲ್ಲಾ ಕಳೆದುಕೊಂಡು, ನಿನ್ನ ದಿವ್ಯಸಂದರ್ಶನದಿಂದ ನಾಶರಹಿತವಾದ ನಿನ್ನ ಸಾರೂಪ್ಯವನ್ನು ಪಡೆಯುವರು. ||೧೯||

ಹೀಗೆ ತ್ರ್ಯಂಬಕೇಶನನ್ನು ಸ್ತೋತ್ರಮಾಡಿ, ಅಗಸ್ತ್ಯಮುನಿಯು ಪಶ್ಚಿಮ ಸಮುದ್ರದ ದಡದಲ್ಲಿ ಅಲೆಗಳ ಸಮೂಹದಿಂದ ಯುಕ್ತವಾಗಿರುವ ಗೋಕರ್ಣ ಕ್ಷೇತ್ರಕ್ಕೆ ಬಂದು, ಅನೇಕ ಋಷಿಗಳ ಗುಂಪಿನಿಂದ ಕೂಡಿ ಶೋಭಿಸುತ್ತಿರುವ ಮಹಾಬಲೇಶ್ವರನನ್ನು ಕಂಡು, ಮಾಘಮಾಸದ ಶಿವರಾತ್ರಿಯ ದಿನ ರಾತ್ರಿಯ

ಗೋಕರ್ಣಂ ತೂರ್ಣಫಲದಂ ಸಂಪೂರ್ಣಪ್ರದಮುತ್ತಮಂ ।
ತುಷ್ಟಾವ ಕಲಶಾಜ್ಜಾತೋ ಮುನಿಭಿಸ್ತತ್ರ ಸಂಸ್ಥಿತೈಃ ॥೨೨॥

॥ ಘಟಜ ಉವಾಚ ॥

ಶ್ರೀಮನ್ಮಹಾಬಲ ಮಹೇಶ ಪಿನಾಕಪಾಣೇ
ಬಾಣಾಸುರಾರಾಧಿತ ಪಾದ ಶಂಭೋ ।
ಸ್ವಾಮಿನ್ಬಲಪ್ರಮಥನ ಪ್ರಮಥಾಧಿನಾಥ
ಗೌರೀಶನಾಥ ಪರಿಪಾಲಯ ದೇಹಿ ಭಕ್ತಿಂ ॥೨೩॥

ಗೋಕರ್ಣಾರ್ಣವಸಂಸ್ಥ ಪೂರ್ಣಫಲದಸ್ತ್ವಂ ಸನ್ನೃಣಾಂ ಸಿದ್ಧಿದ
ಅಭ್ಯರ್ಣಂ ಭಜತಸ್ತವಾಂಘ್ರಿಯುಗಲಂ ಸೌವರ್ಣವರ್ಣಂ ವಿಭೋ ।
ದಿಕ್ತಸ್ಯೇವ ಮಹಾಘದಾರಚರಣಂ ಪುಣ್ಯಂ ಪ್ರಸೀದಸ್ವ ಮೇ
ಭಾವಾನಾಂ ಭವಸಕ್ತಿಭಂಜನಪರಸ್ತ್ವಂ ದೇವದೇವೋನ್ನತ ॥೨೪॥

---

ನಾಲ್ಕು ಜಾವಗಳಲ್ಲಿಯೂ, ಜಗಚ್ಛ್ರೇಷ್ಠನೂ, ಉಮಾಸಹಚರನೂ ಆದ ಆ ಮಹಾಬಲೇಶ್ವರನನ್ನು ಬಿಲ್ವಪತ್ರೆ, ತಾವರೆಹೂ ಇವೇ ಮೊದಲಾದವುಗಳಿಂದ ಪೂಜೆಮಾಡಿದನು. ಹೀಗೆ ಪೂಜೆಯಾದ ಮೇಲೆ ಶೀಘ್ರವಾಗಿ ಪೂಜಾಫಲವನ್ನು ಕೊಡುವ, ಸಂಪೂರ್ಣವಾಗಿ ಕೇಳಿದುದನ್ನೆಲ್ಲಾ ತನ್ನ ಭಕ್ತರಿಗೆ ಸಲ್ಲಿಸುವ, ಆ ಗೋಕರ್ಣೇಶ್ವರನನ್ನು ಅಲ್ಲಿದ್ದ ಮುನಿಗಣಗಳೊಡನೆ ಅಗಸ್ತ್ಯಮುನಿಯು ಸ್ತೋತ್ರ ಮಾಡಿದನು. ॥೨೦-೨೧-೨೨॥

ಕಾಂತಿಯುಕ್ತನಾದ ಮಹಾಬಲೇಶ್ವರನೇ, ಮಹದೈಶ್ವರ್ಯಸಂಪನ್ನನೂ ಪಿನಾಕವೆಂಬ ಬಿಲ್ಲನ್ನು ಹಿಡಿದಿರುವವನೂ ಆದ ನೀನು ಬಾಣನೆಂಬ ರಾಕ್ಷಸನಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನಾಗಿರುವೆ. ಜಗನ್ಮಂಗಳಕರನಾದ ಸ್ವಾಮಿಯೇ, ಬಲಶಾಲಿಗಳೆಂದು ಹೆಮ್ಮೆಪಡುವವರ ಗರ್ವವನ್ನೆಲ್ಲಾ ಅಡಗಿಸಿ, ಪ್ರಮಥಗಣಗಳಿಗೆಲ್ಲಾ ಸ್ವಾಮಿಯಾಗಿರುವ ಗೌರೀಕಾಂತನಾದ ನೀನು, ನನಗೆ ಯಾವಾಗಲೂ ನಿನ್ನಲ್ಲಿ ಭಕ್ತಿಯುಂಟಾಗುವಂತೆ ಕರುಣಿಸಿ ಕಾಪಾಡುವನಾಗು. ॥೨೩॥

ಸಮುದ್ರತೀರದಲ್ಲಿರುವ ಎಲೈ ಗೋಕರ್ಣಕ್ಷೇತ್ರವೇ, ನಿನ್ನಲ್ಲಿಗೆ ಬರುವ ಮನುಜವರ್ಯರಿಗೆ ನೀನು ಸಂಪೂರ್ಣಫಲವನ್ನೂ ಪೂರ್ಣ ಸಿದ್ಧಿಯನ್ನೂ ಉಂಟು ಮಾಡುತ್ತಿರುವೆ. ನಿನ್ನ ಸಮೀಪದಲ್ಲಿ ಕುಳಿತು ಸುವರ್ಣದಂತೆ ಬಣ್ಣವುಳ್ಳ ನಿನ್ನ

ಇತ್ಯುಕ್ತ್ವಾ ಮಹಾನಮೌಲಿಂ ವಿಶತಿ ಸ್ವಾಂತರಾಶಾಂತಭಾಸಂ ಕಾಂ
ತಾರ್ಧಾಕೃತಿಲಿಂಗಮಷ್ಟತನವೋ ಭೂಲಾಮಲೆಕ್ಯೇ(?)ಸ್ಥಿತಂ ।
ದೃಷ್ಟ್ವಾ ಪ್ರಾಣದಮಂಬಿಕಾಯುತಮಹಾಸಹ್ಯೇಶ್ವರಂ ತತ್ರಹಿ
ದುಃಸಂಘಾಖಿಲಪಾತಕಾದಿನಿವಹಂ ಸಂತರ್ಜಕಂ ಭರ್ಜಕಂ ।
ಸಂಸಾರಸ್ಯ ಭವಾಂತಕಂ ಪ್ರಣಮತಾಮಿಷ್ಟಾರ್ಥಸಿದ್ಧಿಪ್ರದಂ ॥೨೫॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉಗ್ರಾಖ್ಯೇ ಉತ್ತರಭಾಗೇ
ಶ್ರೀಶೈಲತ್ರ್ಯಂಬಕಗೋಕರ್ಣಾಗಸ್ತ್ಯಯಾತ್ರಾವರ್ಣನಂ ನಾಮ
ಸಪ್ತಮೋಽಧ್ಯಾಯಃ

---

ಪಾದಗಳೆರಡನ್ನೂ ಧ್ಯಾನಮಾಡುವ ಮಾನವನಿಗೆ ನೀನು ಮಾರ್ಗದರ್ಶಕನಾಗಿರುವೆ. ನಿನ್ನ ಪಾದಗಳು ಮಹಾಪಾಪಗಳನ್ನೂ ನಾಶಮಾಡುವುವಲ್ಲದೇ ಪುಣ್ಯಕರವೂ ಆಗಿರುವುವು. ಎಲೈ ಪುಣ್ಯಪುರುಷನೇ, ದೇವತಾಸಾರ್ವಭೌಮನಾದ ನೀನು ನಿನ್ನ ಭಕ್ತರಿಗೆ ಈ ಸಂಸಾರದಲ್ಲಿ ಆಸಕ್ತಿಯುಂಟಾಗದಂತೆ ಶಾಶ್ವತವಾದ ಮೋಕ್ಷವನ್ನು ಕರುಣಿಸುವುದರಲ್ಲಿ ಸಮರ್ಥನೆನಿಸಿರುವೆ. ದೇವದೇವನೇ, ನನ್ನಲ್ಲಿ ಅನುಗ್ರಹಮಾಡು. ॥೨೪॥

ಆಗಸ್ತ್ಯಮುನಿಯು ದೊಡ್ಡ ಶಿಖರಗಳಿಂದ ವಿರಾಜಿಸುವ ಸಹ್ಯಾದ್ರಿಯನ್ನು ಏರಿ, ಆ ಪರ್ವತದ ಮಧ್ಯಭಾಗದಲ್ಲಿರುವ ಪೃಥಿವಿ, ಅಪ್, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನರೂಪವಾದ ಎಂಟು ಶರೀರಗಳಿಂದ ಯುಕ್ತನಾದ ಅರ್ಧನಾರೀಶ್ವರನನ್ನು ದರ್ಶನಮಾಡಿದನು. ಅನಂತರ ಅಂಬಿಕಾ ರಮಣನಾಗಿ ದುಸ್ಸಹವಾದ ಸಕಲ ಪಾಪರಾಶಿಗಳನ್ನೂ ನಾಶಮಾಡಿ, ಪುನಃ ಈ ಸಂಸಾರಬಂಧನವೇ ಉಂಟಾಗದಂತೆ ಮಾಡುತ್ತಾ, ತನಗೆ ನಮಸ್ಕಾರಮಾಡುವ ಭಕ್ತರ ಇಷ್ಟಾರ್ಥಗಳನ್ನೆಲ್ಲಾ ತಪ್ಪದೇ ಈಡೇರಿಸುವಂತಹ ಸಹ್ಯಾಚಲೇಶ್ವರನಿಗೆ ನಮಸ್ಕಾರಪೂರ್ವಕವಾಗಿ ಪೂಜೆಯನ್ನು ಸಲ್ಲಿಸಿದನು. ॥೨೫॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶ್ರೀಶೈಲ, ತ್ರ್ಯಂಬಕ
ಮತ್ತು ಗೋಕರ್ಣಕ್ಷೇತ್ರಗಳಿಗೆ ಅಗಸ್ತ್ಯಮುನಿಯ ಯಾತ್ರಾವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಅಷ್ಟಮೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

**ಸಹ್ಯಮೌಲಿಂ ದದರ್ಶಾಸೌ ನಾನಾದ್ರುಮಲತಾಯುತಂ ।**
**ಮಾಲೈಸ್ತಾಲೈಸ್ತಮಾಲೈಶ್ಚ ಪಿಪ್ಪಲೈರ್ವಟಭೂರುಹೈಃ ॥೧॥**

**ಕುಟಜೈಶ್ಚ ಧನ್ವೈರ್ಬಿಲ್ವೈರ್ಮಧೂಕಾಮಲಕೈರಪಿ ।**
**ಪಲಾಶೈಃ ಕರ್ಣಿಕಾರೈಶ್ಚ ವಿಭೀತಕಹರೀತಕೈಃ ॥೨॥**

**ಶಿಂಶುಪಾಮಲಕೈರ್ಭದ್ರೈರ್ಯವೈರ್ವಂಶೈಶ್ಚ ವಾರಣೈಃ ।**
**ಕಪಿತ್ಥತಿಂತ್ರಿಣೀಜಂಬುನಿಂಬೈಃ ಸರ್ಜಾರ್ಜುನೈರಪಿ ॥೩॥**

---

## ಎಂಟನೆಯ ಅಧ್ಯಾಯ

ಕುಮಾರಸ್ವಾಮಿಯು ಅಗಸ್ತ್ಯಮುನಿಯ ಪ್ರಯಾಣವನ್ನೂ, ಮಧ್ಯೆ ದೊರೆಯುವ ಕ್ಷೇತ್ರಗಳ ವರ್ಣನೆಯನ್ನೂ ಜೈಗೀಷವ್ಯಾದಿಗಳಿಗೆ ಈ ರೀತಿ ವಿವರಿಸಿದನು. ಅಗಸ್ತ್ಯಮುನಿಯು ಅನೇಕ ಮರಬಳ್ಳಿಗಳಿಂದ ವ್ಯಾಪ್ತವಾಗಿರುವ ಸಹ್ಯಪರ್ವತದ ಶಿಖರಪ್ರದೇಶವನ್ನು ನೋಡಿದನು. ಆ ಪರ್ವತದಲ್ಲಿ ಮಾಲ, ತಾಳೆ, ಹೊಂಗೆ, ಹಿಪ್ಪಲಿ, ಆಲ, ಗಿರಿಮಲ್ಲಿಗೆ, ಮತ್ತೀ, ಬಿಲ್ವ, ಹಿಪ್ಪೆ, ನೆಲ್ಲೀ, ಮುತ್ತುಗ, ಕಣಿಗಲೆ, ಕಾರೇ, ಅಳಲೇ, ಅಶೋಕ, ಬೆಟ್ಟದನೆಲ್ಲಿ, ದೇವದಾರು, ಯವ, ಬಿದಿರು, ವಾರಣ, ಬೇಲ, ಹುಣಿಸೆ, ನೇರಳೆ, ಬೇವು, ಸರ್ಜ, ಅರ್ಜುನ, (ಕೆಂಪುಮತ್ತೀ) ಕದಂಬ, (ಕಡಹದ ಮರ ಈಚಲು ಜಾತಿಯಲ್ಲಿ ಶ್ರೇಷ್ಠವಾದುದು) ಈಚಲು, ಬಕುಲ, ಕೊಡಶೀ, ಕಿರುನೆಲ್ಲಿ, ನವಣೆ, ಸುರಹೊನ್ನೇ, ನಾಗಸಂಪಿಗೆ, ಅಡಿಕೆ,

ಕದಂಬೈರ್ನೀಪಬಕುಲೈರ್ಲೋಧ್ರೈಶ್ಚೈವಪ್ರಿಯಂಗುಭಿಃ ।
ಪುನ್ನಾಗನಾಗಪೂರ್ವೈಶ್ಚ ನಾರಿಕೇಲಕದಂಬಕೈಃ ॥೪॥

ಪೂಗೈಶ್ಚೈವ ಫಲಾನಮ್ರೈರಾಮ್ರೈಃ ಪುಷ್ಪಫಲೈರ್ಯುತೈಃ ।
ಕುಂದವಲ್ಲೀ ಯುತಾಪಾರಪೂಗವಲ್ಲೀ ಮರೀಚಿಕೈಃ ॥೫॥

ನಾಗವಲ್ಲೀವಲ್ಲಿತಾಚ್ಛದ್ರುಮಭಾರೈಃ ಫಲೈಃ ಸುಮೈಃ ।
ಗುಚ್ಛಗಚ್ಛದಲಿವ್ರಾತೈಃ ರುವತ್ಸಚ್ಛಿಲ್ಲಿಕಾಗಣೈಃ ॥೬॥

ಪದ್ಮೋತ್ಪಲೈಃ ಸಕಲ್ಹಾರೈಃ ಕುಮುದೈರ್ಭ್ರಮರಾಕುಲೈಃ ।
ಸರೋಭಿಃ ಸಚ್ಛಕೀಲಾರೈರ್ಮಲ್ಲೀಮಲ್ಲಾನುಜಾತಿಭಿಃ ॥೭॥

ವೇಣುಕ್ರೇಂಕಾರಾಗುರುಜಧೂಮಾಮೋದಿ ದಿಗಂತರೈಃ ।
ಕೂಜತ್ಕೋಕಿಲದಾತ್ಯೂಹಸಕಾರಂಡವಕೋಮಲೈಃ ॥೮॥

---

ತೆಂಗು, ಕದಂಬ ಮೊದಲಾದ ಗಿಡಮರಗಳೂ, ಹಣ್ಣುಗಳಿಂದ ಬಾಗಿರುವ ಅಡಿಕೆ, ಮಾವು ಮುಂತಾದ ಮರಗಳೂ, ಹೂವು ಹಣ್ಣುಗಳಿಂದ ಭರಿತಗಳಾದ ಇನ್ನೂ ಅನೇಕ ವೃಕ್ಷಗಳೂ, ಮಲ್ಲಿಗೆ, ಮಲ್ಲೆ, ಪೂಗವಲ್ಲೀ, ಮೆಣಸು, ವೀಳೇದೆಲೆ ಮುಂತಾದ ಬಳ್ಳಿಗಳೂ, ಹಣ್ಣುಹಂಪಲು ಮತ್ತು ಹೂಗಳಿಂದ ಕಂಗೊಳಿಸುವ ಮರಗಳೂ, ಚಿತ್ರವಿಚಿತ್ರವಾಗಿ ವಿರಾಜಿಸುತ್ತಿದ್ದುವು. ಹೂವುಗಳ ಪರಿಮಳವನ್ನಾಘ್ರಾಣಿಸಲು ದುಂಬಿಗಳು ಗುಂಪುಗುಂಪಾಗಿ ಎಲ್ಲೆಡೆಯಲ್ಲಿಯೂ ಮೊರೆಯುತ್ತಿದ್ದವು. ಝೇಂಕಾರಮಾಡುವ ಹುಳುಗಳು ಗಂಭೀರವಾಗಿ ಗುಂಪುಗಟ್ಟಿಕೊಂಡು ಕೂಗುತ್ತಿದ್ದವು. ತಾವರೆ, ನೈದಿಲೆ, ಕಲ್ಹಾರ, ಕನ್ನೈದಿಲೆ ಮುಂತಾದ ಹೂಗಿಡಗಳಲ್ಲಿ ಬಿಟ್ಟಿರುವ ಹೂವುಗಳಿಗೆ ದುಂಬಿಗಳು ಮುತ್ತಿಕೊಂಡಿರುವುವು. ಈ ಹೂಗಿಡಗಳು ಸ್ವಚ್ಛವಾದ ನೀರಿನಿಂದ ಯುಕ್ತವಾಗಿ ಮಲ್ಲಿಗೆ, ಮಲ್ಲೆ, ಜಾಜಿ, ಮುಂತಾದ ಹೂಬಳ್ಳಿಗಳಿಂದ ವ್ಯಾಪಿಸಿರುವ ಕೊಳಗಳು (ಸರೋವರಗಳು) ರಮಣೀಯವಾಗಿ ಕಂಗೊಳಿಸುತ್ತಿದ್ದುವು. ||೧-೨-೩-೪-೫-೬-೭||

ಬಿದುರುಗಳು ಪರಸ್ಪರ ಕ್ರೇಂಕಾರಧ್ವನಿಯಿಂದ ತಿಕ್ಕಾಡಿ, ಅದರಿಂದುಂಟಾದ ಬೆಂಕಿಯು ಚಂದನವೃಕ್ಷಗಳಿಗೆ ಬಿದ್ದು ಅವುಗಳ ಹೊಗೆಯು ಎಲ್ಲಾ ದಿಕ್ಕುಗಳನ್ನೂ ಸುವಾಸನೆಯುಳ್ಳದ್ದನ್ನಾಗಿ ಮಾಡುತ್ತಿರುವುದು. ಕೋಗಿಲೆಗಳು ಇಂಪಾಗಿ

ಶಿಖಂಡಿತಾಂಡವಾರಾವಮತ್ತವಾರಣಬೃಂಹಿತೈಃ ।
ಸಾರಂಗಶಶಮಾತಂಗಚಮರೈಃ ಸೃಮರೈರಪಿ ॥೯॥

ವನಗೋಗಣಕೋಲೈಶ್ಚ ಫಣೀಫಣಜಫೂತ್ಕೃತೈಃ ।
ಸಿದ್ಧವಿದ್ಯಾಧರವರಗಂಧರ್ವಗಣಸೇವಿತಂ ॥೧೦॥

ಮೃದಂಗಮುರಜಾರಾವವೇಣುವೀಣಾವಿರಾವಿತಂ ।
ಅಪ್ಸರೋಗಣಕಿಂಪೂರ್ಷಸ್ತ್ರೈಣತ್ರಾಣಶಿಲಾತಲಂ ॥೧೧॥

ಕುಸುಮಾಮೋದಸುಭಗಂ ವಸಮಾರುತಸೇವಿತಂ ।
ಪ್ರತ್ಯಗ್ರಕೇತಕೀರಜಃ ಪುಲಿನೀಭೂತಮಸ್ತಕಂ ॥೧೨॥

---

ಧ್ವನಿಮಾಡುತ್ತಿರುವುವು. ಕಾಲಕಂಟಕ ಮತ್ತು ಕಾರಂಡವವೆಂಬ ನೀರುಪಕ್ಷಿಗಳು ಮನೋಹರವಾಗಿ ಕೂಗುತ್ತಿರುವುವು. ನವಿಲುಗಳು ತಮ್ಮ ಕೇಕಾನಾದಗಳೊಡನೆ ಜಾಗರವಾಡುತ್ತಿರುವುವು. ಮದಿಸಿದ ಆನೆಗಳು ನಾದಮಾಡುತ್ತಾ (ಘರ್ಜನೆ ಮಾಡುತ್ತಾ) ತಿರುಗಾಡುತ್ತಿರುವುವು. ಸಾರಗ, ಮೊಲ, ಆನೆ, ಚಮರೀಮೃಗ, ಸೃಮರ, (ಅಂದರೆ ದೊಡ್ಡ ಜಾತಿಯ ಚಮರೀಮೃಗಗಳು) ಕಾಡುಹಸುಗಳು, ಹಂದಿ, ಮುಂತಾದ ವನಮೃಗಗಳು ಗುಂಪುಗುಂಪಾಗಿ ಸಂಚರಿಸುತ್ತಿರುವುವು. ದೊಡ್ಡ ದೊಡ್ಡ ಸರ್ಪಗಳು ಹೆಡೆಗಳನ್ನು ಬಿಟ್ಟುಕೊಂಡು ಫೂತ್ಕಾರಮಾಡುತ್ತಿರುವುವು. ಸಿದ್ಧಪುರುಷರೂ, ವಿದ್ಯಾಧರರೂ, ಉತ್ತಮರಾದ ಗಂಧರ್ವರೂ, ಗುಂಪುಗುಂಪಾಗಿ ಅಲ್ಲಿ ಬಂದು ಸೇವೆಮಾಡುತ್ತಿರುವರು. ॥೮-೯-೧೦॥

ಅಪ್ಸರಸ್ತ್ರೀಸಮೂಹವೂ, ಕಿಂಪುರುಷನಾರಿಯರೂ ಕಲ್ಲಿನ ಬಂಡೆಗಳ ಮೇಲೆ ಕುಳಿತುಕೊಂಡು ಮೃದಂಗ, ಮುರಜ, ಕೊಳಲು, ವೀಣೆ ಮುಂತಾದ ವಾದ್ಯಗಳನ್ನು ಬಾರಿಸುತ್ತಾ ಧ್ವನಿಮಾಡುತ್ತಿರುವರು. ಕಾಡಿನಲ್ಲಿ ಬಿಟ್ಟಿರುವ ಹೂಗಳ ಮೇಲೆಲ್ಲಾ ಬೀಸುತ್ತಾ ಮಂದಮಾರುತನು ಕುಸುಮಗಳ ಸೌರಭವನ್ನೆಲ್ಲಾ ಹೊತ್ತು ಎಲ್ಲಾ ಕಡೆಗಳಿಗೂ ಹರಡುತ್ತಿರುವನು. ಹೀಗೆ ಮಂದಮಾರುತದಿಂದ ಬೀಸಲ್ಪಡುತ್ತಾ ಆಗತಾನೇ ಅರಳಿದ ತಾಳೆಯ ಹೂ ಪರಾಗಗಳಿಂದ ವ್ಯಾಪ್ತವಾಗಿರುವ ಶಿರೋಭಾಗವುಳ್ಳ, ಕೈಲಾಸಪರ್ವತಕ್ಕೆ ಸಮಾನವಾಗಿರುವ ಆ ಸಹ್ಯಪರ್ವತದ ಶಿಖರವನ್ನು ಅಗಸ್ತ್ಯಮುನಿಯು ಆನಂದದಿಂದ ದರ್ಶನಮಾಡಿದನು. ॥೧೧-೧೨॥

ದದರ್ಶ ಸಹ್ಯಶಿಖರಂ ಕೈಲಾಸಶಿಖರೋಪಮಂ ।
ವಾಲಖಿಲ್ಯೈರ್ಮುನಿಗಣೈರ್ವೈಖಾನಸಮರೀಚಿಪೈಃ ॥೧೩॥

ಸೇವಿತಂ ಸಹ್ಯಶಿಖರಂ ಪುಣ್ಯಾಶ್ರಮಶತೈರ್ಯುತಂ ।
ಸಮಿದ್ಭಿಸ್ತೋಯಕಲಶೈಃ ಕಾಶಪುಷ್ಪಫಲೈರ್ಯುತಂ ॥೧೪॥

ವೃಕ್ಷಶಾಖಾಸಂಧಿತಾಚ್ಛಶಾಟೀಛಾಯಾವೃತಾತಪಂ ।
ತ್ರೇತಾಗ್ನೇರ್ಧೂಮಬಹುಲಂ ಹವಿರ್ಗಂಧತಮೋನ್ಮುಖಂ ॥೧೫॥

ವಟುಭಿರ್ವೇದಪಟುಭಿಸ್ತ್ರಯೀಧ್ವನಿ ವಿರಾಜಿತಂ ।
ತ್ರೇತಾಗ್ನಿಶರಣಶ್ರಾಂತಬಾಲಶಾಬಕಸೇವಿತಂ ॥೧೬॥

ನಿತ್ಯಂ ಮುನಿಕುಮಾರೀಭಿಃ ಕುಂಭಾಂಭಃಸೇವಿತೈರ್ದ್ರುಮೈಃ ।
ನಾರಿಕೇಲಾಮ್ರಪನಸೈಃ ಫಲಭಾರಾವನಮ್ರಿಭಿಃ ॥೧೭॥

---

ವಾಲಖಿಲ್ಯರೇ ಮೊದಲಾದ ಮುನಿಸಮೂಹಗಳೂ, ವೈಖಾನಸವೃತ್ತಿಯನ್ನಾಶ್ರಯಿಸಿ, ಸೂರ್ಯಚಂದ್ರರ ಕಿರಣವನ್ನೇ ಪಾನಮಾಡುವ ಮುನಿಸ್ತೋಮವೂ ಈ ಸಹ್ಯಪರ್ವತಶಿಖರವನ್ನಾಶ್ರಯಿಸಿ ಸೇವಿಸುತ್ತಿರುವರು. ನೂರಾರು ಪುಣ್ಯಾಶ್ರಮಗಳು ಈ ಸಹ್ಯಪರ್ವತಶಿಖರದಲ್ಲಿರುವುವು. ಸಮಿತ್ತುಗಳೂ, ನೀರಿನಿಂದ ತುಂಬಿದ ಕಲಶಗಳೂ, ದರ್ಭೆ, ಮುಂಜವೆಂಬ ಹುಲ್ಲು, ಹೂ, ಹಣ್ಣುಗಳು ಈ ಶಿಖರದಲ್ಲಿ ತುಂಬಿರುವುವು. ಮರಗಳ ಕೊಂಬೆಗಳ ಮೇಲೆ ಕಟ್ಟಿರುವ ಮುನಿಗಳ ಶುಭ್ರವಾದ ಕಷಾಯವಸ್ತ್ರಗಳು (ಕಾವೀಶಾಟಿಗಳು) ಬಿಸಿಲನ್ನು ಮರೆಮಾಡಿ, ನೆಳಲನ್ನುಂಟುಮಾಡುತ್ತಿರುವುವು. ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯಗಳೆಂಬ ತ್ರೇತಾಗ್ನಿಗಳ ಹೊಗೆಯು ವಿಶೇಷವಾಗಿ ವ್ಯಾಪ್ತವಾಗಿರುವುದು. ಸುಗಂಧಭರಿತವಾದ ಹವಿಸ್ಸಿನ ಹೊಗೆಯು ಕತ್ತಲೆಯಂತೆ ಆವರಿಸಿರುವುದು. ಆಶ್ರಮಗಳಲ್ಲಿ ವೇದಾಧ್ಯಯನ ಸಮರ್ಥರಾದ ಬ್ರಹ್ಮಚಾರಿಗಳು, ಋಗ್ವೇದ, ಯಜುರ್ವೇದ ಮತ್ತು ಸಾಮವೇದಗಳನ್ನು ಪಾರಾಯಣ ಮಾಡುತ್ತಾ ಧ್ವನಿಗೈಯುತ್ತಿರುವರು. ತ್ರೇತಾಗ್ನಿಗಳಿಗೆ ರಕ್ಷಕರಾಗಿದ್ದು ಬಳಲಿರುವ ಮುನಿಕುವರರಿಂದ ಆ ಶಿಖರವು ಸೇವಿಸಲ್ಪಡುತ್ತಿತ್ತು. ಪ್ರತಿದಿನವೂ ಮುನಿಕುಮಾರಿಕೆಯರು ಗಡಿಗೆಗಳಲ್ಲಿ ನೀರು ತುಂಬಿಕೊಂಡು ವೃಕ್ಷಗಳಿಗೆ ನೀರೆರೆದು ಕಾಪಾಡುತ್ತಿದ್ದರು. ಹಣ್ಣುಗಳ ಭಾರದಿಂದ ಬಗ್ಗಿರುವ ತೆಂಗು, ಮಾವು, ಹಲಸು ಈ ಮರಗಳು ಸಹ್ಯಶಿಖರದಲ್ಲಿ ಸೊಂಪಾಗಿ ಬೆಳೆದಿರುವುವು

ಸಂವೃತಂ ಸಹ್ಯಶಿಖರಂ ದದರ್ಶ ಘಟಸಂಭವಃ ।
ತಮಾಗತಂ ಸಮಾಜ್ಞಾಯ ಮುನಯೋ ವಿನಯೋಜ್ಜ್ವಲಾಃ ॥೧೮॥

ಸಾರ್ಘ್ಯಹಸ್ತಾಃ ಸಮಾಜಗ್ಮುಃ ಶತಶೋಽಥ ಸಹಸ್ರಶಃ ।
ಭಾರದ್ವಾಜಾಃ ಕಾಶ್ಯಪೇಯಾ ಮರೀಚ್ಯತ್ರಿಪರಾಶರಾಃ ॥೧೯॥

ದದೃಶುಸ್ತೇ ಮುನಿಂ ಶಾಂತಂ ಭಸ್ಮರುದ್ರಾಕ್ಷಭೂಷಣಂ ।
ತ್ರಿಪುಂಡ್ರವಿಲಸತ್ಫಾಲಂ ಶಿವಸದ್ಭಾವಭಾವಿತಂ ॥೨೦॥

ಸಿತಶ್ಮಶ್ರುಜಟಾಕೂರ್ಚಬ್ರಹ್ಮಸೂತ್ರೋಪಶೋಭಿತಂ ।
ಪ್ರಣೇಮುರಪರೇ ಪ್ರೋಚುಃ ಕುಶಲಂ ಬ್ರಹ್ಮವಿತ್ತಮಾಃ ॥೨೧॥

ಅರ್ಘ್ಯಂ ಚ ಮಧುಪರ್ಕಂ ಚ ದದುರ್ಮೂಲಫಲಾನಿ ಚ ।
ಊಚುಃ ಪ್ರಹೃಷ್ಟಮನಸೋ ಮುನಯೋಽಂಜಲಿಪಾಣಯಃ ॥೨೨॥

---

ಇಂತಹ ಸಹ್ಯಾದ್ರಿಶಿಖರವನ್ನು ಆ ಅಗಸ್ತ್ಯಮುನಿಯು ಆಶ್ಚರ್ಯದಿಂದ ನೋಡಿದನು. ॥೧೩-೧೪-೧೫-೧೬-೧೭॥

ಹೀಗೆ ಸಹ್ಯಪರ್ವತಶಿಖರಕ್ಕೆ ಅಗಸ್ತ್ಯಮುನಿಗಳು ಬಂದಿರುವರೆಂದು ತಿಳಿದು, ಅತ್ಯಂತ ವಿನಯದಿಂದ ಶೋಭಿಸುವ, ಭಾರದ್ವಾಜ, ಕಶ್ಯಪ, ಮರೀಚಿ, ಅತ್ರಿ ಮತ್ತು ಪರಾಶರಮುನಿಗಳು ತಮ್ಮ ತಮ್ಮ ಶಿಷ್ಯಪರಿವಾರದೊಡನೆ, ನೂರಾರು, ಸಾವಿರಾರು ಸಂಖ್ಯೆಯಲ್ಲಿ ಗುಂಪಾಗಿ, ಕೈಗಳಲ್ಲಿ ಅರ್ಘ್ಯಪಾತ್ರೆಯನ್ನು ಹಿಡಿದುಕೊಂಡು ಬಂದರು. ಅವರೆಲ್ಲರೂ, ಶಾಂತಗುಣಪೂರ್ಣನೂ, ಭಸ್ಮ, ರುದ್ರಾಕ್ಷಗಳನ್ನು ಅಲಂಕರಿಸಿ ಕೊಂಡಿರುವವನೂ, ಹಣೆಯಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿರುವವನೂ, ಪರಶಿವನಲ್ಲಿ ನೆಟ್ಟ ಭಕ್ತಿಭಾವನೆಯುಳ್ಳವನೂ, ಬಿಳಿಯ ಮೀಸೆ, ಗಡ್ಡ ಮತ್ತು ಯಜ್ಞೋಪವೀತ ಗಳಿಂದ ಶೋಭಿಸುತ್ತಿರುವವನೂ ಆದ ಮುನಿಪುಂಗವನನ್ನು ದರ್ಶನ ಮಾಡಿ ನಮಸ್ಕರಿಸಿದರು. ಹೀಗೆ ನಮಸ್ಕರಿಸಿದ ನಂತರ ಕೆಲವರು ಕುಶಲಪ್ರಶ್ನೆ ಮಾಡಿದರು. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರೆನಿಸಿದ ಇನ್ನೂ ಕೆಲವುಮಂದಿ ಮುನಿಗಳು ಅರ್ಘ್ಯವನ್ನೂ, ಮಧುಪರ್ಕವನ್ನೂ ಸಮರ್ಪಿಸಿ, ಗೆಡ್ಡೆ ಗೆಣಸು ಮೊದಲಾದವುಗಳನ್ನು ಕೊಟ್ಟರು. ಹೀಗೆ ಸತ್ಕರಿಸಿದನಂತರ ಸಂತುಷ್ಟಾಂತರಂಗರಾದ ಆ ಮುನಿಗಳು ಕೈಮುಗಿದು ಕೊಂಡು ಅಗಸ್ತ್ಯಮುನಿಯೊಡನೆ ಹೀಗೆ ಸಂಭಾಷಣೆ ನಡೆಸಿದರು. ॥೧೮ ೧೯-೨೦-೨೧-೨೨॥

|| ಮುನಯ ಊಚುಃ ||

ಧನ್ಯೋಽಯಂ ಸಹ್ಯಶಿಖರೋ ಧನ್ಯಾ ಚಾಶ್ರಮಮಂಡಲೀ ।
ಭವತಃ ಸಂಗಮೋ ಧನ್ಯಃ ಭವಭಕ್ತಸ್ಯ ಸತ್ತಮ ॥೨೩॥

ಶಿವಭಕ್ತಾಂಗಸಂಗೋಽಪಿ ಪಾಪಭಂಗಾಯ ಜಾಯತೇ ।
ತಪಸಃ ಪರಮಂ ಪಾರಂ ಸಂಪ್ರಾಪ್ತಾಶ್ಚ ಮಹರ್ಷಯಃ ॥೨೪॥

ಪೀತಾಂಬುಧೇ ಭವತ್ಸಂಗಾದಿಮೇ ಧನ್ಯತಮಾಃ ಸದಾ ।
ಭವಾನ್ಮುನೀನಾಂ ಗೋಪ್ತಾಸಿ ಶಿವವಲ್ಲೋಕರಕ್ಷಕಃ ॥೨೫॥

ನ ಹ್ಯಲ್ಪಕಾರಣಂ ಭಾವಿ ಭವದಾಗಮನಂ ಮುನೇ ।
ಕಿಂ ಕಿಂ ನ ಸೂತೇ ಭಾಗ್ಯಾನಿ ಭಾವಕಃ ಸುಸಮಾಹಿತಃ ॥೨೬॥

|| ಸೂತ ಉವಾಚ ||

ಮುನೀನಾಂ ವಚಸಾ ತುಷ್ಟ ಇಲ್ವಲಾರಿರ್ವಚೋಽಬ್ರವೀತ್ ।
ತೈರ್ದತ್ತಮಧುಪರ್ಕಾದಿ ಸ್ವೀಕೃತ್ಯಾರ್ಘ್ಯಫಲಾನಿ ಚ ॥೨೭॥

ಎಲೈ ಸಾಧುವರ್ಯನೇ, ಶಾಂಭವಶ್ರೇಷ್ಠನೆನಿಸಿದ ಪೂಜ್ಯನಾದ ನಿನ್ನ ಸಮಾಗಮದಿಂದ ಈ ಸಹ್ಯಪರ್ವತಶಿಖರವು ಧನ್ಯವಾಯಿತು. ಈ ನಮ್ಮ ಆಶ್ರಮ ಸಮೂಹವೂ ಸಹ ಈಗ ಪವಿತ್ರವಾಯಿತು. ಮಹನೀಯನೇ, ಒಟ್ಟಿನಲ್ಲಿ ನಿನ್ನ ಸಹವಾಸವೇ ಪುಣ್ಯಪ್ರದವಾದದ್ದು. ಶಾಂಭವರ ಅವಯವಸಂಬಂಧವು ಸಕಲ ಪಾಪಗಳನ್ನೂ ನಾಶಮಾಡಲು ಸಮರ್ಥವಾಗುತ್ತದೆ. ಈ ಮಹರ್ಷಿಗಳೆಲ್ಲರೂ ನಿನ್ನ ದಿವ್ಯಸಮಾಗಮದಿಂದ ತಮ್ಮ ತಪಸ್ಸಿನ ತುಟ್ಟತುದಿಯನ್ನೇ ಹೊಂದಿರುವರು. ||೨೩-೨೪||

ಸಮುದ್ರವನ್ನು ಪಾನಮಾಡಿದ ಎಲೈ ಅಗಸ್ತ್ಯಮುನಿಯೇ, ನಿನ್ನ ಸಮಾಗಮದಿಂದ ಈ ಮುನಿಗಳೆಲ್ಲರೂ ಶ್ರೇಷ್ಠರೆನಿಸುವರು. ಜಗದ್ರಕ್ಷಕನಾದ ಶಿವನಂತೆ ನೀನು ಯಾವಾಗಲೂ ಮುನಿಗಳನ್ನು ಕಾಪಾಡುತ್ತಿರುವೆ. ಎಲೈ ಅಗಸ್ತ್ಯಮುನಿಯೇ, ತಮ್ಮ ಬರುವಿಕೆಗೆ ಕೇವಲ ಅಲ್ಪವಾದ ಕಾರಣವೆಂದಿಗೂ ಇರಲಾರದು. ನಿಮ್ಮಂಥವರ ಆಗಮನದಿಂದ ಒಳ್ಳೆಯ ಭಾವನೆಯುಳ್ಳ ಭಕ್ತನು ಏನೇನು ಭಾಗ್ಯಗಳನ್ನು ತಾನೇ ಪಡೆಯಲಾರನು. ||೨೫-೨೬||

ಹೀಗೆ ಸ್ತುತಿಸಿ ಆ ಮುನಿಗಳು ಮಧುಪರ್ಕ, ಅರ್ಘ್ಯ ಮುಂತಾದವುಗಳನ್ನು

॥ ಅಗಸ್ತ್ಯ ಉವಾಚ ॥

ಮಹರ್ಷೀಣಾಂ ಚ ಭವತಾಂ ಸಂಗಮಃ ಸುಖದೋ ಹಿ ಮೇ ।
ಸಾಧೂನಾಂ ಸಮುಚಿತ್ತಾನಾಂ ಮಧ್ಯೇ ವಸ್ತುಂ ಚ ಮೇ ಕ್ಷಮಃ ॥೨೮॥

ಶಿವಾಜ್ಞಯಾಽಹಂ ಕೇದಾರಾದಾಗತೋ ಭವತೋಂತಿಕಂ ।
ಕಿಂಚಿತ್ಕಾರಣಮುದ್ದಿಶ್ಯ ದೇವೇನ ಪ್ರೇಷಿತೋಽಸ್ಮ್ಯಹಂ ॥೨೯॥

ವಿವರ್ಧಮಾನಂ ವಿಂಧ್ಯಂ ಚ ಸ್ಪರ್ಧಯಾ ಮೇರುಣಾ ಸಹ ।
ಉಪಾಯೇನೈವ ತಂ ವಿಂಧ್ಯಂ ಸುರಾರ್ಥಂ ವಾರಿತಂ ಮಯಾ ॥೩೦॥

ದೃಷ್ಟ್ವಾ ಚ ಕೌಶಿಕೀಂ ದೇವೀಂ ವಿಂಧ್ಯಮಸ್ತಕವಾಸಿನೀಂ ।
ಗೋದಾವರ್ಯಾಂ ತ್ರ್ಯಂಬಕೇಶೋ ನತಃ ಸ್ನಾತಃ ಸ್ತುತಸ್ತಥಾ॥೩೧॥

ಶ್ರೀಶೈಲೇಶೋಽರ್ಚಿತೋ ದೃಷ್ಟಃ ಸಂಸ್ತುತಾ ಭ್ರಮರಾಂಬಿಕಾ ।
ಗೋಕರ್ಣೇ ಚ ಶಿವೋ ದೃಷ್ಟೋ ದೇವದೇವೋ ಮಹಾಬಲಃ ॥೩೨॥

---

ಅಗಸ್ತ್ಯಮುನಿಗೆ ಕೊಟ್ಟು, ಹಣ್ಣುಹಂಪಲುಗಳನ್ನು ಸಮರ್ಪಿಸಿದ ಮೇಲೆ, ಆ ಮುನಿಪುಂಗವನು ಅವುಗಳೆಲ್ಲವನ್ನೂ ಸ್ವೀಕರಿಸಿ, ಮುನಿಗಳ ಮಾತಿನಿಂದ ಸಂತುಷ್ಟನಾದ ಮೇಲೆ ಈ ರೀತಿ ಮಾತನಾಡಿದನು. ॥೨೭॥

ಮುನಿಗಳಿರಾ, ನಿಮ್ಮಂತಹ ಮಹರ್ಷಿಗಳ ಸಂಪರ್ಕವು ನನಗೆ ಅತ್ಯಂತ ಸುಖಕರವಾಗಿರುವುದು. ಸಮಾಧಾನಮನಸ್ಕರಾದ ಸಾಧುಗಳ ಮಧ್ಯದಲ್ಲಿ ನಾನು ವಾಸಮಾಡಲಿಚ್ಛಿಸುವೆನು. ಪರಶಿವನ ಅಪ್ಪಣೆಯಿಂದ ನಾನು ಕೇದಾರಕ್ಷೇತ್ರದಿಂದ ನಿಮ್ಮ ಸಮೀಪಕ್ಕೆ ಬಂದಿರುವೆನು. ಕೆಲವು ಕಾರ್ಯನಿರ್ವಹಣಕ್ಕಾಗಿ ದೇವತೆಗಳಿಂದ ನಾನು ಕಳುಹಿಸಲ್ಪಟ್ಟಿರುವೆನು. ॥೨೮-೨೯॥

ಮೇರುಪರ್ವತದ ಮೇಲಿನ ಸ್ಪರ್ಧೆಯಿಂದ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ಉಪಾಯದಿಂದ ದೇವತೆಗಳಿಗಾಗಿ ತಡೆಯುವುದಕ್ಕೋಸ್ಕರ ನಾನು ಈ ಮಾರ್ಗವಾಗಿ ಬಂದು ಅದರ ಬೆಳವಣಿಗೆಯನ್ನು ತಡೆಗಟ್ಟಿದೆನು. ವಿಂಧ್ಯಪರ್ವತದ ಶಿಖರದಲ್ಲಿ ನೆಲೆಸಿದ್ದ ಕೌಶಿಕೀದೇವಿಯನ್ನು ನಾನು ದರ್ಶನಮಾಡಿದೆನು. ಅನಂತರ ಗೋದಾವರೀ ನದಿಯಲ್ಲಿ ಸ್ನಾನಮಾಡಿ, ತ್ರ್ಯಂಬಕೇಶ್ವರನಿಗೆ ನಮಸ್ಕರಿಸಿ, ಸ್ತೋತ್ರ ಮಾಡಿದೆನು. ಹಾಗೆಯೇ ಮುಂದುವರಿದು ಶ್ರೀಶೈಲಕ್ಕೆ ಬಂದು ಶ್ರೀಶೈಲೇಶ್ವರನನ್ನು

ಹಾಲಾಸ್ಯಭಾವೀ ದೇವಸ್ಯ ಸದ್ವಿವಾಹೋಽಂಬಯಾ ಸಹ ।
ತಂ ದ್ರಷ್ಟುಮೀಹತೇ ಚೇತಸ್ತಾವತ್ಕಾಲಂ ವಸಾಮ್ಯಹಂ ॥೩೩॥

ಅಸ್ಮಿನ್ಹಿಮಾಚಲಾಯಾತೈಃ ಸಹ್ಯಭೂಧರಸತ್ತಮೇ ।
ಇಯಂ ಸರ್ವಾಪಗಾತೀರ್ಥಾ ಪೂರಿತಾ ಕುಂಡಿಕಾ ಮಮ ॥೩೪॥

ಸಂರಕ್ಷ್ಯತಾ ಸಹ್ಯಶೈಲೌ ಸ್ಥಾಪಯಾಮಿ ಮುನೀಶ್ವರಾಃ ।
ಸಹ್ಯಮೂಲೇ ಸಂಗತೇ ಯಾ ಭವಿತ್ರೀಯಂ ಸರಿದ್ವರಾ ॥೩೫॥

ಸಾ ಸಹ್ಯಜೇತಿ ಪ್ರಥಿತಾ ಭವಿತ್ರೀಯಂ ಕವೇರಜಾ ।
ಮರುದ್ವೃಧೇತಿ ಕಥಿತಾ ಭವತ್ಯತ್ರ ಸರಿದ್ವರಾ ॥೩೬॥

ಯಸ್ಯಾಂ ತುಲಾರವೌ ಸ್ನಾತ್ವಾ ನರಾ ಮುಂಚಂತಿ ಪಾತಕೈಃ ।
ಸಹ್ಯಜಾತೋಯಸಂಗೋತ್ಥವಾತಪೋತೋ ಮುನೀಶ್ವರಾಃ ॥೩೭॥

---

ಪೂಜಿಸಿ, ಭ್ರಮರಾಂಬಿಕೆಯನ್ನು ಸ್ತುತಿಸಿದೆನು. ಅಲ್ಲಿಂದ ಮುಂದೆ ಹೊರಟು ಗೋಕರ್ಣಕ್ಷೇತ್ರಕ್ಕೆ ಬಂದು ಅಲ್ಲಿ ದೇವತೋತ್ತಮನೆನಿಸಿದ ಮಹಾಬಲೇಶ್ವರನನ್ನು ಕಂಡು ಪೂಜಿಸಿದೆನು. ॥೩೦-೩೧-೩೨॥

ಮುಂದೆ ಹಾಲಾಸ್ಯಕ್ಷೇತ್ರದಲ್ಲಿ ದೇವದೇವೋತ್ತಮನಾದ ಮಹೇಶ್ವರನ ವಿವಾಹವು ಅಂಬಿಕೆಯೊಡನಾಗುವುದು. ಆ ವಿವಾಹಮಹೋತ್ಸವವನ್ನು ನೋಡಬೇಕೆಂದು ನನ್ನ ಮನಸ್ಸು ಬಯಸುತ್ತಿರುವುದು. ಓ ಮುನಿಗಳಿರಾ, ಅಲ್ಲಿಯವರೆವಿಗೆ ನಾನು ನಿಮ್ಮ ಬಳಿಯಲ್ಲಿಯೇ ವಾಸಮಾಡುವೆನು. ಆದರೆ ಹಿಮವತ್ಪರ್ವತಪ್ರದೇಶಕ್ಕೆ ಬಂದಿದ್ದ ಎಲ್ಲಾ ನದಿಗಳ ನೀರಿನಿಂದಲೂ ಈ ನನ್ನ ಕಲಶವು ಪೂರ್ಣವಾಗಿದೆ. ಇಂತಹ ಕುಂಡಿಕೆಯನ್ನು ಈಗ ನಾನು ಈ ಸಹ್ಯಪರ್ವತಶಿಖರದಲ್ಲಿರಿಸುತ್ತೇನೆ. ಮುನಿಪುಂಗವರಾದ ನೀವೆಲ್ಲರೂ ಇದನ್ನು ಕಾಪಾಡಬೇಕು. ॥೩೩-೩೪॥

ಈ ಕಲಶದ ನೀರು ಸಹ್ಯಪರ್ವತದ ಬುಡಕ್ಕೆ ಸೇರಿ ಅಲ್ಲಿಂದ ನದಿಯರೂಪವಾಗಿ ಹರಿಯುತ್ತಾ, ಸಹ್ಯಜಾ, ಕಾವೇರಿ ಎಂಬುದಾಗಿ ಪ್ರಸಿದ್ಧಿಪಡೆಯುತ್ತದೆ. ಈ ಶ್ರೇಷ್ಠನದಿಯೇ "ಮರುದ್ವೃಧಾ" (ವಾಯುವಿನಿಂದ ವೃದ್ಧಿಯಾಗುವುದು) ಎಂಬುದಾಗಿಯೂ ಪ್ರಸಿದ್ಧಿಯನ್ನು ಹೊಂದುತ್ತದೆ. ॥೩೫-೩೬॥

ಈ ಕಾವೇರೀನದಿಯಲ್ಲಿ ಸೂರ್ಯನು ತುಲಾರಾಶಿಗೆ ಬಂದಾಗ (ಅಂದರೆ ತುಲಾಮಾಸದಲ್ಲಿ) ಸ್ನಾನಮಾಡಿದ ಮಾನವರು ಸಕಲ ಪಾಪಗಳನ್ನೂ ಕಳೆದು

ಪುನಾತಿ ಭುವನಂ ಸರ್ವಂ ಕಿಂ ವಾ ತತ್ತೀರವಾಸಿನಃ ।
ಅಸ್ಯಾಸ್ತಟದ್ವಯೇ ಭಾವಿ ಕ್ಷೇತ್ರಾಣ್ಯತ್ಯುತ್ತಮಾನಿ ಚ ॥೩೮॥

ಶ್ರೀಕಂಠಪ್ರಮುಖಾದೀನಿ ಸಂಗಮೇಶಾದಿಕಾನಿ ಚ ।
ಮುಕ್ತಿಪ್ರದಾನಿ ಲಿಂಗಾನಿ ಚೋಲೇಽತ್ರ ಪ್ರಥಿತಾನ್ಯಪಿ ॥೩೯॥

ಭವಿತ್ರೀಯಂ ಶಂಖಮುಖೀ(ಶತಮುಖೀ)ಸಹ್ಯಜಾ ಸಾಗರಂಗಮಾ ।
ಯಥಾ ಹಿಮಾಚಲಾಜ್ಜಾತಾ ಗಂಗಾ ಸಾಹಸ್ರವಕ್ತ್ರಗಾ ॥೪೦॥

ತಥೇಯಂ ಸಹ್ಯಜಾ ಚಾಪಿ ಚೋಲೇ ಪೂತಾ ಸರಿದ್ವರಾ ।
ಕಿಂಚಿದ್ದೂರಮಖಂಡಾ ಚ ಸಖಂಡಾ ವಾ ಭವಿಷ್ಯತಿ ॥೪೧॥

ಅಮ್ರಾವತ್ಯಾ ಭವಾನ್ಯಾ ಚ ಸಂಗತೇಯಂ ಭವಿಷ್ಯತಿ ।
ಸರಸ್ವತ್ಯಾ ಯಮುನಯಾ ಯಥಾ ಗಂಗಾ ಸಮನ್ವಿತಾ ॥೪೨॥

---

ಕೊಳ್ಳುತ್ತಾರೆ. ಈ ಕಾವೇರಿಯ ನೀರಿನ ಸಂಪರ್ಕಪಡೆದ (ಮೇಲೆ ಬೀಸಿದ) ಮಂದ ಮಾರುತವು ಪ್ರಪಂಚವನ್ನೆಲ್ಲಾ ಪವಿತ್ರಮಾಡುತ್ತಿರುವುದೆಂದಮೇಲೆ, ಆ ನದಿಯ ದಡದಲ್ಲಿ ವಾಸಮಾಡುವವರ ವಿಷಯದಲ್ಲಿ ಹೇಳತಕ್ಕದ್ದೇನು ! ಈ ಸಹ್ಯಪರ್ವತದಲ್ಲಿ ಹುಟ್ಟಿದ ಕಾವೇರಿಯ ಎರಡು ದಡಗಳಲ್ಲಿಯೂ ತುಂಬಾ ಉತ್ತಮವಾದ ಅನೇಕ ಕ್ಷೇತ್ರಗಳಿರುವುವು. ॥೩೭-೩೮॥

ಈ ನದಿಯ ದಡಗಳಲ್ಲಿ ಶ್ರೀಕಂಠ, ಸಂಗಮೇಶ್ವರ ಮುಂತಾದ ಅನೇಕ ಮೋಕ್ಷಪ್ರದವಾದ ಶಿವಲಿಂಗಗಳು, ಈಚೋಲದೇಶದಲ್ಲಿ ಪ್ರಸಿದ್ಧವಾಗುವುವು. ಈ ಕಾವೇರೀನದಿಯು ಸಮುದ್ರವನ್ನು ಸೇರುವಾಗ ಶಂಖದ ಹಾಗೆ ಮುಖವುಳ್ಳದ್ದಾಗಿ (ಅಥವಾ ನೂರಾರು ಭಾಗವಾಗಿ) ಗೋಚರಿಸುತ್ತದೆ. ಹಿಮವತ್ಪರ್ವತದಿಂದ ಹುಟ್ಟಿದ ಗಂಗಾನದಿಯು ಸಮುದ್ರವನ್ನು ಸೇರುವಾಗ ಸಾವಿರ ಸಣ್ಣ ಸಣ್ಣ ಶಾಖೆಗಳಾಗುವಂತೆ ಈ ಕಾವೇರಿಯೂ, ॥೩೯-೪೦॥

ಸಹ್ಯಪರ್ವತದಲ್ಲಿ ಹುಟ್ಟಿ, ಚೋಲದೇಶದಲ್ಲಿ ಹರಿದು ಪ್ರಸಿದ್ಧಿಪಡೆದು, ಶ್ರೇಷ್ಠವಾದ ನದಿಯೆನಿಸಿ, ಸ್ವಲ್ಪದೂರ ಕವಲೊಡೆಯದೇ ಹರಿದು, ಮುಂದೆ ಸಮುದ್ರಸಂಗಮಸ್ಥಳದಲ್ಲಿ ನಾನಾರೀತಿ ಕವಲೊಡೆಯುತ್ತದೆ. ॥೪೧॥

ಸರಸ್ವತೀ ಮತ್ತು ಯಮುನಾನದಿಗಳ ಸಂಗಮಹೊಂದಿದ ಗಂಗಾನದಿಯಂತೆ ಅಮರಾವತೀ ಮತ್ತು ಭವಾನೀ ನದಿಗಳ ಸಂಗಮದಿಂದ ಈ ಕಾವೇರಿಯೂ ಪವಿತ್ರ

ತಥೇಯಂ ಸಹ್ಯಜಾ ಪುಣ್ಯಾ ನದ್ಯೋರ್ಯುಕ್ತಾ ವಿಶಿಷ್ಯತೇ ।
ಗಾಯತ್ರೀಯಂ ಶಿಲಾರೂಪಾ ಗೋರೂಪಾಘವಿನಾಶಿನೀ ॥೪೩॥

ತಸ್ಯಾಂ ಪ್ರವಿಶ್ಯ ಜಪ್ತ್ವಾ ತಾಂ ಮುಚ್ಯತೇ ಮಹತೋಽಂಹಸಃ ।
ತ್ರಿಸ್ಥಾನಯುಕ್ತಾ ಪುಣ್ಯೇಯಂ ಕಾವೇರೀ ಪುಣ್ಯವರ್ಧಿನೀ ॥೪೪॥

ರತ್ನಾದ್ರೀಶಸ್ತ್ರಿನೇತ್ರಶ್ಚ ಜೈತ್ರೋ ಮರಕತೇಶ್ವರಃ ।
ಕ್ಷೇತ್ರತ್ರಯೇಣ ಸಂಯುಕ್ತಾ ಪ್ರಯಾಗೇ ಗಂಗಯೋಃ ಸಮಾ ॥೪೫॥

ತತ್ರ ಸ್ನಾತ್ವಾ ನರೋ ಜಪ್ತ್ವಾ ಗಾಯತ್ರೀಂ ತರ್ಪ್ಯ ಸ್ವಾನ್ಪಿತೄನ್ ।
ಆಷೋಡಶಾಹಂ ಕಾವೇರ್ಯಾಃ ಪಯಸಾ ತೃಪ್ತಿಕೃದ್ಭವೇತ್ ॥೪೬॥

ಇತ್ಥಂ ಸಂವದತಾಂ ತತ್ರ ಮುನೇಶ್ಚ ಮುನಿಭಿಃ ಸಹ ।
ದೇವೈಃ ಸಂಪ್ರಾರ್ಥಿತೋಽಭ್ಯಾಗಾತ್ಕಾಕರೂಪೇಣ ವಿಘ್ನರಾಟ್॥೪೭॥

---

ವೆನಿಸಿ, ವಿಶೇಷವಾಗಿ ಪ್ರಸಿದ್ಧಿಹೊಂದುವುದು. ಈ ಕಾವೇರಿಯಲ್ಲಿ ಗಾಯತ್ರೀ ದೇವಿಯು ಕಲ್ಲಿನ ರೂಪವನ್ನು ಹೊಂದಿ ಗೋಹತ್ಯಾದೋಷವನ್ನೂ ನಾಶಮಾಡುವಳು. ಆ ಗಾಯತ್ರಿಯ ಶಿಲೆಯಮೇಲೆ ಕುಳಿತು, ಗಾಯತ್ರೀಮಂತ್ರವನ್ನು ಜಪಿಸಿದರೆ ಮಾನವರು ಮಹಾಪಾಪಗಳಿಂದಲೂ ಬಿಡುಗಡೆಹೊಂದುತ್ತಾರೆ. ||೪೨-೪೩||

ರತ್ನಾದ್ರೀಶ್ವರ, ತ್ರಿನಯನೇಶ್ವರ ಮತ್ತು ಜಯಶೀಲನಾದ ಮರಕತೇಶ್ವರರೆಂಬ ಮೂರು ಪುಣ್ಯಸ್ಥಾನಗಳಿಂದ ಕೂಡಿದ ಈ ಕಾವೇರೀ ನದಿಯು ತುಂಬಾ ಪುಣ್ಯಶಾಲಿನಿಯು. ಪ್ರಯಾಗಕ್ಷೇತ್ರದಲ್ಲಿನ ಗಂಗಾ ಯಮುನಾನದಿಗಳ ಸಂಗಮಕ್ಷೇತ್ರಕ್ಕೆ ಸಮಾನವಾದ ಕ್ಷೇತ್ರಗಳನ್ನು ಈ ನದಿಯು ಒದಗಿಸಬಲ್ಲುದು. ||೪೪-೪೫||

ಆ ಸ್ಥಳದಲ್ಲಿ ಸ್ನಾನಮಾಡಿ, ಗಾಯತ್ರಿಯನ್ನು ಜಪಿಸಿ, ತನ್ನ ಪಿತೃಗಳಿಗೆ ಹದಿನಾರು ದಿನಗಳವರೆಗೆ ನಿಯಮದಿಂದ ಆ ಕಾವೇರಿಯ ನೀರಿನಿಂದಲೇ ತರ್ಪಣ ಮಾಡುವ ಮಾನವನು ನಿಜವಾಗಿಯೂ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುವನು ಎಂಬುದಾಗಿ ಅಗಸ್ತ್ಯಮುನಿಯು ಈ ಕಾವೇರಿಯ ಮಹಿಮೆಯನ್ನು ಇತರ ಮುನಿಗಳೊಡನೆ ಹೇಳುತ್ತಾ ಇರುವ ಸಂದರ್ಭದಲ್ಲಿ, ಅತ್ತ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ವಿಘ್ನೇಶ್ವರನು ಕಾಗೆಯ ರೂಪದಿಂದ ಬಂದು ತನ್ನ ಕೊಕ್ಕಿನ ತುದಿಯಿಂದ ಆ ಘಟದ ನೀರನ್ನೆಲ್ಲಾ ಕಲಕಿ, ಆ ಅಗಸ್ತ್ಯಮುನಿಯ ಕುಂಡಿಕೆಯಲ್ಲಿದ್ದ ನೀರೆಲ್ಲಾ ಸಹ್ಯಪರ್ವತದ ಬುಡಕ್ಕೆ ಬೀಳುವಂತೆ ಮಾಡಿದನು. ಆಗ ಇದನ್ನು ನೋಡಿ

ಸ್ವಚಂಚ್ವಗ್ರೇ ಕುಂಡಿಕಾಂ ತಾಂ ಲೋಡಯಾಮಾಸ ವೈ ಮುನೇಃ ।
ಸಹ್ಯಮೂಲೇ ಪಪಾತಾಂಭೋ ಬಭ್ರಾಮ ಘಟಜಸ್ತಥಾ ॥೪೭॥

ಗುಪ್ತಾಭೂತ್ಸಹ್ಯಜಾ ತತ್ರ ಪಶ್ಚಾಜ್ಜ್ಞಾತಾ ತರಂಗಿಣೀ ।
ದೇವೈಶ್ಚ ಸೇವಿತಾ ತತ್ರ ಮೋದಮಾಪುರ್ಮಹರ್ಷಯಃ ॥೪೯॥

ಅಗಸ್ತ್ಯೇನ ಯುತಾ ಸಸ್ನುಃ ತುಲಾರ್ಕೇ ಸಹ್ಯಜಾಜಲೇ ॥೫೦॥

॥ ಸ್ಕಂದ ಉವಾಚ ॥

ಅಸಹ್ಯ ಪಾಪೌಘಭಯಂ ಪ್ರಹಸ್ಯ
ಸಹ್ಯಾತ್ಮಜಾ ಯಾ ನಗಸಹ್ಯಮೂರ್ಧತಃ ।
ಪಪಾತ ಪರ್ವಾಪ್ಲುತಪುಣ್ಯವರ್ಧಿನೀ
ತುಲಾಗತೇಽರ್ಕೇ ಘಟಜಪ್ರಚೋದಿತಾ ॥೫೧॥

ಗಿರಿಜಾತೀರೋನ್ಮುಖಪ್ರಸಕ್ತದ್ರುಮಖಂಡಂ ವನಪಾವನಂ ಮುನಿಃ ।
ಗಿರಿಜಾನಾಥಸ್ಯ ಧ್ಯಾನಪೂಜಾನಿರತೋ ಮುನಿಭಿಃ ಸಹಾಧ್ಯುವಾಸ ॥೫೨॥

---

ಘಟದಲ್ಲಿ ಮಿತ್ರಾವರುಣಮುನಿಗಳ ವೀರ್ಯದಿಂದ ಹುಟ್ಟಿದ ಅಗಸ್ತ್ಯಮುನಿಯು ಅಲ್ಲಿಗೆ ತೀವ್ರವಾಗಿ ಓಡಿಹೋದನು. ॥೪೬-೪೭-೪೮॥

ಆಮೇಲೆ ಕಲಶೋದಕದಿಂದ ಹುಟ್ಟಿದ ಸಹ್ಯಜೆಯು ಸಹ್ಯಾದ್ರಿಯ ಬುಡದಲ್ಲಿ ಮಾಯವಾಗಿದ್ದು ಅನಂತರ ಪ್ರವಾಹದಿಂದ ಕೂಡಿ ಹರಿಯತೊಡಗಿದಳು. ಆ ಸಂದರ್ಭದಲ್ಲಿ ದೇವತೆಗಳೆಲ್ಲರೂ ಆ ನದಿಯನ್ನು ಬಹು ಭಕ್ತಿಯಿಂದ ಸೇವಿಸಿದರು. ಮಹರ್ಷಿಗಳೆಲ್ಲರೂ ಸಂತೋಷಹೊಂದಿ ಆ ಅಗಸ್ತ್ಯಮುನಿಯೊಡನೆ ಸೂರ್ಯನು ತುಲಾರಾಶಿಯಲ್ಲಿದ್ದಾಗ ಆ ಸಹ್ಯಜಾ ಜಲದಲ್ಲಿ ಸ್ನಾನಮಾಡಿದರು. ॥೫೦॥

ಸಹಿಸಲಸಾಧ್ಯವಾದ ಮಾನವರ ಪಾಪರಾಶಿಗಳ ಭಯವನ್ನೂ ಲೆಕ್ಕಿಸದೇ ನಿವಾರಿಸಿ, ಅದನ್ನು ತಾನು ಧರಿಸಿ, ಆ ಸಹ್ಯಕುಮಾರಿಯು ಸಹ್ಯಾದ್ರಿಯ ಶಿಖರದಿಂದ ಅಗಸ್ತ್ಯಮುನಿಯ ಪ್ರೇರಣೆಯಿಂದ ಪ್ರವಹಿಸಿ ತುಲಾರಾಶಿಗೆ ಸೂರ್ಯನು ಬಂದಾಗ ಮತ್ತು ಪರ್ವಕಾಲಗಳಲ್ಲಿ ತನ್ನಲ್ಲಿ ಸ್ನಾನಮಾಡುವ ಮಾನವರ ಪುಣ್ಯವನ್ನು ಹೆಚ್ಚಿಸುತ್ತಾ ಹರಿಯುತ್ತಿರುವಳು. ॥೫೧॥

ಆ ಅಗಸ್ತ್ಯಮುನಿಯು ಸಹ್ಯಪರ್ವತದಲ್ಲಿ ಹುಟ್ಟಿದ ಕಾವೇರಿಯ ದಡಗಳಲ್ಲಿ ಬೆಳೆದಿರುವ ಮರಗಳ ಸಮೂಹದಿಂದ ವಿರಾಜಿಸುವ ಪಾವನವಾದ ಅರಣ್ಯವನ್ನು

ಸಹ ಕುಂಡಿಕಯಾ ಸೂತ ಪೂರ್ಣೈಃ ಪೂರ್ಣಾಂ ಚ ಶೈಲಜಾಂ ।
ಅಭಿವೀಕ್ಷ್ಯ ತದಾಗಸ್ತ್ಯೋ ಮೋದಮಾಪ ವಿಶೇಷತಃ ॥೫೩॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಅಗಸ್ತ್ಯಸಹ್ಯಾದ್ರಿಪ್ರವೇಶಕಾವೇರೀನದ್ಯುತ್ಪತ್ತಿವರ್ಣನೇಽಷ್ಟಮೋಽಧ್ಯಾಯಃ

---

ನೋಡಿ, ಆ ಕಾಡಿನಲ್ಲಿ ಗಿರಿರಾಜಕುಮಾರಿಕಾರಮಣನಾದ ಮಹೇಶ್ವರನ ಧ್ಯಾನ, ಮತ್ತು ಪೂಜಾದಿಗಳಲ್ಲಿ ನಿರತನಾಗಿ ಮುನಿಗಳೊಡನೆ ಆ ಸಹ್ಯಪರ್ವತದಲ್ಲಿ ವಾಸ ಮಾಡುತ್ತಿದ್ದನು. ॥೫೨॥

ಆಗ ಅಗಸ್ತ್ಯಮುನಿಯು ತೀರ್ಥರಹಿತವಾದ ಕಮಂಡಲುವಿನೊಡನೆ ನಿಂತು ಪ್ರವಾಹದಿಂದ ಪೂರ್ಣವಾಗಿ ಹರಿಯುತ್ತಿರುವ ಕಾವೇರೀನದಿಯನ್ನು ನೋಡಿ ತುಂಬಾ ಸಂತೋಷಹೊಂದಿದನು. ॥೫೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಎಂಟನೆಯ ಅಧ್ಯಾಯವು ಸಮಾಪ್ತವಾದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ನವಮೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

**ಮುನಿಭಿಃ ಸ ತದಾಗಸ್ತ್ಯೋ ಮಹೇಶವಚನಂ ಸ್ಮರನ್ ।**
**ಶಂಭೋರ್ವಿವಾಹಮತುಲಂ ಧ್ಯಾಯನ್ಸಹ್ಯಗಿರೌ ವಸನ್ ॥೧॥**

**ತ್ರಿಕಾಲಂ ಶಿವಮಭ್ಯರ್ಚ್ಯ ಭಸ್ಮರುದ್ರಾಕ್ಷಭೂಷಣಃ ।**
**ಶ್ರೀಮತ್ಪಂಚಾಕ್ಷರಂ ಮಂತ್ರಂ ಸಂಸ್ಮರನ್ ಸರ್ವಸಿದ್ಧಿದಂ ॥೨॥**

---

## ಒಂಬತ್ತನೆಯ ಅಧ್ಯಾಯ

ಅನಂತರ ಅಗಸ್ತ್ಯಮುನಿಯು ಇತರ ಮುನಿಗಳೊಡನೆ ಮಹೇಶ್ವರನು ತನಗೆ ಹೇಳಿದ್ದ ಮಾತುಗಳನ್ನು ಸ್ಮರಿಸಿಕೊಂಡು ಸುಖಕರವಾದ ಆ ಶಂಭುವಿನ ವಿವಾಹವನ್ನೇ ಯಾವಾಗಲೂ ಧ್ಯಾನಮಾಡುತ್ತಾ ಸಹ್ಯಪರ್ವತದಲ್ಲಿ ವಾಸಮಾಡುತ್ತಿದ್ದನು. ಆ ಕಾಲದಲ್ಲಿ ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಭಸ್ಮ, ರುದ್ರಾಕ್ಷಗಳನ್ನು ಧರಿಸಿಕೊಂಡು ಆ ಪರಶಿವನನ್ನು ಪೂಜೆಮಾಡುತ್ತಲೂ, ಶತರುದ್ರೀಯ ಮಂತ್ರದ ಮಧ್ಯಭಾಗದಲ್ಲಿ ಸಕಲ ಮಂತ್ರಗಳಲ್ಲಿಯೂ ಶ್ರೇಷ್ಠವೆನಿಸಿಕೊಂಡಿರುವ ಶ್ರೀ ಶಿವಪಂಚಾಕ್ಷರ ಮಹಾಮಂತ್ರವನ್ನು ಜಪಿಸುತ್ತಲೂ, ಅದು ಸಕಲೇಷ್ಟಾರ್ಥಗಳನ್ನೂ ಉಂಟುಮಾಡುವುದೆಂದು ತಿಳಿದು ಈಶ್ವರಾರಾಧನೆಯನ್ನು ನಿಯಮದಿಂದ ನೆರವೇರಿಸುತ್ತಿದ್ದನು. ||೧-೨||

ಸರ್ವಮಂತ್ರವರಂ ನಿತ್ಯಂ ಶತರುದ್ರೀಯಮುಧ್ಯಗಂ ।
ಶತರುದ್ರಜಪಧ್ವಸ್ತಸರ್ವಪಾಪಃ ಸ ಕುಂಭಜಃ ॥೩॥

ಸಹ್ಯೋತ್ತರೇಽಥ ಶಿಖರೇ ಧನಾಖ್ಯೇ ಸರ್ವಸಿದ್ಧಿದೇ ।
ಕಪಿಲಾ ನಿಃಸೃತಾ ತಸ್ಮಾದ್ದಶಯೋಜನಮಾನಗಾ ॥೪॥

ಕಾವೇರ್ಯಾ ಸಂಗತಾ ಚಾಪಿ ತತ್ಸ್ಥಾನಂ ತು ತ್ರಿಕೂಟಕಂ ।
ತ್ರಿಕೂಟೇಶಂ ಮಹಾಲಿಂಗಂ ದರ್ಶನಾತ್ತತ್ರ ಸಿದ್ಧಿದಂ ॥೫॥

ತತ್ಪಶ್ಚಿಮೇ ತು ಶ್ರೀಕಲ್ಪಮಾಲುಲೋಕೇ ಮಹಾಮುನಿಃ ।
ಯತ್ರಾಮೃತಸ್ಯ ಮಥನೇ ದೇವದೈತ್ಯೈಶ್ಚ ಸಂಗತೈಃ ॥೬॥

ಮಥಿತಃ ಕ್ಷೀರವಾರಾಶಿಃ ಸಂಮಂತ್ರ್ಯಾಥ ಪರಸ್ಪರಂ ।
ಮಂಥಾನಂ ಮಂದರಂ ಕೃತ್ವಾ ಯೋಕ್ತ್ರಂ ಕೃತ್ವಾತು ವಾಸುಕಿಂ ॥೭॥

ತದಾದ್ಭುತಾನಿ ರತ್ನಾನಿ ಜಗೃಹುಃ ಸರ್ವದೇವತಾಃ ।
ಅಪ್ರಣಮ್ಯ ಮಹಾದೇವಂ ವಿಘ್ನೇಶ್ವರಮಪೂಜ್ಯ ಚ ॥೮॥

---

ಸಹ್ಯಪರ್ವತದ ಉತ್ತರದಲ್ಲಿರುವ ಸಕಲಸಿದ್ಧಿಗಳನ್ನೂ ಕೊಡುವ ಧನಸಂಜ್ಞಕವಾದ ಶಿಖರದಲ್ಲಿ ಅಗಸ್ತ್ಯಮುನಿಯು ಶತರುದ್ರಮಂತ್ರಜಪಮಾಡಿ, ಸಕಲ ಪಾಪಗಳನ್ನೂ ಕಳೆದುಕೊಂಡನು. ಆ ಶಿಖರದಿಂದಲೇ ಕಪಿಲಾನದಿಯು ಹುಟ್ಟಿ ಹತ್ತು ಯೋಜನದ ದೂರ ಹರಿಯುತ್ತದೆ. ಮಧ್ಯದಲ್ಲಿ ಕಾವೇರಿಯೊಡನೆ ಸಂಗಮವಾಗುತ್ತದೆ. ಆ ಸ್ಥಾನವು "ತ್ರಿಕೂಟ"ವೆಂದು ಪ್ರಸಿದ್ಧವಾಗಿರುವುದು. ಆ ತ್ರಿಕೂಟೇಶ್ವರನ ದೊಡ್ಡ ಲಿಂಗವು ದರ್ಶನಮಾತ್ರದಿಂದಲೇ ಜನಗಳಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವುದಾಗಿದೆ. ಅಗಸ್ತ್ಯಮುನಿಯು ಆ ತ್ರಿಕೂಟೇಶ್ವರಲಿಂಗವನ್ನು ದರ್ಶನ ಮಾಡಿ, ಅದಕ್ಕೆ ಪಶ್ಚಿಮದಿಕ್ಕಿನಲ್ಲಿ ಶ್ರೀಕಲ್ಪಕ್ಷೇತ್ರವನ್ನೂ ನೋಡಿದನು. ॥೩-೪-೫॥

ಹಿಂದೆ ಮಂದರಪರ್ವತವನ್ನು ಕಡೆಗೋಲನ್ನಾಗಿಯೂ, ಆದಿಶೇಷನನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಕ್ಷೀರಸಮುದ್ರವನ್ನು ಕಡೆಯುವುದಕ್ಕೋಸ್ಕರ, ದೇವತೆಗಳೂ ಮತ್ತು ರಾಕ್ಷಸರೂ ಇಲ್ಲಿ ಸೇರಿ ಆಲೋಚನೆಮಾಡಿದ್ದರು. ॥೬-೭॥

ದೇವತೆಗಳೂ ಮತ್ತು ರಾಕ್ಷಸರೂ ಮಹಾದೇವನಿಗೆ ನಮಸ್ಕರಿಸದೇ, ವಿಘ್ನೇಶ್ವರನನ್ನೂ ಪೂಜಿಸದೇ ಸಮುದ್ರವನ್ನು ಕಡೆಯಲು ಪ್ರಾರಂಭಿಸಿದರು. ಆ ಮಂಥನ

ಉಚ್ಚೈಃಶ್ರವಸಮಶ್ವಂ ಚ ನಾಗಮೈರಾವತಂ ಶಶಿಂ ।
ತಥೈವಾಪ್ಸರಸಾಂ ಕೋಟಿಂ ಧೇನುಂ ಕಲ್ಪತರುಂ ಮಣಿಂ ॥೯॥

ಧನ್ವಂತರಿಕರೋದ್ಭೂತಕಲಶಾಮೃತಪಾಯಿನಃ ।
ಲಕ್ಷ್ಮೀಂ ಚ ಜಗೃಹೇ ವಿಷ್ಣುಸ್ತತ್ರಾಭೂತ್ಕಾಲಕೂಟಕಂ ॥೧೦॥

ತಜ್ಜ್ವಾಲಾಕೀಲಿತಾಃ ಸರ್ವೇ ದಗ್ಧಾಂಗಾಃ ವಿಷ್ಣುಪೂರ್ವಕಾಃ ।
ತಜ್ಜ್ವಾಲಾಕುಲಿತೋ ವಿಷ್ಣುಃ ಕೃಷ್ಣೋಽಭೂತ್ಸುರಸತ್ತಮಃ ॥೧೧॥

ವಿದ್ರುತಾಶ್ಚ ತದಾ ದೈತ್ಯಾ ಸಮೀಯುಃ ಶರಣಂ ಶಿವಂ ।
ಸ್ತುವಂತಿ ದೇವಾಃ ಕೈಲಾಸೇ ದಕ್ಷಿಣೇತ್ರ ಸಮಾಗತಾಃ ॥೧೨॥

---

ದಿಂದುದ್ಭವಿಸಿದ ಅತ್ಯದ್ಭುತವಾದ ಅನೇಕ ರತ್ನಗಳನ್ನು ಎಲ್ಲಾ ದೇವತೆಗಳೂ ಸ್ವೀಕರಿಸಿದರು. ಉಚ್ಚೈಃಶ್ರವಸ್ಸೆಂಬ ಉತ್ತಮವಾದ ಕುದುರೆ, ಐರಾವತವೆಂಬ ಆನೆ, ಚಂದ್ರ, (ಕೋಟ್ಯಂತರ) ಅಪ್ಸರಸ್ತ್ರೀಯರ ಸಮೂಹ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಯೆಂಬ ರತ್ನ ಇವುಗಳನ್ನೆಲ್ಲಾ ದೇವತೆಗಳು ಆ ಸಮುದ್ರಮಥನದಿಂದ ಪಡೆದರು. ಈ ರತ್ನಗಳೆಲ್ಲಾ ಉತ್ಪನ್ನವಾದಮೇಲೆ ಧನ್ವಂತರಿ ಎಂಬುವನು ಕೈಯ್ಯಲ್ಲಿ ಅಮೃತಕಲಶವನ್ನಿಟ್ಟುಕೊಂಡು ಕ್ಷೀರಸಮುದ್ರದಿಂದ ಹೊರಬರಲು, ಆಗ ದೇವತೆಗಳೆಲ್ಲರೂ ಅಮೃತಪಾನಮಾಡಬೇಕೆಂದು ಉತ್ಸುಕರಾಗಿದ್ದರು. ಆನಂತರ ಉದ್ಭವಿಸಿದ ಲಕ್ಷ್ಮಿಯನ್ನು ಶ್ರೀಮನ್ನಾರಾಯಣನು ಮದುವೆಯಾದನು. ಇಷ್ಟೆಲ್ಲಾ ಆದಮೇಲೆ ಕೊನೆಯಲ್ಲಿ ಆ ಕ್ಷೀರಸಮುದ್ರಮಂಥನದಿಂದ ಕಾಲಕೂಟವೆಂಬ ಘೋರವಿಷವು ಹುಟ್ಟಿತು. ॥೮-೯-೧೦॥

ಆ ಕಾಲಕೂಟ ವಿಷದ ಜ್ವಾಲೆಯಿಂದ ವಿಷ್ಣುವೇ ಮುಂತಾದ ದೇವತೆಗಳ ಅವಯವಗಳೆಲ್ಲವೂ ಸುಟ್ಟುಹೋದವು. ಅದೇ ಕಾಲಕೂಟ ವಿಷಜ್ವಾಲೆಯಿಂದ ವ್ಯಾಪ್ತನಾದ ದೇವತೋತ್ತಮನೆನಿಸಿರುವ ವಿಷ್ಣುವು ಕೃಷ್ಣನೆಂಬ ಹೆಸರಿನಿಂದ ಕಪ್ಪು ಬಣ್ಣದವನಾದನು. ರಾಕ್ಷಸರೆಲ್ಲರೂ ಆ ವಿಷಜ್ವಾಲೆಗೆ ಹೆದರಿ ಓಡಿಹೋಗಿ ಶಿವನನ್ನು ಮರೆಹೊಕ್ಕರು. ದೇವತೆಗಳೂ ಸಹ ಭಯಪಟ್ಟು ಈ ದಕ್ಷಿಣಕೈಲಾಸಕ್ಕೆ ಬಂದು ಜಗದೀಶ್ವರನನ್ನು ಸ್ತೋತ್ರಮಾಡಿದರು. ॥೧೧-೧೨॥

॥ ದೇವಾ ಊಚುಃ ॥

ಓಂ ನಮಸ್ತೇ ದೇವದೇವಾಯ ನಮಸ್ತೇ ಜಗತಾಂ ಪತೇ ।
ನಮಸ್ತೇ ಶಶಿಚೂಡಾಯ ವ್ಯೋಮಕೇಶಾಯ ತೇ ನಮಃ ॥೧೩॥

ನಮಸ್ತೇ ಕಾಲಕಾಲಾಯ ನಮೋ ವೇದಾಂತವೇದಿನೇ ।
ನಮಃ ಸದಾಶಿವಾಯಾಥ ನಮಃ ಪರಶಿವಾಯ ತೇ ॥೧೪॥

ಮಹಾಕೈಲಾಸವಾಸಾಯ ಪಶೂನಾಂ ಪತಯೇ ನಮಃ ।
ನಮಸ್ತೇ ಭಕ್ತಪಾಲಾಯ ಸಹಮಾನಾಯ ಶಂಭವೇ ॥೧೫॥

ಪ್ರಾಣಾಯಾಮರತಾನಾಂ ತು ಮುಕ್ತಿದಾಯ ನಮೋ ನಮಃ ।
ನಮಸ್ತೇ ಚಂದ್ರಶಿರಸೇ ನಮೋ ದಿಗ್ವಾಸಸೇ ನಮಃ ॥೧೬॥

ನಮೋ ಜಪಜಯಾಯಾಥ ನಮೋ ಜಪ್ಯಾಯ ಮೀಢುಷೇ ॥೧೭॥

---

ವಿಷ್ಣು, ಬ್ರಹ್ಮಾದಿ ದೇವತೆಗಳಿಗೆಲ್ಲಾ ದೇವನೆನಿಸಿ, ಜಗದೊಡೆಯನಾಗಿರುವ ಪರಮೇಶ್ವರನೇ, ನಿನಗೆ ನಮಸ್ಕಾರ. ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಅಂತರಿಕ್ಷವನ್ನೇ ಕೂದಲಾಗುಳ್ಳವನೂ ಆದ ನಿನಗೆ ಪ್ರಣಾಮವು. ಯಮದೂತನೂ, ವೇದಾಂತಪ್ರತಿಪಾದ್ಯನೂ ಆದ ನಿನಗೆ ವಂದಿಸುತ್ತೇವೆ. ದೇವದೇವನೇ, ನೀನು ನಿತ್ಯಮಂಗಳಸ್ವರೂಪನೂ, ಇತರರಿಗೆ ಮಂಗಳವನ್ನುಂಟುಮಾಡುವವನೂ ಆಗಿರುವೆ. ಸ್ವಾಮಿಯೇ, ನಿನಗೆ ಪ್ರಣಾಮಗಳು. ॥೧೩-೧೪॥

ಮಹಾಕೈಲಾಸಪರ್ವತದಲ್ಲಿ ವಾಸಿಸುವವನೂ, ಸಕಲ ಭೂತಗಳಿಗೂ ಒಡೆಯನೂ ಆದ ನಿನಗೆ ನಮಸ್ಕಾರವು. ಭಕ್ತರನ್ನು ಬಿಡದೇ ಕಾಪಾಡುವವನೂ, ಅವರು ಕೊಡುವ ಕಷ್ಟಗಳನ್ನೆಲ್ಲಾ ಸಹಿಸಿಕೊಳ್ಳುವವನೂ, ಮಂಗಳಪ್ರದನೂ ಆದವನಿಗೆ ವಂದನೆಯು. ಪ್ರಾಣಾಯಾಮತತ್ಪರರಾದ ಜನಗಳಿಗೆ ಮೋಕ್ಷವನ್ನು ಕೊಡುವ ದೇವನಿಗೆ ಪ್ರಣಾಮವು. ಚಂದ್ರಚೂಡನೂ, ದಿಗಂಬರನೂ, ತನ್ನನ್ನು ಜಪಿಸುವುದರಿಂದ ಜಯವನ್ನುಂಟುಮಾಡುವವನೂ, ಜಪಾರ್ಹನೂ, ಸ್ತೋತ್ರಾರ್ಹನೂ ಆದ ದೇವದೇವನಿಗೆ ನಮಸ್ಕಾರಮಾಡುತ್ತೇವೆ. ॥೧೫-೧೬-೧೭॥

ನಮಃ ಶಿವಾಯ ತ್ರಿಪುರಾಣಿ ಹಂತ್ರೇ
ಪಾತ್ರೇ ಸುರಾಣಾಮಧಿಕಾಯ ವೇಧಸೇ ।
ನೇತ್ರೇ ಸಮಸ್ತಸ್ಯ ಜಗದ್ಗತಸ್ಯ
ಭೋಕ್ತ್ರೇ ಸಮಸ್ತೇಂದ್ರಿಯವರ್ಗಕಾಶಿನೇ ॥೧೮॥

ಇತಿ ಸ್ತುತ್ವಾ ಸುರಾಃ ಸರ್ವೇ ಪ್ರಣೇಮುರ್ಭಕ್ತಿಭಾವಿತಾಃ ।
ತಾನ್ವಿಲೋಕ್ಯ ಮಹಾದೇವೋ ವಾಚಮೂಚೇ ಗಭೀರಿಣೀಂ ॥೧೯॥

॥ ಶ್ರೀ ಈಶ್ವರ ಉವಾಚ ॥

ಮಾಂ ಗಣೇಶಂ ಚಾಪ್ರಣಮ್ಯ ಕರ್ಮಕರ್ತುಃ ಫಲಂ ತ್ವಿದಂ ।
ಉಪಾಯಮೇಕಂ ವಕ್ಷ್ಯಾಮಿ ಸಹ್ಯಭೂಧರಪರ್ವತೇ ॥೨೦॥

ಕ್ಷೇತ್ರಂ ಮಮಾಸ್ತಿ ವೈ ದೇವಾಃ ಶ್ರೀಮತ್ಪಾಂಡ್ಯೇಶ್ವರಾಭಿಧಂ ।
ತತ್ರ ಗಚ್ಛತ ಕಾವೇರೀ ಸಮಾಯಾಸ್ಯತಿ ಕಾಲತಃ ॥೨೧॥

ಕಾಲಕೂಟಮಿದಂ ಘೋರಂ ತಲ್ಲಿಂಗಸ್ಥೋಽಹಮೇವ ಹಿ ।
ಯುಷ್ಮದ್ಭಯವಿನಾಶಾರ್ಥಂ ತಲ್ಲಿಂಗಸ್ಥೋ ಗ್ರಸಾಮ್ಯಹಂ ॥೨೨॥

---

ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವವನೂ, ತ್ರಿಪುರವನ್ನು ಸಂಹರಿಸಿದವನೂ, ದೇವತೋತ್ತಮರಿಗೂ ಬ್ರಹ್ಮನಿಗೂ ರಕ್ಷಕನೂ, ಸಕಲ ಜಗತ್ಸ್ವರೂಪನಾದುದರಿಂದ ಜಗತ್ತಿಗೆಲ್ಲಾ ನೇತ್ರಪ್ರಾಯನಾಗಿರುವವನೂ, ಸಕಲೇಂದ್ರಿಯ ಸಮೂಹಗಳ ಸುಖವನ್ನು ಅನುಭವಿಸುತ್ತಾ ಪ್ರಕಾಶಿಸುತ್ತಿರುವ ದೇವದೇವನೂ ಆದ ನಿನಗೆ, ನಮಸ್ಕಾರ ಮಾಡುವೆವು. ॥೧೮॥

ಹೀಗೆ ದೇವತೆಗಳು ಎಲ್ಲರೂ ಪರಶಿವನನ್ನು ಸ್ತೋತ್ರಮಾಡಿ ಭಕ್ತಿಪೂರ್ವಕವಾಗಿ ನಮಸ್ಕಾರಮಾಡಿದರು. ಆಗ ಆ ಮಹಾದೇವನು ವಿನಯದಿಂದ ಈ ರೀತಿ ನಮಸ್ಕರಿಸಿ ನಿಂತಿರುವ ಅವರನ್ನು ನೋಡಿ ಗಂಭೀರವಾಗಿ ಹೀಗೆ ನುಡಿದನು. ॥೧೯॥

"ಓ ದೇವತೆಗಳಿರಾ, ನನ್ನನ್ನೂ, ಗಣಪತಿಯನ್ನೂ ನಮಸ್ಕರಿಸದೇ ನೀವು ಕಾರ್ಯಾರಂಭ ಮಾಡಿದ್ದರಿಂದ ನಿಮಗೆ ಇಂತಹ ಫಲವುಂಟಾಗಿರುವುದು. ಈಗ ನಾನೊಂದು ಉಪಾಯವನ್ನು ಹೇಳುವೆನು ಕೇಳಿರಿ. ದೇವತೆಗಳಿರಾ, ಸಹ್ಯಪರ್ವತದಲ್ಲಿ ಶ್ರೀಮತ್ಪಾಂಡ್ಯೇಶ್ವರವೆಂಬ ನನ್ನ ಒಂದು ಕ್ಷೇತ್ರವಿರುವುದು. ಕಾವೇರೀನದಿಯು

ಇತ್ಯುಕ್ತ್ವಾ ದೇವದೇವೇನ ದೇವಾ ಭಯಪರಾ ಯಯುಃ।
ತತ್ಕ್ಷಣಂ ತತ್ರ ಗರಲಮನುಧಾವತಿ ಪೃಷ್ಠತಃ ॥೨೩॥

ತ್ರಾಹಿ ತ್ರಾಹೀತಿ ಚ ಸುರಾಃ ಪತಂತೋ ಭಯವಿಹ್ವಲಾಃ ॥೨೪॥

॥ ದೇವಾ ಊಚುಃ ॥

ರಕ್ಷಾಸ್ಮಾನ್ ಶಶಿಶೇಖರ ತ್ರಿನಯನಾಪಾರವ್ಯಥಾಂ ಸಂಹರ
ಪಾಪಾರಣ್ಯದವಾನಲೋತ್ಥಭಯತೋ ಘೋರಂ ಗರಂ ಭಕ್ಷ ಭೋಃ।
ವೀಕ್ಷ್ಯಾಸ್ಮಾನ್ ಶರಣಾಗತಾನ್ಕರುಣಯಾ ಪಾಹಿ ಪ್ರಭೋ ಶಂಕರ
ಮಾತಾ ತ್ವಂ ಚ ಪಿತಾ ಪಿತಾಮಹ ವಿಭೋ ದೇವಾಸುರಾಣಾಂ ಗತಿಃ ॥೨೫॥

---

ಕ್ರಮವಾಗಿ ಕೊಂಚಕಾಲದಲ್ಲಿ ಅಲ್ಲಿಗೆ ಹರಿದುಬರುವಳು. ನಿಮಗೆ ಈಗ ಉಂಟಾಗಿರುವ ಹೆದರಿಕೆಯನ್ನು ಹೋಗಲಾಡಿಸುವುದಕ್ಕೋಸ್ಕರ ಆ ಪಾಂಡ್ಯೇಶ್ವರಲಿಂಗದಲ್ಲಿ ಅಂತರ್ಗತನಾದ ನಾನು ಘೋರವಾದ ಈ ಕಾಲಕೂಟ ವಿಷವನ್ನು ನುಂಗುತ್ತೇನೆ. ನೀವು ಧೈರ್ಯದಿಂದಿರಿ" ಎಂದು ದೇವದೇವನಾದ ಶಂಕರನು ಅಭಯಪ್ರದಾನ ಮಾಡಲು, ಆಗ ದೇವತೆಗಳೆಲ್ಲರೂ ಭಯಾಕ್ರಾಂತರಾಗಿ ಅಲ್ಲಿಂದ ಸಹ್ಯಾಚಲಕ್ಕೆ ಓಡಿದರು. ಮರುಕ್ಷಣದಲ್ಲಿಯೇ ಆ ಕಾಲಕೂಟವಿಷವೂ, ಅವರನ್ನು ಹಿಂಬಾಲಿಸಲು ದೇವತೆಗಳೆಲ್ಲರೂ ಮಹಾದೇವ, ನಮ್ಮನ್ನು ಕಾಪಾಡು, ಕಾಪಾಡು, ಎಂದು ಕೂಗುತ್ತಾ ಭೀತಿಗ್ರಸ್ತರಾಗಿ ನೆಲದಮೇಲೆ ಬಿದ್ದು ಶಿವನನ್ನು ಪ್ರಾರ್ಥಿಸಿದರು. ॥೨೦-೨೧-೨೨-೨೩-೨೪॥

ಓ ಚಂದ್ರಶೇಖರಸ್ವಾಮಿಯೇ, ನಮ್ಮನ್ನು ಕಾಪಾಡು ; ಎಲೈ ಮುಕ್ಕಣ್ಣನೇ, ಪಾಪಗಳೆಂಬ ಕಾಳ್ಗಿಚ್ಚಿನಿಂದುಂಟಾಗಿರುವ ಭಯದಿಂದ ಪೀಡಿತರಾದ ನಮ್ಮ ಅಪಾರವಾದ ದುಃಖವನ್ನೆಲ್ಲಾ ಸಂಹರಿಸುವನಾಗು ; ಪ್ರಭುವೇ, ಈ ಭಯಂಕರವಾದ ಕಾಲಕೂಟವಿಷವನ್ನು ಭಕ್ಷಿಸಿ, ಇದರ ಜ್ವಾಲೆಯಿಂದ ನಮ್ಮನ್ನುದ್ಧರಿಸು ಸ್ವಾಮಿ, ಎಲೈ ಜಗನ್ಮಂಗಳಕರನಾದ ಪ್ರಭುವೇ, ನಿನ್ನನ್ನು ಮರೆಹೊಕ್ಕಿರುವ ನಮ್ಮನ್ನು ದಯಾದೃಷ್ಟಿಯಿಂದ ನೋಡಿ, ಕಾಪಾಡು ದೇವ, ವಿಭುವೇ, ದೇವದೈತ್ಯರಿಗೆಲ್ಲಾ ತಾಯಿ, ತಂದೆ, ಅಜ್ಜ ಮುಂತಾದ ಬಂಧು ಬಳಗಗಳೆಲ್ಲವೂ ನೀನೇ ಆಗಿರುವೆ. ॥೨೫॥

ಇತ್ಥಂ ವಿಬುಧವಾಕ್ಯಂ ತೇ ತಲ್ಲಿಂಗಸ್ಥೋ ಮಹೇಶ್ವರಃ ।
ಸಂಭಕ್ಷ್ಯ ಗರಲಂ ಘೋರಂ ಶ್ರೀಕಂಠೋಽಭೂಚ್ಚ ತತ್ರ ಹಿ ॥೨೬॥

ದೇವೈಃ ಸ್ತುತೋ ಮಹಾದೇವಃ ಪ್ರಸೀದೇಶೋಕ್ತಿಪೂಜಿತಃ ।
ಭಕ್ತ್ಯಾ ಪರಮಯಾ ತತ್ರ ವಿಷ್ಣುಬ್ರಹ್ಮಾದಿಭಿಃ ಸುರೈಃ ॥೨೭॥

ತಾನುವಾಚ ಮಹಾದೇವಃ ಶ್ರೀಕಂಠೇಶೋ ಮಹೇಶ್ವರಃ ।
ಅಸ್ಮಿನ್ಸ್ಥಾನೇಽತ್ರ ಕಾವೇರ್ಯಾ ದಕ್ಷಿಣೇತ್ರಿತಟೇ ಸುರಾಃ ॥೨೮॥

ಸ್ನಾತ್ವಾ ತಸ್ಯಾಂ ಚ ಮಾಂ ಪೂಜ್ಯ ಶಿವಜ್ಞಾನಂ ಚ ವಿಂದತಿ ।
ಯತ್ರ ಯತ್ರ ಚ ಕಾವೇರ್ಯಾಂ ಕ್ಷೇತ್ರೇಷ್ವನ್ಯೇಷು ಮಾಂ ಸ್ಮರನ್॥೨೯॥

ಕಾವೇರ್ಯಾಂ ಸ್ನಾತಿ ಚ ನರಃ ಸರ್ವತೀರ್ಥಜಲಾಪ್ಲುತಃ ।
ಇದಂ ಸಮುಚ್ಚರನ್ದೇವಾಃ ಸ್ನಾನಾತ್ಕೋಟಿಗುಣಂ ಫಲಂ ॥೩೦॥

---

ಹೀಗೆ ದೇವತೆಗಳ ಸ್ತೋತ್ರವಚನಗಳಾದ ಮೇಲೆ ಆ ಲಿಂಗಾಂತರ್ಗತನಾದ ಮಹೇಶ್ವರನು ಬಹಿಃ ಆವಿರ್ಭವಿಸಿ, ಘೋರವಾದ ಆ ಕಾಲಕೂಟವಿಷವನ್ನು ತಿಂದು ಶ್ರೀಕಂಠ (ಗರಳಭಕ್ಷಣೆಯಿಂದ ಕಪ್ಪಾದ ಕೊರಳುಳ್ಳವನೆಂದು) ಪ್ರಸಿದ್ಧನಾದನು. ಆ ಸಂದರ್ಭದಲ್ಲಿ ವಿಷ್ಣು, ಬ್ರಹ್ಮ ಮುಂತಾದ ದೇವತೆಗಳು, ಈಶ್ವರ! ಪ್ರಸನ್ನನಾಗು ಎಂಬ ಮಾತುಗಳೊಡನೆ ತುಂಬಾ ಭಕ್ತಿಪುರಸ್ಸರವಾಗಿ ಪೂಜಿಸಿ ಸ್ತೋತ್ರಮಾಡಿದರು. ॥೨೬-೨೭॥

ದೇವದೇವೋತ್ತಮನೂ, ಸಕಲೈಶ್ವರ್ಯಭರಿತನೂ ಆದ ಆ ಶ್ರೀಕಂಠೇಶ್ವರನು ದೇವತೆಗಳನ್ನು ಕುರಿತು ಇಂತೆಂದನು ; ಓ ದೇವತೆಗಳಿರಾ! ಕಾವೇರೀನದಿಯ ದಕ್ಷಿಣದಿಕ್ಕಿನಲ್ಲಿರುವ ತ್ರಿಕೂಟ (ತ್ರಿಮುಕುಟ) ವೆಂಬ ಈ ಸ್ಥಳದಲ್ಲಿ ಸ್ನಾನಮಾಡಿ, ನನ್ನನ್ನು ಪೂಜೆಮಾಡುವವನು ಶಿವಜ್ಞಾನವನ್ನು ಪಡೆಯುತ್ತಾನೆ. ಕಾವೇರೀನದಿಯ ಇತರ ಯಾವ ಕ್ಷೇತ್ರಗಳಲ್ಲಿಯಾದರೂ ನನ್ನನ್ನು ಸ್ಮರಿಸಿಕೊಂಡು, ಸ್ನಾನಮಾಡುವವನು ಸಕಲತೀರ್ಥಗಳ ನೀರಿನಲ್ಲಿಯೂ ಸ್ನಾನಮಾಡಿದ ಫಲವನ್ನೇ ಹೊಂದುವನು. ಈಗ ನೀವು ಮಾಡಿದ ಸ್ತೋತ್ರವನ್ನು ಉಚ್ಚರಿಸಿ ಸ್ನಾನಮಾಡುವವರಿಗಾದರೋ ಅದಕ್ಕಿಂತಲೂ ಕೋಟಿಪಾಲು ಪುಣ್ಯವು ಅಧಿಕವಾಗಿ ಲಭಿಸುವುದೆಂದು ತಿಳಿಯಿರಿ. ॥೨೮-೨೯-೩೦॥

ಉಪಾಸ್ಯತಾಂ ಮಹಾದೇವೋ ವಿಶ್ವೇಶಸ್ತ್ರಿಪುರಾಂತಕಃ ।
ಶ್ರೀಕಂಠೋ ಮೇರುಕೋದಂಡಶ್ಚಂಡಪಾದಹರೋ ಹರಃ ॥೩೧॥

ತತಃ ಪ್ರಭೃತಿ ಪದ್ಮೇಶೋ ಶ್ರೀಕಂಠೇಶೋಽಭವದ್ದ್ವಿಜಾಃ ।
ತತ್ರ ಶ್ರೀಕಂಠಸೇವಾರ್ಥಂ ವೈಕುಂಠೋಽಪಿ ಸಹ ಸ್ಥಿತಂ ॥೩೨॥

ತಸ್ಮಾಚ್ಛ್ರೀಕಂಠಮುತ್ಕೃಷ್ಟಂ ಕ್ಷೇತ್ರೇಷ್ವಾದ್ಯಂ ಚಿರಂತನಂ ।
ಸಂಸ್ಮರನ್ಪ್ರಾತರುತ್ಥಾಯ ಸರ್ವಕ್ಷೇತ್ರಸ್ಮೃತೇಃ ಫಲಂ ॥೩೩॥

ಪ್ರಾಪ್ನೋತಿ ನಿಯಮಾನ್ಮರ್ತ್ಯಃ ಸ್ನಾನೇ ಕೋಟಿಗುಣಂ ಫಲಂ ।
ಕಪಿಲಾಸಂಗಮೇ ಪ್ರಾಚ್ಯಾಂ ಕಾವೇರ್ಯಾಶ್ಚ ತ್ರಿಕೂಟಕಂ ॥೩೪॥

ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಮುನಿಭಿಃ ಪರಿಸೇವಿತಂ ।
ಕಪಿಲೇನ ಸಮಾಯುಕ್ತಾ ನದೀ ಸಹ್ಯೋತ್ತಮಾಂ ಗತಾ ॥೩೫॥

---

ಓ ದೇವತೆಗಳಿರಾ! ದೇವತೋತ್ತಮನೂ, ಜಗದೊಡೆಯನೂ, ತ್ರಿಪುರಾಸುರ ನಾಶಕನೂ, ಮೇರುಪರ್ವತವನ್ನೇ ಬಿಲ್ಲುಮಾಡಿಕೊಂಡಿರುವವನೂ, ಘೋರವಾದ ಪಾಪವನ್ನು ನಾಶಮಾಡುವವನೂ ಆದ ಶ್ರೀಕಂಠನನ್ನೇ ನೀವೆಲ್ಲರೂ ಉಪಾಸನೆ ಮಾಡಿರಿ. ಎಲೈ ಬ್ರಾಹ್ಮಣರೇ! ಈ ಕಾಲಕೂಟವಿಷಭಕ್ಷಣೆಯಿಂದ ಹಿಂದೆ ಪದ್ಮೇಶನೆಂದು ಪ್ರಸಿದ್ಧವಾಗಿದ್ದ ಆ ಶಿವಲಿಂಗವು ಶ್ರೀಕಂಠೇಶನೆಂದು ಪ್ರಸಿದ್ಧಿಹೊಂದಿತು. ಆ ಶ್ರೀಕಂಠೇಶ್ವರನನ್ನು ಸೇವೆಮಾಡುವುದಕ್ಕೋಸ್ಕರವಾಗಿ ಮಹಾವಿಷ್ಣುವೂ ಯಾವಾಗಲೂ ಜೊತೆಯಲ್ಲಿಯೇ ಇರುವನು. ॥೩೧-೩೨॥

ಆದ್ದರಿಂದ ಶ್ರೀಕಂಠಕ್ಷೇತ್ರವು ಕ್ಷೇತ್ರಗಳೊಳಗೆಲ್ಲಾ ಉತ್ತಮವೂ, ಮೊದಲನೆಯದೂ, ಬಹುಪುರಾತನವಾದುದೂ ಆಗಿರುವುದು. ಇಂತಹ ಕ್ಷೇತ್ರವನ್ನು ಬೆಳಗ್ಗೆ ಎದ್ದು ಸ್ಮರಣೆಮಾಡುವ ಮಾನವನು ಎಲ್ಲಾ ಕ್ಷೇತ್ರಗಳ ಫಲವನ್ನೂ ಹೊಂದುವನು. ಕಾವೇರಿಯ ಪೂರ್ವದಿಕ್ಕಿನಲ್ಲಿ ಕಪಿಲಾನದಿಯು ಸಂಗಮವಾಗುವ ವಾಗುವ ತ್ರಿಕೂಟಕ್ಷೇತ್ರದಲ್ಲಿ (ತಿರುಮಕೂಡಲು) ನಿಯಮದಿಂದ ಆ ಶ್ರೀಕಂಠ ಸ್ಮರಣೆಮಾಡುತ್ತ ಸ್ನಾನಮಾಡುವ ಮಾನವನು, ಕೋಟಿಪಾಲು ಹೆಚ್ಚು ಪುಣ್ಯಭಾಗಿಯಾಗುತ್ತಾನೆ. ॥೩೩-೩೪॥

ಈ ತ್ರಿಕೂಟಕ್ಷೇತ್ರವು ಸಕಲ ಕ್ಷೇತ್ರಗಳಲ್ಲಿಯೂ ಉತ್ತಮವಾದ ಕ್ಷೇತ್ರವೆನಿಸಿ ಯಾವಾಗಲೂ ಮುನಿಗಳಿಂದ ಸೇವಿಸಲ್ಪಡುತ್ತಿರುವುದು. ಕಪಿಲಮುನಿಯಿಂದ

ಕಪಿಲಾಖ್ಯಾ ಭವೇತ್ತತ್ರ ತ್ರಿಕೂಟೇಶಶ್ಚ ತೇನ ಹಿ ।
ಪೂಜಿತೋಽಥ ಸ್ತುತಸ್ತೇನ ಕಪಿಲೇನ ಮಹಾತ್ಮನಾ ॥೩೬॥

॥ ಕಪಿಲ ಉವಾಚ ॥

ದೇವದೇವ ಹರ ಶಂಕರ ಸಾಂಬ ಸೋಮ
ಗಂಗೋತ್ತಮಾಂಗ ಸುಕುರಂಗ ಪಿನಾಕಪಾಣೇ ।
ಮಾಂ ಮೋಚಯಾಶು ಸಗರಾತ್ಮಜನಾಶ ಪಾಪಾತ್
ಶಂಭೋ ತ್ರಿಕೂಟಶಿವಲಿಂಗ ಸಮರ್ಚನಾಚ್ಚ ॥೩೭॥

ಸ್ನಾನಾಚ್ಚ ಸಹ್ಯೋದ್ಭವಯೋಶ್ಚ ಸದ್ಯೋ
ಮರುದ್ವೃಧಾ ಕಪಿಲಯೋಶ್ಚ ಸಂಗೇ ।
ಮತ್ಪಾಪಭಂಗೋ ಹ್ಯಭವತ್ಪ್ರಭೋ ಸದಾ
ಯಥಾ ಮಮಾಭೂಚ್ಚ ತಥಾ ನರಾಣಾಂ ॥೩೮॥

---

ಪ್ರೇರಿತವಾಗಿ ಹೊರಟ ನದಿಯು ಸಹ್ಯಪರ್ವತದಲ್ಲಿ ಹುಟ್ಟಿದ ಕಾವೇರಿಯೊಡನೆ ಸಂಗಮವಾಗಿ, ' ಕಪಿಲಾ ' ಎಂಬ ಹೆಸರಿನಿಂದ ಪ್ರಸಿದ್ಧಿಪಡೆದಿರುವುದು. ಆ ಕಪಿಲ ಮಹಾಮುನಿಯಿಂದಲೂ ಈ ಕ್ಷೇತ್ರದಲ್ಲಿರುವ ತ್ರಿಕೂಟೇಶ್ವರನು ಪೂಜಿಸಲ್ಪಟ್ಟು ಸ್ತೋತ್ರಮಾಡಲ್ಪಟ್ಟಿರುವನು. ॥೩೫-೩೬॥

ದೇವಾದಿದೇವನೂ, ಪಾಪನಾಶಕನೂ, ಮಂಗಳಕರನೂ, ಅಂಬಿಕಾಪತಿಯೂ, ಉಮಾಸಹಚರನೂ, ಗಂಗೆಯನ್ನು ತಲೆಯಲ್ಲಿ ಅಲಂಕರಿಸಿರುವವನೂ, ಉತ್ತಮ ವಾದ ಜಿಂಕೆ ಮತ್ತು ಪಿನಾಕವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವವನೂ ಆದ ಶಂಭುವೇ, ತ್ರಿಕೂಟದಲ್ಲಿರುವ ಶಿವಲಿಂಗಪೂಜೆಯಿಂದ ಸಂತುಷ್ಟನಾಗಿ, ನೀನು ಸಗರ ಪುತ್ರರನ್ನು ನಾಶಮಾಡಿದ ಪಾಪರಾಶಿಯಿಂದ ನನ್ನನ್ನು ಜಾಗ್ರತೆಯಾಗಿ ಬಿಡುಗಡೆ ಮಾಡು. ॥೩೭॥

ಮಹಾದೇವನೇ, ಈ ಸಹ್ಯಪರ್ವತದಲ್ಲಿ ಹುಟ್ಟಿದ ಮರುದ್ವೃಧಾ(ಕಾವೇರೀ) ಮತ್ತು ಕಪಿಲಾನದಿಗಳ ಸಂಗಮಕ್ಷೇತ್ರದಲ್ಲಿ ಸ್ನಾನಮಾಡಿದ್ದರಿಂದ ನನ್ನ ಪಾಪಗಳೆಲ್ಲವೂ ಈ ಕೂಡಲೇ ಪರಿಹಾರವಾಗಲಿ. ಪ್ರಭೋ! ನನ್ನಂತೆಯೇ ಈ ಸಂಗಮ ಸ್ಥಳದಲ್ಲಿ ಸ್ನಾನಮಾಡುವ ಇತರ ಮಾನವರಿಗೂ ಸಮಸ್ತ ಪಾಪಗಳೂ ಪರಿಹಾರ ವಾಗಲೆಂದು ಅನುಗ್ರಹಿಸು ಸ್ವಾಮಿ! ॥೩೮॥

ಇತ್ಥಂ ತೇನ ಮುನೀಶ್ವರೇಣ ಕಥಿತಂ ಪ್ರಾದಾನ್ಮಹೇಶಸ್ತದಾ
ತಸ್ಮಾತ್ತಾಂ ಕಪಿಲಾಯುತಾಂ ಗಿರಿಭವಾಂ ಕಾವೇರಿಕಾಂ ಸ್ನಾಸ್ಯತಾಃ।
ಶ್ರೀಕಂಠಂ ಚ ತ್ರಿಕೂಟವೀಕ್ಷಣಪರಾನ್ತ್ಯಕ್ತ್ವಾನ್ಯಶಿಕ್ಷೋ ಯಮಃ
॥೩೯॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಕಪಿಲಾನದ್ಯುತ್ಪತ್ತಿ
ಸಮುದ್ರಮಥನ ವಿಷಭಕ್ಷಣ ಶ್ರೀಕಂಠಕ್ಷೇತ್ರವರ್ಣನೇ
ನವಮೋಽಧ್ಯಾಯಃ

---

ಹೀಗೆ ಆ ಕಪಿಲ ಮುನಿಯು ಕೇಳಿಕೊಂಡಂತೆಯೇ ಮಹೇಶ್ವರನು ವರವನ್ನು ಅನುಗ್ರಹಿಸಿದನು. ಆದ್ದರಿಂದ ಸಹ್ಯಪರ್ವತದಲ್ಲಿ ಹುಟ್ಟಿದ ಆ ಕಪಿಲಾನದಿಯು ಕಾವೇರಿಯೊಡನೆ ಸಂಗಮವಾಗುವ ಸ್ಥಾನದಲ್ಲಿ ಸ್ನಾನಮಾಡುತ್ತಾ, ಶ್ರೀಕಂಠೇಶ್ವರ ನನ್ನೂ ದರ್ಶನಮಾಡುವುದರಲ್ಲಿ ನಿರತರಾಗಿರುವ ಭಕ್ತಜನರನ್ನು ಬಿಟ್ಟು ಇತರ ಜನಗಳನ್ನು ಮಾತ್ರ ಯಮನು ಶಿಕ್ಷೆಮಾಡುತ್ತಾನೆ. ಅವರನ್ನೆಂದಿಗೂ ಶಿಕ್ಷಿಸುವು ದಿಲ್ಲ ಎಂದು ತ್ರಿಕೂಟಕ್ಷೇತ್ರದ ಮಹಿಮೆಯನ್ನು ಕುಮಾರಸ್ವಾಮಿಯು ಜೈಗೀಷ ವ್ಯಾದಿಗಳಿಗೆ ಶ್ರುತಪಡಿಸಿದನು. ॥೩೯॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಕಪಿಲಾನದಿಯ
ಉತ್ಪತ್ತಿ, ಸಮುದ್ರಮಥನದಿಂದುಂಟಾದ ಕಾಲಕೂಟವಿಷವನ್ನು
ಪಾನಮಾಡಿದ ಶ್ರೀಕಂಠೇಶ್ವರಕ್ಷೇತ್ರದ ವರ್ಣನೆಯೆಂಬ
ಒಂಬತ್ತನೆಯ ಅಧ್ಯಾಯವು ಮುಗಿಯಿತು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ದಶಮೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತತಶ್ಚಕ್ರೇಶದಶಕೇ ಆಗ್ನೇಯ್ಯೇ ಕಿಂಚಿದೇವ ಹಿ ।
ಸ್ನಾತಾನಾಂ ತ್ರಿತಯಂ ತತ್ರ ಮಹೇಶಸ್ಯ ಪರಾತ್ಮನಃ ॥೧॥

ಮಧ್ಯಸ್ಥಾಮಪಿ ಕಾವೇರ್ಯಾಮಖಂಡಾಯಾಶ್ಚ ತೀರಗಾನ್ ।
ಬಹುತ್ವಾತ್ತಾನಿ ಸಂಖ್ಯಾತುಂ ಕೀರ್ತಿತಾನಿ ನ ವೈ ಮಯಾ ॥೨॥

ರತ್ನಾದ್ರಿಶೋ ಮರಕತನಗೇಶಸ್ತೃಣಶಂಕರಃ ।
ಕ್ರೋಶಮಾತ್ರೇಣ ಕಾವೇರ್ಯಾ ಸ್ಥಿತಾನಿ ತ್ರಿಸ್ಥಲಾನ್ಯಪಿ ॥೩॥

---

## ಹತ್ತನೆಯ ಅಧ್ಯಾಯ

ಆಮೇಲೆ ಚಕ್ರೇಶಕ್ಷೇತ್ರವೇ ಮೊದಲಾದ ಹತ್ತು ಕ್ಷೇತ್ರಗಳ ಆಗ್ನೇಯ ದಿಕ್ಕಿನಲ್ಲಿ ಎಲ್ಲೋ ಕೆಲವು ಕ್ಷೇತ್ರಗಳಿರುವುವು. ಅವುಗಳಲ್ಲಿ ಮೂರು ಶಿವಕ್ಷೇತ್ರಗಳು ಪ್ರಸಿದ್ಧವಾಗಿವೆ. ಅಲ್ಲಿ ಸ್ನಾನಮಾಡಿದವರಿಗೆ ಪರಮಪುರುಷನೆನಿಸಿದ ಮಹೇಶ್ವರನ ಸಾನ್ನಿಧ್ಯವು ದೊರೆಯುವುದು. ಕಾವೇರಿಯ ಮಧ್ಯಪ್ರದೇಶದಲ್ಲಿಯೂ ಕೆಲವು ಕ್ಷೇತ್ರಗಳಿರುವುವು. ಮಧ್ಯೆ ಎಲ್ಲಿಯೂ ಕವಲೊಡೆಯದೇ ಹರಿಯುವ ಅಖಂಡ ಕಾವೇರಿಯ ದಡದಲ್ಲಿರುವ ಕ್ಷೇತ್ರಗಳು ಬಹಳವಾಗಿರುವುದರಿಂದ ಅವುಗಳನ್ನು ಎಣಿಸುವುದಕ್ಕೂ ಸಾಧ್ಯವಿಲ್ಲ. ಆದ್ದರಿಂದಲೇ ನಾನು ಅವುಗಳನ್ನು ಇಲ್ಲಿ ಹೇಳಲಿಲ್ಲ. ||೧-೨||

ರತ್ನಾದ್ರೀಶ, ಮರಕತಪರ್ವತೇಶ್ವರ ಮತ್ತು ತೃಣಶಂಕರ ಎಂಬ ಮೂರು ಸ್ಥಲಗಳೂ ಕಾವೇರಿಯ ನದಿಯ ದಡದಲ್ಲಿ ಒಂದು ಹರಿದಾರಿ ದೂರದೊಳಗೇ

ತೇಷು ಮುಖ್ಯೋ ರತ್ನಗಿರಿಸ್ತಥಾ ಮರಕತಾಚಲಃ ।
ತೃಣಜ್ಯೋತೀಶ್ವರಶ್ಚೈವ ಬ್ರಹ್ಮವಿಷ್ಣುಮಹೇಶ್ವರೈಃ ॥೪॥

ಸೃಷ್ಟಿಪಾಲನಸಂಹಾರಂ ಕರ್ತುಂ ತತ್ರ ಸುರೋತ್ತಮಾಃ ।
ಮಹಾಘೋರತರಂ ತತ್ರ ತಪಶ್ಚಕ್ರುಃ ಪೃಥಕ್ಪೃಥಕ್ ॥೫॥

ಬ್ರಹ್ಮಾ ಸ್ವಲೋಕಾದಾಗತ್ಯ ರಾಶಿಂ ಮರಕತಸ್ಯ ಹಿ ।
ಚಕಾರ ಶೈಲಸಂಕಾಶಂ ಲಿಂಗಂ ತತ್ರ ಪಿನಾಕಿನಃ ॥೬॥

ಖ್ಯಾತಂ ಮರಕತೇಶಾನಂ ಸಂಪೂಜ್ಯ ಪರಮೇಶ್ವರಂ ।
ಪಂಚಾಮೃತೈಃ ಪಂಚಗವ್ಯೈಸ್ತಥಾ ಪಂಚಫಲೋದಕೈಃ ॥೭॥

ಗಂಧೋದಕೈಃ ಸ ಕರ್ಪೂರೈಃ ಪಾಟಲೋದಕಮಿಶ್ರಿತೈಃ ।
ಕುಂಭೈಶ್ಚ ಸಿಷಿಚೇ ಬ್ರಹ್ಮಾ ರುದ್ರೈರ್ಮರಕತೇಶ್ವರಂ ॥೮॥

ಧೂಪೈರ್ದೀಪೈರ್ಬಿಲ್ವಪತ್ರೈಃ ಪದ್ಮೈಃ ಸೌಗಂಧಿಕೈಃ ಸುಮೈಃ ।
ವಸ್ತ್ರೈರಾಭರಣೈಶ್ಚೈವ ಭಕ್ಷ್ಯಭೋಜ್ಯನತಿಕ್ರಮೈಃ ॥೯॥

---

ಇರುವುವು. ಈ ಮೂರೂ ತುಂಬಾ ಪ್ರಸಿದ್ಧವಾದವುಗಳು. ಹಿಂದೆ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂವರೂ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಕ್ರಮವಾಗಿ ನಡೆಸುವ ಶಕ್ತಿ ಪಡೆಯುವುದಕ್ಕೋಸ್ಕರ ಈ ಮೂರು ಸ್ಥಳಗಳಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ಘೋರವಾದ ತಪಸ್ಸನ್ನಾಚರಿಸಿದರು. ॥೩-೪-೫॥

ಬ್ರಹ್ಮನು ತನ್ನ ಸತ್ಯಲೋಕದಿಂದ ಬಂದ ಮರಕತವಜ್ರಗಳನ್ನು ಬೆಟ್ಟಕ್ಕೆ ಸಮಾನವಾದ ಎತ್ತರದಲ್ಲಿ ರಾಶಿಹಾಕಿಸಿ, ಅಲ್ಲಿ ಆ ಪಿನಾಕಪಾಣಿಯಾದ ಶಿವನ ಲಿಂಗವನ್ನು ನಿರ್ಮಿಸಿಕೊಂಡು, ಮರಕತೇಶ್ವರನೆಂದು ಪ್ರಸಿದ್ಧನಾಗಿರುವ ಪರಮೇಶ್ವರನನ್ನು ಅಲ್ಲಿ ಪೂಜೆಮಾಡಲುದ್ಯುಕ್ತನಾಗಿ, ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ ಈ ಪಂಚಾಮೃತದ್ರವ್ಯಗಳಿಂದಲೂ, ಪಂಚಗವ್ಯ (ಹಾಲು, ಮೊಸರು, ತುಪ್ಪ, ಗೋಮಯ, ಗೋಮೂತ್ರ) ದಿಂದಲೂ, ಐದು ಹಣ್ಣಿನ ರಸದಿಂದಲೂ, ಗಂಧಮಿಶ್ರವಾದ ಪಚ್ಚಕರ್ಪೂರ, ಪನ್ನೀರುಗಳಿಂದ ಯುಕ್ತವಾದ ನೀರಿನಿಂದಲೂ ರುದ್ರಮಂತ್ರಪೂರ್ವಕವಾಗಿ ಆ ಮರಕತೇಶ್ವರನಿಗೆ ಅಭಿಷೇಕ ಮಾಡಿದನು. ॥೬-೭-೮॥

ಹೀಗೆ ಅಭಿಷೇಕಮಾಡಿದ ಮೇಲೆ, ಧೂಪ, ದೀಪಗಳನ್ನು ಸಮರ್ಪಿಸಿ, ಬಿಲ್ವ

ಸಂಪೂಜ್ಯೈವಂ ಪ್ರಜಾನಾಥಸ್ತುಷ್ಟಾವಾತ್ರ ಮಹೇಶ್ವರಂ ॥೧೦॥

॥ ಬ್ರಹ್ಮೋವಾಚ ॥

ಹೇ ರುದ್ರ ಶಂಭೋ ಭಗವನ್ಪ್ರಸೀದ
ಪಿನಾಕಪಾಣೇ ಮಮ ಸೃಷ್ಟಿಶಕ್ತಿಂ ।
ಪ್ರದೇಹಿ ದೇವೇಶ ಮಹೇಶ ವಿಶ್ವಾ-
ಧಿಕೇಶ ಸರ್ವೇಶ ದಯಸ್ವ ದೀನೇ ॥೧೧॥

ಇತ್ಥಂ ಸ ಬ್ರಹ್ಮಣೋ ವಾಕ್ಯಂ ಶ್ರುತ್ವಾ ಮರಕತೇಶ್ವರಃ ।
ಉಮಾಚಾಂಬಾತಾರಕಾದಿವಿಘ್ನೇಶೈಶ್ಚ ಸಮನ್ವಿತಃ ॥೧೨॥

ಪ್ರದದೌ ತತ್ಸ್ತುತೇಸ್ತಸ್ಯ ಬ್ರಹ್ಮಣೋಽನಂತಶಕ್ತಿಧೃಕ್ ।
ಋಗ್ಯಜುಸ್ಸಾಮಾಥರ್ವಣ ಇತಿಹಾಸಪುರಾಣಕಂ ॥೧೩॥

---

ದಳ, ತಾವರೆ, ಸುಗಂಧಭರಿತವಾದ ಇತರ ಹೂಗಳು, ವಸ್ತ್ರ, ಒಡವೆ ಮುಂತಾದವುಗಳಿಂದ ಪೂಜಿಸಿ, ಭಕ್ಷ್ಯ, (ತಿಂಡಿಗಳು) ಭೋಜ್ಯ, (ಅನ್ನವೇ ಮೊದಲಾದ ಇತರ ಪದಾರ್ಥಗಳು) ಗಳನ್ನು ನಿವೇದನಮಾಡಿ, ನಮಸ್ಕಾರಮಾಡಿದನು. ಹೀಗೆ ಆ ಮರಕತೇಶ್ವರನನ್ನು ಪ್ರಜೆಗಳಿಗೊಡೆಯನಾದ ಬ್ರಹ್ಮನು ಪೂಜೆ ಮಾಡಿದಮೇಲೆ ಇದೇ ಸ್ಥಳದಲ್ಲಿ ಮಹೇಶ್ವರನನ್ನು ಈರೀತಿ ಸ್ತೋತ್ರಮಾಡಿದನು. ॥೯-೧೦॥

ಭಕ್ತರ ಪಾಪಗಳನ್ನು ಹೋಗಲಾಡಿಸುವ ಷಡ್ಗುಣೈಶ್ವರ್ಯಸಂಪನ್ನನಾದ ಶಂಭುವೇ, ಪಿನಾಕವೆಂಬ ಬಿಲ್ಲನ್ನು ಹಿಡಿದಿರುವ ನೀನು ನನ್ನಲ್ಲಿ ಅನುಗ್ರಹ ಮಾಡಿ, ನನಗೆ ಈ ಜಗತ್ತನ್ನು ಸೃಷ್ಟಿಮಾಡುವ ಶಕ್ತಿಯನ್ನು ಅನುಗ್ರಹಿಸು. ಎಲೈ ದೇವತೆಗಳಿಗೊಡೆಯನಾದ ಮಹೇಶ್ವರನೇ, ಜಗಚ್ಛ್ರೇಷ್ಠರೆನಿಸಿದ ಇಂದ್ರಾದಿಗಳಿಗೂ ಒಡೆಯನೂ, ಸಕಲ ಜಗನ್ನಿಯಾಮಕನೂ ಆಗಿರುವ ನೀನು ದೀನನಾದ ನನ್ನಲ್ಲಿ ದಯವಿಡು, ಎಂದು ಬ್ರಹ್ಮನು ಮರಕತೇಶ್ವರನನ್ನು ಸ್ತೋತ್ರಮಾಡಿದನು. ॥೧೧॥

ಹೀಗೆ ಬ್ರಹ್ಮನ ಸ್ತೋತ್ರರೂಪವಾದ ವಾಕ್ಯವನ್ನು ಕೇಳಿ ಮರಕತೇಶ್ವರನು, ಅಂಬಿಕೆ, ಕುಮಾರಸ್ವಾಮಿ ಮತ್ತು ವಿಘ್ನೇಶ್ವರರೊಡನೆ ಪ್ರತ್ಯಕ್ಷನಾಗಿ ಅವನ ಸ್ತೋತ್ರಕ್ಕೆ ಮೆಚ್ಚಿ, ಬ್ರಹ್ಮನಿಗೆ ಅಪಾರಶಕ್ತಿಯುಕ್ತನಾದ ಆ ದೇವದೇವನು, ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳೆಂಬ ನಾಲ್ಕು ವೇದಗಳನ್ನೂ, ಇತಿಹಾಸ ಪುರಾಣಗಳನ್ನೂ, ಧರ್ಮಶಾಸ್ತ್ರಗಳು, ನಾಟ್ಯಶಾಸ್ತ್ರ,

ಧರ್ಮಶಾಸ್ತ್ರಾಣಿ ರತಯಃ ಗಾಂಧರ್ವಾಂ ದೈವಮುತ್ತಮಂ ।
ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಜ್ಯೋತಿಷಂ ತಥಾ ॥೧೪॥

ಈಶಾನ್ ಸರ್ವವಿದ್ಯಾನಾಂ ಪ್ರದದೌ ಬ್ರಹ್ಮಣೋ ಶ್ರುತೀಃ ।
ತಾಃ ಪ್ರಾಪ್ಯ ಸಸೃಜೇ ಧಾತಾ ಜಗದೇತಚ್ಚರಾಚರಂ ॥೧೫॥

ದೇವಾಸುರನರಂ ತಿರ್ಯಗ್ಯಥಾಪೂರ್ವಂ ಯುಗೇ ಯುಗೇ ।
ಸೃಷ್ಟಸ್ಯ ಜಗತಸ್ತೇನ ಬ್ರಹ್ಮಣಾ ಪಾಲನೇ ಹರಿಃ ॥೧೬॥

ವೈಕುಂಠಲೋಕಾದಾಗತ್ಯ ರತ್ನಾನ್ಯಾನೀಯ ರಾಶಿಮತ್ ।
ಚಕಾರ ವಿಷ್ಣುರ್ನಗವದ್ರತ್ನಾದ್ರಿಸ್ತೇನ ಸೋಽಭವತ್ ॥೧೭॥

ರತ್ನಾದ್ರಿಶಿಖರೇ ವಿಷ್ಣುಃ ರತ್ನಾದ್ರೀಶಂ ಮಹೇಶ್ವರಂ ।
ಸಂಸ್ಥಾಪ್ಯ ಪೂಜಯಾಮಾಸ ಸೃಷ್ಟಿಪಾಲನಹೇತವೇ ॥೧೮॥

---

ಗಾಂಧರ್ವವಿದ್ಯೆ, ದೈವವಿದ್ಯೆ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಜ್ಯೋತಿಷ ಮತ್ತು ಛಂದಸ್ಸು ಈ ಷಡಂಗಗಳನ್ನೂ ಸಹ ಸಮಗ್ರವಾಗಿ ಅನುಗ್ರಹಿಸಿದನು. ||೧೨-೧೩-೧೪||

ಸಕಲ ವಿದ್ಯೆಗಳಿಗೂ ಒಡೆಯನಾದ ಈಶ್ವರನು ಬ್ರಹ್ಮನಿಗೆ ಈರೀತಿ ವೇದ ವೇದಾಂಗಗಳನ್ನೆಲ್ಲಾ ಅನುಗ್ರಹಿಸಿ ಕೊಟ್ಟನು. ಆಮೇಲೆ ಬ್ರಹ್ಮನು ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವನ್ನೂ ವೇದ ವೇದಾಂಗಗಳ ಸಹಾಯದಿಂದ ಹಿಂದಿನ ಪ್ರತಿಯುಗಗಳಲ್ಲಿ ಇದ್ದಂತೆ ದೇವತೆಗಳು, ರಾಕ್ಷಸರು, ಮನುಷ್ಯರು ಮತ್ತು ತಿರ್ಯಕ್ಪ್ರಾಣಿಗಳು ಮುಂತಾದವುಗಳನ್ನೆಲ್ಲಾ ಸೃಷ್ಟಿಮಾಡಿದನು. ||೧೫||

ಹೀಗೆ ಬ್ರಹ್ಮನಿಂದ ಸೃಷ್ಟಿಮಾಡಲ್ಪಟ್ಟ ಪ್ರಪಂಚವನ್ನು ಕಾಪಾಡುವುದಕ್ಕೋಸ್ಕರ ವಿಷ್ಣುವು ವೈಕುಂಠಲೋಕದಿಂದ ಭೂಮಿಗೆ ಬಂದು, ಅಲ್ಲಿಂದ ರಾಶಿಯಾಗಿ ರತ್ನಗಳನ್ನು ತಂದು, ಪರ್ವತದಂತೆ ರಾಶಿಹಾಕಿಸಿದನು. ಇದರಿಂದ ಅದು ರತ್ನಾದ್ರಿಯೆಂದು ಆಗ ಪ್ರಸಿದ್ಧವಾಯಿತು. ||೧೬-೧೭||

ರತ್ನಾದ್ರಿಶಿಖರದಲ್ಲಿ ವಿಷ್ಣುವು ರತ್ನಾಚಲೇಶ್ವರನನ್ನು ಪ್ರತಿಷ್ಠೆಮಾಡಿ, ಬ್ರಹ್ಮಸೃಷ್ಟವಾದ ಜಗತ್ತನ್ನು ಕಾಪಾಡುವ ನಿಮಿತ್ತವಾಗಿ ತನಗೆ ಶಕ್ತಿಯುಂಟಾಗುವುದಕ್ಕೋಸ್ಕರ ಪೂಜೆಮಾಡಿದನು. ಪಂಚಾಮೃತ, ಪಂಚಗವ್ಯ, ಪಂಚಫಲೋದಕಗಳು,

ಪಂಚಾಮೃತೈಃ ಪಂಚಗವ್ಯೈಸ್ತಥಾ ಪಂಚಫಲೋದಕೈಃ ।
ಕರ್ಪೂರಪಾಟಲೋಶೀರಗಂಧೋದಕಕುಶೋದಕೈಃ ॥೧೯॥

ಕಾವೇರೀಶೀತಲಜಲೈಃ ರುದ್ರಸೂಕ್ತೈಶ್ಚ ಶಂಕರಂ ।
ಸಮಭ್ಯಷಿಂಚದ್ಭಕ್ತ್ಯೈವ ವಸ್ತ್ರೈರಾಭರಣೈರ್ಹರಿಃ ॥೨೦॥

ಬಿಲ್ವಪತ್ರೈಶ್ಚ ಕಲ್ಹಾರೈರ್ನೀಲೋತ್ಪಲಸುಮೈರಪಿ ।
ಪರಿಪೂಜ್ಯ ಮಹೇಶಾನಂ ರತ್ನಾದ್ರೀಶಂ ಜನಾರ್ದನಃ ॥೨೧॥

ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲೈಃ ಪ್ರಕ್ರಮೈರ್ನತೈಃ ।
ತುಷ್ಟಾವ ವಾಗ್ಭಿರಿಷ್ಟಾಭಿರ್ಹರಿರ್ಭಕ್ತಿಸಮನ್ವಿತಃ ॥೨೨॥

॥ ಶ್ರೀ ವಿಷ್ಣುರುವಾಚ ॥

ರತ್ನಾದ್ರೀಶ ಮಹೇಶ ಶಂಕರ ವಿಭೋ ತ್ವನ್ಮುಕ್ತಪಾಪಾಪಹ
ನಿರ್ಯತ್ನಂ ಜಗತೋಽನುಪಾಲನವಿಧೌ ಸೃಷ್ಟಿಶ್ಚ ವೈ ಬ್ರಹ್ಮಣಃ ।

---

ಪಚ್ಚಕರ್ಪೂರ, ಚಂದನ, ಗಂಧ, ಲಾವಂಚ ಮುಂತಾದ ಸುಗಂಧಪದಾರ್ಥಗಳಿಂದ ಮಿಶ್ರವಾದ ಕಾವೇರೀನದಿಯ ತಂಪಾದ ನೀರುಗಳಿಂದ ರುದ್ರಸೂಕ್ತಮಂತ್ರಪೂರ್ವಕವಾಗಿ ಆ ಶಂಕರನನ್ನು ಅಭಿಷೇಕಮಾಡಿದನು. ಅನಂತರ ಭಕ್ತಿಪೂರ್ವಕವಾಗಿ, ವಸ್ತ್ರ, ಆಭರಣ, ॥೧೮-೧೯-೨೦॥

ಬಿಲ್ವಪತ್ರೆ, ಕಣಿಗಲೆಹೂವು, ಕನ್ನೈದಲೆಹೂ ಮುಂತಾದವುಗಳಿಂದ ಆ ರತ್ನಾದ್ರಿಗೆ ಒಡೆಯನಾದ ಮಹೇಶ್ವರನನ್ನು ಪೂಜಿಸಿ, ವಿಷ್ಣುವು ಧೂಪ, ದೀಪ, ನೈವೇದ್ಯ, ತಾಂಬೂಲ ಇವುಗಳನ್ನು ಕ್ರಮವಾಗಿ ಸಮರ್ಪಣೆ ಮಾಡಿದಮೇಲೆ, ನಮಸ್ಕಾರ ಮಾಡಿ, ತನಗೆ ಇಷ್ಟವಾದ ಮಾತುಗಳಿಂದ ಭಕ್ತಿಪುರಸ್ಸರವಾಗಿ ಮಹಾದೇವನನ್ನು ಸ್ತೋತ್ರಮಾಡಿದನು. ॥೨೧-೨೨॥

ರತ್ನಾದ್ರಿಗೆ ಒಡೆಯನೂ, ಸಕಲೈಶ್ವರ್ಯಸಂಪನ್ನನೂ, ವಿಭುವೂ ಆದ ಶಂಕರನೇ, ನಿನ್ನಲ್ಲಿ ಮೋಕ್ಷಪಡೆಯುವವರ ಪಾಪಗಳನ್ನೆಲ್ಲಾ ನೀನು ನಾಶಮಾಡುವೆ. ನಿನ್ನ ಅನುಗ್ರಹ ಪಡೆದು ಈ ಪ್ರಪಂಚವನ್ನು ಬ್ರಹ್ಮನು ಸೃಷ್ಟಿಮಾಡಿರುವನು. ಆ ಪ್ರಪಂಚವನ್ನು ಕಾಪಾಡುವ ಕೆಲಸವು ಅನಾಯಾಸವಾಗಿ ನನ್ನಿಂದ ನೆರವೇರುವಂತೆ ಸರ್ವಾಂತರ್ಯಾಮಿಯಾದ ನೀನು ನನ್ನನ್ನು ಅನುಗ್ರಹಿಸು. ದುಷ್ಕಾರ್ಯದಲ್ಲಿ

ತ್ವಂ ಸರ್ವಾಂತರನಾಸ್ಯಕಾರ್ಯನಿರತಂ ಮಾಂ ಪಾಲಯಸ್ವಾದರಾ-
ಚ್ಛಕ್ತಿಂ ದೇಹಿ ಮಹೇಶ್ವರಾಸ್ಯ ಜಗತಃ ಸಂಪಾಲನೇ ಪಾವನೀಂ॥೨೩॥

ತಮಿತ್ಥಂ ನಾದಿನಂ ವಿಷ್ಣುಂ ರತ್ನಾದ್ರೀಶೋಽಭವತ್ತದಾ ॥೨೪॥

॥ ಶ್ರೀ ಶಿವ ಉವಾಚ ॥

ತವ ಶಕ್ತಿಂ ಪಾಲನಸ್ಯ ಜಗತಾಂ ಪ್ರದದಾಮ್ಯಹಂ ।
ಗೃಹಾಣ ವೇತ್ರಂ ಸೌವರ್ಣಂ ಸರ್ವಪಾಲನಕರ್ಮಣಿ ॥೨೫॥

ಮಾಂ ಧ್ಯಾತ್ವಾ ಹೃದಯಾಂಭೋಜೇ ಜಗತ್ಪಾಲಯ ಸರ್ವದಾ ।
ಏತಸ್ಮಿನ್ನಂತರೇ ತತ್ರ ದೈತ್ಯಃ ಕಾಕಸ್ವರೂಪಧೃಕ್ ॥೨೬॥

ಹರ್ತುಂ ಸೌವರ್ಣವೇತ್ರಂ ತಮಾಗತೋಽಸೌ ಹರೇಃ ಕರಾತ್ ।
ದೃಷ್ಟ್ವಾ ದೇವೇನ ದೈತ್ಯೋಽಸೌ ಸೋಽಭವದ್ಭಸ್ಮಸಾತ್ತದಾ ॥೨೭॥

---

ನಿರತನಾಗದಿರುವ ನನ್ನನ್ನು ಆದರದಿಂದ ಕಾಪಾಡುತ್ತಾ ಮಹೇಶ್ವರನೆನಿಸಿದ ನೀನು ಈ ಜಗತ್ತನ್ನು ಕಾಪಾಡಲು ಪಾವನವಾದ ಶಕ್ತಿಯನ್ನು ಕೊಟ್ಟು ನನ್ನನ್ನು ಅನುಗ್ರಹಿಸು ಎಂದು ವಿಷ್ಣುವು ರತ್ನಾದ್ರೀಶ್ವರನನ್ನು ಪ್ರಾರ್ಥಿಸಿದನು. ॥೨೩॥

ಹೀಗೆ ತನ್ನನ್ನು ಸ್ತೋತ್ರಮಾಡುತ್ತಿರುವ ವಿಷ್ಣುವನ್ನು ಕುರಿತು ಆ ರತ್ನಾದ್ರೀಶ್ವರನು ಆಗ ಇಂತೆಂದನು. ॥೨೪॥

ಎಲೈ ವಿಷ್ಣುವೇ, ನಿನಗೆ ಪ್ರಪಂಚವನ್ನು ಕಾಪಾಡುವ ಶಕ್ತಿಯನ್ನು ಈಗ ನಾನು ಕೊಡುತ್ತೇನೆ. ಇದೋ, ಜಗದ್ರಕ್ಷಣಕಾರ್ಯದಲ್ಲಿ ತೊಡಗುವಾಗ ನೀನು ಈ ಚಿನ್ನದ ಬೆತ್ತವನ್ನು ಹಿಡಿದುಕೊಂಡಿರು. ನಿನ್ನ ಮನಸ್ಸೆಂಬ ತಾವರೆಯಲ್ಲಿ ನನ್ನನ್ನು ಸ್ಥಾಪಿಸಿಕೊಂಡು ಯಾವಾಗಲೂ ನನ್ನನ್ನೇ ಧ್ಯಾನಮಾಡುತ್ತಾ ಈ ಪ್ರಪಂಚವನ್ನು ರಕ್ಷಣೆ ಮಾಡುವ ಕೆಲಸದಲ್ಲಿ ನಿರತನಾಗು, ಎಂದು ಶಂಕರನು ವಿಷ್ಣುವಿಗೆ ಹೇಳಿ ಚಿನ್ನದ ಬೆತ್ತವನ್ನು ಕೊಡಲು, ಆಗಲೇ ವಿಷ್ಣುವಿನ ಕೈಯ್ಯಲ್ಲಿದ್ದ ಆ ಬೆತ್ತವನ್ನು ಅಪಹರಿಸಲು ರಾಕ್ಷಸನೊಬ್ಬನು ಕಾಗೆಯ ರೂಪವನ್ನು ಧರಿಸಿಕೊಂಡು ಅಲ್ಲಿಗೆ ಬಂದನು. ॥೨೫-೨೬॥

ಆಗ ಆ ಕಾಕರೂಪಧಾರಿಯಾದ ನೀಚ ರಾಕ್ಷಸನು ಮಹಾದೇವನಿಂದ ನೋಡಲ್ಪಟ್ಟು ಅಂಧಕಾಸುರ, ಮನ್ಮಥ ಇವರಂತೆಯೇ ತಾನೂ ಬೂದಿಯಾದನು.

ಯಥಾಂಧಕೋ ಮನ್ಮಥೋಽಸೌ ಬಭೂವ ತದ್ವದೇವ ಸಃ ।
ಶಶಾಪ ಕಾಕಂ ದೇವೇಶೋ ರತ್ನಾದ್ರೌ ಕಾಕಮಾತ್ರಕಂ ॥೨೮॥

ಸಮುಡ್ಡೀನಂ ಭವೇದ್ಭಸ್ಮೇತ್ಯಶಪತ್ತತ್ರ ವೈ ರುಷಾ ।
ವಿಷ್ಣುಶ್ಚ ಜಗತೋಽಸ್ಯೈವ ಪಾಲಕೋಽಭೂತ್ಸಪರ್ಯಯಾ ॥೨೯॥

ಪಾಲಯತ್ಯೇಷ ವಿಷ್ಣುಶ್ಚ ಜಗದೇತದ್ಯುಗೇ ಯುಗೇ ।
ಈಶಾನೋಽಪಿ ಮಹಾರುದ್ರೋ ಭಸ್ಮರುದ್ರಾಕ್ಷಭೂಷಣಃ ॥೩೦॥

ತೃಣಜ್ಯೋತೀಶ್ವರಂ ಲಿಂಗಂ ಸಂಸ್ಥಾಪ್ಯ ಪರಿಪೂಜಯತ್ ।
ಪಂಚಾಮೃತೈಃ ಪಂಚಫಲೈಃ ಪಂಚಗವ್ಯೈಸ್ತಥಾಫಲೈಃ ॥೩೧॥

ಪದ್ಮೈರ್ಬಿಲ್ವೈಶ್ಚ ಕುಸುಮೈಃ ವಸ್ತ್ರಾಭರಣಗಂಧಕೈಃ ।
ಧೂಪೈರ್ದೀಪೈಶ್ಚ ನೈವೇದ್ಯೈರ್ನೀರಾಜನನತಿಸ್ತವೈಃ ॥೩೨॥

ಪ್ರದಕ್ಷಿಣಾಭಿಸ್ತಾಂಬೂಲೈರಭಿಪೂಜ್ಯ ಪ್ರತುಷ್ಟುವೇ ॥೩೩॥

---

ಇದಾದನಂತರ ಆ ಮಹಾದೇವನು, ಕಾಕಾಸುರನನ್ನು ದ್ವೇಷಿಸಿ, ಇನ್ನು ಮುಂದೆ ಈ ರತ್ನಾದ್ರಿಯ ಮೇಲೆ ಹಾರಿಬರುವ ಕಾಗೆಯು ಭಸ್ಮವಾಗಿ ಹೋಗಲಿ, ಎಂದು ಕೋಪದಿಂದ ಶಾಪವನ್ನಿತ್ತನು. ॥೨೭-೨೮॥

ಅನಂತರ ಈ ರತ್ನಾಧೀಶನ ಅನುಜ್ಞೆಪಡೆದು, ಆ ದೇವದೇವನ ಪೂಜೆಯಿಂದ ವಿಷ್ಣುವು ಈ ಪ್ರಪಂಚವನ್ನು ಹಿಂದಿನ ಯುಗಗಳಂತೆಯೇ ಕಾಪಾಡಲುದ್ಯುಕ್ತನಾದನು. ॥೨೯॥

ಮಹಾಭಯಂಕರನೆನಿಸಿದ ಈಶಾನನೂ ಸಹ ವಿಭೂತಿರುದ್ರಾಕ್ಷಗಳನ್ನಲಂಕರಿಸಿಕೊಂಡು, ತೃಣಜ್ಯೋತೀಶ್ವರಲಿಂಗವನ್ನು ಸ್ಥಾಪಿಸಿ, ಪೂಜಿಸಿದನು. ಆ ಈಶಾನನು, ಪಂಚಾಮೃತ, ಪಂಚಫಲ, ಪಂಚಗವ್ಯ, ಹಣ್ಣು, ತಾವರೆ, ಬಿಲ್ವದಳ, ಇತರ ಹೂಗಳು, ಬಟ್ಟೆ, ಆಭರಣ, ದಿವ್ಯಪರಿಮಳಗಂಧಗಳು, ಧೂಪ, ದೀಪ, ನೈವೇದ್ಯ, ಆರತಿ, ನಮಸ್ಕಾರ, ಸ್ತೋತ್ರ, ಪ್ರದಕ್ಷಿಣೆ ಮತ್ತು ತಾಂಬೂಲವೇ ಮೊದಲಾದುವುಗಳಿಂದ ಆ ತೃಣಜ್ಯೋತೀಶ್ವರನನ್ನು ಪೂಜೆಮಾಡಿ ಹೀಗೆ ಸ್ತೋತ್ರಮಾಡಿದನು. ॥೩೦-೩೧-೩೨-೩೩॥

॥ ಈಶಾನ ಉವಾಚ ॥

ವಿಶ್ವೋದಯಸ್ಥಿತಿಲಯಾವನಪಾವನೇಶ
ಮಾಂ ದೀನಮಧುನಾ ಪರಿಪಾಲಯೇಶ ।
ವಿಶ್ವೇಶ ದೇವ ಪರಮೇಶ ಮಹೇಶ ಶಂಭೋ
ಪಾಹಿ ಪ್ರಸೀದ ಸುರಶತ್ರುವಿನಾಶನೇ ಮೇ ॥೩೪॥

ಶಕ್ತಿಂ ಪ್ರದೇಹಿ ಜಗತೋ ಮಮ ಕಾಲನಾಶೇ
ಶ್ರೀಕಾಲಕಂಠ ದಯಯಾ ತವ ರೂಪತುಲ್ಯಂ ।
ವಾಸಂ ತವಾಚಲನಿಭಂ ಮಮ ದೇಹಿ ಶಂಭೋ
ಭಕ್ತೋಽಸ್ಮಿ ಶಂಕರ ವಿಭೋ ಪರಿಪಾಲಯಾಶು ॥೩೫॥

---

ಸಕಲ ಪ್ರಪಂಚದ ಸೃಷ್ಟಿ, ಪಾಲನ, ಸಂಹಾರಕಾರ್ಯಗಳನ್ನೆಸಗುವವನೂ, ಪಾವನನೂ ಆದ ಈಶ್ವರನೇ, ಐಶ್ವರ್ಯಭರಿತನಾದ ನೀನು ದೀನನಾದ ನನ್ನನ್ನು ಈಗ ಕಾಪಾಡು. ಜಗತ್ತಿಗೊಡೆಯನೂ, ಕ್ರೀಡಾಗುಣಸಂಪನ್ನನೂ, ಪರಮೈಶ್ವರ್ಯ ಭರಿತನೂ, ಮಹೇಶ್ವರನೂ ಆದ ಶಂಭುವೇ, ನನ್ನಲ್ಲಿ ಅನುಗ್ರಹಮಾಡಿ, ದೇವತೆಗಳ ಶತ್ರುವಾದ ರಾಕ್ಷಸರನ್ನು ನಾಶಮಾಡುವ ಶಕ್ತಿಯನ್ನು ನನಗೆ ಅನುಗ್ರಹಿಸು. ॥೩೪॥

ಕಾಲಕೂಟವಿಷವನ್ನು ಕಂಠದಲ್ಲಿ ಧರಿಸಿರುವವನೇ, ಪ್ರಳಯಕಾಲದಲ್ಲಿ ಈ ಜಗತ್ತನ್ನೆಲ್ಲಾ ನಾಶಮಾಡುವ ಶಕ್ತಿಯನ್ನು ನೀನು ನನಗೆ ಕೊಡುವನಾಗು. ದೇವ, ನನ್ನಲ್ಲಿ ದಯೆಯಿಟ್ಟು ನಿನ್ನ ಆಕಾರಕ್ಕೆ ಸಮಾನವಾದ ರೂಪವನ್ನೇ ನನಗೆ ಅನುಗ್ರಹಿಸಿ, ನೀನು ವಾಸಮಾಡುತ್ತಿರುವ ಕೈಲಾಸಪರ್ವತಕ್ಕೆ ಸಮಾನವಾದ ಬೇರೊಂದು ಪರ್ವತವನ್ನು ನನಗೆ ವಾಸಮಾಡಲು ಕೊಡು, ಸ್ವಾಮಿ! ಎಲೈ ಜಗನ್ಮಂಗಳಕರನೇ! ನಿನ್ನ ಭಕ್ತನಾದ ನನ್ನನ್ನು ಸರ್ವವ್ಯಾಪಕನಾದ ನೀನು ಜಾಗ್ರತೆಯಾಗಿ ಕಾಪಾಡು ದೇವ! ಎಂದು ಈಶಾನನು ತೃಣಜ್ಯೋತೀಶ್ವರನನ್ನು ಸ್ತೋತ್ರಮಾಡಿದನು. ॥೩೫॥

॥ ಸ್ಕಂದ ಉವಾಚ ॥

ಈಶಾನಸ್ತುತಿತೋಷಿತೋಽತ್ರ ಭಗವಾನ್ದೇವೋ ಮಹೇಶಸ್ತದಾ
ಸಾರೂಪ್ಯಂ ಭಗಣಾಧಿಪಾತ್ತಮಕುಟಂ ತ್ರ್ಯಕ್ಷಂ ಚ ಕಂಠೋರಗಂ।
ಕೈಲಾಸಾಚಲಸನ್ನಿಭಂ ಸ್ವವಸತೇಸ್ತುಲ್ಯಂ ನಗಂ ದಕ್ಷಿಣಂ
ಶಕ್ತಿಂ ಚಾಪಿ ದದೌ ಮುದಾಸ್ಯ ಜಗತಾಂ ಸಂಹಾರಿಣೇಽಸ್ಮೈ ತದಾ ॥೩೬॥

ಪ್ರಾಹೇತ್ಥಂ ಭಗವಾನಪಿ ತ್ರಿಪುರಹಾ ತತ್ಕ್ಷೇತ್ರಮಧ್ಯೇ ಮಹಾ-
ಲಿಂಗಾರಾಧನತೋಷಿತಸ್ತೃಣಶಿವೋ ಈಶಾನಮತ್ಯಾದರಾತ್।
ತ್ವಂ ಸರ್ವಾನ್ಮಮ ಭಕ್ತಪೂಜನರತಃ ಸಾರೂಪ್ಯಭಾಕ್ಸಂವಸ
ವಾಸಸ್ತೇ ವಿತತೋಽತ್ರ ಮೇರುಶಿಖರೇ ತ್ವಂ ದಕ್ಷಿಣೇ ಸ್ವೈರ್ಗಣೈಃ ॥೩೭॥

ಕೈಲಾಸೇ ಜಗತೋಂತಿಮೇ ಪ್ರಲಯಕೃತ್ಸ್ವಾನೌಕಸದ್ವೈಭವಂ ॥೩೮॥

---

ಈ ರೀತಿ ಈಶ್ವರನ ಸ್ತೋತ್ರದಿಂದ ಸಂತುಷ್ಟನಾದ, ಭಗವಂತನೆನಿಸಿದ ಶ್ರೀಮಹಾದೇವನು ಆ ಈಶಾನನಿಗೆ ತನ್ನ ಸಮಾನವಾದ ರೂಪವನ್ನೂ, ಚಂದ್ರನಿಂದ ಶೋಭಿಸುವ ಕಿರೀಟ, ಮೂರು ಕಣ್ಣುಗಳು, ಕೊರಳಸರ್ಪ ಇವುಗಳನ್ನೂ ಕೊಟ್ಟು, ತನ್ನ ವಾಸಕ್ಕೆ ಆಶ್ರಯವಾಗಿರುವ ಕೈಲಾಸಪರ್ವತಕ್ಕೆ ಸಮಾನವಾದ ಪರ್ವತವನ್ನು ಅವನ ವಾಸಕ್ಕಾಗಿ ದಕ್ಷಿಣ ದಿಕ್ಕಿನಲ್ಲಿ ಕೊಟ್ಟು, ಅನಂತರ ಪ್ರೀತಿಯಿಂದ ಅವನಿಗೆ ಪ್ರಪಂಚವನ್ನೆಲ್ಲಾ ಸಂಹಾರಮಾಡುವ ಸಾಮರ್ಥ್ಯವನ್ನು ಕರುಣಿಸಿದನು. ॥೩೬॥

ತ್ರಿಪುರಾಂತಕನೂ, ಭಗವಂತನೂ ಆದ ಆ ತೃಣಜ್ಯೋತೀಶ್ವರನು ಆ ಕ್ಷೇತ್ರಮಧ್ಯದಲ್ಲಿ ಈಶಾನನು ಮಾಡಿದ ಮಹಾಲಿಂಗಪೂಜೆಯಿಂದ ಸಂತುಷ್ಟನಾಗಿ ಆದರದಿಂದ ಅವನನ್ನು ಕುರಿತು, ಎಲೈ ಈಶಾನನೇ! ನೀನು ನನ್ನ ಭಕ್ತರನ್ನು ಪೂಜಿಸುವುದರಲ್ಲಿ ನಿರತನಾಗಿ ನನ್ನ ಸಮಾನವಾದ ರೂಪಿನಿಂದ ಶೋಭಿಸುತ್ತಾ ವಿಸ್ತಾರವಾಗಿರುವ ಮೇರುಪರ್ವತದ ದಕ್ಷಿಣ ಶಿಖರದಲ್ಲಿ ನಿನ್ನ ಗಣಗಳೊಡನೆ ವಾಸಮಾಡಿಕೊಂಡಿರು. ಪ್ರಪಂಚದ ಕೊನೆಗಾಲದಲ್ಲಿ ನೀನು ಜಗತ್ತನ್ನೆಲ್ಲಾ ಪ್ರಳಯಗೊಳಿಸಿ, ಪುನಃ ಈ ನನ್ನ ಕೈಲಾಸಪರ್ವತವನ್ನು ಹೊಂದಿ, ನನ್ನ ವೈಭವವನ್ನು ಪಡೆಯುವೆಯೆಂದು ವರವನ್ನು ಕೊಟ್ಟನು. ॥೩೭-೩೮॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಮರಕತೇಶರತ್ನೇಶ
ತೃಣಜ್ಯೋತೀಶವರ್ಣನೇ ಬ್ರಹ್ಮವಿಷ್ಣ್ವೀಶಾನತಪೋವರಪ್ರದಾನ
ಕಥನಂ ನಾಮ ದಶಮೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಮರಕತೇಶ್ವರ, ರತ್ನೇಶ್ವರ, ತೃಣಜ್ಯೋತೀಶ್ವರರನ್ನು ಕ್ರಮವಾಗಿ ಬ್ರಹ್ಮ, ವಿಷ್ಣು, ಈಶಾನ ಇವರು ತಪಸ್ಸುಮಾಡಿ ಸ್ತುತಿಸಿ ಅವರಿಂದ ವರಪಡೆದುದರ ವರ್ಣನೆಯೆಂಬ ಹತ್ತನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಏಕಾದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

**ತತ್ಪ್ರಾಚ್ಯಾಂ ದಕ್ಷಿಣೇ ಪುಣ್ಯಂ ಸ್ಥಾನದ್ವಯಮನುತ್ತಮಂ ।**
**ಶಂಭೋಃ ಪ್ರಿಯಕರಂ ನಿತ್ಯಂ ದರ್ಶನಾತ್ಸರ್ವಸಿದ್ಧಿದಂ ॥೧॥**

**ಕಾವೇರ್ಯಾ ದಕ್ಷಿಣೇ ತೀರೇ ಮಾತೃಭೂತಾಖ್ಯಕೋ ಗಿರಿಃ ।**
**ದರ್ಶನಾತ್ತಸ್ಯ ಶಿಖರೇ ಪುಣ್ಯಂ ಮಹದವಾಪ್ನುಯಾತ್ ॥೨॥**

**ಮನಸಾ ದೇವದೇವೇನ ನಿರ್ಮಿತೋಽಯಂ ಮಹಾಗಿರಿಃ ।**
**ಮಾತೃಭೂತೇಶ್ವರೋ ನಾಮ್ನಾ ಲಿಂಗರೂಪೋ ಮಹೇಶ್ವರಃ ॥೩॥**

---

## ಹನ್ನೊಂದನೆಯ ಅಧ್ಯಾಯ

ಆ ಮರಕತೇಶ್ವರ, ರತ್ನಾದ್ರೀಶ್ವರ ಮತ್ತು ತೃಣಜ್ಯೋತೀಶ್ವರಕ್ಷೇತ್ರಗಳಿಗಿಂತ ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಎರಡು ಉತ್ತಮವಾದ ಪುಣ್ಯಸ್ಥಳಗಳಿರುವುವು. ಆವೆರಡೂ ಆ ಶಂಭುವಿಗೆ ಪ್ರಿಯಕರಗಳೆನಿಸಿ, ತಮ್ಮ ದರ್ಶನಮಾತ್ರದಿಂದಲೇ ಭಕ್ತರಿಗೆ ಸಕಲ ಸಿದ್ಧಿಗಳನ್ನೂ ಉಂಟುಮಾಡಿಕೊಡುತ್ತಿರುವುವು. ಕಾವೇರಿಯ ದಕ್ಷಿಣದಡದಲ್ಲಿ 'ಮಾತೃಭೂತ'ವೆಂಬ ಹೆಸರುಳ್ಳ ಬೆಟ್ಟವಿರುವುದು. ಆ ಬೆಟ್ಟದ ಶಿಖರವನ್ನು ನೋಡುವುದರಿಂದಲೇ ವಿಶೇಷ ಪುಣ್ಯವುಂಟಾಗುವುದು. ಆ ದೇವದೇವನು ತನ್ನ ಮನಸ್ಸಿನಿಂದಲೇ ಈ ದೊಡ್ಡ ಬೆಟ್ಟವನ್ನು ನಿರ್ಮಿಸಿರುವನು. ಅಲ್ಲಿ ಲಿಂಗರೂಪವಾಗಿರುವ ಮಹೇಶ್ವರನು ಮಾತೃಭೂತೇಶ್ವರನೆಂಬ ಹೆಸರಿನಿಂದ ಪ್ರಖ್ಯಾತನಾಗಿರುವನು. ಸುಗಂಧಿಕುಂತಲಾದೇವಿಯು (ಸುಗಂಧಭರಿತವಾದ

ಸುಗಂಧಿಕುಂತಲಾನಾಥಃ ಸ ದೇವಃ ಸೂರ್ಯಶೇಖರಃ ॥೪॥

॥ ಮುನಯ ಊಚುಃ ॥

ಚಂದ್ರಶೇಖರತಾ ಶಂಭೋಃ ಶ್ರುತಾ ಷಣ್ಮುಖವಿಶ್ರುತಾ ।
ಸೂರ್ಯಶೇಖರತಾ ತಸ್ಯ ಮಾತೃಭೂತೇಶಿತುಃ ಕಥಂ ॥೫॥

ತನ್ನೋ ವದ ಮುದಾಸ್ಮಾಕಂ ರಹಸ್ಯಜ್ಞೋಽಸಿ ಶಾಂಕರ ॥೬॥

॥ ಸೂತ ಉವಾಚ ॥

ಮುನೀನಾಂ ವಚಸಾ ಸ್ಕಂದೋ ಜೈಗೀಷವ್ಯಮುಖಾನ್ಪ್ರತಿ ।
ಸೇತಿಹಾಸಂ ಮಾತೃಗಿರೇರವದತ್ತಾರಕಾಂತಕಃ ॥೭॥

ಕುಂದೋ ನಾಮ ಮುನಿಃ ಪೂರ್ವಂ ತತ್ರ ತೇಪೇ ತಪಃ ಪರಂ ।
ಭಸ್ಮರುದ್ರಾಕ್ಷಧೃಗ್ಭೂತ್ವಾ ರುದ್ರಪಂಚಾಕ್ಷರಾದರಃ ॥೮॥

---

ಕೂದಲುಳ್ಳ ಪಾರ್ವತಿಯ) ಪತಿಯಾದ ಆ ದೇವನು ಸೂರ್ಯನನ್ನು ತಲೆಯಲ್ಲಿ ಧರಿಸಿರುವನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮುನಿಗಳಿಗೆ ಹೇಳಿದನು. ॥೧-೨-೩-೪॥

ಆಗ, "ಶಂಕರನ ಪ್ರಿಯಪುತ್ರನಾದ ಕುಮಾರಸ್ವಾಮಿಯೇ, ಶಂಭುವಿಗೆ ಕೇವಲ ಚಂದ್ರಶೇಖರನೆಂಬ ಬಿರುದುಂಟೆಂದು ಷಣ್ಮುಖನಾದ ನಿನ್ನಿಂದಲೇ ಪ್ರಸಿದ್ಧವಾಗಿದೆ. ಆ ಮಾತೃಭೂತೇಶ್ವರನಿಗೆ ಸೂರ್ಯಶೇಖರನೆಂಬ ಹೆಸರು ಹೇಗುಂಟಾಯಿತು? ರಹಸ್ಯವನ್ನು ತಿಳಿದವನಾದುದರಿಂದ ನೀನು ನಮಗೆ ಅದನ್ನು ದಯವಿಟ್ಟು ತಿಳಿಸೆಂದು" ಜೈಗೀಷವ್ಯಾದಿಮುನಿಗಳು ಕುಮಾರಸ್ವಾಮಿಯನ್ನು ಬೇಡಿದರು. ॥೫-೬॥

ಆಗ ಕುಮಾರಸ್ವಾಮಿಯು ಜೈಗೀಷವ್ಯಾದಿಮುನಿಗಳಿಗೆ ಹೇಳಿದ ಮಾತೃಗಿರಿಯ ಇತಿಹಾಸವನ್ನು ಸೂತಮಹರ್ಷಿಗಳು ಶೌನಕಾದಿಗಳಿಗೆ ಹೀಗೆ ಹೇಳಿದರು. ಮುನಿಗಳ ಮಾತನ್ನು ಕೇಳಿ ತಾರಕಾಸುರನನ್ನು ಧ್ವಂಸಮಾಡಿದ ಕುಮಾರ ಸ್ವಾಮಿಯು ಜೈಗೀಷವ್ಯನೇ ಮುಂತಾದವರನ್ನು ಕುರಿತು ಮಾತೃಗಿರಿಯ ಇತಿಹಾಸ ವನ್ನು ಹೀಗೆ ಹೇಳಿದನು. ಓ ಮುನಿಗಳಿರಾ, ಹಿಂದೆ ಈ ಮಾತೃಗಿರಿಯಲ್ಲಿ ಕುಂದ ನೆಂಬ ಮುನಿಯೊಬ್ಬನು ಭಸ್ಮರುದ್ರಾಕ್ಷಗಳನ್ನು ಅಲಂಕರಿಸಿಕೊಂಡು, ಶಿವಪಂಚಾಕ್ಷರ ಮಂತ್ರಜಪದಲ್ಲಿ ಆದರವುಳ್ಳವನಾಗಿ ಶ್ರೇಷ್ಠವಾದ ತಪಸ್ಸನ್ನು ಚರಿಸಿದನು ॥೭-೮॥

ಕಾವೇರ್ಯಾಃ ಪರಮಂ ತೀರ್ಥಂ ಕುಂಭೈರುಹ್ಯ ಸ ಭಕ್ತಿಮಾನ್ ।
ನಿತ್ಯಮಷ್ಟೋತ್ತರಶತೈರ್ಗಿರೇಃ ಸೋಪಾನಮಾರುಹತ್ ॥೯॥

ನಿತ್ಯಂ ಶಿವಾಭಿಷೇಕಾರ್ಥಮೇಕಾದಶಗುಣೋತ್ತರಂ ।
ಜಜಾಪ ರುದ್ರಂ ನಿಯಮಾತ್ತತ್ರೇಶಸ್ಯಾಭಿಷೇಚನೇ ॥೧೦॥

ತ್ರಿಕಾಲಂ ಭಕ್ತಿಯುಕ್ತಾತ್ಮಾ ನೀರಾಜನನಿರೀಕ್ಷಕಃ ।
ಏವಂ ಸಂವಸತಸ್ತಸ್ಯ ಸ್ತುವಂತಃ ಪ್ರತಿವಾಸರೇ ॥೧೧॥

ಸದೇವಂ ಸೂರ್ಯಮುಕುಟಂ ದ್ರಷ್ಟುಮುತ್ಕಂಠಪ್ಯತ್ತದಾ ।
ತುಷ್ಟಾವ ಮಾತೃಭೂತೇಶಂ ಗಿರಿಶಂ ತದ್ಗಿರೌ ಸ್ಥಿತಂ ॥೧೨॥

ಮೌನೀ ಬದ್ಧಾಂಜಲಿರ್ಭೂತ್ವಾ ಕುಂದಸ್ತತ್ರೇಂದುಭೂಷಣಂ ॥೧೩॥

---

ಭಕ್ತಿಯುಕ್ತನಾದ ಆ ಕುಂದಮುನಿಯು ಕಾವೇರೀನದಿಯ ಉತ್ಕೃಷ್ಟವಾದ ನೀರನ್ನು ನೂರೆಂಟು ಗಡಿಗೆಗಳಿಂದ ತುಂಬಿಕೊಂಡು ನಿತ್ಯವೂ ಬೆಟ್ಟದ ಮೆಟ್ಟಲನ್ನು ಹತ್ತಿ ಸಂಗ್ರಹಿಸಿಕೊಳ್ಳುತ್ತಿದ್ದನು. ಹೀಗೆ ಸಂಗ್ರಹಿಸಿದ ಪಾವನವಾದ ಈ ಕಾವೇರಿಯ ನೀರನ್ನು ಪ್ರತಿದಿನವೂ ಹನ್ನೊಂದುಬಾರಿ ರುದ್ರಮಂತ್ರವನ್ನುಚ್ಚರಿಸುತ್ತಾ ಪರಮೇಶ್ವರನಿಗೆ ನಿಯಮದಿಂದ ಅಭಿಷೇಕ ಮಾಡುತ್ತಿದ್ದನು. ||೯-೧೦||

ಪ್ರಾತಃ, ಮಧ್ಯಾಹ್ನ ಮತ್ತು ಸಾಯಂಕಾಲ ಈ ಮೂರುವೇಳೆಯಲ್ಲಿಯೂ ಭಕ್ತಿಯುಕ್ತನಾಗಿ, ಆ ದೇವನ ನೀರಾಜನವನ್ನು ನೋಡುತ್ತಾ, ಆರತಿಯಾದಮೇಲೆ ಪ್ರತಿನಿತ್ಯವೂ ಸ್ತೋತ್ರಮಾಡುತ್ತಾ ಕಾಲ ಕಳೆಯುತ್ತಿದ್ದನು. ಆ ಕುಂದಮುನಿಗೆ ಒಂದುದಿನ ಸೂರ್ಯನನ್ನು ಕಿರೀಟದಲ್ಲಿ ಧರಿಸಿರುವ ಮಹೇಶ್ವರನನ್ನು ನೋಡಬೇಕೆಂದು ಮನಸ್ಸಾಯಿತು. ಆಗ ಆ ಕುಂದಮುನಿಯು ಅದೇ ಮಾತೃಗಿರಿಯಲ್ಲಿ ಚಂದ್ರಭೂಷಣನಾಗಿರುವ ಮಾತೃಭೂತೇಶ್ವರನನ್ನು ಮೌನದಿಂದ ಕೈಮುಗಿದುಕೊಂಡು ಹೀಗೆ ಸ್ತೋತ್ರಮಾಡಿದನು. ||೧೧-೧೨||

ಬೆಟ್ಟದಲ್ಲಿ ವಾಸಮಾಡುವ ಪಾಪನಾಶಕನಾದ ಶಂಭುವೇ, ಅಂತರಿಕ್ಷವನ್ನೇ ಕೇಶಪಾಶವನ್ನಾಗಿ ಉಳ್ಳವನೂ, ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನರೂಪವಾದ ಎಂಟು ಮೂರ್ತಿಗಳುಳ್ಳವನೂ ಆದ ನೀನು ರಾಕ್ಷಸರನ್ನೂ, ದೇವತೆಗಳನ್ನೂ ಮತ್ತು ಮಾನವರನ್ನೂ ಮಕ್ಕಳಂತೆ

॥ ಕುಂದ ಉವಾಚ ॥

ಗಿರಿವಸ ಹರ ಶಂಭೋ ವ್ಯೋಮಕೇಶಾಷ್ಟಮೂರ್ತೇ
ಅಸುರಸುರನರಾಣಾಂ ಪುತ್ರವತ್ಪೋಷಕಸ್ತ್ವಂ ।
ನಿಖಿಲನಿಗಮಗೀತಃ ಸೂರ್ಯಬದ್ಧೋತ್ತಮಾಂಗಂ
ತ್ವರತಿ ಮಮ ಮನೋ ನೈ ತ್ವಾಂ ಮುದಾ ದ್ರಷ್ಟುಮೀಶ ॥೧೪॥

ಕುಂದಾಯ ದರ್ಶನಂ ಪ್ರಾದಾನ್ಮಾತೃಭೂತೇಶ್ವರಸ್ತದಾ ।
ನಿಬದ್ಧಸೂರ್ಯಮುಕುಟಃ ಕೋಟಿಸೂರ್ಯಸಮಪ್ರಭಃ ॥೧೫॥

ಸುಗಂಧಿಕುಂತಲಾನಾಥಃ ಕುಂದಭಕ್ತ್ಯಾ ಹೃತಾಂತರಃ ।
ತಸ್ಮೈ ಗಣತ್ವಂ ಪ್ರದದೌ ತದಾಭೂತ್ಸೂರ್ಯಶೇಖರಃ ॥೧೬॥

ಕಾವೇರ್ಯಾ ಉತ್ತರೇ ತೀರೇ ಮಾತಂಗಾರಣ್ಯಮುತ್ತಮಂ ।
ಸ್ಥಾನಂ ಮುನಿಸಮಾಕೀರ್ಣಂ ದರ್ಶನಾದೇವ ಮೋಕ್ಷದಂ ॥೧೭॥

ಅಖಿಲಾಂಡಮಹಾದೇವ್ಯಾಃ ಪತಿಃ ಶ್ರೀಜಂಬುಕೇಶ್ವರಃ ।
ಜಂಬುಮೂಲೇ ಮಹಾಲಿಂಗಂ ಸ್ಮರಣಾತ್ಕಾಮದಂ ನೃಣಾಂ ॥೧೮॥

---

ಪೋಷಿಸುತ್ತಿರುವೆ. ಸಕಲ ವೇದಗಳಿಂದಲೂ ಸ್ತುತಿಸಲ್ಪಡುವ ನಿನ್ನನ್ನು ಸೂರ್ಯನನ್ನು ತಲೆಯಲ್ಲಿ ಧರಿಸಿರುವಂತೆ ನೋಡುವುದಕ್ಕೆ ನನ್ನ ಮನಸ್ಸು ತವಕಪಡುತ್ತಿರುವುದು. ಹೇ ಈಶ್ವರ, ನನ್ನಲ್ಲಿ ಪ್ರೀತಿಯುಟ್ಟು ಆ ನಿನ್ನ ರೂಪನ್ನು ತೋರಿಸುವನಾಗೆಂದು ಕುಂದಮುನಿಯು ಈಶ್ವರನನ್ನು ಸ್ತೋತ್ರಮಾಡಿದನು. ॥೧೪॥

ಆಗ ಸೂರ್ಯಮುಕುಟವನ್ನು ಧರಿಸಿಕೊಂಡು ಕೋಟಿಸೂರ್ಯರ ಕಾಂತಿಯುಳ್ಳವನಾಗಿ ಸುಗಂಧಿಕುಂತಲಾದೇವಿಯು ಪತಿಯಾದ ಆ ಮಾತೃಭೂತೇಶ್ವರನು ಕುಂದನ ಭಕ್ತಿಯಿಂದ ಸಂತುಷ್ಟನಾಗಿ, ಅವನು ಕೇಳಿದ ರೂಪಿನಿಂದ ಅವನಿಗೆ ದರ್ಶನ ಕೊಟ್ಟನು. ಆಗ ಸೂರ್ಯಶೇಖರಸ್ವಾಮಿಯೆಂದು ಪ್ರಸಿದ್ಧನಾದ ಶಂಕರನು ಆ ಕುಂದಮುನಿಗೆ ಗಣಾಧಿಪತಿಯ ಸ್ಥಾನವನ್ನೂ ಅನುಗ್ರಹಿಸಿದನು. ॥೧೫-೧೬॥

ಕಾವೇರೀನದಿಯ ಉತ್ತರದಡದಲ್ಲಿ ಉತ್ತಮವಾದ ಮಾತಂಗಾರಣ್ಯವಿರುವುದು. ಆ ಸ್ಥಾನವು ಅನೇಕ ಮುನಿಗಳಿಂದ ವ್ಯಾಪ್ತವಾಗಿ ಕೇವಲ ದರ್ಶನಮಾತ್ರದಿಂದಲೇ ಮೋಕ್ಷವನ್ನುಂಟುಮಾಡುತ್ತಿರುವುದು. ಅಖಿಲಾಂಡಮಹಾದೇವಿ

ಭುಕ್ತಿಮುಕ್ತಿಪ್ರದಂ ಕ್ಷೇತ್ರಂ ಗಜಾರಣ್ಯಂ ಮಹೇಶಿತುಃ ।
ಅರ್ಕಸಂಪೂಜಿತಂ ನಿತ್ಯಂ ವರುಣೇನ ಸುಪೂಜಿತಂ ॥೧೯॥

ತತ್ರಾಸ್ತಿ ಲಿಂಗಮುತ್ಕೃಷ್ಟಂ ಜಂಬುಕೇಶ್ವರಸಂಜ್ಞಕಂ ।
ಅಖಿಲಾಂಡಮಹಾದೇವೀದರ್ಶನಾದಿಷ್ಟಕಾಮದಾ ॥೨೦॥

ವಿಶ್ವಕರ್ಮಾತ್ರ ಸಂಪೂಜ್ಯ ಶಿಲ್ಪಂ ಲೇಭೇ ಮಹೇಶ್ವರಾತ್ ।
ಪಂಚಪ್ರಾಕಾರಸಂಯುಕ್ತಂ ಗೋಪುರಾಣ್ಯಪಿ ಮಂಡಪಾನ್ ॥೨೧॥

ಚಕಾರ ಸ ಶಿವಪ್ರೀತ್ಯೈ ಸ್ವಶಿಲ್ಪಸ್ಯೈವ ಸಾರ್ಥಕಂ ।
ಗರ್ಭಗೇಹಂ ಮಹೇಶಸ್ಯ ದೇವ್ಯಾಶ್ಚೈವ ಸ ಶಿಲ್ಪಿರಾಟ್ ॥೨೨॥

ತುಷ್ಟಾವ ಜಂಬುನಿಲಯಮಖಿಲಾಂಡಾಪತಿಂ ಶಿವಂ ॥೨೩॥

---

ಯೆನಿಸಿ ಪ್ರಖ್ಯಾತಳಾಗಿರುವ ದೇವಿಯ ಪತಿಯಾದ ಜಂಬುಕೇಶ್ವರನು ಆ ಮಾತಂಗಾರಣ್ಯದಲ್ಲಿ ಪ್ರಸಿದ್ಧನಾಗಿರುವನು. ನೇರಲೇಮರದ ಬುಡದಲ್ಲಿರುವ ದೊಡ್ಡ ಶಿವಲಿಂಗವು ಕೇವಲ ಸ್ಮರಣಮಾತ್ರದಿಂದಲೇ ಮಾನವರಿಗೆ ಸಕಲ ಇಷ್ಟಸಿದ್ಧಿಗಳನ್ನೂ ಉಂಟುಮಾಡುತ್ತಿರುವುದು. ||೧೭-೧೮||

ಇಹದಲ್ಲಿ ಸಕಲ ಭೋಗಗಳನ್ನೂ, ಪರದಲ್ಲಿ ಮೋಕ್ಷವನ್ನೂ ಕೊಡುವ ಈ ಮಹೇಶ್ವರನ ಗಜಾರಣ್ಯಕ್ಷೇತ್ರವು ಸೂರ್ಯ ಮತ್ತು ವರುಣರಿಂದ ನಿತ್ಯವೂ ಪೂಜಿಸಲ್ಪಡುವ ಮಹಾಕ್ಷೇತ್ರವೆನಿಸಿರುವುದು. ಆ ಕ್ಷೇತ್ರದಲ್ಲಿ ಜಂಬುಕೇಶ್ವರನೆಂಬ ಹೆಸರಿನ ಉತ್ಕೃಷ್ಟವಾದ ಶಿವಲಿಂಗವಿರುವುದು. ಅಲ್ಲಿ ದರ್ಶನಮಾತ್ರದಿಂದಲೇ ಇಷ್ಟಾರ್ಥವನ್ನು ಕೊಡುವ ಪಾರ್ವತಿಯು ಅಖಿಲಾಂಡಮಹಾದೇವಿಯೆಂಬುದಾಗಿ ಪ್ರಸಿದ್ಧಳಾಗಿರುವಳು. ||೧೯-೨೦||

ಹಿಂದೆ ವಿಶ್ವಕರ್ಮನು ಇಲ್ಲಿ ಶ್ರೀ ಜಂಬುಕೇಶ್ವರನನ್ನು ಪೂಜೆಮಾಡಿ, ಮಹೇಶ್ವರನ ಅನುಗ್ರಹದಿಂದ ಶಿಲ್ಪಶಾಸ್ತ್ರವನ್ನರಿತನು. ಅನಂತರ ಪರಶಿವನಿಗೆ ಪ್ರೀತಿಯುಂಟಾಗಲೆಂದೂ, ತನ್ನ ಶಿಲ್ಪಶಾಸ್ತ್ರಕ್ಕೆ ಸಾರ್ಥಕತೆ ಲಭಿಸಲೆಂದೂ, ಐದು ಪ್ರಾಕಾರಗಳಿಂದಲೂ, ಅನೇಕ ಮಂಡಪಗಳಿಂದಲೂ ಕೂಡಿರುವ ಒಂದು ಗರ್ಭಗುಡಿಯನ್ನು ಆ ಮಹೇಶ್ವರನಿಗೂ ಮತ್ತು ದೇವಿಗೂ ನಿರ್ಮಿಸಿಕೊಟ್ಟನು. ಅನಂತರ ಶಿಲ್ಪಿವರ್ಯನೆನಿಸಿದ ಆ ವಿಶ್ವಕರ್ಮನು ಅಖಿಲಾಂಡದೇವಿಯ ಪತಿಯೂ,

॥ ವಿಶ್ವಕರ್ಮ ಉವಾಚ ॥

ಜಂಬೂಪತೇಽಂಬುಪರಿಪೂರಿತದಿವ್ಯಲಿಂಗ
ಗಂಗೋತ್ತಮಾಂಗ ಭವಭೂತಿಪತೇ ಪ್ರಸೀದ ।
ಬ್ರಹ್ಮಾಂಡಕೋಟಿರಚನಾವನನಾಶಭಾಸ್ವ-
ದ್ದುರ್ನಿಗ್ರಹೀತತನುವಿಗ್ರಹವಿಗ್ರಹೇಶ ॥೨೪॥

ದೇವಿ ಶ್ರೀಃ ಅಖಿಲಾಂಡಕೋಟಿಘಟನೇ
ಸಂರಕ್ಷಣೇ ದೀಕ್ಷಿಣಿ ।
ವಾಣ್ಯಸ್ಯಾ ಮಧುವರ್ಷಿಣೀ ಭಗವತಿ
ತ್ವಾಂ ಸ್ತೋತುಮೀಷ್ಟೇಽತ್ರ ಕಃ ॥೨೫॥

ಭೂತಿಪ್ರಾಕಾರಮೇಕೈಕಂ ಭೂತಿಂ ದತ್ವಾ ಮಹೇಶ್ವರಃ ।
ನೃಭಿಸ್ತನ್ಮಾನಸೌವರ್ಣದಾನೇನ ಪರಮೇಶ್ವರಃ ॥೨೬॥

---

ಜಂಬುವೃಕ್ಷವನ್ನೇ (ನೇರಳೇಮರವನ್ನೇ) ಆಶ್ರಯವನ್ನಾಗಿ ಹೊಂದಿರುವವನೂ ಆದ ಶಿವನನ್ನು ಹೀಗೆ ಸ್ತೋತ್ರಮಾಡಿದನು. ॥೨೧-೨೨-೨೩॥

ಎಲೈ ಜಂಬುಕೇಶ್ವರನೇ, ಜಲವ್ಯಾಪ್ತವಾದ ದಿವ್ಯಲಿಂಗವುಳ್ಳವನೂ, ಗಂಗೆಯನ್ನು ತಲೆಯಲ್ಲಿ ಧರಿಸಿದವನೂ, ಜಗದುತ್ಪತ್ತಿಕಾರಣನೂ, ಐಶ್ವರ್ಯಕ್ಕೆ (ಅಣಿಮಾದ್ಯಷ್ಟೈಶ್ವರ್ಯಗಳಿಗೆ) ಒಡೆಯನೂ ಆದ ನೀನು ನನ್ನಲ್ಲಿ ಅನುಗ್ರಹ ಮಾಡು. ಕೋಟ್ಯಂತರ ಬ್ರಹ್ಮಾಂಡಗಳನ್ನು ಸೃಷ್ಟಿಮಾಡಿ, ಕಾಪಾಡುತ್ತಾ ಕೊನೆಗೆ ಸಂಹಾರ ಮಾಡುವ ಶಕ್ತಿಯುಳ್ಳ ಪ್ರಭುವೇ, ದುಷ್ಟರನ್ನು ನಿಗ್ರಹಮಾಡಲು ಇಚ್ಛೆಬಂದ ರೂಪವನ್ನು ಧರಿಸುವವನೂ, ಪ್ರತಿಮೆಗಳಲ್ಲಿ ಮೂರ್ತಿಮತ್ತಾಗಿ ಗೋಚರಿಸುವವನೂ ಆದ ಸ್ವಾಮಿಯೇ, ನನ್ನಲ್ಲಿ ಪ್ರಸನ್ನನಾಗು. ॥೨೪॥

ದೇವಿ, ಶ್ರೀ ಅಖಿಲಾಂಡಕೋಟಿಸಂಜ್ಞೆಯಿಂದ ಪ್ರಪಂಚದ ಎಲ್ಲಾ ಘಟನೆಗಳನ್ನೂ ನಡೆಸುತ್ತಾ ಜಗದ್ರಕ್ಷಣೆಯಲ್ಲಿ ಬದ್ಧಕಂಕಣಳಾಗಿರುವ ತಾಯಿಯೇ, ಈ ನಿನ್ನ ಮಾತುಗಳು ಅಮೃತವನ್ನು ಸುರಿಸುತ್ತಿರುವುವು. ಷಡ್ಗುಣೈಶ್ವರ್ಯಸಂಪನ್ನಳೇ, ನಿನ್ನನ್ನು ಸ್ತೋತ್ರಮಾಡಲು ಇಲ್ಲಿ ಯಾರಿಗೆತಾನೆ ಶಕ್ತಿಯಿದ್ದೀತು ? ॥೨೫॥

ಈ ನಿನ್ನ ಒಂದೊಂದು ಪ್ರಾಕಾರವನ್ನೂ ಆ ಪ್ರಾಕಾರ ಪ್ರಮಾಣದಷ್ಟು ಚಿನ್ನವನ್ನು ಕೊಟ್ಟು, ಆ ಈಶ್ವರನೇ ಪಿನಗೋಸ್ವರ ಮಾನವರಿಂದ ಕಟ್ಟಿಸಿರುವನು.

ಬಬಂಧ ಸ್ವಯಮೀಶಾನಃ ಪ್ರಾಕಾರಂ ತಂ ಮಹೋನ್ನತಂ।
ಕ್ಷೇತ್ರಸ್ಯಾಸ್ಯ ಗುಣಂ ಜ್ಞಾತ್ವಾ ಶ್ವೇತದ್ವೀಪಂ ಪರಿತ್ಯಜನ್ ॥೨೭॥

ಉವಾಸ ಲಕ್ಷ್ಮ್ಯಾ ಸಹಿತಃ ತತ್ರ ಶಿಲ್ಪೇ ಸ ಪಶ್ಚಿಮೇ।
ಕೃತ್ವಾ ವೇಶ್ಮಾಶ್ಮನಾ ತತ್ರ ಸಮಭ್ಯರ್ಚ್ಯ ಮಹೇಶ್ವರಂ ॥೨೮॥

ಅಖಿಲಾಂಡಮಹಾದೇವ್ಯಾಃ ಪತಿಂ ಶ್ರೀಜಂಬುಕೇಶ್ವರಂ ॥೨೯॥

ಹೇ ಶಂಭೋ ಹರ ಸಾರ್ವಭೌಮ ದಯಯಾ ಕ್ಷೇತ್ರೇ ಸದಾಹಂ ವಸೇ
ದೈತ್ಯಾನಾಂ ಪ್ರವಿದಾರಚಕ್ರದ ವಿಭೋ ಮನ್ನೇತ್ರಪೂಜ್ಯಾಂಘ್ರಿಕ।
ಗೋತ್ರಾಜ್ಞಾಸುಪತೇ ಪ್ರಸೀದ ಭಗವನ್ಮಾಂ ಪಾಹಿ ದೇವೋತ್ತಮ
ಕ್ಷೇತ್ರಂ ತೇ ಸತತಂ ಭಜಾಮಿ ನಿಯಮಾನ್ನಾನ್ಯತ್ರ ಚಿತ್ತಂ ಮಮ ॥೩೦॥

ದೇವೀ ಮಜ್ಜನನೀ ಭವಾನ್ಮಮ ಪಿತಾ ಸ್ಕಂದೇಭವಕ್ತ್ರೌ ಮಮ
ಜ್ಯೇಷ್ಠೌ ಜ್ಯೇಷ್ಠಮಹೇಶ ಭ್ರಾತುರಧಿಕೌ ಭರ್ತಾ ಸಖಾಯಸ್ತವ।

---

ಈ ಅತ್ಯುನ್ನತವಾದ ನಿನ್ನ ಪ್ರಾಕಾರವು ವಿಶೇಷವಾಗಿ ಶೋಭಿಸುತ್ತಿರುವುದು. ಈ ಗಜಾರಣ್ಯಕ್ಷೇತ್ರದ ಮಹಿಮೆಯನ್ನೂ ಗುಣವನ್ನೂ ತಿಳಿದು ವಿಷ್ಣುವು ಶ್ವೇತದ್ವೀಪವನ್ನು ಬಿಟ್ಟು ಲಕ್ಷ್ಮಿಯೊಡನೆ ಇಲ್ಲಿಗೆ ಬಂದು, ಆ ಶಿಲ್ಪದೇವಾಲಯಕ್ಕೆ ಪಶ್ಚಿಮದಲ್ಲಿ ಕಲ್ಲಿನಿಂದ ಮನೆಯನ್ನು ಕಟ್ಟಿಸಿಕೊಂಡು, ಅಲ್ಲಿಯೇ ಮಹೇಶ್ವರನನ್ನು ಪೂಜಿಸುತ್ತಿರುವನು. ಅಖಿಲಾಂಡಮಹಾದೇವಿಯ ಪತಿಯೆನಿಸಿದ ಜಂಬುಕೇಶ್ವರನನ್ನು ನಿಯಮದಿಂದ ಪೂಜೆಮಾಡುತ್ತಿರುವನು. ॥೨೬-೨೭-೨೮-೨೯॥

ಎಲೈ ಶಂಭುವೇ, ಸಾರ್ವಭೌಮನೆನಿಸಿದ ನೀನು ದಯೆಯಿಂದ ನನ್ನನ್ನು ಕಾಪಾಡು. ಯಾವಾಗಲೂ ನಾನು ನಿನ್ನ ಈ ಕ್ಷೇತ್ರದಲ್ಲಿಯೇ ವಾಸಮಾಡುವೆನು. ರಾಕ್ಷಸರನ್ನು ಸೀಳುವ ದಿವ್ಯವಾದ ಸುದರ್ಶನಚಕ್ರವನ್ನು ಕರುಣಿಸಿದ ವಿಭುವೇ! ನನ್ನ ಕಣ್ಣಿನಿಂದ ಪೂಜಿಸಲ್ಪಟ್ಟ ಪಾದವುಳ್ಳವನೇ, ಪರ್ವತರಾಜಕುಮಾರಿಯ ಪತಿಯಾದ ಭಗವಂತನೇ, ದೇವತೋತ್ತಮನಾದ ನೀನು ನಮ್ಮನ್ನು ಕಾಪಾಡು. ನಿನ್ನ ಕ್ಷೇತ್ರದಲ್ಲಿಯೇ ಅನವರತವೂ ವಾಸಮಾಡುತ್ತಾ ಮತ್ತೆಲ್ಲಿಯೂ ಮನಸ್ಸಿಡದೇ ನಿಯಮದಿಂದ ನಿನ್ನನ್ನೇ ಭಜನೆಮಾಡುತ್ತಿರುವೆನು. ॥೩೦॥

ದೇವಿಯೇ ನನ್ನ ತಾಯಿಯು, ನೀನೇ ತಂದೆಯಾಗಿರುವೆ, ಕುಮಾರಸ್ವಾಮಿ ಮತ್ತು ಗಜವದನ ಇವರಿಬ್ಬರೂ ನನ್ನ ಹಿರಿಯ ಅಣ್ಣಂದಿರಾಗಿರುವರು.

ಭಸ್ಮಾಕ್ಷಾದಿವಿಭೂಷಿತಸ್ತವಪದೇ ಸಕ್ತ್ಯಾ ಚ ಭಕ್ತ್ಯಾ ವಸೇ
ತ್ವಂ ದೇವೋತ್ತಮ ಮೇ ಗತಿಃ ಕುರು ಕೃಪಾಂ ಭಕ್ತಾಗ್ರಗಣ್ಯೇ ಮಯಿ॥೩೧॥

ಇತ್ಥಂ ರಥಾಂಗವರಧೃಕ್ ಶಶಿಬಿಂಬಸಂಗಂ
ಗಂಗೋತ್ತಮಾಂಗಸುಕುರಂಗ ಪಿನಾಕಪಾಣಿಂ।
ಸಂಸ್ತುತ್ಯ ಪೂಜ್ಯಮಖಿಲಾಂಡಮಹೇಶ್ವರೀಂ ಚ
ತತ್ರೈವ ಶೇಷಶಯನೋಽಷಿತವಾನ್ಸರಂಗಃ ॥೩೨॥

|| ಸೂತ ಉವಾಚ ||

ಕ್ಷೇತ್ರಂ ಗಜಾರಣ್ಯಮಿದಂ ಪವಿತ್ರಂ
ಗಾತ್ರಂ ಪುನಸ್ತ್ಯಕ್ತಮನಾಮಗಾತ್ರಂ।
ಗಾತ್ರಂ ಯದಿ ಸ್ಯಾತ್ತ್ರಿದಯುಗ್ಮನೇತ್ರಂ
ಗೋತ್ರಾತ್ಮಜಾಭೂಷಿತವಾಮಗಾತ್ರಂ ॥೩೩॥

---

ಮಹೇಶ್ವರನೇ, ನನ್ನ ಭ್ರಾತೃಗಳಿಗಿಂತಲೂ ಅಧಿಕನೂ, ಯಜಮಾನನೂ, ಸ್ನೇಹಿತನೂ ನನಗೆ ನೀನೇ ಆಗಿರುವೆ. ದೇವ, ಭಸ್ಮರುದ್ರಾಕ್ಷಗಳೇ ಮೊದಲಾದುವುಗಳಿಂದಲಂಕೃತನಾಗಿ ನಿನ್ನ ಪಾದದಲ್ಲಿ ಆಸಕ್ತನಾಗಿ ನಾನು ಭಕ್ತಿಯಿಂದ ನಿನ್ನ ಸನ್ನಿಧಿಯಲ್ಲಿಯೇ ವಾಸಮಾಡುವೆನು. ದೇವೋತ್ತಮನಾದ ನೀನೇ ನನಗೆ ಗತಿಯು; ಮಹಾದೇವ, ಭಕ್ತರಲ್ಲಿ ಅಗ್ರೇಸರನೆನಿಸಿದ ನನ್ನ ಮೇಲೆ ದಯೆಯಿಟ್ಟು ಅನುಗ್ರಹಮಾಡುವನಾಗು. ||೩೧||

ಈ ರೀತಿಯಾಗಿ ಸುದರ್ಶನವೆಂಬ ಉತ್ತಮವಾದ ಚಕ್ರಾಯುಧವನ್ನು ಧರಿಸಿರುವ ವಿಷ್ಣುವು, ಚಂದ್ರಬಿಂಬವನ್ನು ತಲೆಯಲ್ಲಿ ಧರಿಸಿ, ಉತ್ತಮವಾದ ಗಂಗಾನದಿಯನ್ನೂ ಧಾರಣೆಮಾಡಿರುವ, ಜಿಂಕೆ ಮತ್ತು ಪಿನಾಕಗಳನ್ನು ಹಿಡಿದಿರುವ ಮಹೇಶ್ವರನನ್ನೂ, ಪೂಜಾರ್ಹಳಾದ ಅಖಿಲಾಂಡಮಹೇಶ್ವರೀದೇವಿಯನ್ನು ಚೆನ್ನಾಗಿ ಸ್ತೋತ್ರಮಾಡಿ ಆ ರಂಗಸ್ವಾಮಿಯೆನಿಸಿದ ವಿಷ್ಣುವು ಅಲ್ಲಿಯೇ ಆದಿಶೇಷನ ಮೇಲೆ ಮಲಗಿ ವಾಸಮಾಡತೊಡಗಿದನು. ||೩೨||

ಓ ಮುನಿಗಳಿರಾ! ಈ ಗಜಾರಣ್ಯಕ್ಷೇತ್ರವು ತುಂಬಾ ಪವಿತ್ರವಾದುದು. ಈ ಕ್ಷೇತ್ರದಲ್ಲಿ ಶರೀರತ್ಯಾಗಮಾಡಿದವನಿಗೆ ಪುನಃ ನಾಮರೂಪಗಳಿಲ್ಲದ ಸ್ವರೂಪವುಂಟಾಗುವುದು. ಒಂದುವೇಳೆ ಶರೀರವುಂಟಾಗುವುದಾದರೆ ಮೂರು ಕಣ್ಣುಗಳಿಂದ

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಮಾತೃಭೂತೇಶ ಜಂಬುಕೇಶ ಗಜಾರಣ್ಯವೈಭವ ವರ್ಣನೇ ಏಕಾದಶೋಽಧ್ಯಾಯಃ**

---

ಕೂಡಿ, ಪರ್ವತರಾಜಕುಮಾರಿಯಿಂದಲಂಕೃತವಾದ ಅರ್ಧಶರೀರವುಂಟಾಗುವುದು. (ಶಿವನ ಅರ್ಧನಾರೀಶ್ವರನ ಸಾರೂಪ್ಯವನ್ನೇ ಹೊಂದುವನೆಂದು ಭಾವವು.) ||೩೩||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಮಾತೃಭೂತೇಶ್ವರ, ಜಂಬುಕೇಶ್ವರ ಮತ್ತು ಗಜಾರಣ್ಯಕ್ಷೇತ್ರಗಳ ಮಹಿಮಾವರ್ಣನೆಯೆಂಬ ಹನ್ನೊಂದನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ದ್ವಾದಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ತತ್ಪ್ರಾಚ್ಯಾಂ ಸ್ಥಾನದಶಕಂ ಶಂಭೋರ್ನಿತ್ಯಂ ಪ್ರಿಯಂಕರಂ ।
ದಕ್ಷಿಣೇ ಚೋತ್ತರೇ ತಸ್ಯಾಃ ಕಾವೇರ್ಯಾಃ ಪರಿತಃ ಸ್ಥಿತಂ ॥೧॥

ಮುಖತ್ರಯಂ ಹಿ ಕಾವೇರ್ಯಾ ದಕ್ಷಿಣೇ ಪ್ರವಹೇತ್ತತಃ ।
ಐರಾವತೇಶ್ವರಂ ಸ್ಥಾನಂ ಸ್ಥಾನಮಗ್ನೀಶ್ವರಾಭಿಧಂ ॥೨॥

ಆಪತ್ಸಹಾಯಸ್ಥಾನಂ ಚ ಸ್ಥಾನಂ ತಂಜೇಶ್ವರಾಭಿಧಂ ।
ವಟಸ್ಥಲೇಶ್ವರಂ ಸ್ಥಾನಂ ಸ್ಥಾನಂ ಪುಣ್ಯದ್ರುತೇಶ್ವರಂ ॥೩॥

ಧೃತಸ್ಥಾನಂ ಶ್ರೀಪ್ರಯಾಣಂ ಸ್ಥಾನಮನ್ನಾವತಾರಕಂ ।
ತಥಾ ವೇದಕುಟೀಸ್ಥಾನಂ ಸ್ಥಾನಂ ಕುಂಡೀಶ್ವರಾಭಿಧಂ ॥೪॥

---

## ಹನ್ನೆರಡನೆಯ ಅಧ್ಯಾಯ

ಕುಮಾರನು ಕ್ಷೇತ್ರಗಳ ಕಥೆಯನ್ನು ಮುಂದುವರಿಸುತ್ತಾ ಹೀಗೆಂದನು—ಈ ಗಜಾರಣ್ಯಕ್ಷೇತ್ರಕ್ಕೆ ಪೂರ್ವದಿಕ್ಕಿನಲ್ಲಿ ಆ ಶಂಭುವಿಗೆ ನಿತ್ಯವೂ ಪ್ರೀತಿಯನ್ನುಂಟುಮಾಡುವ ಹತ್ತು ಕ್ಷೇತ್ರಗಳಿರುವುವು. ಅವು ಕಾವೇರೀನದಿಯ ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿಯೂ ಅಲ್ಲದೇ ಸುತ್ತಲೂ ಇರುವುವು. ಕಾವೇರೀನದಿಯು ದಕ್ಷಿಣ ದಿಕ್ಕಿನಲ್ಲಿ ಮೂರು ಮುಖವಾಗಿ ಹರಿಯುತ್ತದೆ. ಅಲ್ಲಿಂದ ಮುಂದೆ ' ಐರಾವತೇಶ್ವರ, ಅಗ್ನೀಶ್ವರ, ಆಪತ್ಸಹಾಯೇಶ್ವರ, ತಂಜೇಶ್ವರ, ವಟಸ್ಥಳೇಶ್ವರ, ಪುಣ್ಯದ್ರುತೇಶ್ವರ,

ತೇಷು ಜಪ್ಯೇಶ್ವರಸ್ಥಾನಂ ಶಂಭೋರ್ನಿತ್ಯಂ ಪ್ರಿಯಂ ಸದಾ ।
ಕಾವೇರ್ಯಾ ಉತ್ತರೇ ತೀರೇ ಮರಣಾಚ್ಛಿವರೂಪದಂ ॥೫॥

ತತ್ರ ಸ್ಥಾನೇ ಚ ಜಪ್ಯೇಶೇ ನಂದೀಶಂಕರವಲ್ಲಭಃ ।
ಗಾಣಾಧಿಪತ್ಯಂ ಸಂಪ್ರಾಪ ಸಾರೂಪ್ಯಮಪಿ ಶಾಂಕರಂ ॥೬॥

॥ ಜೈಗೀಷವ್ಯ ಉವಾಚ ॥

ಕಥಂ ಜಪ್ಯೇಶ್ವರಸ್ಥಾನೇ ಶಿಲಾಸನಸುತೋ ಮುನಿಃ ।
ಗಾಣಾಧಿಪತ್ಯಂ ಸಂಪ್ರಾಪ ಶಿವಸಾರೂಪ್ಯಮುತ್ತಮಂ ॥೭॥

ತನ್ನೋ ವದಾಧುನಾ ಸ್ಕಂದ ಪುಣ್ಯಂ ಶಿವಕಥಾಶ್ರಯಂ ।
ಸಹ್ಯಾಪಗಾತಟೇಷ್ವೇವ ಸ್ಥಾನಾನ್ಯತ್ಯದ್ಭುತಾನಿ ನಃ ॥೮॥

---

ಶ್ರೀಪ್ರಯಾಣವೆನಿಸಿದ ಧೃತಸ್ಥಾನ, ಅನ್ನಾವತಾರಕಸ್ಥಾನ, ವೇದಕುಟೀಸ್ಥಾನ ಮತ್ತು ಕುಂಡೀಶ್ವರಸ್ಥಾನಗಳೆಂದು ಹತ್ತು ಸ್ಥಾನಗಳಿರುವುವು. ॥೧-೨-೩-೪॥

ಅವುಗಳಲ್ಲೆಲ್ಲಾ ಜಪ್ಯೇಶ್ವರಸ್ಥಾನವು ಶಂಭುವಿಗೆ ಯಾವಾಗಲೂ ಪ್ರಿಯಕರವಾಗಿರುವುದು. ಅದು ಕಾವೇರಿಯ ಉತ್ತರದಡದಲ್ಲಿದ್ದು, ತನ್ನಲ್ಲಿ ಮರಣ ಹೊಂದುವವರಿಗೆ ಶಿವಸಾರೂಪ್ಯವನ್ನುಂಟುಮಾಡುತ್ತಿರುವುದು. ಹಿಂದೆ ಆ ಜಪ್ಯೇಶಸ್ಥಾನದಲ್ಲಿ ಶಂಕರನಿಗೆ ಪ್ರೀತಿಪಾತ್ರನೆನಿಸಿರುವ ನಂದಿಕೇಶ್ವರನು ಶಿವನನ್ನು ಕುರಿತು ತಪಸ್ಸು ಮಾಡಿ, ಗಣಾಧಿಪತಿ ಪದವಿಯನ್ನೂ ಮತ್ತು ಆ ಶಂಕರನ ಸಾರೂಪ್ಯವನ್ನೂ (ಸಮಾನವಾದ ಆಕೃತಿಯನ್ನೂ) ಪಡೆದನು. ಇದನ್ನು ಕೇಳಿ ಜೈಗೀಷವ್ಯನು, ॥೫-೬॥

" ಸ್ಕಂದದೇವನೇ, ಈ ಜಪ್ಯೇಶ್ವರಸ್ಥಾನದಲ್ಲಿ ಶಿಲಾದಮುನಿಪುತ್ರನಾದ ನಂದಿಕೇಶ್ವರನು ಮನನಶೀಲನಾಗಿ, ಗಣಾಧಿಪತಿಸ್ಥಾನವನ್ನೂ ಮತ್ತು ಉತ್ತಮವಾದ ಶಿವಸಾರೂಪ್ಯವನ್ನೂ ಹೇಗೆ ಪಡೆದನು ? ಅದನ್ನು ನಮಗೆ ದಯವಿಟ್ಟು ತಿಳಿಸು ; ಸಹ್ಯಾದ್ರಿಯಲ್ಲಿ ಹುಟ್ಟಿದ ಕಾವೇರಿಯ ದಡದಲ್ಲಿರುವ ಅತ್ಯದ್ಭುತವಾದ ಪುಣ್ಯಸ್ಥಾನಗಳನ್ನೂ, ಪುಣ್ಯಕರವಾದ ಶಿವನಸಂಬಂಧವಾದ ಕಥೆಗಳಿಗೆ ಆಶ್ರಯವಾಗಿರುವ ಇನ್ನಿತರ ಪುಣ್ಯಸ್ಥಳಗಳನ್ನೂ ನಮಗೆ ಹೇಳಲು ನೀನೇ ಸಮರ್ಥನಾಗಿರುವೆ" ಎಂದು ಸ್ಕಂದಸ್ವಾಮಿಯನ್ನು ಪ್ರಾರ್ಥಿಸಿದನು. ॥೭-೮॥

॥ ಶ್ರೀ ಸ್ಕಂದ ಉವಾಚ ॥

**ಶೃಣುಷ್ವ ಮುನಿಭಿಃ ಸಾರ್ಧಂ ಗಣವೃಂದೈಃ ಸಹಾದರಾತ್ ।**
**ಜಪ್ಯೇಶಸ್ಥಾನವಿಭವಂ ಶ್ರವಣಾದಘನಾಶಕಂ ॥೯॥**

ಪುರಾತ್ರ ಸ ತಪಸ್ತೇಪೇ ಶಿಲಾಶನಸುತೋ ಮುನಿಃ ।
ವರ್ಷಾಣಾಂ ದಶಕಂ ತತ್ರ ಭಸ್ಮದಿವ್ಯತ್ರಿಪುಂಡ್ರಧೃಕ್ ॥೧೦॥

ರುದ್ರಾಕ್ಷಧಾರಣೋ ನಿತ್ಯಂ ಪಂಚಾಕ್ಷರಪರಾಯಣಃ ।
ಜಪ್ಯೇಶಧ್ಯಾನನಿರತಃ ಜಪನ್ ಶ್ರೀರುದ್ರಮುತ್ತಮಂ ॥೧೧॥

**ಅತಿಷ್ಠದೇಕಪಾದೇನ ಧೈರ್ಯೇಣ ಮುನಿಸತ್ತಮಃ ।**
**ತಸ್ಯೈವಂ ತಪಸಾ ಶಂಭುಃ ಪ್ರಾದುರಾಸೀದುಮಾಪತಿಃ ॥೧೨॥**

**ದ್ವಿತೀಯೇ ದಶಮೇ ವರ್ಷೇ ಪುನಃ ಶ್ರೀಚಂದ್ರಶೇಖರಂ ।**
**ಪ್ರಾಹ ತಂ ದೇವದೇವೇಶಃ ಶಿಲಾಶನಸುತಂ ತದಾ ॥೧೩॥**

---

ಓ ಜೈಗೀಷವ್ಯನೇ, ಗಣವೃಂದದೊಡನೆಯೂ ಇತರ ಮುನಿಗಳೊಡನೆಯೂ ಕೇಳು. ಶ್ರವಣಮಾತ್ರದಿಂದ ಸಕಲ ಪಾಪಗಳನ್ನೂ ನಾಶಮಾಡುವ ಜಪ್ಯೇಶಕ್ಷೇತ್ರ ವೈಭವವನ್ನು ಈಗ ಹೇಳುವೆನು. ಹಿಂದೆ ಈ ಕ್ಷೇತ್ರದಲ್ಲಿ ಶಿಲಾದಮುನಿಯ ಕುಮಾರನಾದ ನಂದಿಮುನಿಯು ಭಸ್ಮದಿಂದ ದಿವ್ಯವಾದ ತ್ರಿಪುಂಡ್ರಗಳನ್ನು ಧರಿಸಿಕೊಂಡು ಹತ್ತು ವರ್ಷಗಳಕಾಲ ತಪಸ್ಸುಮಾಡಿದನು. ॥೯-೧೦॥

ನಿತ್ಯವೂ ರುದ್ರಾಕ್ಷಗಳನ್ನು ಧರಿಸುತ್ತ ಶಿವಪಂಚಾಕ್ಷರಮಂತ್ರಜಪಪರಾಯಣನಾಗಿ ಜಪ್ಯೇಶ್ವರನ ಧ್ಯಾನದಲ್ಲಿಯೇ ಆಸಕ್ತಿ ಹೊಂದಿ, ಉತ್ತಮವಾದ ಶ್ರೀರುದ್ರ ಮಂತ್ರವನ್ನೂ ಜಪಮಾಡುತ್ತಿದ್ದನು. ಮುನಿಪುಂಗವನಾದ ಈತನು ಧೈರ್ಯವನ್ನವಲಂಬಿಸಿ ಒಂದೇ ಕಾಲಿನಲ್ಲಿ ನಿಂತು ಹತ್ತು ವರ್ಷಗಳು ತಪಸ್ಸುಮಾಡಿದನು. ಹೀಗೆ ಅವನು ತಪಸ್ಸು ಮಾಡಿದುದಕ್ಕೆ ಮೆಚ್ಚಿ ಉಮಾರಮಣನಾದ ಶಂಭುವು ಅವನಿಗೆ ಪ್ರತ್ಯಕ್ಷನಾದನು. ॥೧೧-೧೨॥

ಮೊದಲನೆಯ ಹತ್ತು ವರ್ಷದಲ್ಲಿ ಶಿವನು ಪ್ರತ್ಯಕ್ಷನಾಗಿ ನಂದಿಯನ್ನು ವರ ಬೇಡೆಂದು ಹೇಳಲು, ಅವನು ಯಾವ ವರವನ್ನೂ ಬೇಡದೇ ಹಾಗೆಯೇ

ವರಂ ವೃಣು ದದಾಮ್ಯದ್ಯ ನ ಸಂಪ್ರಾರ್ಥಯತೇ ಶಿವಂ ।
ತಥೇತ್ಯದರ್ಶನಂ ಯಾತೋ ಭಗವಾನಂಬಿಕಾಪತಿಃ ॥೧೪॥

ತೃತೀಯೋ ದಶಮೋ ವರ್ಷೇ ಪುನಃ ಶ್ರೀಚಂದ್ರಶೇಖರಃ ।
ಪ್ರಾದುರ್ಬಭೂವ ವಿಶ್ವಾತ್ಮಾ ಭಗವಾನ್ಗಿರಿಜಾಪತಿಃ ॥೧೫॥

ತದಾ ಪ್ರಣಮ್ಯ ತುಷ್ಟಾವ ರುದ್ರಸೂಕ್ತೇನ ಶಂಕರಂ ।
ಶಿಲಾದತನಯೋ ದೇವಂ ಭವಂ ಭೂತಪತಿಂ ಶಿವಂ ॥೧೬॥

॥ ಶಿಲಾದ ಉವಾಚ ॥

ಹೇ ರುದ್ರ ಶಂಭೋ ಭಗವನ್ಪ್ರಸೀದ
ಮಾಂ ಪಾಹಿ ಹೇ ಸಾಂಬ ಸುಕೃತ್ತಿವಾಸ ।
ಪಿನಾಕಹಸ್ತೋದ್ಯತ ಹೇತಿಧಾರ
ತಿಗ್ಮಾಯುಧ ಬಾಣಕರಾವ ಮಾಂ ವಿಭೋ ॥೧೭॥

---

ತಪಸ್ಸನ್ನು ಮುಂದುವರಿಸಿದನು. ಹಾಗೆಯೇ ಇನ್ನೂ ಹತ್ತು ವರ್ಷಗಳು ಕಳೆದವು. ಆಗ ಪುನಃ ದೇವದೇವೇಶ್ವರನೆನಿಸಿದ ಶ್ರೀಚಂದ್ರಶೇಖರನು ಆ ಶಿಲಾದಮುನಿಯ ಕುಮಾರನನ್ನು ಕುರಿತು, ಈಗಲಾದರೂ ವರವನ್ನು ಬೇಡು ಕೊಡುತ್ತೇನೆಂದು ಕೇಳಲು, ಆಗಲೂ ನಂದಿಯು ಶಿವನನ್ನು ಯಾವ ವರವನ್ನೂ ಬೇಡಲಿಲ್ಲ. ಆಗ ಆ ಅಂಬಿಕಾರಮಣನು ಹಾಗೆಯೇ ಅಂತರ್ಧಾನನಾದನು. ॥೧೩-೧೪॥

ಹತ್ತನೆಯ ವರ್ಷದ ಎರಡು ಸರದಿಯು ಮುಗಿದು ಮೂರನೆಯ ಹತ್ತನೆಯ ವರ್ಷದಲ್ಲಿ (೩೦ ನೇ ವರ್ಷದಲ್ಲಿ) ಪುನಃ ಶ್ರೀ ಗಿರಿಜಾರಮಣನಾದ ಚಂದ್ರಶೇಖರನು ಪ್ರತ್ಯಕ್ಷನಾದನು. ಆಗ ಆ ಶಿಲಾದಮುನಿಯ ಕುಮಾರನು ಸಕಲ ಚರಾಚರ ಭೂತಗಳಿಗೂ ಒಡೆಯನೂ, ಜಗನ್ಮಂಗಳಕರನೂ, ಜಗದುತ್ಪತ್ತಿಸ್ಥಿತಿನಾಶಕಾರಣ ಭೂತನೂ ಆದ ಶಿವನನ್ನು ನಮಸ್ಕರಿಸಿ, ರುದ್ರಸೂಕ್ತಮಂತ್ರದಿಂದ ಸ್ತೋತ್ರಮಾಡಿದನು. ॥೧೫-೧೬॥

ಪ್ರಳಯಕಾಲದಲ್ಲಿ ಸಕಲ ಪ್ರಾಣಿಗಳನ್ನೂ ಸಂಹಾರಮಾಡುವವನೂ, ಷಡ್ಗುಣೈಶ್ವರ್ಯಭರಿತನೂ ಆದ ಶಂಭುವೇ! ಪ್ರಸನ್ನನಾಗು ; ಉತ್ತಮವಾದ ಆನೆಯ ಚರ್ಮವನ್ನು ಹೊದ್ದಿರುವ ಅಂಬಿಕಾರಮಣನೇ, ನನ್ನನ್ನು ಕಾಪಾಡು. ಪಿನಾಕ (ಬಿಲ್ಲು) ಕತ್ತಿ, ಹರಿತವಾದ ಬಾಣಗಳನ್ನು ಕೈಯ್ಯಲ್ಲಿ ಹಿಡಿದಿರುವ ವಿಭುವೇ!

ತತ್ಸ್ತುತ್ಯಾ ತುಷ್ಟಹೃದಯಃ ಸ್ತೋತ್ರಮಾಂಗೋತ್ತಮಾಂ ಗತಾತ್ ।
ಗಂಗಾಜಲಾನ್ನದೀ ತತ್ರ ವೃಷವಕ್ತ್ರೋರುಫೇನಜಾಂ ॥೧೮॥

ಗೌರೀಕುಚಪಯಃಪೂರತಟಿನೀ ಚಂದ್ರಬಿಂಬಜಾಂ ।
ಸಹ್ಯಜಾತಾಪಯಃ ಪೂರೈರಭಿಷಿಚ್ಯಾಥ ನಂದಿನಂ ॥೧೯॥

ಗಾಣಾಧಿಪತ್ಯಂ ದದೌ ದೇವಃ ಗಂಗಾಚಂದ್ರಕಲಾಧರಂ ।
ತ್ರಿನೇತ್ರಂ ನೀಲಕಂಠಂ ಚ ಚತುರ್ಬಾಹುಂ ಚ ನಂದಿನಂ ॥೨೦॥

ದೃಷ್ಟ್ವಾ ಸುರಾನ್ವಿಷ್ಣುಮುಖಾನಬ್ರವೀತ್ಪರಮೇಶ್ವರಃ ॥೨೧॥

॥ ಶ್ರೀ ಶಿವ ಉವಾಚ ॥

ಅದ್ಯ ಪ್ರಭೃತ್ಯಯಂ ಮೇದ್ಯ ನಂದಿಕೇಶೋ ಗಣಾಗ್ರಣೀ ।
ಏತಸ್ಯ ರುದ್ರಜಾಪ್ಯೇನ ತುಷ್ಟೋ ಜಪ್ಯೇಶ್ವರೋಽಹ್ಯಹಂ ॥೨೨॥

---

ನನ್ನನ್ನು ಕಾಪಾಡೆಂದು ಶಿಲಾದಮುನಿಯ ಕುಮಾರನು ಮಹೇಶ್ವರನನ್ನು ಸ್ತೋತ್ರ ಮಾಡಿದನು. ॥೧೭॥

ಆ ಮುನಿಯ ಸ್ತೋತ್ರದಿಂದ ಸಂತುಷ್ಟಾಂತರಂಗನಾಗಿ ಮಹೇಶ್ವರನು ತನ್ನ ತಲೆಯಲ್ಲಿ ಧರಿಸಿದ್ದ ಗಂಗಾನದಿಯ ನೀರಿನಿಂದಲೂ, ವಾಹನವಾದ ವೃಷಭದ ಬಾಯಲ್ಲಿ ಹೊರಟ ವಿಶೇಷವಾದ ನೊರೆಯಿಂದುಂಟಾದ ನೀರಿನಿಂದಲೂ, ಗೌರೀ ದೇವಿಯ ಸ್ತನಗಳಿಂದ ಪ್ರೀತಿಪೂರ್ವಕವಾಗಿ ಹೊರಟ ಹಾಲಿನ ಪ್ರವಾಹಭರಿತವಾದ ನದಿಯ ನೀರಿನಿಂದಲೂ, ಚಂದ್ರಬಿಂಬದಿಂದುದ್ಭವಿಸಿದ ನದಿಯ ನೀರು ಮತ್ತು ಪ್ರವಾಹಭರಿತವಾದ ಕಾವೇರೀನದಿಯ ನೀರಿನಿಂದಲೂ ಸಹ ಆ ನಂದಿಕೇಶ್ವರನಿಗೆ ಅಭಿಷೇಕಮಾಡಿದನು. ಆನಂತರ ಅವನಿಗೆ ಗಣಾಧಿಪತಿಸ್ಥಾನವನ್ನೂ ಕೊಟ್ಟನು. ಆನಂತರ ತನ್ನ ಸಾರೂಪ್ಯವನ್ನೂ ಅವನಿಗೆ ಕರುಣಿಸಲು, ಆ ನಂದಿಯು ಗಂಗಾನದಿ ಮತ್ತು ಚಂದ್ರಕಲೆಗಳನ್ನು ತಲೆಯಲ್ಲಿ ಧರಿಸಿ, ಮೂರು ಕಣ್ಣುಗಳಿಂದಲೂ ಕಪ್ಪಾದ ಕೊರಳಿಂದಲೂ, ನಾಲ್ಕುಬಾಹುಗಳಿಂದಲೂ ಶೋಭಿಸುತ್ತಿದ್ದನು. ಆಗ ಪರಮೇಶ್ವರನು ಈರೀತಿ ತನ್ನ ಸಾರೂಪ್ಯ ಪಡೆದು ಶೋಭಿಸುತ್ತಿರುವ ನಂದಿಯನ್ನೂ ಇತರ ವಿಷ್ಣ್ವಾದಿ ದೇವತೆಗಳನ್ನೂ ನೋಡಿ ಅವರನ್ನು ಕುರಿತು ಇಂತೆಂದನು. ॥೧೮-೧೯-೨೦-೨೧॥

ಓ ದೇವತೆಗಳಿರಾ, ಇದು ಮೊದಲು ಈ ನಂದಿಕೇಶ್ವರನು ನನ್ನ ಗಣಗಳಿಗೆಲ್ಲಾ ಅಗ್ರೇಸರನಾಗಿರುವನು. ಈತನು ಮಾಡಿದ ರುದ್ರಜಪದಿಂದ ಜಪ್ಯೇಶ್ವರನೆನಿ

ಗಣಾಧಿಪತ್ಯಂ ದತ್ತಂ ಚ ಸಾರೂಪ್ಯಂ ಚ ಮಮಾಮರಾಃ ।
ಪಂಚನದ್ಯಾಭಿಷೇಕೇನ ಸ್ಥಾನಂ ಪಂಚನದಂ ಸ್ಮೃತಂ ॥೨೩॥

ಜಪ್ಯೇಶದಕ್ಷಿಣೇ ಭಾಗೇ ಶ್ರೀರುದ್ರಜಪತೋಷಿತಃ ।
ಪಾಲ್ಯತಾಮಸ್ಯ ವೈ ಚಾಜ್ಞಾ ಮಮಾಜ್ಞೈವ ಗರೀಯಸೀ ॥೨೪॥

ಶಿವಾಜ್ಞಯಾ ಸುರಾಃ ಸರ್ವೇ ವಿಷ್ಣುಬ್ರಹ್ಮಾದಯಃ ಸುರಾಃ ।
ನಂದಿನಃ ಪರಮಾಮಾಜ್ಞಾಂ ಪಾಲಯಂತಿ ಗಣಾಗ್ರಗಾಃ ॥೨೫॥

ಪರಶ್ವಥಾಹ್ವಯಕ್ಷೇತ್ರಾದಾನೀಯ ಮರುತಃ ಸುತಾಂ ।
ಸುಯಶಾನಾಮ ತನ್ವಂಗೀಮುದ್ವಹೇ ಚಾಸ್ಯ ನಂದಿನಃ ॥೨೬॥

ಸುರೈಶ್ಚ ನಂದಿನಾ ಸಾಕಂ ಜಪ್ಯೇಶೇಽಥ ಪ್ರದಕ್ಷಿಣಂ ।
ಚಕಾರ ಸಪ್ತಸ್ಥಾನೇಷು ಸರ್ವೇಷಾಮಿಷ್ಟಕಾಮದಃ ॥೨೭॥

---

ಸಿರುವ ಈ ನಾನು ಸಂತುಷ್ಟನಾಗಿರುವೆನು. ಇವನಿಗೆ ಗಣಾಧಿಪತಿಪದವಿಯನ್ನೂ ನನ್ನ ಸಮಾನವಾದ ಸ್ವರೂಪವನ್ನೂ ಸಹ ಕರುಣಿಸಿರುವೆನು. ಇವನಿಗೆ ಐದು ನದಿಗಳ ನೀರಿನಿಂದ ಅಭಿಷೇಕಮಾಡಿರುವುದರಿಂದ ಈ ಕ್ಷೇತ್ರವು ಪಂಚನದಕ್ಷೇತ್ರ ವೆಂದು ಪ್ರಸಿದ್ಧಿಹೊಂದುವುದು. ॥೨೨-೨೩॥

ಈ ಜಪ್ಯೇಶಕ್ಷೇತ್ರದ ದಕ್ಷಿಣದ ಭಾಗದಲ್ಲಿ ಶ್ರೀರುದ್ರಮಂತ್ರಜಪದಿಂದ ನನ್ನನ್ನು ಸಂತೋಷಪಡಿಸುವ ಈ ನಂದಿಕೇಶ್ವರನ ಅಪ್ಪಣೆಯು ನನ್ನ ಗುರುತರ ವಾದ ಅಪ್ಪಣೆಯೇ ಎಂಬುದಾಗಿ ತಿಳಿದು ಗೌರವದಿಂದ ಪಾಲಿಸಿರಿ, ಎಂದು ಶಿವನು ಹೇಳಲು, ಆ ಶಿವನ ಅಪ್ಪಣೆಯಂತೆ ವಿಷ್ಣು ಬ್ರಹ್ಮ ಮುಂತಾದ ದೇವತೆಗಳೆಲ್ಲರೂ ಗಣಾಗ್ರಣಿಯಾದ ಆ ನಂದಿಕೇಶ್ವರನ ಉತ್ಕೃಷ್ಟವಾದ ಅಪ್ಪಣೆಯನ್ನು ತಪ್ಪದೇ ನಡೆಸಿಕೊಂಡು ಬರುತ್ತಿರುವರು. ॥೨೪-೨೫॥

ಅನಂತರ ಪರಶ್ವಥವೆಂಬ ಹೆಸರಿನ ಕ್ಷೇತ್ರದಲ್ಲಿದ್ದ ವಾಯುವಿನ ಮಗಳಾದ ಸುಯಶಾ ಎಂಬ ಹೆಸರುಳ್ಳ ಕೃಶಾಂಗಿಯನ್ನು ತಂದು ಈ ನಂದಿಕೇಶ್ವರನಿಗೆ ಮದುವೆ ಮಾಡಿದರು. ಆ ಮೇಲೆ ಅದೇ ಜಪ್ಯೇಶಕ್ಷೇತ್ರದಲ್ಲಿ ದೇವತೆಗಳೊಡನೆ ನಂದಿಯು ಏಳು ಕಡೆಗಳಲ್ಲಿ ಪೂಜಾಸ್ಥಾನಗಳನ್ನು ಕಲ್ಪಿಸಿ, ಎಲ್ಲರಿಗೂ ಇಷ್ಟಾರ್ಥಗಳನ್ನು ಕೊಡು ವವನಾಗಿರುವನು. ॥೨೬-೨೭॥

ತಸ್ಮಾತ್ಪಂಚನದಂ ಸುಸೇವ್ಯಮುಗಜಾಕಾಂತಾರ್ಚಕೈಃ ಶಾಂಕರೈಃ
ಸ್ಥಾನಂ ಪುಣ್ಯತಮಂ ತನುವ್ಯಯಗಮೇ ಶಂಭೋಃ ಸ್ವರೂಪಪ್ರದಂ ।
ದುರ್ವಾಸೋಽತ್ರಿದಧೀಚಿ ಕುಂಭಜಮುಖೈಸ್ತದ್ಗೌತಮೇನಾಪಿ ತಂ
ವಿಶ್ವಾಮಿತ್ರಮೃಕಂಡುಜಕ್ಷಿತಿಸುರೈರಾರಾಧಿತಃ ಶೈಲಾಜಾ
ಕಾಂತಃ ಸಪ್ರಣತಾರ್ತಿನಾಶನಪರೋ ಧ್ಯಾತಸ್ಸ್ತುತಃ ಪೂಜಿತಃ ॥೨೮॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ನಂದಿಕೇಶತಪಶ್ಚರ್ಯಾ
ವರಪ್ರದಾನ ಪಂಚನದೋತ್ಪತ್ತಿವರ್ಣನೇ ದ್ವಾದಶೋಽಧ್ಯಾಯಃ

---

ಪಾರ್ವತೀಕಾಂತನಾದ ಪರಶಿವನನ್ನು ಪೂಜೆಮಾಡುವ ಶಾಂಕರರು ಅವಶ್ಯವಾಗಿ ಈ ಪಂಚನದಕ್ಷೇತ್ರವನ್ನು ಸೇವೆಮಾಡಬೇಕು. ಅತ್ಯಂತ ಪುಣ್ಯಕರವಾದ ಈ ಸ್ಥಾನದಲ್ಲಿ ಶರೀರ ನಾಶವಾದರೆ ಆ ಪರಶಿವನ ಸಾರೂಪ್ಯವೇ ಉಂಟಾಗುವುದು. ದೂರ್ವಾಸ, ಅತ್ರಿ, ದಧೀಚಿ, ಅಗಸ್ತ್ಯ ಮುಂತಾದ ಮುನಿಗಳಿಂದಲೂ, ಗೌತಮ, ವಿಶ್ವಾಮಿತ್ರ ಮತ್ತು ಮಾರ್ಕಂಡೇಯನೇ ಮುಂತಾದ ತಪಸ್ವಿಗಳಿಂದಲೂ, ಆರಾಧಿಸಲ್ಪಟ್ಟು, ಈ ಕ್ಷೇತ್ರದಲ್ಲಿರುವ ತನಗೆ ನಮಸ್ಕಾರಮಾಡಿದವರ ಪೀಡೆಯನ್ನು ನಾಶಮಾಡುವುದರಲ್ಲಿ ನಿರತನಾದ ಶೈಲರಾಜಕುಮಾರಿಯ ಪತಿಯು ಧ್ಯಾನ ಮತ್ತು ಪೂಜೆ ಮೊದಲಾದವುಗಳಿಂದ ಸದಾ ಸತ್ಕರಿಸಲ್ಪಟ್ಟಿರುವನು. ॥-೨೮॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ನಂದಿಕೇಶ್ವರನು
ತಪಸ್ಸುಮಾಡುವಿಕೆ, ಅವನಿಗೆ ವರ ಕೊಡುವುದು, ಈ ಸಂದರ್ಭದಲ್ಲಿ
ಪಂಚನದಿಗಳ ಉತ್ಪತ್ತಿ ಇವುಗಳ ವರ್ಣನೆಯೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ತ್ರಯೋದಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಜಪ್ಯೇಶಾದ್ದಕ್ಷಿಣೇ ತತ್ರ ಕಾವೇರ್ಯಾಃ ಕ್ರೋಶಮಾತ್ರಕೇ ।
ಶಮೀವನಂ ಶಿವಸ್ಥಾನಂ ಪಾವನಾನಾಂ ಚ ಪಾವನಂ ॥೧॥

ಪರಾಶರಸ್ತಪಸ್ತೇಪೇ ಧ್ಯಾಯನ್ದೇವಂ ಮಹೇಶ್ವರಂ ।
ದೇವೈಶ್ಚೈವ ತಪಸ್ತಪ್ತಂ ಕುಬೇರೇಣ ಶಿವಸ್ಥಲೇ ॥೨॥

ಶಮೀವನೇಶಮಾರಾಧ್ಯ ಲೇಭಿರೇ ವಾಂಛಿತಂ ಫಲಂ ॥೩॥

|| ಮುನಯ ಊಚುಃ ||

ತತ್ಸ್ಥಾನವೈಭವಂ ಬ್ರೂಹಿ ಶ್ರೋತುಮಿಚ್ಛಾಮಹೇ ವಯಂ ।
ಶಮೀವನಸ್ಯ ಕ್ರೌಂಚಾರೇ ನಸ್ತತ್ರ ಪ್ರಾಪಿಕಂಫಲಂ ॥೪॥

---

## ಹದಿಮೂರನೆಯ ಅಧ್ಯಾಯ

ಈ ಜಪ್ಯೇಶಕ್ಷೇತ್ರದಿಂದ ದಕ್ಷಿಣದಿಕ್ಕಿನಲ್ಲಿ ಒಂದು ಹರಿದಾರಿ ದೂರದಲ್ಲಿ ಪರಮಪಾವನವಾದ ಶಮೀವನವೆಂಬ ಶಿವಸ್ಥಾನವು ಕಾವೇರೀನದಿಯ ದಡದಲ್ಲಿರುವುದು. ಹಿಂದೆ ಇದೇ ಶಿವಸ್ಥಾನದಲ್ಲಿ ಪರಾಶರಮಹರ್ಷಿಯು ಮಹೇಶ್ವರನನ್ನು ಧ್ಯಾನಮಾಡುತ್ತಾ ತಪಸ್ಸುಮಾಡಿದನು. ಹಾಗೆಯೇ ದೇವತೆಗಳೂ ಮತ್ತು ಕುಬೇರನೂ ಸಹ ಇಲ್ಲಿ ತಪಸ್ಸುಮಾಡಿ ಶಮೀವನೇಶ್ವರನನ್ನು ಪೂಜೆಮಾಡಿ ಇಷ್ಟವಾದ ಫಲಗಳನ್ನು ಪಡೆದರು ಎಂದು ಸ್ಕಂದಸ್ವಾಮಿಯು ಹೇಳಲು ಆಗ ಮುನಿಗಳು, ||೧-೨-೩||

ಎಲೈ ಕ್ರೌಂಚಾಸುರಸೂದನನಾದ ಕುಮಾರನೇ, ಆ ಶಮೀವನಸ್ಥಾನದ

॥ ಶ್ರೀ ತಾರಕಾರಿರುವಾಚ ॥

ಶೃಣುಧ್ವಂ ಸ್ಥಾನಮಹಿಮಾಂ ಮತ್ತೋ ಮುನಿಗಣಾ ಗಣಾಃ ।
ದೈತ್ಯೈಃ ಪರಾಜಿತಾ ದೇವಾಃ ಲೋಕೇ ದುರ್ಭಿಕ್ಷಪೀಡಿತಾಃ ॥೫॥

ಶಮೀವನಂ ಸಮಾಸಾದ್ಯ ಮುನಯಸ್ತಪಸಃ ಸುರಾಃ ।
ಪ್ರಸಾದಯತಿ ದೇವೇಶಂ ಶ್ರೀಶಮೀವನನಾಯಕಂ ॥೬॥

ದೇವಸ್ಯ ನೈಋತೇರ್ಭಾಗೇ ಕೃತ್ವಾ ಪುಷ್ಕರಿಣೀಂ ತದಾ ।
ಅವಶಿಷ್ಟಾಂ ಸುಧಾಂ ಪೀತಾಂ ಸ್ಥಾಪ್ಯ ತಸ್ಯಾ ಭಯಾರ್ದಿತಾಃ ॥೭॥

ಪೂಜಯಂತೋ ನಮಂತಸ್ತೇ ಸ್ತುವಂತೋ ದೇವಮೀಶ್ವರಂ ।
ಭಸ್ಮರುದ್ರಾಕ್ಷಸಂಪನ್ನಾ ರುದ್ರಪಂಚಾಕ್ಷರಾದರಾಃ ॥೮॥

---

ಮಹಿಮೆಯನ್ನೂ, ಆ ಕ್ಷೇತ್ರದಲ್ಲಿ ಸೇವೆಮಾಡುವುದರಿಂದ ನಮಗುಂಟಾಗುವ ಫಲವನ್ನೂ ದಯವಿಟ್ಟು ಹೇಳು, ಕೇಳಲು ಕುತೂಹಲವುಳ್ಳವರಾಗಿರುವೆವು ಎಂದು ಮುನಿಗಳು ಸ್ಕಂದದೇವನನ್ನು ಪ್ರಾರ್ಥಿಸಿದರು. ಅವರ ಕೋರಿಕೆಯಂತೆ ಸ್ಕಂದ ನಿಂತೆಂದನು. ||೪||

ಓ ಮುನಿಗಳೇ, ಮತ್ತು ಗಣಶ್ರೇಷ್ಠರೇ, ಈ ಶಮೀಸ್ಥಾನಮಹಿಮೆಯನ್ನು ನನ್ನಿಂದ ಕೇಳಿರಿ. ಹಿಂದೆ ರಾಕ್ಷಸರಿಂದ ಪರಾಜಯ ಹೊಂದಿದ ದೇವತೆಗಳು ದುರ್ಭಿಕ್ಷದಿಂದ ಪೀಡಿತರಾಗಿ ಎಲ್ಲೂ ನೆಲೆಯಿಲ್ಲದೆ, ಈ ಶಮೀವನವನ್ನು ಸೇರಿ, ಮುನಿಗಳೊಡನೆ ಇಲ್ಲಿ ತಪಸ್ಸುಮಾಡುತ್ತಾ, ದೇವತೋತ್ತಮನಾದ ಶ್ರೀಶಮೀವನಾಧಿಪತಿಯನ್ನು ಸಂತೋಷಪಡಿಸಲು ಪ್ರಯತ್ನಮಾಡಿದರು. ||೫-೬||

ಮಹಾದೇವನಿರುವ ಸ್ಥಳಕ್ಕೆ ನೈಋತ್ಯಭಾಗದಲ್ಲಿ ಒಂದು ಕೊಳವನ್ನು ಮಾಡಿಕೊಂಡು ಅಲ್ಲಿ ತಾವು ಪಾನಮಾಡಿ ಉಳಿದಿರುವ ಅಮೃತವನ್ನು ಆ ಕೊಳದಲ್ಲಿ ಸ್ಥಾಪಿಸಿ, ಅದಕ್ಕೇನಾದರೂ ಭಯವುಂಟಾಗುವುದೋ ಎಂಬ ಭಯದಿಂದ ನೊಂದುಕೊಳ್ಳುತ್ತಾ, ಭಸ್ಮರುದ್ರಾಕ್ಷಾದಿಗಳಿಂದ ಅಲಂಕರಿಸಿಕೊಂಡು ದೇವನಾದ ಈಶ್ವರನನ್ನು ಪೂಜೆ ನಮಸ್ಕಾರ ಮತ್ತು ಸ್ತೋತ್ರಗಳಿಂದ ಸಂತೋಷಪಡಿಸುತ್ತಾ ರುದ್ರಮಂತ್ರ ಮತ್ತು ಶಿವಪಂಚಾಕ್ಷರಗಳ ಜಪದಲ್ಲಿ ನಿರತರಾಗಿ ಕಾಲಕಳೆಯುತ್ತಿದ್ದರು. ||೭-೮||

॥ ದೇವಾ ಊಚುಃ ॥

ಶಂಭೋ ಶಶಾಂಕಧವಲಾಮಲ ದಿವ್ಯದೇಹ
ಕಾಮಾಂಗನಾಶನವಿಭೋ ಪರಿಪಾಲಯಾಸ್ಮಾನ್ ।
ದೈತ್ಯಾರ್ದಿತಾಸ್ತವ ವನೇ ಶರಣಂ ಪ್ರಪನ್ನಾ
ನಧ್ಯಾಧುನಾವ ದಯಯಾ ಮುನಿಭಿಃ ಸುರೇಂದ್ರಾನ್ ॥೯॥

ಇತ್ಥಂ ಸ್ತುವಂತೋ ದೇವಾಸ್ತೇ ಮುನಯೋ ದೈತ್ಯಪೀಡಿತಾಃ ।
ಏತಸ್ಮಿನ್ನಂತರೇ ತತ್ರ ಬಲಿಪುತ್ರೋ ಮಹಾಸುರಃ ॥೧೦॥

ತಂಜೋ ನಾಮ್ನಾಭ್ಯಗಾದ್ಧರ್ತುಂ ತ್ರಿಂಶದಕ್ಷೋಹಿಣೀಯುತಃ ।
ಬಾಣಬಾಣಾಸನಧರೈಃ ಕೂಟಮುದ್ಗರಪಾಣಿಭಿಃ ॥೧೧॥

ರಥೈರಶ್ವೈಶ್ಚ ಮತ್ತೇಭೈರ್ವಾದಯಂಸ್ತೋಽಥ ದುಂದುಭೀಃ ।
ಸುರೇಭ್ಯಶ್ಚಾಪಹರ್ತುಂ ತಾಂ ಸುಧಾಂ ಪೀತ್ವಾವಶೇಷಿತಾಂ ॥೧೨॥

---

ಚಂದ್ರನಂತೆ ಶುಭ್ರವಾದ ದಿವ್ಯಶರೀರವುಳ್ಳವನೂ, ಮನ್ಮಥನ ಶರೀರವನ್ನು ಸುಟ್ಟು ಭಸ್ಮಮಾಡಿದವನೂ, ಸರ್ವಸಮರ್ಥನೂ ಆದ ಶಂಭುವೇ! ನಮ್ಮನ್ನು ಕಾಪಾಡು. ದೇವದೇವಾ! ರಾಕ್ಷಸರಿಂದ ಪೀಡಿಸಲ್ಪಟ್ಟು ಈ ವನಕ್ಕೆ ಬಂದು ಮುನಿಗಳೊಡನೆ ನಿನ್ನನ್ನೇ ಮರೆಹೊಕ್ಕಿರುವ ಈ ದೇವತೋತ್ತಮರನ್ನೆಲ್ಲಾ ನೀನು ಕಾಪಾಡು ಸ್ವಾಮಿ, ಎಂದು ದೇವತೆಗಳು ಶಮೀವನೇಶ್ವರನನ್ನು ಸ್ತೋತ್ರಮಾಡಿದರು. ॥೯॥

ಹೀಗೆ ದೈತ್ಯರಿಂದ ಪೀಡಿತರಾದ ಆ ದೇವತೆಗಳೂ ಮತ್ತು ಮುನಿಗಳೂ ಸಹ ಶಮೀವನೇಶ್ವರನನ್ನು ಹೀಗೆ ಸ್ತೋತ್ರಮಾಡುತ್ತಿರಲು, ಇದೇ ಸಂದರ್ಭದಲ್ಲಿಯೇ ಬಲಿಯ ಮಗನೂ ತಂಜನೆಂಬ ಹೆಸರಿನಿಂದ ಪ್ರಖ್ಯಾತನಾದವನೂ ಆದ ಒಬ್ಬ ದೊಡ್ಡ ರಾಕ್ಷಸನು ಮೂವತ್ತು ಅಕ್ಷೋಹಿಣೀ ಸೈನ್ಯಗಳೊಡನೆ ಅಲ್ಲಿಗೆ ಬಂದನು. ಆವನ ಸೈನಿಕರು ಬಿಲ್ಲುಬಾಣಗಳನ್ನೂ, ಕೂಟ, ಮುದ್ಗರ ಮೊದಲಾದ ಆಯುಧಗಳನ್ನೂ ಕೈಯಲ್ಲಿ ಹಿಡಿದು ಬರುತ್ತಿದ್ದರು. ಉತ್ತಮವಾದ ರಥ, ಕುದುರೆ, ಮದಿಸಿದ ಆನೆ ಮುಂತಾದ ಸೈನ್ಯಸಾಧನಗಳೊಡನೆ ದುಂದುಭಿಯನ್ನು ಬಾರಿಸುತ್ತಾ, ದೇವತೆಗಳು ಪಾನಮಾಡಿ ಉಳಿದಿರುವ ಅಮೃತವನ್ನು ಅವರಿಂದ ಕಿತ್ತುಕೊಳ್ಳುವುದಕ್ಕೋಸ್ಕರ ಅಲ್ಲಿಗೆ ಬಂದನು. ॥೧೦-೧೧-೧೨॥

ವಿಲಂಘ್ಯ ಸುಬಹೂನ್ದೇಶಾನಪಶ್ಯನ್ಮುನಿಭಿಃ ಸುರಾನ್ ।
ತಾನ್ಹನ್ತುರ್ಮುದ್ಯತಸ್ತಂಜೋ ಹೀನವೀರ್ಯಾನ್ಸುರಾನ್ಮುನೀನ್॥೧೩॥

ಶಮೀವನೇಶಂ ಶರಣಂ ಪ್ರಪನ್ನಾನಸುರೈರ್ವೃತಃ ।
ಬಭಂಜ ಪರಿತೋ ವೃಕ್ಷಾನ್ಸರಾಂಸ್ಯತ್ರ ವಿನಾಶಯತ್ ॥೧೪॥

ತಂಜಾಸುರಭಯತ್ರಸ್ತಾಶ್ಚುಕ್ರುಶುರ್ಮುನಯಃ ಸುರಾಃ ॥೧೫॥

॥ ದೇವಾ ಊಚುಃ ॥

ಹೇ ಶಂಭೋ ಭಗವನ್ಪುರಾಂಧಕೌ ಪುರಂ ಹತ್ವಾತ್ವರಕ್ಷಃ ಸುರಾ
ನ್ತಾದೃಗ್ದೈತ್ಯಹರಂ ಸ್ವಚಕ್ರಕಮುದಾ ಸಂರಕ್ಷಿತುಂ ವಿಷ್ಣವೇ ।
ಅದ್ಯಾಸ್ಮಾನ್ಹರ ತಂಜಕಾಸುರಭಯುಗ್ರಸ್ತಾನಥಾಸ್ಮಾನ್ಮುನೀನ್
ಪಾಹೀಶಾನ ದಯಾನಿಧಾನ ಹರ ತಂ ವಹ್ನೀಕ್ಷಣಾನಂಗವತ್ ॥೧೬॥

---

ಈ ತಂಜಾಸುರನು ಅನೇಕ ದೇಶಗಳನ್ನು ದಾಟಿಕೊಂಡು ಎಲ್ಲಿಯೂ ಕಾಣದೇ ಕೊನೆಗೆ ಈ ಶಮೀವನದಲ್ಲಿ ಮುನಿಗಳೊಡನಿದ್ದುದನ್ನು ನೋಡಿ ಬಲಗುಂದಿದ ದೇವತೆಗಳನ್ನೂ ಮತ್ತು ಮುನಿಗಳನ್ನೂ ಕೊಲ್ಲಲುದ್ಯುಕ್ತನಾದನು. ಶಮೀವನೇಶ್ವರನಿಗೆ ಮರೆಹೊಕ್ಕಿರುವ ಈ ದೇವತೆಗಳನ್ನು ಧ್ವಂಸಮಾಡುವುದಕ್ಕೆ ಮೊದಲು ಈ ತಂಜಾಸುರನು ತನ್ನ ಪರಿವಾರದೊಡನೆ ಸುತ್ತಲೂ ಇದ್ದ ಮರಗಿಡಗಳನ್ನೂ ಸರೋವರಗಳನ್ನೂ ನಾಶಮಾಡಿದನು. ಆಗ ಈ ತಂಜಾಸುರನ ಭಯದಿಂದ ಹೆದರಿಕೊಂಡ ಮುನಿಗಳೂ ಮತ್ತು ದೇವತೆಗಳೂ ಸಹ ಗಟ್ಟಿಯಾಗಿ ಕೂಗಿಕೊಂಡರು. ॥೧೩-೧೪-೧೫॥

ಎಲೈ ಭಗವಂತನಾದ ಶಂಭುವೇ, ತ್ರಿಪುರಾಸುರ ಮತ್ತು ಅಂಧಕಾಸುರರನ್ನು ನಾಶಮಾಡಿದ ಸ್ವಾಮಿಯೇ, ದೇವತೆಗಳನ್ನು ಪೀಡಿಸುತ್ತಿದ್ದ ರಾಕ್ಷಸರನ್ನು ಸಂಹಾರ ಮಾಡುವುದಕ್ಕಾಗಿ ವಿಷ್ಣುವಿಗೆ ಪ್ರೀತಿಯಿಂದ ಸುದರ್ಶನಚಕ್ರವನ್ನಿತ್ತವನೇ, ಈಗ ಈ ತಂಜಕಾಸುರನ ಭಯಕ್ಕೊಳಗಾಗಿರುವ ನಮ್ಮನ್ನೂ ಮತ್ತು ಮುನಿಗಳನ್ನೂ ಕಾಪಾಡು. ಅಗ್ನಿನೇತ್ರನಾದ ಎಲೈ ಹರನೇ, ದಯಾಮಯನಾದ ನೀನು ಮನ್ಮಥನಂತೆ ಈ ತಂಜಕಾಸುರನನ್ನು ಭಸ್ಮಮಾಡು, ಎಂದು ದೇವತೆಗಳೂ ಮತ್ತು ಮುನಿಗಳೂ ಸಹ ಶಮೀವನೇಶ್ವರನನ್ನು ಬಹುವಾಗಿ ಸ್ತೋತ್ರಮಾಡಿದರು. ॥೧೬॥

ಇತ್ಥಂ ದೇವೈಸ್ಸ್ತುತೋ ದೇವಃ ಪಾರ್ಶ್ವಸ್ಥಾಂ ಪ್ರಾಹ ಚಾಂಬಿಕಾಂ ॥೧೭॥

॥ ಈಶ್ವರ ಉವಾಚ ॥

ಜಹಿ ತಂ ಸ ಬಲಂ ದೇವಿ ತಂಜಂ ಹಂತುಂ ಧೃತಾಯುಧಾ ।
ಸ್ವಾಂಶಾಚ್ಛಕ್ತಿಂ ವಿನಿರ್ಮಾಯ ಧೃತಶೂಲಾಸಿಪಾಣಯಃ ॥೧೮॥

ನಡಿಕಾಂ ಕೋಡಿಕಾಂ ಕಾಲೀಂ ರೇಣುಕಾಂ ಭಂಡಿಕಾಂ ಶಿವಾಂ ।
ದುರ್ಗಾಂ ಮಾರೀಂ ಚ ಪರಿತಃ ಸ್ಥಾಪಯಾಮಾಸ ತತ್ರ ವೈ ॥೧೯॥

ಸಸ್ಮಾರ ಸ್ವಾಂಶಜಂ ವಿಷ್ಣುಂ ಸೋಽಪ್ಯಗಾತ್ತತ್ರ ಸಂಸ್ಮೃತಃ ।
ನತ್ವಾ ದೇವೀಂ ಮಹೇಶಾನಂ ಕಿಂಕರಃ ಕಿಂಕರೋಮ್ಯಹಂ ॥೨೦॥

ಬ್ರುವಂತಮೇವಂ ತಂ ವಿಷ್ಣುಂ ದೈತ್ಯಾನ್ಜಹಿ ಸುರಾನ್ನ ಚ ।
ಶಮೀವನೇಶೋ ತಂಜಾಖ್ಯಮಿತ್ಥಂ ದೇವ್ಯಾ ಯಯೌ ರಣಂ ॥೨೧॥

---

ಹೀಗೆ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟ ಆ ಮಹಾದೇವನು ತನ್ನ ಪಕ್ಕದಲ್ಲಿರುವ ಅಂಬಿಕೆಯನ್ನು ಕುರಿತು, ಇಂತೆಂದನು. ॥೧೭॥

ದೇವಿ, ಬಲಿಷ್ಠನಾದ ಆ ತಂಜಾಸುರನನ್ನು ಕೊಲ್ಲಲು ಆಯುಧಪಾಣಿಯಾಗಿ ಸಿದ್ಧಳಾಗೆಂದು ತನ್ನ ಅಂಶದಿಂದ ಶಕ್ತಿಯೊಂದನ್ನು ಸೃಷ್ಟಿಮಾಡಿದನು. ಅವರೆಲ್ಲರೂ ತ್ರಿಶೂಲ, ಕತ್ತಿಗಳನ್ನು ಕೈಯಲ್ಲಿ ಹಿಡಿದು ಸಿದ್ಧರಾದರು. ನಡಿಕಾ, ಕೋಡಿಕಾ, ಕಾಲೀ ರೇಣುಕಾ, ಭಂಡಿಕಾ, ಶಿವಾ, ದುರ್ಗಾ, ಮಾರೀ ಎಂಬ ಎಂಟು ಶಕ್ತಿದೇವತೆಗಳನ್ನು ಅಲ್ಲಿ ಸ್ಥಾಪನೆಮಾಡಿಸಿದನು. ॥೧೮-೧೯॥

ಮತ್ತು ತನ್ನ ಅಂಶದಿಂದ ಹುಟ್ಟಿದ ವಿಷ್ಣುವನ್ನು ಸ್ಮರಣೆಮಾಡಿದನು. ವಿಷ್ಣುವು ಕೂಡಲೇ ಬಂದು, ಆ ಮಹೇಶ್ವರಿಗೂ ಮತ್ತು ಮಹೇಶ್ವರನಿಗೂ ನಮಸ್ಕರಿಸಿ ದಾಸನಾದ ನನ್ನಿಂದೇನಾಗಬೇಕೆಂದು ಬೇಡುತ್ತಿರಲು, ಆಗ ಶಮೀವನೇಶ್ವರನು ಈರೀತಿ ಹೇಳುತ್ತಿರುವ ವಿಷ್ಣುವಿಗೆ ದೈತ್ಯರನ್ನು ಮಾತ್ರ ಸಂಹರಿಸುವವನಾಗು ; ದೇವತೆಗಳನ್ನು ಸಂಹರಿಸಬೇಡವೆಂದು ಹೇಳಲು, ಆದರಂತೆಯೇ ಅವನು ದೇವೀಶಕ್ತಿಯೊಡನೆ ತಂಜಾಸುರನಮೇಲೆ ಯುದ್ಧಕ್ಕೆ ಹೋದನು. ॥೨೦-೨೧॥

ದೇವೀ ಸ್ವಸಿಂಹಮಾರುಹ್ಯ ಧೃತಶೂಲವರಾಯುಧಾ ।
ಸಾಟ್ಟಹಾಸಂ ವಿಮುಂಚಂತೀ ಕಿರಂತೀಷುಗಣಾನ್ತದಾ ॥೨೨॥

ಶಕ್ತಿಭಿಃ ಪರಿತೋಽಷ್ಟಾಭಿರ್ಧೃತಶೂಲಾಸಿಪಾಣಿಭಿಃ ।
ತಂಜಾಸುರಮಥಾಭ್ಯಾಗಾದ್ವಿಷ್ಣುನಾ ವಿಬುಧೈಃ ಸಹ ॥೨೩॥

ಶಿವಾಲಯೇ ವಿಲೀನಾಸ್ತೇ ಶಾಂತಿಂ ಜೇಪುರ್ಮಹರ್ಷಯಃ ।
ಶಮೀವನೇಶಂ ವಿಜಯಂ ಪ್ರಾರ್ಥಯಂತೋಽಂಬಿಕಾಂ ಪ್ರತಿ ॥೨೪॥

॥ ಮುನಯ ಊಚುಃ ॥

ಕ್ಷಯದ್ವೀರೋ ದೇವಃ ಸಕಲದಿವಿಷನ್ಮೌಲಿಮುಕುಟೇ
ಕುಟೀರಂ ಪಾದಾಬ್ಜಂ ಭವದಭಯಪಾದಂ ಕಲಯತಾಂ ।
ಮಹಾದೇವೋ ಧನ್ಯಸ್ತ್ವಮಸಿ ವಿಬುಧಾನಾಂ ವಿಜಯತಃ
ಶಮೀಮೂಲೇ ಶೂಲೈರ್ಜಹಿ ಹಿ ಭಗನೇತ್ರಾಂತಕ ಹರ ॥೨೫॥

---

ದೇವಿಯು ತನ್ನ ವಾಹನವಾದ ಸಿಂಹವನ್ನೇರಿ ಉತ್ತಮವಾದ ಶೂಲಾಯುಧವನ್ನು ಕೈಯಲ್ಲಿ ಹಿಡಿದು ಅಟ್ಟಹಾಸದೊಡನೆ ಶತ್ರುಗಳ ಮೇಲೆ ಬಾಣರಾಶಿಯನ್ನು ಸುರಿಸುತ್ತಾ, ತ್ರಿಶೂಲ, ಕತ್ತಿ ಮುಂತಾದ ಆಯುಧವನ್ನು ಧರಿಸಿರುವ ಎಂಟು ಮಂದಿ ಶಕ್ತಿದೇವತೆಗಳಿಂದ ಸುತ್ತುವರಿಯಲ್ಪಟ್ಟು, ವಿಷ್ಣು ಮತ್ತು ಇತರ ದೇವತೆಗಳೊಡನೆ ತಂಜಾಸುರನಮೇಲೆ ಯುದ್ಧಮಾಡಲು ಅವನಿದ್ದಬಳಿಗೈದಿದಳು. ॥೨೨ ೨೩॥

ಆಗ ಆ ಮುನಿಗಳೆಲ್ಲರೂ ಶಿವದೇವಾಲಯದಲ್ಲಿ ಅಡಗಿಕೊಂಡು, ಜಗದಂಬಿಕೆಗೆ ತಂಜಾಸುರನಮೇಲಿನ ಯುದ್ಧದಲ್ಲಿ ವಿಜಯವಾಗಲೆಂದು ಶಾಂತಿಯನ್ನು ಕೋರುತ್ತಾ ಶಮೀವನೇಶ್ವರನನ್ನು ಹೀಗೆ ಪ್ರಾರ್ಥಿಸಿದರು. ॥೨೪॥

ವೀರರನ್ನೆಲ್ಲಾ ದರ್ಪಹೊಂದಿದಾಗ ನಾಶಮಾಡುವ ದೇವನೇ! ಸಕಲ ದೇವತೆಗಳೂ ಭಕ್ತಿಯಿಂದ, ನಿನ್ನ ಪಾದಕ್ಕೆ ಕಿರೀಟಗಳನ್ನು ಧರಿಸಿ ನಮಸ್ಕರಿಸುತ್ತಿರುವರು. ನಿನ್ನ ಪಾದವೇ ನಮಗೆ ಅಭಯವನ್ನುಂಟುಮಾಡುವುದೆಂದು ನಂಬಿ ಭಜಿಸುತ್ತಿರುವರು. ಮಹಾದೇವನೆನಿಸಿದ ನೀನೇ ಇತರ ಎಲ್ಲಾ ದೇವತೆಗಳಿಗಿಂತಲೂ ಧನ್ಯನೆನಿಸಿರುವೆ. ಅಗ್ನಿನೇತ್ರನೂ, ಯಮನನ್ನು ನಿಗ್ರಹಿಸಿದವನೂ ಆದ ದೇವನೇ! ಈ ಶಮೀವನದ ಬುಡದಲ್ಲಿಯೇ ನಿನ್ನ ತ್ರಿಶೂಲಾಯುಧದಿಂದ ಆ ತಂಜಾಸುರನನ್ನು ಕೊಂದು ದೇವತೆಗಳಿಗೆ ವಿಜಯವನ್ನುಂಟುಮಾಡು. ॥೨೫॥

ಇತ್ಥಂ ಮುಹರ್ಷಿಸ್ತವ ತೋಷಿತೋ ಹರೋ
ಜಯಂ ದದೌ ಶ್ರೀವಿಜಯೇಶ್ವರಾಂಬಿಕಾಂ ।
ವಿಷ್ಣುಂ ಸುರಾಂಸ್ತಂಜವಧೇ ನಿಯುಕ್ತಾ
ನಥಾವಿಶತ್ಕ್ರೋಧಪರೋ ಭವೋಗ್ರಃ ॥೨೬॥

ದೇವೀತ್ರಿಶೂಲವರಶಕ್ತಿಸಹಸ್ರಶಸ್ತ್ರ
ಕೃತ್ತಾಃಪ್ರಕಾಂಡ ಇವ ಛಿನ್ನಕರಾಃ ಸಮಸ್ತಾಃ ।
ದೈತ್ಯಾ ನಿಪೇತುರವನೌ ವರಶೂಲಬಾಣ
ಪ್ರಾಸಾಸಿವಿಷ್ಣುಕರಚಕ್ರನಿಕೃತ್ತಗಾತ್ರಾಃ ॥೨೭॥

ತಾಃ ಶಕ್ತಯೋಽಷ್ಟಾಸು ದಿಶಾಸು ಸಂಸ್ಥಿತಾ
ನಾನಾಯುಧಾಯುಧಕರಾ ದಿತಿಜಾನ್ನಿಜಘ್ನುಃ ।
ತಂಜಾಸುರೋಽಪಿ ಹತಶೇಷಬಲೇನ ವಿಷ್ಣುಂ
ಸುರಾನಶೇಷಾನ್ದವವತ್ಪ್ರದಾಹಯತ್ ॥೨೮॥

---

ಈ ರೀತಿಯಾದ ಮುಹರ್ಷಿಗಳ ಸ್ತೋತ್ರದಿಂದ ಸಂತುಷ್ಟನಾದ ಪರಮೇಶ್ವರನು ವಿಜಯೇಶ್ವರನೆಂಬ ಸಂಜ್ಞೆಯಿಂದ ತಂಜಾಸುರನೊಡನೆ ಯುದ್ಧದಲ್ಲಿ ನಿರತರಾಗಿದ್ದ, ಅಂಬಿಕಾ, ವಿಷ್ಣು, ಮತ್ತು ಇತರ ದೇವತೆಗಳೊಡನೆ ಕೋಪಾವೇಶದಿಂದ ಪ್ರವೇಶಿಸಿದನು. ॥೨೬॥

ದೇವಿಯು ತನ್ನ ಕೈಯಲ್ಲಿ ಹಿಡಿದಿರುವ ಉತ್ತಮವಾದ ತ್ರಿಶೂಲದಿಂದ, ಮತ್ತು ಇತರ ಶಕ್ತಿದೇವತೆಗಳು ಹಿಡಿದಿರುವ ಕತ್ತಿಗಳಿಂದ, ಸಮಸ್ತ ರಾಕ್ಷಸರ ಕೈಗಳೂ, ಗೆಡ್ಡೆಗಳಂತೆ ಬಾಳೆಯ ದಿಂಡುಗಳಂತೆ ಕತ್ತರಿಸಿ ತುಂಡಾದವು. ಆಗ ರಾಕ್ಷಸರು ಉತ್ತಮವಾದ ಶೂಲ, ಬಾಣ, ಪ್ರಾಸ ಮತ್ತು ಕತ್ತಿಗಳಿಂದಲೂ, ವಿಷ್ಣುವಿನ ಚಕ್ರಾಯುಧದಿಂದಲೂ ಕತ್ತರಿಸಲ್ಪಟ್ಟ ಶರೀರವುಳ್ಳವರಾಗಿ ನೆಲದಮೇಲೆ ಬಿದ್ದರು. ॥೨೭॥

ಆ ಎಂಟು ಶಕ್ತಿದೇವತೆಗಳೂ ಎಂಟುದಿಕ್ಕುಗಳಲ್ಲಿ ನಿಂತುಕೊಂಡು ನಾನಾ ವಿಧವಾದ ಆಯುಧಪಾಣಿಗಳಾಗಿ ದೈತ್ಯರನ್ನು ಸಂಹಾರಮಾಡಿದವು. ಹೀಗೆ ತನ್ನ ಸೈನ್ಯವು ಬಹಳಮಟ್ಟಿಗೆ ನಾಶವಾದುದನ್ನು ಕಂಡು ಆ ತಂಜಾಸುರನು ತುಂಬಾ ಆವೇಶದಿಂದ ಕಳಿದುಳಿದ ತನ್ನ ಬಲದೊಡನೆ ವಿಷ್ಣುವನ್ನೂ ಇತರ ದೇವತೆಗಳನ್ನೂ ಸುಡುವಂತೆ ಬಾಣಪ್ರಯೋಗ ಮಾಡಿದನು. ॥೨೮॥

ಸುರದ್ರುಮಾಂಸ್ತಾನಸುರೋ ರಣಾವನೌ
ಸ ನೀಲಮೇಘಾಕೃತಿರಾಬಭೌ ಹರಿಃ ।
ವವರ್ಷ ಬಾಣೈರಸುರೇರಿತಂ ವನಂ
ಸ ಶಾಮಯದ್ವರ್ಷಪರೋ ಯಥಾಂಬುದಃ ॥೨೯॥

ಗಜಾಕೃತಿಃ ಸೋಽಸ್ಯಭವನ್ಮಹಾಸುರ
ಸ್ತಂಜಾಸುರಾಖ್ಯಂ ಹರರೂಪಧೃಗ್ಧರಿಃ ।
ನಖೈರ್ದದಾರಾಶು ಮಹೇಭಕುಂಭಯೋ
ಸ್ತದ್ಭಕ್ತಗಾತ್ರಃ ಕರಜೈಸ್ತದಾ ಬಭೌ ॥೩೦॥

ದೇವಾಸ್ತದಾಜೌ ದಿತಿಜಾನ್ಪ್ರಹರ್ಷಿತಾಃ
ಶಕ್ತೀಭಿರಾಪೂರಿತಬಾಣಶಕ್ತಯಃ ।
ನಿಜಘ್ನುರನ್ಯೋನ್ಯಗದಾಸಿಪಾತನೈ
ರ್ದೇವಾಶ್ಚ ದೈತ್ಯಾಶ್ಚ ತಥಾಷ್ಟಶಕ್ತಯಃ ॥೩೧॥

---

ಹೀಗೆ ಆ ರಾಕ್ಷಸರಿಂದ ಬೆಂಕಿಹೊತ್ತಿಸಲ್ಪಟ್ಟ ಆ ಶಮೀವನವು ಬೆಂಕಿಯಿಂದಾವರಿಸಿ ಸರ್ವತ್ರ ವ್ಯಾಪಿಸುತ್ತಿರಲು, ನೀಲಮೇಘದಂತೆ ಆಕಾರವುಳ್ಳ ವಿಷ್ಣುವು ಆ ವನದ ಮೇಲೆ ವಾರುಣಾಸ್ತ್ರವನ್ನು ಪ್ರಯೋಗಿಸಲು, ಆ ಘೋರವಾದ ಬೆಂಕಿಯನ್ನು ಮಳೆಗರೆಯುವ ಮೇಘದಂತೆ ಅದು ಶಮನಮಾಡಿಬಿಟ್ಟಿತು. ॥೨೯॥

ಅನಂತರ ಆ ತಂಜಾಸುರನು ಆನೆಯರೂಪವನ್ನು ಧರಿಸಿ, ವಿಷ್ಣುವಿನ ಮೇಲೆ ಬೀಳಲು, ವಿಷ್ಣುವು ಸಿಂಹದ ರೂಪವನ್ನು ಪಡೆದು, ಅವನ ಕುಂಭಸ್ಥಳವನ್ನು ಉಗುರಿನಿಂದ ಘಾಯಮಾಡಿದನು. ಆ ವಿಷ್ಣುವು ಮಾಡಿದ ಉಗುರುಗಳ ಘಾಯದಿಂದ ತಂಜಾಸುರನ ದೇಹವು ಪ್ರಕಾಶಿಸುತ್ತಿದ್ದಿತು. ॥೩೦॥

ಹೀಗೆ ವಿಷ್ಣುವಿನಿಂದ ಪರಿಭೂತನಾದ ತಂಜಾಸುರನನ್ನು ನೋಡಿ ದೇವತೆಗಳು ಸಂತೋಷದಿಂದ ತಮ್ಮ ತಮ್ಮ ಶಕ್ತ್ಯಾಯುಧ, ಬಾಣ ಮುಂತಾದ ಆಯುಧಗಳನ್ನು ಹಿಡಿದು, ಅನ್ಯೋನ್ಯವಾಗಿ, ಗದಾ, ಕತ್ತಿ ಮುಂತಾದವುಗಳಿಂದಲೂ ಸಹ ದೈತ್ಯರೊಡನೆ ಯುದ್ಧಮಾಡಿದರು. ಎಂಟುಮಂದಿ ಶಕ್ತಿದೇವತೆಗಳೂ ಸಹ ತಮ್ಮ ತಮ್ಮ ಆಯುಧಗಳಿಂದ ರಾಕ್ಷಸರನ್ನು ಸಂಹಾರಮಾಡಿದರು. ॥೩೧॥

ತ್ರಿಶೂಲಪಾತೇನ ತದಾಂಬಿಕಾವಧೀ
ದ್ಯಮುಷ್ಯ ಧಾಮ ಪ್ರತಿಪೇದಿರೇಽಸುರಾಃ ।
ರಕ್ತಾಪಗಾಃ ಸುಸ್ರುವುರಸ್ತ್ರಜನ್ಯೈಃ
ಪರ್ಜನ್ಯನಾದಪ್ರತಿಮೈಸ್ತಥಾಸ್ತ್ರೈಃ ॥೩೨॥

ಮಸ್ತಿಷ್ಕಫೇನಾಸ್ತೃತಖೇಟಕಚ್ಛಪಾ
ಮಾಂಸೌಘಪಂಕಾದ್ವಿರದೋರುದ್ವೀಪಾಃ ।
ತತ್ರಾಸುರೋಽಮಾತ್ಯವರೋ ಮುಮುಜ್ಜ
ತತ್ಪುಷ್ಕರಿಣ್ಯಾ ನಿಹತಂ ತದಾ ಮೃತೌ ॥೩೩॥

ಪ್ರಗೃಹ್ಯ ಯಾವದ್ದಿತಿಜಾಂಶ್ಚ ಜೀವಯ
ನ್ನನ್ಯಾಯ ಯಾತೋ ದಿಶಿ ದಕ್ಷಿಣಸ್ಯಾಂ ।
ತಂ ಚಾನ್ವಧಾವದುರುಭಾವನೀಲೋ
ಮೃತ್ಸ್ನಾಭಿವರ್ಷಣಭಯಾಂಚಿತವಾಕ್ಯಜಾಲೈಃ ॥೩೪॥

---

ಆಗ ಜಗದಂಬಿಕೆಯಾದರೋ ತ್ರಿಶೂಲಾಯುಧದ ಏಟುಗಳಿಂದ ರಾಕ್ಷಸರುಗಳನ್ನೆಲ್ಲಾ ಕೊಂದಳು. ದೈತ್ಯರೆಲ್ಲರೂ ಹೀಗೆ ಮೃತರಾಗಿ ಯಮನಪಟ್ಟಣವನ್ನೈದಿದರು. ಪರಸ್ಪರ ಶಸ್ತ್ರಾಸ್ತ್ರಗಳ ಹೊಡೆತದಿಂದಲೂ, ಮೇಘಗಳ ಗರ್ಜನೆಯನ್ನು ಅನುಕರಿಸುವಂತಿರುವ ಕತ್ತಿಗಳ ಏಟುಗಳಿಂದಲೂ, ರಕ್ತದ ನದಿಗಳೇ ಹರಿಯ ತೊಡಗಿದವು. ॥೩೨॥

ಮೇದಸ್ಸುಗಳೆಂಬ ನೊರೆಯಿಂದಲೂ, ಎಲ್ಲೆಡೆಯಲ್ಲಿಯೂ ಚೆಲ್ಲಾಡಿರುವ ಮಾಂಸಗಳ ರಾಶಿಗಳೆಂಬ ಕೆಸರಿಸಿಂದಲೂ, ಮೂಳೆಗಳೆಂಬ ಪಕ್ಷಿ ಮತ್ತು ಆಮೆಗಳಿಂದಲೂ, ಅಲ್ಲದೆ ದೊಡ್ಡ ದೊಡ್ಡ ಆನೆಗಳೆಂಬ ದ್ವೀಪಗಳಿಂದಲೂ ಪೂರ್ಣವಾದ ಅನೇಕ ರಕ್ತನದಿಗಳು ಆ ಯುದ್ಧಭೂಮಿಯಲ್ಲಿ ತೋರುತ್ತಿದ್ದವು. ಈ ರೀತಿಯಾಗಿ ರಾಕ್ಷಸರೆಲ್ಲರೂ ಮೃತರಾಗಲು, ರಾಕ್ಷಸರ ಮಂತ್ರಿಯಾದ ಶುಕ್ರಾಚಾರ್ಯನು ದೇವತೆಗಳು ಅಮೃತವನ್ನು ಮುಚ್ಚಿಟ್ಟಿದ್ದ ಪುಷ್ಕರಗಿರಿಯಲ್ಲಿ ಹೋಗಿ ಮುಳುಗಿ, ಯುದ್ಧದಲ್ಲಿ ಮೃತರಾಗಿದ್ದ ರಾಕ್ಷಸರನ್ನೆಲ್ಲಾ ಬದುಕಿಸಬೇಕೆಂದು ಯೋಚಿಸಿದನು. ॥೩೩॥

ಅಮೃತಕಲಶವನ್ನು ಎತ್ತಿ ತಂದು ದೈತ್ಯರನ್ನು ಬದುಕಿಸಿ ಪುನಃ ಅವರಿಂದ ಯುದ್ಧಮಾಡಿಸಲು ಪ್ರಯತ್ನ ಮಾಡಬೇಕೆಂದು ಶುಕ್ರಾಚಾರ್ಯನು ದಕ್ಷಿಣಕ್ಕೆಹೋಗಲು

ಯಾವಂತಮಾಶು ಭುವಿ ಪಾತಯತಾಂ ಚ ದೈತ್ಯಃ
ಸಮಾಪತದ್ಭೂಮಿತಲೇ ನಿಮಗ್ನಃ ।
ಸಪಾಂಸುವರ್ಷೇಣ ಕರಾಗ್ರಸಂಸ್ಥಂ
ಪ್ರಾಸ್ಫೋಟಯತ್ಕಲಶಂ ಚಾಮೃತಸ್ಯ ॥೩೫॥

ತಸ್ಮಿಂಸ್ಥಲೇಽಭೂಚ್ಛಿವಲಿಂಗಮುದ್ಭುತಂ
ಸಮರ್ಚಿತಂ ದೇವಗಣೈಃ ಪ್ರಹರ್ಷಿತೈಃ ।
ಪರಾಶರೇಣಾಪಿ ತದಗ್ರತೀರ್ಥೇ
ದೇವೈಃ ಕೃತೇ ದೇವತೀರ್ಥಾಭಿಧಾನೇ ॥೩೬॥

ಚಿತ್ರಾಖ್ಯಕೇ ಸಸ್ನುರತೀವ ಹೃಷ್ಟಾಃ
ದೃಷ್ಟ್ವಾರ್ಚ್ಯ ದೇವಾಃ ತಲಗೇಶನಾಮಕಂ ।
ಪರಾಶರೋಽಸೌ ವಿಮುಮೋಚ ಪಾತಕಾ
ದ್ದಾಶಾಂಗನಾಸಂಗಮಜಾಚ್ಚ ತತ್ರ ॥೩೭॥

---

ದೇವತೆಗಳೆಲ್ಲರೂ ಅವನ ಹಿಂದೆಯೇ ಹಿಂಬಾಲಿಸಿ ಹೋಗಿ ವೇಗದಿಂದ ಅವನ ಬಳಿಗೈದು ಕಪ್ಪಾದ ಮಣ್ಣುಗಳನ್ನು ಅವನ ಮೇಲೆ ಎಸೆಯುತ್ತಾ ನಾನಾವಿಧವಾದ ಮಾತುಗಳನ್ನಾಡಿದರು. ॥೩೪॥

ರಾಕ್ಷಸಮಂತ್ರಿಯು ದೇವತೆಗಳ ಈ ಏಟನ್ನು ತಾಳಲಾರದೇ ಜಾಗ್ರತೆಯಾಗಿ ಅಮೃತಕಲಶದೊಡನೆ ಭೂಮಿಗೆ ಇಳಿದು ಬಂದನು. ಆಗ ಅವನ ಕೈಲಿದ್ದ ಅಮೃತ ಕಲಶವನ್ನು ಮರಳನ್ನೆರಚುವುದರಿಂದಲೇ ದೇವತೆಗಳು ಒಡೆದುಬಿಟ್ಟರು. ॥೩೫॥

ಆ ಅಮೃತವು ಬಿದ್ದಜಾಗದಲ್ಲಿ ಒಂದು ಶಿವಲಿಂಗವು ಉದ್ಭವಿಸಿತು. ಆ ಅದ್ಭುತವಾದ ಶಿವಲಿಂಗವನ್ನು ದೇವತೆಗಳ ಸಮೂಹವು ನೋಡಿ ಸಂತೋಷ ಹೊಂದಿ ಪೂಜಿಸಿತು. ಆ ಶಿವಲಿಂಗದ ಹತ್ತಿರವಿರುವ ತೀರ್ಥದಲ್ಲಿ ಪರಾಶರಮುನಿಯೂ ದೇವತೆಗಳೂ ಸ್ನಾನಾದಿಗಳನ್ನು ಮಾಡಿ ಅದಕ್ಕೆ ದೇವತೀರ್ಥವೆಂದು ಹೆಸರಿಟ್ಟರು. ॥೩೬॥

ಚಿತ್ರತೀರ್ಥಸಂಜ್ಞಕವಾದ ಇದೇ ತೀರ್ಥದಲ್ಲಿ ದೇವತೆಗಳು ಸ್ನಾನಮಾಡಿ, ಸಂತೋಷದಿಂದ ತಲಗೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಈ ಮಹೇಶ್ವರ ನನ್ನು ದರ್ಶನಮಾಡಿ, ಧನ್ಯರಾದರು. ಆ ಪರಾಶರಮುನಿಯೂ ಸಹ ತಾನು ಹಿಂದೆ

ದೇವ್ಯಾ ಹತಃ ಶೂಲವರೇಣ ತಂಜಃ
ಪ್ರಾಣಾತ್ಯಯೇ ಸಾಂಜಲಿರಬ್ರವೀಚ್ಛಿವಾಂ ॥೩೮॥

ಮನ್ನಾಮಕಂ ದೇಹಿ ಶಮೀವನಂ ಪುರಂ
ಭವೇನ್ಮಹಾದೇವಿ ತಥೇತಿ ಸಾಬ್ರವೀತ್ ।
ತದಾ ಪ್ರಭೃತ್ಯೇವ ಹಿ ತತ್ಪುರಂ ಬಭೌ
ತಂಜಾಪುರಾಖ್ಯಂ ಪ್ರಥಿತಂ ತು ಚೋಲೇ ॥೩೯॥

ತಥಾಷ್ಟಶಕ್ತೀರ್ನಿದಧೇಽಷ್ಟದಿಕ್ಷು
ಸಮರ್ಚಿತಾಶ್ಶೋಪಸರ್ಗಂ ನಿಹಂತ್ರ್ಯಃ ।
ಪುರಸ್ಯ ತಸ್ಯೈವ ನೃಣಾಂ ಚ ವಾಸಿನಾಂ
ಪಶೂನ್ಸುತಾನ್ತಾಃ ಪ್ರದದಂತಿ ಲಕ್ಷ್ಮೀಂ ॥೪೦॥

---

ಬೆಸ್ತರ ಸ್ತ್ರೀಯಾದ ಯೋಜನಗಂಧಿಯು ಸಹವಾಸಮಾಡಿದ ಪಾಪದ ದೆಸೆಯಿಂದ ಈ ಕ್ಷೇತ್ರದಲ್ಲಿ ಸ್ನಾನಪೂಜಾದಿಗಳನ್ನು ಮಾಡಿ ಮುಕ್ತನಾದನು. ॥೩೭॥

ದೇವಿಯ ಶೂಲದಿಂದ ಹೊಡೆಯಲ್ಪಟ್ಟು, ಪ್ರಾಣಬಿಡುತ್ತಿರುವ ಸಮಯದಲ್ಲಿ ಆ ತಂಜಾಸುರನು, ದೇವಿಗೆ ಕೈಮುಗಿದುಕೊಂಡು ನಮಸ್ಕರಿಸುತ್ತಾ ಹೀಗೆ ಪ್ರಾರ್ಥಿಸಿನು. ॥೩೮॥

ದೇವಿ! ಈ ಶಮೀವನವು ನನ್ನ ಹೆಸರಿನಿಂದ ಒಂದು ಪಟ್ಟಣವಾಗಿ ಪ್ರಸಿದ್ಧಿ ಪಡೆಯಲೆಂದು ಆ ತಂಜಾಸುರನು ಪ್ರಾರ್ಥಿಸಲು, ಮಹಾದೇವನರಸಿಯಾದ ಜಗದಂಬಿಕೆಯು ಹಾಗೆಯೇ ಆಗಲೆಂದು ಅವನಿಗೆ ವರವನ್ನು ಕೊಟ್ಟಳು. ಅಲ್ಲಿಂದ ಮುಂದೆ ಚೋಲದೇಶದಲ್ಲಿ ಆ ಶಮೀವನವಿದ್ದ ಸ್ಥಳವು ತಂಜಾಪುರ (ತಂಜಾವೂರೆಂದು) ಪ್ರಸಿದ್ಧಿ ಹೊಂದಿರುವುದು. ॥೩೯॥

ದೇವಿಯು ಹಾಗೆಯೇ ತನ್ನ ಅಂಶದಿಂದ ನಿರ್ಮಿಸಲ್ಪಟ್ಟಿದ್ದ ಎಂಟು ಮಂದಿ ಶಕ್ತಿದೇವತೆಗಳನ್ನೂ, ಆ ತಂಜಾಪುರದ ಎಂಟು ದಿಕ್ಕುಗಳಲ್ಲಿಯೂ ಸ್ಥಾಪಿಸಿದಳು. ಅವರು ತಮ್ಮನ್ನು ಪೂಜೆಮಾಡುವವರಿಗೆ ಉಂಟಾಗುವ ಉಪದ್ರವಗಳನ್ನೆಲ್ಲಾ ಹೋಗಲಾಡಿಸುವರು. ಅಲ್ಲದೇ ಆ ಊರಿನಲ್ಲಿ ವಾಸಮಾಡುವ ಮಾನವರಿಗೆ ಬೇಕಾದ ಪಶು, ಪುತ್ರ ಮತ್ತು ಧನ ಮುಂತಾದವುಗಳನ್ನೆಲ್ಲಾ ಕೊಡಲು ಸಿದ್ಧರಾಗಿರುವರು. ॥೪೦॥

ಸ ನೀಲಮೇಘೋ ನೃಹರಿಸ್ತದಾವಸ
ಚ್ಛಮೀವನೇ ತಸ್ಯ ಸದೈವ ಸನ್ನಿಧೌ ॥೪೧॥

ಮುನಿವರನಿಕರೈಸ್ತದಾಂಬಿಕಾ ಸಾ
ವಿಹಿತಾನಂದಭರೇಣ ಸುಮ್ನೈಶ್ಚ ತುಷ್ಟಾ ।
ಅಭಿತುಷ್ಟುವಿರೇ ಮಹೇಶಪತ್ನೀಂ
ಹರಿಣಾ ತೇ ಮುನಯಃ ಸುರೈರ್ಗಣೇಂದ್ರೈಃ ॥೪೨॥

॥ ಸುರಾ ಊಚುಃ ॥

ಧಮ್ಮಿಲ್ಲಮಲ್ಲೀಂ ದಿತಿಜಾರ್ತಿಭಲ್ಲೀಂ
ಹಲ್ಲೀಪ್ರಿಯಾಂ ತಾಂ ಸುಯಶೋಮತಲ್ಲೀಂ ।
ತ್ವಾಂ ನೋ ನುಮಃ ಸಂಸ್ತುತಕಾಮವಲ್ಲೀ
ಮಾನಂದವಲ್ಲೀಂ ವಿಜಯೇಶಪತ್ನೀಂ ॥೪೩॥

---

ಅಲ್ಲಿಂದ ಮುಂದೆ ನೀಲಮೇಘದಂತೆ ಆಕೃತಿಯುಳ್ಳ ಪುರುಷೋತ್ತಮನಾದ ನರಸಿಂಹನು ಆ ದೇವನ ಸನ್ನಿಧಿಯನ್ನಪೇಕ್ಷಿಸಿ ಯಾವಾಗಲೂ ಶಮೀವನದಲ್ಲಿಯೇ ವಾಸಮಾಡಲುಪಕ್ರಮಿಸಿದನು. ಅನಂತರ ಮುನಿಪುಂಗವರು ಗುಂಪಾಗಿ, ತಮಗುಂಟಾದ ವಿಜಯದಿಂದ ಸಂತುಷ್ಟರಾಗಿ, ಮಹೇಶ್ವರನ ಪತ್ನಿಯಾದ ಅಂಬಿಕೆಯನ್ನು ಸಂತೋಷದಿಂದ ಪೂಜಿಸಿ, ವಿಷ್ಣು ಮತ್ತು ಇತರ ದೇವತೋತ್ತಮರೊಡಗೂಡಿ ದೇವಿಯನ್ನು ಹೀಗೆ ಸ್ತೋತ್ರಮಾಡತೊಡಗಿದರು. ॥೪೧-೪೨॥

ತಲೆಯ ಗಂಟಿನಲ್ಲಿ ಮಲ್ಲಿಗೆಯ ಹೂವನ್ನು ಮುಡಿದಿರುವವಳೂ, ದೈತ್ಯರಿಂದ ಉಂಟಾಗುವ ಪೀಡೆಯನ್ನು ಅವರನ್ನು ಸಂಹರಿಸಿಯೇ ಹೋಗಲಾಡಿಸುವವಳೂ, ಹಲ್ಲೀಸನಾಟ್ಯದಲ್ಲಿ ಪ್ರೀತಿಯುಳ್ಳವಳೂ, ಒಳ್ಳೆಯ ಯಶಸ್ಸಿನಿಂದ ಪ್ರಖ್ಯಾತಳಾದವಳೂ, ತನ್ನನ್ನು ಸ್ತೋತ್ರಮಾಡುವವರ ಇಷ್ಟಾರ್ಥಗಳನ್ನು ಕೊಡುವವಳೂ ಆಗಿರುವ ವಿಜಯೇಶ್ವರನ ಪತ್ನಿಯಾದ ಆನಂದವಲ್ಲೀದೇವಿಯನ್ನು ನಾವು ಸದಾ ಸ್ತೋತ್ರಮಾಡುತ್ತೇವೆ. ॥೪೩॥

ಶಮೀವನೇಶೋ ವಿಜಯಪ್ರದೇಶೋ
ತಂಜೇಶ್ವರೋಽಭೂತ್ಸ ತದಾ ಮಹೇಶಃ ।
ದೇವೈಃ ಸ್ತುತೋಽಸೌ ಪರಿಪೂಜಿತಸ್ತಥಾ
ಮುನೀಶ್ವರೈಸ್ತೈಶ್ಚ ಸುಧಾಬ್ಧಿನೀತಟೇ ॥೪೪॥

ಪ್ರಹೃಷ್ಟಚಿತ್ತಾಶ್ಚ ಯಯುಸ್ತ್ರಿವಿಷ್ಟಪಂ
ಶಮೀವನಸ್ಥಾನವರಾತ್ಸುರಾಸ್ತದಾ ।
ಸ್ಥಾನಪ್ರಭಾವಂ ತ್ವಭಿವೀಕ್ಷ್ಯ ಹೃಷ್ಟೋ
ಲಿಂಗಪ್ರತಿಷ್ಠಾಮಕರೋದ್ವಸಿಷ್ಠಃ ॥೪೫॥

ತೀರ್ಥಂ ಚ ಲಿಂಗಂ ಚ ಸ್ವನಾಮತೋ ಮುನಿಃ
ಸಿದ್ಧಸ್ತದಾ ಕೊಂಕಣನಾಮಕಃ ಸ್ವಯಂ ।
ಸ ಕೊಂಕಣಾಖ್ಯೇಶ್ವರನಾಮಲಿಂಗಂ
ಪ್ರತಿಷ್ಠಯನ್ಸಿದ್ಧತೀರ್ಥಸ್ಯ ಪಶ್ಚಾತ್ ॥೪೬॥

---

ಸಕಲ ದೇವತೆಗಳಿಗೆ ವಿಜಯವನ್ನುಂಟುಮಾಡಿದ ಶಮೀವನೇಶ್ವರನಾದ ಮಹೇಶನು ಆಗ ತಂಜೇಶ್ವರನೆಂಬ ಹೆಸರಿನಿಂದ ಪ್ರಖ್ಯಾತನಾದನು. ಆ ತಂಜೇಶ್ವರನು, ಅಮೃತಪುಷ್ಕರಿಣೀ ದಡದಲ್ಲಿದ್ದು ದೇವತೆಗಳಿಂದಲೂ ಮತ್ತು ಮುನಿಪುಂಗವರುಗಳಿಂದಲೂ ಪೂಜಿಸಲ್ಪಟ್ಟು ಮಹಿಮಾಪೂರ್ಣನಾಗಿರುವನು. ॥೪೪॥

ತಂಜೇಶ್ವರನ ದರ್ಶನದಿಂದ ದೇವತೆಗಳೆಲ್ಲರೂ ಸಂತುಷ್ಟಾಂತರಂಗರಾಗಿ ಆ ಶಮೀವನಸ್ಥಾನದಿಂದ ಸ್ವರ್ಗಲೋಕಕ್ಕೆ ಹೋದರು. ಆ ಸ್ಥಾನಮಹಿಮೆಯನ್ನು ನೋಡಿ ಸಂತುಷ್ಟನಾದ ವಸಿಷ್ಠಮುನಿಯು ತಾನೂ ಒಂದು ಶಿವಲಿಂಗವನ್ನು ಅಲ್ಲಿ ಪ್ರತಿಷ್ಠೆಮಾಡಿರುವನು. ॥೪೫॥

ಸಿದ್ಧಪುರುಷನಾದ ಕೊಂಕಣನೆಂಬ ಹೆಸರಿನ ಮುನಿಯೊಬ್ಬನು ತನ್ನ ಹೆಸರಿನಲ್ಲಿಯೇ ಒಂದು ತೀರ್ಥ ಮತ್ತು ಒಂದು ಶಿವಲಿಂಗ ಇವುಗಳನ್ನು ಅಲ್ಲಿ ಪ್ರತಿಷ್ಠೆ ಮಾಡಿದನು. ಈಗಲೂ ಆ ಸಿದ್ಧತೀರ್ಥದ ಪಶ್ಚಿಮ ದಿಕ್ಕಿನಲ್ಲಿ ಕೊಂಕಣೇಶ್ವರವೆಂಬ ಹೆಸರಿನ ಲಿಂಗವು ವಿರಾಜಿಸುತ್ತಿರುವುದು. ॥೪೬॥

ನಾರಾಯಣಃ ಶಂಕರನಾಮಲಿಂಗಂ
ತದ್ದಕ್ಷಿಣೇ ಸ್ಥಾಪಯತಿ ಪ್ರಹೃಷ್ಟಃ ।
ಸ್ಕಂದೋ ವಸಾಮ್ಯತ್ರ ಪುರಸ್ಯ ರಕ್ಷಕಃ
ಸುಶಕ್ತಿಹಸ್ತೋ ರಿಪುನಾಶಕಃ ಪುರೇ ॥೪೭॥

ಭ್ರಾತಾ ಪುರಾ ವೈ ಹೃತಪುಷ್ಪಕೋಽಭ್ಯಗಾ-
ದ್ಧನಾಧಿಪೋ ರಾವಣೇನಾತಿದುಃಖಾತ್ ।
ಶಮೀವನೇ ತತ್ರ ಸಮರ್ಚ್ಯ ಶಂಕರಂ
ಲೇಭೇ ಧನೇಶತ್ವಮಥೋದಿಶಾಂ ಪತಿಃ ॥೪೮॥

॥ ಸ್ಕಂದ ಉವಾಚ ॥

ಸ್ಥಾನಂ ಪ್ರಸಾದಜನಕಂ ಹಿ ಮಹೇಶ್ವರಸ್ಯ
ಭುಕ್ತಿಪ್ರದಂ ಮುಕ್ತಿದಮೇವ ತನ್ನೃಣಾಂ ।
ಚೋಳೇಶ್ವರಂ ತತ್ರ ಶಿವಾಲಯಂ ವ್ಯಧಾ-
ದುತ್ತುಂಗಲಿಂಗಸ್ಯ ಚ ತೀರ್ಥತೀರೇ ॥೪೯॥

---

ಅದಕ್ಕೆ ದಕ್ಷಿಣ ದಿಕ್ಕಿನಲ್ಲಿ ನಾರಾಯಣನು ಶಂಕರಸಂಜ್ಞಕವಾದ ಶಿವಲಿಂಗವನ್ನು ಸಂತೋಷದಿಂದ ಪ್ರತಿಷ್ಠೆಮಾಡಿರುವನು. ಸ್ಕಂದನೆನಿಸಿದ ನಾನು ಈ ತಂಜಾಪುರವನ್ನು ರಕ್ಷಣೆಮಾಡುವುದಕ್ಕೋಸ್ಕರ ಉತ್ತಮವಾದ ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ಶತ್ರುಗಳನ್ನು ನಾಶಮಾಡುತ್ತಾ ಅಲ್ಲಿಯೇ ವಾಸಿಸುತ್ತಿರುವೆನು. ॥೪೭॥

ಹಿಂದೆ ರಾವಣನ ಸಹೋದರನಾದ ಕುಬೇರನು ತನ್ನ ಅಣ್ಣನು ಪುಷ್ಪಕ ವಿಮಾನವನ್ನು ಕಿತ್ತುಕೊಂಡ ಮೇಲೆ ದುಃಖಿತನಾಗಿ ಈ ಶಮೀವನಕ್ಕೆ ಬಂದು ಅಲ್ಲಿ ಮಹೇಶ್ವರನನ್ನು ಪೂಜೆಮಾಡಿ, ಪುನಃ ಧನಾಧಿಪತಿ ಪದವಿಯನ್ನೂ ದಿಕ್ಪಾಲಕತ್ವವನ್ನೂ ಹೊಂದಿದನು. ॥೪೮॥

ಈ ಮಹೇಶ್ವರನ ಸ್ಥಾನವು ದೇವದೇವನ ಅನುಗ್ರಹವನ್ನು ಸುಲಭವಾಗಿ ಉಂಟುಮಾಡಬಲ್ಲುದು. ಇದರ ಸೇವನೆಯಿಂದ ಮಾನವರಿಗೆ ಇಹದಲ್ಲಿ ಸಕಲ ಭೋಗಗಳೂ ಪರದಲ್ಲಿ ಮೋಕ್ಷವೂ ಲಭಿಸುವುದು. ಚೋಲದೇಶದ ರಾಜನು ಉನ್ನತವಾದ ಈ ಶಿವಲಿಂಗಕ್ಕೆ ತೀರ್ಥದ ದಡದಲ್ಲಿ ಒಂದು ದೊಡ್ಡ ಶಿವಾಲಯವನ್ನು ಕಟ್ಟಿಸಿದನು. ॥೪೯॥

ಗಂಗೇವ ಸಾಭೂಚ್ಛಿವಲಿಂಗಸಂಗತಃ
ಖ್ಯಾತಾ ಸದಾ ವೈ ಶಿವಗಂಗಕೇತಿ ।
ಸ್ನಾನೇನ ಪಾನೇನ ಚ ಪಾಪನಾಶಿನೀ
ಮುಕ್ತಿಪ್ರದಾ ಸಾ ಪಿತೃಣಾಂ ಪ್ರದಾನಾತ್ ॥೫೦॥

ಪೂರ್ವಾಪರೌ ಧನಾರ್ಥೀ ಪುರವರನಿರತೌ ತತ್ರ ಪೂಜ್ಯೌ ಭವೇತಾಂ
ಲಿಂಗಾನಾಂ ಭುವಿ ಷಟ್ಕಮುತ್ತಮಮಿದಂ ಸಂದರ್ಶನಾನ್ಮುಕ್ತಿದಂ ।
ಸಾನ್ನಿಧ್ಯಾಚ್ಚ ಮಹೇಶಿತುಃ ಸುಕೃಪಯಾ ದೇವ್ಯಾಸ್ತಥಾ ತತ್ಪುರೇ
ನಿತ್ಯಂ ಸಂಸ್ತುವತಾಂ ರಮಾಪಶುಸುತಾನ್ದತ್ತೇ ಧನಂ ವಾಂಛಿತಂ ॥೫೧॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ತಂಜೇಶ್ವರಮಹಿಮಾ ವರ್ಣನಂ ನಾಮ ತ್ರಯೋದಶೋಽಧ್ಯಾಯಃ

---

ಚೋಳರಾಜ ನಿರ್ಮಿತವಾದ ಶಿವತೀರ್ಥವು ಶಿವಲಿಂಗದ ಸಮೀಪದಲ್ಲಿಯೇ ಗಂಗೆಯಂತೆ ಸೇರಿರುವುದರಿಂದ ಯಾವಾಗಲೂ ಆದು 'ಶಿವಗಂಗೆ' ಎಂದು ಪ್ರಸಿದ್ಧಿ ಹೊಂದಿದೆ. ಈ ಶಿವಗಂಗಾತೀರ್ಥದಲ್ಲಿ ಸ್ನಾನ ಅಥವಾ ಅದರ ಪಾನವನ್ನು ಮಾಡುವುದರಿಂದ ಮಾನವರ ಪಾಪವು ನಾಶವಾಗುವುದು. ಅಲ್ಲದೇ ಈ ನೀರಿನಿಂದ ತರ್ಪಣಾದಿಗಳನ್ನು ಮಾಡಿದರೆ ಪಿತೃಗಳಿಗೆ ಮೋಕ್ಷವುಂಟಾಗುವುದು. ॥೫೦॥

ಇಹಪರಗಳೆರಡರಲ್ಲೂ ಸುಖವು ಲಭಿಸುವುದು, ಈ ತಂಜಾಪುರದಲ್ಲಿ ಆರು ಉತ್ತಮವಾದ ಶಿವಲಿಂಗಗಳಿರುವುದರಿಂದ ಅವುಗಳ ಸಂದರ್ಶನವು ಸರ್ವದಾ ಮಾನವರಿಗೆ ಮುಕ್ತಿಯನ್ನುಂಟುಮಾಡುವುದು. ಆ ಮಹೇಶ್ವರನ ಸಾನ್ನಿಧ್ಯದಿಂದಲೂ ಉತ್ತಮವಾದ ದಯೆಯಿಂದ ಕೂಡಿದ ದೇವಿಯ ಸನ್ನಿಧಿಯಿಂದಲೂ ಅಲ್ಲಿ ಉಮಾಮಹೇಶ್ವರರನ್ನು ಸ್ತೋತ್ರಮಾಡುವ ಮಾನವರಿಗೆ ನಿತ್ಯವೂ, ಐಶ್ವರ್ಯ, ಪಶು, ಪತ್ನೀ ಮುಂತಾದ ಸಕಲ ಇಷ್ಟಾರ್ಥಗಳನ್ನೂ ಆ ದೇವದೇವನು ಅನುಗ್ರಹಿಸುವನು. ॥೫೧॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ತಂಜೇಶ್ವರನ ಮಹಿಮೆಯ ವರ್ಣನೆಯೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಚತುರ್ದಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತತ್ಪ್ರಾಚ್ಯಾಂ ಸ್ಥಾನದಶಕಂ ನಿತ್ಯಂ ಶಂಭೋಃ ಪ್ರಿಯಂ ಮುನೇ ।
ಚೋಲೇ ಕವೇರಜಾಪಾರತೀರೇಷು ಸುರಮಾನವೈಃ ॥೧॥

ಮುನಿಭಿಃ ಸ್ಥಾಪಿತಾನ್ಯೇವ ಲಿಂಗಾನಿ ಕ್ರಮಶಃ ಪುರಾ ।
ಸಮುನ್ನತಪ್ಲವೇಶಾಖ್ಯ ಕಾಶ್ಯಾರಣ್ಯಶಿವಸ್ಥಲಂ ॥೨॥

ಯತ್ರ ಶ್ರೀದಕ್ಷಿಣಾಮೂರ್ತಿರೂಪೇಣೈವ ಮಹೇಶ್ವರಃ ।
ಮುನೀನಾಂ ಜ್ಞಾನಮಾನಂದಂ ಸತ್ಯಾಖ್ಯಂ ಸಮುಪಾದಿಶತ್ ॥೩॥

---

## ಹದಿನಾಲ್ಕನೆಯ ಅಧ್ಯಾಯ

ಪುನಃ ಕುಮಾರಸ್ವಾಮಿಯು ಕ್ಷೇತ್ರಮಹಿಮೆಗಳನ್ನು ಈರೀತಿ ವಿವರಿಸತೊಡಗಿದನು. ಜೈಗೀಷವ್ಯಮುನಿಯೇ, ಆ ತಂಜೇಶ್ವರಕ್ಷೇತ್ರಕ್ಕೆ ಪೂರ್ವದಿಕ್ಕಿನಲ್ಲಿ ನಿತ್ಯವೂ ಶಂಭುವಿಗೆ ಪ್ರಿಯಕರಗಳೆನಿಸಿರುವ ಹತ್ತು ಶಿವಸ್ಥಾನಗಳಿರುವುವು. ಚೋಲದೇಶದಲ್ಲಿ ಹರಿಯುವ ಕಾವೇರೀನದಿಯ ದಡಗಳಲ್ಲಿ ದೇವಮಾನವರಿಂದಲೂ, ಮುನಿಗಳಿಂದಲೂ ಹಿಂದೆ ಕ್ರಮವಾಗಿ ಅನೇಕ ಶಿವಲಿಂಗಗಳು ಸ್ಥಾಪಿಸಲ್ಪಟ್ಟಿದ್ದುವು. ಅವು ಉನ್ನತವಾದ ಪ್ಲವೇಶಸಂಜ್ಞಕವಾದ ಕ್ಷೇತ್ರಗಳು ಅವೇ ಕಾಶ್ಯಾರಣ್ಯಶಿವಸ್ಥಲಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುವು. ॥೧-೩॥

ಇಲ್ಲಿ ಶ್ರೀ ದಕ್ಷಿಣಾಮೂರ್ತಿಯ ರೂಪದಿಂದ ಮಹೇಶ್ವರನು ಮುನಿಗಳಿಗೆ ಸತ್ಯಸ್ವರೂಪವಾದ ಬ್ರಹ್ಮಜ್ಞಾನವನ್ನು ಉಪದೇಶಮಾಡಿರುವನು. ಪಾತಾಳೇಶ್ವರ

ಪಾತಾಲೇಶಾಖ್ಯಕಂ ಸ್ಥಾನಂ ದೇವೀಲಂಕಾರವಲ್ಲಿಕಾ ।
ಯತ್ರ ಪದ್ಮಜಪದ್ಮಾಕ್ಷೌ ಲಿಂಗಮೂಲಾದಿಲೋಕಿನೌ ॥೪॥

ವಿರಮೇತಾಂ ಪುರಾ ಯುದ್ಧಾಲ್ಲಿಂಗಃಲೋಕೇನ ಸತ್ತಮಂ ।
ತೌಚ ತುಷ್ಟುವತುಸ್ತತ್ರ ಪ್ರಾಂಜಲೀ ವಿಧಿಮಾಧವೌ ॥೫॥

ಪಾತಾಲೇಶ ಮಹೇಶ ಶಂಕರ ವಿಭೋ ಸ್ವಾಮಿನ್ನುಮಾನಾಥ ಮಾಂ
ದರ್ಪಾತ್ಖಂಡಿತಚೇತಸೈವ ಸುಮಹಾಲಿಂಗಾದಿಮೂಲೇಪ್ಸುಕೌ ।
ಯಾತೌ ಸ್ವಃ ಕಿಲ ಭೂಮಿಮೂಲಮತುಲಂ ಸಪ್ತಾಥ ಪಾತಾಲಕಂ
ಕ್ರುದ್ಧೋ ಮಾಭವ ದೇವದೇವ ಭಗವನ್ನಾಗಸ್ಕರಾವಾವಾಮವ ॥೬॥

---

ಸಂಜ್ಞಕವಾದ ಶಿವಸ್ಥಾನದಲ್ಲಿ ಲಂಕಾರವಲ್ಲಿಕಾದೇವಿಯು ವಿರಾಜಿಸುತ್ತಿರುವಳು. ಇಲ್ಲಿ ಬ್ರಹ್ಮ ಮತ್ತು ವಿಷ್ಣುಗಳಿಬ್ಬರೂ ಶಿವಲಿಂಗದ ಆದ್ಯಂತವನ್ನು ಹುಡುಕಲು ಪ್ರಯತ್ನಿಸಿದರು. ||೩-೪||

ಹಿಂದೆ ಬ್ರಹ್ಮ ವಿಷ್ಣುಗಳು ಈ ಶ್ರೇಷ್ಠವಾದ ಶಿವಲಿಂಗದ ಮೂಲವನ್ನು ನೋಡುವ ಕಾರ್ಯದಲ್ಲಿ ಸೋತುಹೋದರು. ಅನಂತರ ಆ ಬ್ರಹ್ಮ ವಿಷ್ಣುಗಳಿಬ್ಬರಿಗೂ ಜ್ಞಾನೋದಯವಾಗಿ ಅವರು ಕೈಮುಗಿದುಕೊಂಡು ಪಾತಾಲೇಶ್ವರನನ್ನು ಈರೀತಿ ಸ್ತೋತ್ರಮಾಡಿದರು. ||೫||

ಸಕಲೈಶ್ವರ್ಯಪರಿಪೂರ್ಣನೂ, ಜಗನ್ಮಂಗಳಕರನೂ, ವಿಭುವೂ, ಉಮಾ ರಮಣನೂ ಆದ ಪಾತಾಲೇಶ್ವರಸ್ವಾಮಿಯೇ! ನಾವಿಬ್ಬರೂ ಅಹಂಕಾರದಿಂದ ಭೂಯಿಷ್ಠವಾದ ಮನಸ್ಸಿನಿಂದ ನಿನ್ನ ಲಿಂಗದ ಬುಡವನ್ನೂ ತುದಿಯನ್ನೂ ಕಂಡು ಹಿಡಿಯಬೇಕೆಂದು ಪ್ರಯತ್ನಿಸಿದೆವು. ಇದಕ್ಕಾಗಿ ಸ್ವರ್ಗಲೋಕದಿಂದ ಭೂಮಿಯ ಬುಡಕ್ಕೆ ಬಂದು ಏಳು ಪಾತಾಳಲೋಕಗಳನ್ನೂ, ಮೇಲೆ ಏಳು ಊರ್ಧ್ವಲೋಕ ಗಳನ್ನೂ ಪ್ರವೇಶಿಸಿದೆವು. ದೇವ! ಆದರೂ ನಿನ್ನ ಈ ಮಹಾಲಿಂಗದ ಆದ್ಯಂತವು ನಮಗೆ ಗೋಚರಿಸಲಿಲ್ಲ. ದೇವ ದೇವನಾದ ಭಗವಂತನೇ! ಈರೀತಿ ಅಪರಾಧ ಮಾಡಿದ ನಮ್ಮ ಮೇಲೆ ಕೋಪಮಾಡಿಕೊಳ್ಳದೇ ನಮ್ಮಿಬ್ಬರನ್ನೂ ಕ್ಷಮಿಸಿ ಕಾಪಾಡ ಬೇಕೆಂದು ಬ್ರಹ್ಮವಿಷ್ಣುಗಳು ಪ್ರಾರ್ಥಿಸಿದರು. ||೬||

ಕ್ಷಮಯಾಮಾಸತುಸ್ತತ್ರ ಪಾತಾಲೇಶೇನ ಲೋಕಪೌ ।
ಬಿಲ್ವಾರಣ್ಯಂ ಚ ತತ್ಪ್ರಾಚ್ಯಾಂ ಅರ್ಜುನೋಽಸ್ತ್ರಾಣ್ಯಥಾರ್ಪಯತ್ ॥೭॥

ಕಿರಾತರೂಪೀ ಭಗವಾನ್ಕ್ರೋಲಾರ್ಥಂ ಯುಧ್ಯತೋಸ್ತಯೋಃ ।
ಪ್ರಸನ್ನೋಽಭೂನ್ಮಹಾದೇವಸ್ತಸ್ಮೈ ಪಾಂಡುತನೂಭವೇ ॥೮॥

ತತ್ಪ್ರಹಾರಂ ಸ್ವಮೂರ್ಧ್ನ್ಯೇವ ಧೃತವಾನ್ಪರಮೇಶ್ವರಃ ।
ದೃಷ್ಟ್ವಾ ದೇವಂ ಪಾಂಡುಸುತಃ ನತ್ವಾದೃಷ್ಟ್ವಾಥ ತತ್ರ ವೈ ॥೯॥

---

ಆಗ ಆ ಪಾತಾಳೇಶ್ವರನು ಜಗತ್ಪಾಲಕರಾದ ಬ್ರಹ್ಮವಿಷ್ಣುಗಳಿಬ್ಬರನ್ನೂ ಕ್ಷಮಿಸಿದನು. ಆ ಪಾತಾಳೇಶ್ವರಕ್ಷೇತ್ರದ ಪೂರ್ವಭಾಗದಲ್ಲಿ ಬಿಲ್ವಾರಣ್ಯಕ್ಷೇತ್ರವಿರುವುದು. ಅಲ್ಲಿ ಹಿಂದೆ ಅರ್ಜುನನು ತಾಪಸನಾಗಿದ್ದು ಬಾಣಗಳನ್ನೆಲ್ಲಾ ಕಿರಾತರೂಪಿಯಾದ ಮಹೇಶ್ವರನ ಮೇಲೆ ಪ್ರಯೋಗಿಸಿದ್ದನು. ಏಕೆಂದರೆ ಪಾಶುಪತಾಸ್ತ್ರವನ್ನು ಪರಮೇಶ್ವರನಿಂದ ಪಡೆದುಕೊಳ್ಳಲು ಅರ್ಜುನನು ಶಿವನನ್ನುದ್ದೇಶಿಸಿ ತಪಸ್ಸು ಮಾಡುತ್ತಿದ್ದನು. ಅದೇ ಸಂದರ್ಭದಲ್ಲಿ ಪರಮೇಶ್ವರನು ಇವನ ಶಕ್ತಿಯನ್ನು ಪರೀಕ್ಷೆಮಾಡುವುದಕ್ಕೋಸ್ಕರ, ಒಂದು ಹಂದಿಯನ್ನು ನಿರ್ಮಿಸಿ, ಅವನು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಹೋಗುವಂತೆ ಮಾಡಿದನು. ಅಲ್ಲದೆ ತಾನೂ ಕಿರಾತರೂಪವನ್ನು ತಾಳಿ ಆ ಕಾಡುಹಂದಿಯನ್ನು ಹಿಂಬಾಲಿಸಿದನು. ಇದೇ ಸಮಯದಲ್ಲಿ ಅರ್ಜುನನೂ ಅದನ್ನು ಕೊಲ್ಲಲು ಇಬ್ಬರೂ ಆ ಹಂದಿಗೆ ಬಾಣಪ್ರಯೋಗಮಾಡಿದರು. ಈರ್ವರ ಬಾಣಗಳಿಂದಲೂ ಮೃತವಾದ ಹಂದಿಯ ಬಳಿಗೆ ಅರ್ಜುನನು ಬಂದನು. ತನ್ನ ಬಾಣಪ್ರಯೋಗದಿಂದ ಮೃತವಾಗಿದೆಯೆಂದು ತಿಳಿದುಕೊಳ್ಳುವಷ್ಟರಲ್ಲಿ ಶಿವರೂಪೀ ಕಿರಾತನೂ ತನ್ನ ಏಟಿನಿಂದ ಈ ಹಂದಿ ಸತ್ತಿದೆಯೆಂದನು. ಹೀಗೆಯೇ ಪರಸ್ಪರವಾಗಿ ಇಬ್ಬರಿಗೂ ವಾಗ್ವಾದ ಬೆಳೆದು ಕೊನೆಗೆ ನಮ್ಮಿಬ್ಬರಲ್ಲಿ ಯಾರು ಶಕ್ತರೋ ಅವರಿಂದ ಇದರ ವಧೆಯಾಗಿರುವುದು; ಪರೀಕ್ಷಿಸೋಣವೆಂದು ಯುದ್ಧಕ್ಕೆ ಪ್ರಾರಂಭಿಸಿದರು. ಅರ್ಜುನನು ತನ್ನ ಬಾಣಗಳನ್ನೆಲ್ಲಾ ಕಿರಾತರೂಪಿಯಾದ ಶಿವನ ಮೇಲೆ ಪ್ರಯೋಗಿಸಿದನು. ಆಗಲೇ ಆ ಬಾಣಗಳನ್ನೆಲ್ಲಾ ಶಿವನು ನುಂಗಿಬಿಟ್ಟನು. ಆಗ ಅರ್ಜುನನು ಕೋಪದಿಂದ ಮಲ್ಲಯುದ್ಧಮಾಡುತ್ತಾ ಪರಶಿವನ ತಲೆಯಮೇಲೆ ಮುಷ್ಟಿಯಿಂದ ಬಲವಾಗಿ ಹೊಡೆದು ನೋಯಿಸಿದನು. ಮಹಾದೇವನು ಆ ಪ್ರಹಾರವನ್ನು ಭಕ್ತನ ಕಾಣಿಕೆಯೆಂದು ಬಗೆದು ಪ್ರತಿಯಾಗಿ ಏನೂ ಎಣಿಸದೆ ಸಹಿಸಿಕೊಂಡನು. ಅರ್ಜುನನು ಮಲ್ಲಯುದ್ಧದಲ್ಲಿಯೂ ಪ್ರತಿಕಕ್ಷಿಯು ಸೋಲದಿರುವು

॥ ಅರ್ಜುನ ಉವಾಚ ॥

ವೀರಸ್ತ್ವಂ ಭಗವನ್ಕ್ಷಮಸ್ವ ದಯಯಾ ಮೂರ್ಧ್ನಿಪ್ರಹಾರಂ ಹರ
ಸ್ವಾಮಿನ್ತ್ವತ್ಪದಯೋರ್ಮಮಾಸ್ತು ಸುದೃಢಾ ಭಕ್ತಿರ್ಮಮಾಸ್ತ್ರಾಣಿ ಭೋಃ।
ದೇಹೀಶಾನ ದಯಾನಿಧಾನ ದುರಿತಾನ್ಮಾಂ ಸೋಢಯಾತ್ರ ಪ್ರಭೋ ॥೧೦॥

ತತ್ರ ಪ್ರಸಾದಿತೋ ದೇವೋ ದದೌ ಪಾಶುಪತಾಭಿಧಂ ।
ಅರ್ಜುನಾಯಾಸ್ತ್ರಮುದದದ್ದೇವದೇವೋ ಮಹೇಶ್ವರಃ ॥೧೧॥

ತದ್ದಕ್ಷಿಣೇ ನರಸ್ಥಾನಂ ಮಹೇಶಸ್ಯ ಪುರಾತನಂ ।
ದಕ್ಷಿಣದ್ವಾರಕಾನಾಥಸ್ತತ್ರ ಸರ್ವನದೀತಟೇ ॥೧೨॥

---

ದನ್ನು ನೋಡಿ, ಸ್ವಲ್ಪ ತಾಳು, ನಾನು ಶಿವನನ್ನು ಪೂಜಿಸಿ ಬರುವೆನೆಂದು ಹೇಳಿ ಹತ್ತಿರದಲ್ಲಿಯೇ ಶಿವಲಿಂಗವನ್ನು ಕಲ್ಪಿಸಿಕೊಂಡು, ಬಿಲ್ವದಳಗಳಿಂದ ಪೂಜೆಮಾಡಲು ಪ್ರಾರಂಭಿಸಿದನು. ಆಗ ಅವನು ಪೂಜೆಮಾಡಿದ ಪತ್ರೆಗಳೆಲ್ಲವೂ ಈ ಕಿರಾತರೂಪಿ ಯಾದ ಶಿವನ ತಲೆಯಮೇಲೆ ಕಾಣಿಸುತ್ತಿದ್ದವು. ತಾನು ಅರ್ಚಿಸುತ್ತಿದ್ದ ಲಿಂಗದ ಮೇಲೆ ಪೂಜಾದ್ರವ್ಯವು ಇರಲಿಲ್ಲ. ಇದನ್ನು ನೋಡಿ, ಆ ಪಾಂಡುಕುಮಾರನಾದ ಅರ್ಜುನನು ಮಹಾದೇವನೇ ಕಿರಾತರೂಪದಲ್ಲಿ ಬಂದಿರುವನೆಂದು ತಿಳಿದು, ಅವನಿಗೆ ಅಡ್ಡಬಿದ್ದು ಕ್ಷಮಾಪಣೆಯನ್ನು ಬೇಡಿ, ಅಲ್ಲಿ ಈರೀತಿ ಸ್ತುತಿಸಿದನು. ॥೭-೮-೯॥

ವೀರನಾದ ಭಗವಂತನೇ, ನೀನು ನನ್ನಲ್ಲಿ ದಯೆಯಿಟ್ಟು ಅಜ್ಞಾನದಿಂದ ನಾನು ಮಾಡಿದ ತಲೆಯಮೇಲಿನ ಪ್ರಹಾರವನ್ನು ಕ್ಷಮಿಸು. ಸ್ವಾಮಿಯೇ, ನಿನ್ನ ಪಾದಗಳಲ್ಲಿ ನನಗೆ ಯಾವಾಗಲೂ ದೃಢವಾದ ಭಕ್ತಿಯುಂಟಾಗಲಿ. ಎಲೈ ಈಶ್ವರನೇ, ದಯಾಸಮುದ್ರನೂ, ಪ್ರಭುವೂ ಆದ ನೀನು, ನಾನು ಈ ನಿನ್ನ ಸನ್ನಿಧಾನದಲ್ಲಿ ಮಾಡಿದ ಪಾಪಗಳನ್ನೆಲ್ಲಾ ಸಹಿಸಿ ನನ್ನ ಸಕಲ ಅಸ್ತ್ರಗಳನ್ನೂ ಹಿಂದಕ್ಕೆ ಕೊಡು, ಎಂದು ಅರ್ಜುನನು ವಿನಯದಿಂದ ಮಹಾದೇವನನ್ನು ಸ್ತೋತ್ರಮಾಡಿದನು. ಇವನ ಸ್ತೋತ್ರದಿಂದ ಸಂತುಷ್ಟನಾದ ದೇವದೇವನೆನಿಸಿದ ಮಹೇಶ್ವರನು ಅರ್ಜುನ ನಿಗೆ ಅವನ ಹಿಂದಿನ ಅಸ್ತ್ರಗಳನ್ನೆಲ್ಲಾ ಕೊಟ್ಟು, ತನ್ನದಾದ ಪಾಶುಪತಾಸ್ತ್ರವನ್ನೂ ಅನುಗ್ರಹಿಸಿದನು. ॥೧೦-೧೧॥

ಆ ಬಿಲ್ವಾರಣ್ಯಕ್ಕೆ ದಕ್ಷಿಣದಿಕ್ಕಿನಲ್ಲಿ ಪುರಾತನವಾದ ಆ ಮಹೇಶ್ವರನ ನರಸ್ಥಾನವೆಂಬ ಕ್ಷೇತ್ರವಿರುವುದು. ಅಲ್ಲಿ ಸರ್ವನದೀದಡದಲ್ಲಿ ದಕ್ಷಿಣದ್ವಾರಕಾ

ಪೂಜಯೇದ್ರಾಜಗೋಪಾಲರೂಪಿಣಂ ಚಂದ್ರಶೇಖರಂ ।
ತುಷ್ಟಾವಾಭ್ಯರ್ಚಯತ್ತತ್ರ ನರಸ್ಥಾನೇಶ್ವರಂ ಹರಿಃ ॥೧೩॥

॥ ರಾಜಗೋಪಾಲ ಉವಾಚ ॥

ನಮಸ್ತೇ ರುದ್ರೇಶ ತ್ರಿಪುರಹರ ಶಂಭೋ ತ್ರಿನಯನ
ತ್ವದಾಧಾರಂ ವಿಶ್ವಂ ಭ್ರಮತಿ ನರತಿರ್ಯಕ್ಸುರಗಣಂ ।
ಅತಸ್ತ್ವಂ ದೇವೇಶಂ ನಿಖಿಲನಿಗಮಾಂತೇಷು ವಿದಿತಂ
ಸ್ವಮಾತ್ಮಾನಂ ಭ್ರಾಂತ್ಯಾ ವಿವಿಧಮವಯನ್ದೇಹಕಲನಾಃ ॥೧೪॥

ತವ ಶ್ರದ್ಧಾ ವೃದ್ಧಾ ಯದಿ ಭವತಿ ಭಾಗ್ಯೇನ ಮಯಿ ಚೇ
ದ್ವಿಶುದ್ಧಾ ಸಿದ್ಧಿಂ ಸಾ ಪ್ರಭವತಿ ಸಮೃದ್ಧಾಪಿ ಕುನರೇ ।
ಭವೇ ಪಾರಾವಾರೇ ಶಿವದೃಗತಸಾರೇ ತ್ರಿಭುವನೇ
ಶರಣ್ಯೇ ಪಾದಾಬ್ಜೇ ತವ ಶಿವ ವಿಭೋ ಮೇಽಸ್ತು ಶರಣಂ ॥೧೫॥

---

ನಾಥನು ನೆಲಸಿರುವನು. ಚಂದ್ರಚೂಡನಾದ ಆ ನರಸ್ಥಾನೇಶ್ವರನನ್ನು ರಾಜಗೋಪಾಲರೂಪಿಯಾಗಿರುವ ವಿಷ್ಣುವು ಪೂಜೆಮಾಡಿ, ಹೀಗೆ ಸ್ತೋತ್ರಮಾಡಿದನು. ॥೧೨-೧೩॥

ತ್ರಿಪುರಾಸುರಸೂದನನಾದ ರುದ್ರೇಶ್ವರನೇ, ನಿನಗೆ ಪ್ರಣಾಮ ಮಾಡುವೆನು. ಎಲೈ ಮುಕ್ಕಣ್ಣನಾದ ಶಂಭುವೇ, ತಿರ್ಯಕ್ಪ್ರಾಣಿಗಳು, ದೇವತೆಗಳ ಸಮೂಹ ಮುಂತಾದ ಈ ಪ್ರಪಂಚವೆಲ್ಲವೂ ನಿನ್ನನ್ನೇ ಆಧಾರವನ್ನಾಗಿ ಹೊಂದಿರುವುದು. (ಅಂದರೆ ಎಲ್ಲಕ್ಕೂ ನೀನೇ ಆಧಾರಭೂತನಾಗಿರುವೆ.) ಆದ್ದರಿಂದಲೇ ಸಕಲ ವೇದಾಂತಗಳಲ್ಲಿಯೂ ಗೋಚರನಾಗುವ ದೇವೇಶ್ವರನೇ ನೀನಾಗಿರುವೆ. ನೀನೊಬ್ಬನೇ ಆದರೂ ನಾನಾವಿಧವಾದ ಈ ಜಗತ್ತನ್ನು ಕಾಪಾಡಲು ನಾನಾ ದೇಹಗಳನ್ನಾಶ್ರಯಿಸಿ, ನಮ್ಮಂಥವರು ಭ್ರಾಂತರಾಗುವಂತೆ ಮಾಡುತ್ತಿರುವೆ. ॥೧೪॥

ಅದೃಷ್ಟವಶದಿಂದ ನಿನ್ನಲ್ಲಿನ ಶ್ರದ್ಧೆಯು ನನಗೆ ಹೆಚ್ಚಾಗಿ ಅಭಿವೃದ್ಧಿಯಾದದ್ದಾದರೆ, ಪರಿಶುದ್ಧವಾದ ಆ ಶ್ರದ್ಧೆಯು, ಸಕಲ ಸಿದ್ಧಿಗಳನ್ನೂ ನನಗೆ ಉಂಟುಮಾಡಿಕೊಡುವುದರಲ್ಲಿ ಸಂಶಯವಿಲ್ಲ. ನೀಚನರನೆನಿಸಿದ ನನ್ನಲ್ಲಿ ನಿನ್ನ ಭಕ್ತಿಯುಂಟಾದರೆ ಅದೇ ನನ್ನ ಮಹಾಭಾಗ್ಯವು. ಅನಂತವಾದ ಈ ಬ್ರಹ್ಮಾಂಡವೆಲ್ಲವೂ ಶಿವನೆನಿಸಿದ ನಿನ್ನ ದೃಷ್ಟಿಗೋಚರವಾಗಿರುವುದರಿಂದ ಮೂರು ಲೋಕದ ಸಾರವು

ಇತಿ ಸ್ತುತ್ವಾವಸದ್ವಿಷ್ಣುಶ್ಚಂಪಕಾರಣ್ಯಮಧ್ಯಮೇ ।
ತತ್ಪ್ರಾಚ್ಯಾಂ ಪುಂಡರೀಕಾಖ್ಯಂ ಸ್ಥಾನಂ ಶಂಭೋರ್ಮಹಾಘಭಿತ್ ॥೧೬॥

ಪುಂಡರೀಕೇಶ್ವರಸ್ತತ್ರ ಪುಂಡರೀಕಾಕ್ಷಪೂಜಿತಃ ।
ಸ್ಥಾನಮಸ್ತಿ ತತಃ ಪ್ರಾಚ್ಯಾಂ ಕಾಟಕೋಟರಸಂಜ್ಞಿತಂ ॥೧೭॥

ಸಿದ್ಧೇನ ಪೂಜಿತೋ ದೇವಃ ಕಾಟಕೋಟೇನ ಸಂಸ್ತುತಃ ॥೧೮॥

॥ ಕಾಟಕೋಟ ಉವಾಚ ॥

ದುಃಖಾದ್ರಿಪಾಟನ ಪಟುರ್ಘಟಕೋ ಭವಾಬ್ಧೌ ।
ತ್ವಂ ಕಾಟಕೋಟಭಗವನ್ವಟಮೂಲವಾಸ ॥೧೯॥

---

ನಿನಗೆ ಗೋಚರಿಸಿಯೇ ಇರುವುದು. ವಿಭುವೇ, ಜಗನ್ಮಂಗಳಕರನಾದ ನಿನ್ನ ಅಡಿದಾವರೆಗಳಲ್ಲಿ ನಾನು ಶರಣಾಗತನಾಗಿ ಬಂದಿರುವೆನು. ದೇವ, ನಿನಗೆ ನಮಸ್ಕಾರಗಳು. ॥೧೫॥

ಹೀಗೆ ವಿಷ್ಣುವು ಸ್ತೋತ್ರಮಾಡಿ, ಆ ಚಂಪಕಾರಣ್ಯಮಧ್ಯದಲ್ಲಿ ವಾಸ ಮಾಡುತ್ತಿದ್ದನು. ಆ ಚಂಪಕಾರಣ್ಯಕ್ಕೆ ಪೂರ್ವದಿಕ್ಕಿನಲ್ಲಿ ಮಹಾಪಾಪಗಳನ್ನೂ ನಾಶಮಾಡುವ ಆ ಶಂಭುವಿನ ಪುಂಡರೀಕಸಂಜ್ಞಕವಾದ ಕ್ಷೇತ್ರವಿರುವುದು. ಅಲ್ಲಿ ಪುಂಡರೀಕಾಕ್ಷನೆನಿಸಿದ (ಕಮಲಲೋಚನನೆನಿಸಿದ) ವಿಷ್ಣುವಿನಿಂದ ಪೂಜಿಸಲ್ಪಟ್ಟ ಪುಂಡರೀಕೇಶ್ವರನ ಸ್ಥಾನವಿರುವುದು. ಅಲ್ಲಿಂದ ಪೂರ್ವದಿಕ್ಕಿಗೆ ಕಾಟಕೋಟರ ಸಂಜ್ಞಕವಾದ ಕ್ಷೇತ್ರವಿರುವುದು. ॥೧೬-೧೭॥

ಆ ಸ್ಥಾನದಲ್ಲಿ ಈಶ್ವರನನ್ನು ಕಾಟಕೋಟನೆಂಬ ಸಿದ್ಧನು, ಪೂಜಿಸಿ ಹೀಗೆ ಸ್ತೋತ್ರಮಾಡಿರುವನು. ॥೧೮॥

ಆಲದ ಮರದ ಬುಡದಲ್ಲಿ ವಾಸಮಾಡುತ್ತಿರುವ ಕಾಟಕೋಟಸಂಜ್ಞಕನಾದ ಭಗವಂತನೇ, ನಿನ್ನ ಭಕ್ತರ ಪಾಪಗಳೆಂಬ ಬೆಟ್ಟಗಳನ್ನು ಒಡೆಸುವುದರಲ್ಲಿ ನೀನೇ ಸಮರ್ಥನು. ಸಂಸಾರವೆಂಬ ಸಮುದ್ರವನ್ನು ದಾಟಿಸಲು ನೀನೇ ಶಕ್ತನು; ಎಂದು ಕಾಟಕೋಟನೆಂಬ ಸಿದ್ಧಪುರುಷನು ಸ್ತೋತ್ರಮಾಡಿದನು. ॥೧೯॥

ತಸ್ಯೈವಂ ಸ್ತುವತಃ ಶಂಭುಃ ಸಿದ್ಧಿಂ ಸಿದ್ಧಾಯ ದತ್ತವಾನ್ ॥೨೦॥

ತತಃ ಪ್ರಾಚ್ಯಾಂ ಮಹತ್ಸ್ಥಾನಂ ವೇದಾರಣ್ಯಂ ತು ಪಾವನಂ ।
ಪ್ರಾಗಂಬುಧೇಸ್ತೀರಗತಂ ನಿಸ್ತರಂ ತು ಭವಾಂಬುಧೇಃ ॥೨೧॥

ವೇದತೀರ್ಥಂ ಹಿ ತತ್ರಾಸ್ತಿ ಸಾಗರೇ ಪಾಪನಾಶನಂ ।
ಸ್ನಾತಾನಾಂ ಸರ್ವದಾ ತತ್ರ ಪ್ರೀತೋ ಭವತಿ ಶಂಕರಃ ॥೨೨॥

ಮಣಿಕರ್ಣ್ಯಭಿಧಂ ತೀರ್ಥಂ ಶಿರಃಸ್ನಾನಾತ್ಸುಪುಣ್ಯದಂ ।
ಶಮೀದ್ರುಮಸ್ಯ ಮೂಲೇ ವೈ ತಪಂತಿ ಪರಮರ್ಷಯಃ ॥೨೩॥

ವಿಶ್ವಾಮಿತ್ರೋಽಂಗಿರಾ ಧೌಮ್ಯಃ ವಸಿಷ್ಠೋಽಗಸ್ತ್ಯ ಏವ ಚ ।
ತತ್ರಾರಾಧ್ಯ ಮಹಾದೇವಂ ವೇದಾರಣ್ಯೇಶ್ವರಂ ಹರಂ ॥೨೪॥

ಸಿದ್ಧಿಂ ಮುಕ್ತಿಂ ಚ ತೇ ಪ್ರಾಪುಃ ಶಿವಭಕ್ತಾ ಮಹರ್ಷಯಃ ।
ಭಸ್ಮರುದ್ರಾಕ್ಷಸಂಪನ್ನಾ ರುದ್ರಪಂಚಾಕ್ಷರಾದರಾಃ ॥೨೫॥

---

ಆ ಸಿದ್ಧಪುರುಷನು ಹೀಗೆ ಸ್ತೋತ್ರಮಾಡಲು ಆಗ ಶಂಭುವು ಸಂತುಷ್ಟನಾಗಿ ಅವನಿಗೆ ಸರ್ವಸಿದ್ಧಿಯನ್ನೂ ಅನುಗ್ರಹಿಸಿದನು. ॥೨೦॥

ಆ ಕಾಟಕೂಟಕ್ಷೇತ್ರಕ್ಕಿಂತ ಪೂರ್ವದಿಕ್ಕಿನಲ್ಲಿ ಶ್ರೇಷ್ಠವೂ ಪಾವನವೂ ಆದ ವೇದಾರಣ್ಯವೆಂಬ ಒಂದು ದೊಡ್ಡ ಶಿವಸ್ಥಾನವಿರುವುದು. ಸಮುದ್ರದ ಪೂರ್ವದ ತಳದಲ್ಲಿರುವ ಈ ಕ್ಷೇತ್ರವು ತನ್ನನ್ನು ಆಶ್ರಯಿಸುವ ಭಕ್ತರನ್ನು ಸಂಸಾರಸಮುದ್ರದಿಂದ ತಪ್ಪದೇ ದಾಟಿಸುವುದು. ಈ ಸಾಗರದಲ್ಲಿ ಪಾಪನಾಶಮಾಡುವ ವೇದತೀರ್ಥವೆಂಬ ತೀರ್ಥವೊಂದಿದೆ. ಅಲ್ಲಿ ಸ್ನಾನಮಾಡುವುದರಿಂದ ಶಂಕರನು ಪ್ರೀತನಾಗಿ ಅವರನ್ನು ಅನುಗ್ರಹಿಸುವನು. ॥೨೧-೨೨॥

ಇಲ್ಲಿ 'ಮಣಿಕರ್ಣೀ' ಎಂಬ ಹೆಸರಿನ ಬೇರೊಂದು ಪುಣ್ಯತೀರ್ಥವಿರುವುದು. ಇದರಲ್ಲಿ ಮುಳುಗುಹಾಕುವುದರಿಂದ ವಿಶೇಷವಾದ ಪುಣ್ಯವುಂಟಾಗುವುದು. ಆ ತೀರ್ಥದ ಸಮೀಪದಲ್ಲಿರುವ ಬನ್ನೀಮರದ ಬುಡದಲ್ಲಿ ಶ್ರೇಷ್ಠರಾದ ಋಷಿಗಳನೇಕರು ತಪಸ್ಸು ಮಾಡುತ್ತಿರುವರು. ವಿಶ್ವಾಮಿತ್ರ, ಅಂಗಿರಸ್ಸು, ಧೌಮ್ಯ, ವಸಿಷ್ಠ, ಅಗಸ್ತ್ಯ ಇವರೇ ಮುಂತಾದ ಮಹರ್ಷಿಗಳು ಆ ಕ್ಷೇತ್ರದಲ್ಲಿ ವೇದಾರಣ್ಯಕ್ಕೆ ಅಧಿಪತಿಯೂ, ಪಾಪನಾಶಕನೂ ಆದ ಮಹಾದೇವನನ್ನು ಪೂಜಿಸಿ, ಶಾಂಭವ ಶ್ರೇಷ್ಠರೆನಿಸಿ ಅವರೆ

ಕಲ್ಯಾಣವೇಷಂ ದದೃಶೇ ಕುಂಭಜಸ್ತತ್ರ ಶಂಕರಂ ।
ತುಷ್ಟಾವ ಪರಿಪೂಜ್ಯೇಶಂ ಭಕ್ತಿನಮ್ರಕಕಂಧರಃ ॥೨೬॥

॥ ಅಗಸ್ತ್ಯ ಉವಾಚ ॥

ವೇದಾರಣ್ಯೇಶ ಶಂಭೋ ಶಿವ ತವ ಮಹಿಮಾ ಲಿಂಗಸಂಗತ್ಯತಾಂಗಂ
ಪ್ರಾಲೇಯಾಚಲಕನ್ಯಕಾಪರಿಲಸದ್ವಾಮಾಂಗಸಂಗಂ ಹರಂ ।
ಹಸ್ತೇ ಬಾಲಕುರಂಗಧಾರಕ ವಿಭೋ ಅರ್ಧೇಂದುಗಂಗಾಧರ
ವಾರಂ ವಾರಮಪಾರಪುಣ್ಯಫಲದಂ ದೃಷ್ಟ್ವಾಭಿತುಷ್ಟೋಽಸ್ಮ್ಯಹಂ ॥೨೭॥

ತ್ವತ್ಕ್ಷೇತ್ರೇ ನಿವಸಾಮಿ ಸೋಮಶಕಲಾಲಂಕಾರಮಸ್ತ ಪ್ರಭೋ
ಪಾದಾಬ್ಜಂ ಶರಣಂ ತವಾಸ್ಮಿ ಮಮ ಕಿಂ ಪ್ರಾಜ್ಯೇನ ರಾಜ್ಯೇನ ವಾ ।
ಕಾರುಣ್ಯಾರ್ಣವ ವೇದವೇದ್ಯ ಬೃಹದಾರಣ್ಯಸ್ತುತೋಽದ್ಯಾವ ಮಾಂ ॥೨೮॥

---

ಲ್ಲರೂ ಸಿದ್ಧಿಯನ್ನೂ ಮುಕ್ತಿಯನ್ನೂ ಸಹ ಪಡೆದಿರುವರು. ಈ ಮಹರ್ಷಿಗಳೆಲ್ಲರೂ ಭಸ್ಮ ರುದ್ರಾಕ್ಷಗಳನ್ನು ಧರಿಸಿ, ಶಿವಪಂಚಾಕ್ಷರ ಮತ್ತು ರುದ್ರಮಂತ್ರ ಇವುಗಳನ್ನು ಜಪಿಸುವುದರಲ್ಲಿ ಆದರವುಳ್ಳವರಾಗಿರುವರು. ॥೨೩-೨೪-೨೫॥

ವೇದಾರಣ್ಯದಲ್ಲಿ ಶಂಕರನ ಮಂಗಳವೇಷವನ್ನು ದರ್ಶನಮಾಡಿ ಈಶ್ವರನನ್ನು ಭಕ್ತಿಯಿಂದ ಪೂಜಿಸಿ, ಭಕ್ತಿಯಿಂದ ಬಾಗಿದ ತಲೆಯುಳ್ಳವನಾಗಿ ಆ ಮಹಾದೇವ ನನ್ನು ಇಂತು ಸ್ತೋತ್ರಮಾಡಿದನು. ॥೨೬॥

ವೇದಾರಣ್ಯೇಶ್ವರನಾದ ಶಂಭುವೇ, ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ, ನೆಲಸಿ, ಜಗನ್ಮಂಗಳಕರನೆನಿಸಿರುವನಾದ ನಿನ್ನ ಮಹಿಮೆಯು ಅಪಾರವಾದದ್ದು. ಶಿವಲಿಂಗಾಕಾರದಲ್ಲಿ ಪ್ರಪಂಚಕ್ಕೆ ನಿನ್ನ ಆಕಾರವನ್ನು ತೋರಿಸುತ್ತಿರುವೆ. ಎಡಭಾಗದ ಶರೀರದಲ್ಲಿ ಹಿಮವಂತನ ಮಗಳಾದ ಗೌರಿಯನ್ನು ಧರಿಸಿ ಶೋಭಿಸುತ್ತಿರುವೆ. ಭಕ್ತರ ಪಾಪಗಳನ್ನೆಲ್ಲಾ ನಾಶಮಾಡುತ್ತಿರುವೆ. ಕೈಯಲ್ಲಿ ಎಳೆಯ ಜಿಂಕೆಯನ್ನು ಹಿಡಿದಿರುವವನೂ, ಅರ್ಧಚಂದ್ರ ಮತ್ತು ಗಂಗಾನದಿಗಳನ್ನು ತಲೆಯಲ್ಲಿ ಧರಿಸಿರುವವನೂ, ಮತ್ತು ತನ್ನ ಭಕ್ತರಿಗೆ ಅಪರಿಮಿತವಾದ ಪುಣ್ಯಫಲಗಳನ್ನು ಕೊಡುವವನೂ ಆದ ನಿನ್ನ ದಿವ್ಯರೂಪವನ್ನು ಪದೇಪದೇ ದರ್ಶನಮಾಡಿ ಇಂದು ನಾನು ಸಂತುಷ್ಟನಾಗಿರುವೆನು. ॥೨೭॥

ಅರ್ಧಚಂದ್ರಶಕಲವನ್ನು ತಲೆಯಲ್ಲಿ ಅಲಂಕರಿಸಿಕೊಂಡಿರುವ ಪ್ರಭುವೇ, ಈ

॥ ಶ್ರೀ ಸ್ಕಂದ ಉವಾಚ ॥

**ಇತ್ಥಂ ಸಂಸ್ತುತಿಕಾನನೇ ಭಗವತೋ ಲಿಂಗಂ ಪ್ರತಿಷ್ಠಾಪಯ**
**ತ್ತತ್ರೈವಾತ್ರ ಕಹೋಲನಾಮುಕಮುನಿರ್ಲಿಂಗಂ ಶಿವಸ್ಯಾರ್ಚಯತ್ ।**
**ಸಿದ್ಧಾಃ ಕೇಚನ ಸಿದ್ಧಿಮಾಪುರಪರೇ ಸಿದ್ಧಾಶ್ರಮೇ ದಕ್ಷಿಣೇ**
**ಸ್ಥಾನೇ ವೇದವನೇಶ್ವರಸ್ಯ ಕೃಪಯಾ ಸಂಪೂರ್ಣಕಾಮಾಭವನ್ ॥೨೯॥**

**ವೇಣೂವಾದವಿಭೂಷಿಣೀ ಭಗವತೀ ಕೈವಲ್ಯವಿಶ್ರಾಣಿಕಾ**
**ಪದ್ಮಾಭಾ ಜಿತಮಾಣಿಕಾ ಶ್ರುತಿಸರೋರಾರಾಜಿಸಿದ್ಧಾಸಿಕಾ ।**
**ವೇದಾರಣ್ಯಮಹೇಶ್ವರಸ್ಯ ರಸಿಕಾ ಸಾ ಪಾತುಮಾಂ ಭಾಸಿಕಾ ॥೩೦॥**

---

ನಿನ್ನ ಕ್ಷೇತ್ರದಲ್ಲಿ ನಾನು ವಾಸಮಾಡುತ್ತಿರುವೆನು. ಅಲ್ಲದೇ ನಿನ್ನ ಅಡಿದಾವರೆಗಳಿಗೆ ಮರೆಬಿದ್ದಿರುವೆನು. ಪ್ರಭುವೇ, ನನಗೆ ಪ್ರಭೂತವಾದ ಧನಕನಕವಸ್ತುವಾಹನಭರಿತವಾದ ರಾಜ್ಯದಿಂದೇನು ಪ್ರಯೋಜನ? ದಯಾಸಮುದ್ರನೂ, ವೇದಗೋಚರನೂ, ಬೃಹದಾರಣ್ಯೋಪನಿಷತ್ತಿನಿಂದ ಸ್ತೋತ್ರಮಾಡಲ್ಪಟ್ಟವನೂ ಆದ ಸ್ವಾಮಿಯೇ, ನಿನ್ನನ್ನು ಮರೆಹೊಕ್ಕಿರುವ ನನ್ನನ್ನು ಈಗ ಕಾಪಾಡು, ಎಂದು ಅಗಸ್ತ್ಯಮುನಿಯು ಸ್ತೋತ್ರಮಾಡಿದನು. ॥೨೮॥

ಹೀಗೆ ಸ್ತುತಿಸುತ್ತಾ ಆ ಅಗಸ್ತ್ಯಮುನಿಯು ವೇದಾರಣ್ಯಕ್ಷೇತ್ರದಲ್ಲಿ ಭಗವಂತನಾದ ಶಿವನ ಲಿಂಗವೊಂದನ್ನು ಪ್ರತಿಷ್ಠೆಮಾಡಿದನು. ಅದೇ ವೇದಾರಣ್ಯದಲ್ಲಿ ಕಹೋಲನೆಂಬ ಹೆಸರಿನ ಮುನಿಯು ಮತ್ತೊಂದು ಶಿವಲಿಂಗವನ್ನು ಪ್ರತಿಷ್ಠಿಸಿ ಪೂಜಿಸಿದನು. ಇನ್ನಿತರ ಕೆಲವು ಸಿದ್ಧಪುರುಷರು ಆ ವೇದಾರಣ್ಯೇಶ್ವರನನ್ನು ಅರ್ಚನೆಮಾಡಿ ಸಿದ್ಧಿಪಡೆದರು. ಮತ್ತೆ ಕೆಲವರು ದಕ್ಷಿಣದಿಕ್ಕಿನಲ್ಲಿರುವ ಸಿದ್ಧಾಶ್ರಮಸ್ಥಾನದಲ್ಲಿ ಮಹಾದೇವನನ್ನು ಪೂಜೆಮಾಡಿ, ಅವನ ದಯೆಯಿಂದ, ಪೂರ್ಣಮನೋರಥರಾದರೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮುನಿಗಳಿಗೆ ತಿಳಿಸಿದನು. ॥೨೯॥

ಕೊಳಲನ್ನು ಬಾರಿಸುವುದರಲ್ಲಿ ಪಂಡಿತಳೂ, ಷಡ್ಗುಣೈಶ್ವರ್ಯಭರಿತಳೂ, ಮೋಕ್ಷವನ್ನು ಕೊಡುವವಳೂ, ತಾವರೆಯಂತೆ ಮೈಬಣ್ಣವುಳ್ಳವಳೂ, ಅಣಿಮಾದ್ಯಷ್ಟೈಶ್ವರ್ಯಗಳನ್ನು ಗೆದ್ದವಳೂ, ವೇದಾರಣ್ಯಕ್ಷೇತ್ರದಲ್ಲಿ ವೇದಸರೋವರದ ಸಮೀಪದಲ್ಲಿರುವ ಸಿದ್ಧಪುರುಷರೆಂಬ ಅಸ್ತ್ರಗಳಿಂದ ಶೋಭಿಸುತ್ತಿರುವಳೂ, ವೇದಾರಣ್ಯೇಶ್ವರನೆನಿಸಿರುವ ಮಹಾದೇವನ ಪ್ರೀತಿಯ ಪತ್ನಿಯೂ (ರಸಿಕಳೂ)

ವಿಘ್ನಾನಿ ತತ್ರ ವಸತಾಂ ಹರತಿ ಪ್ರಸಾದಾ
ತ್ಸೀದಜ್ಜನಾಹ್ಯತಿಪರೋ ವಸತೀಭವಕ್ತ್ರಃ ।
ಪಾಪಂ ಧುನೋತಿ ಸಕಲಂ ಶಿವಭಕ್ತಿಭಾಜಾಂ
ಕ್ಷೇತ್ರೋಪಸರ್ಗದನವಾರ್ಥಫಲಂ ಕರೋತಿ ॥೩೧॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ದಶಸ್ಥಾನಮಹಿಮಾವರ್ಣನಂ ನಾಮ ಚತುರ್ದಶೋಽಧ್ಯಾಯಃ

---

ಮತ್ತು ಜಾಜ್ವಲ್ಯಮಾನವಾದ ದಿವ್ಯದೇಹವುಳ್ಳವಳಾಗಿ ಶೋಭಿಸುತ್ತಿರುವವಳೂ ಆದ ಮಹಾದೇವಿಯು, ನನ್ನನ್ನು ಸದಾ ಕಾಪಾಡಲಿ. ॥೩೦॥

ಆ ವೇದಾರಣ್ಯದಲ್ಲಿ ನೆಲಸಿರುವ ಗಜಾನನನು ಆ ಕ್ಷೇತ್ರವಾಸಿಗಳ ವಿಘ್ನಗಳನ್ನೆಲ್ಲಾ ನಿವಾರಣೆಮಾಡುತ್ತಾ, ದುಃಖಿತರಾಗಿರುವ ಜನಗಳಮೇಲೆ ಅನುಗ್ರಹಮಾಡುವನಾಗಿ, ಶಿವಭಕ್ತಿಯುತರಾಗಿರುವ ಭಕ್ತರ ಸಕಲ ಪಾಪಗಳನ್ನೂ ಹೊಡೆದೋಡಿಸುವನಲ್ಲದೇ ಈ ಕ್ಷೇತ್ರವಾಸದಿಂದೊದಗಬಹುದಾದ ತೀರ್ಥಫಲಗಳನ್ನೆಲ್ಲಾ ಪರಿಪೂರ್ಣವಾಗಿ ಅನುಗ್ರಹಿಸುತ್ತಿರುವನು. ॥೩೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದಲ್ಲಿ ಉತ್ತರಾರ್ಧದಲ್ಲಿ
ಪ್ಲವೇಶಕ್ಷೇತ್ರವೇ ಮೊದಲಾದ ಹತ್ತು ಶಿವಸ್ಥಾನಗಳ ಮಹಿಮಾವರ್ಣನೆಯೆಂಬ
ಹದಿನಾಲ್ಕನೆಯ ಅಧ್ಯಾಯವು ಸಂಪೂರ್ಣವಾಯಿತು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಪಂಚದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಜಪ್ಯೇಶ್ವರಾತ್ತಥಾ ಪ್ರಾಚ್ಯಾಂ ದಿಶಿ ಶಂಭೋಃ ಸ್ಥಲಾನಿ ಚ ।
ಪ್ರಾಗುತ್ತರೇ ಚ ಮುನಯಸ್ತಿಷ್ಠಂತ್ಯೇವ ಪದೇ ಪದೇ ॥೧॥

ತೇಷು ಪುಣ್ಯಾನ್ಯಹಂ ವಚ್ಮಿ ಶೃಣುಧ್ವಂ ಮುನಯೋ ಗಣಾಃ ।
ಶ್ರೀಮನ್ನೃತ್ತಪುರಸ್ಥಾನಂ ಸ್ಥಾನಂ ಪಶುಪತೀಶ್ವರಂ ॥೨॥

ತದುತ್ತರೇ ಚ ಸೋಮೇಶಂ ಮಾರುತೇಶಂ ತು ಪುಣ್ಯದಂ ।
ತತ್ಪ್ರಾಚ್ಯಾಂ ಬಾಢಕಂ ಸ್ಥಾನಂ ವಾಲಿನಾ ಪರಿಪೂಜಿತಂ ॥೩॥

---

## ಹದಿನೈದನೆಯ ಅಧ್ಯಾಯ

ಜೈಗೀಷವ್ಯನೇ ಮೊದಲಾದ ಮಹರ್ಷಿಗಳಿರಾ ಕೇಳಿರಿ: – ಜಪ್ಯೇಶ್ವರಕ್ಷೇತ್ರದಿಂದ ಪೂರ್ವದಿಕ್ಕಿನಲ್ಲಿ ಅನೇಕ ಶಿವಕ್ಷೇತ್ರಗಳಿರುವುವು. ಆ ಕ್ಷೇತ್ರಗಳ ಪೂರ್ವ ಮತ್ತು ಉತ್ತರದಿಕ್ಕುಗಳಲ್ಲಿ ಅನೇಕ ಮುನಿಗಳು ಹೆಜ್ಜೆಹೆಜ್ಜೆಗೂ ವಾಸಮಾಡುತ್ತಿರುವರು. ಅವುಗಳಲ್ಲಿ ಪುಣ್ಯಕರಗಳಾದ ಕೆಲವು ಸ್ಥಾನಗಳನ್ನು ಮಾತ್ರ ಈಗ ಹೇಳುತ್ತೇನೆ. ಶ್ರೀಮನ್ನೃತ್ತಪುರಸ್ಥಾನ, ಪಶುಪತೀಶ್ವರಸ್ಥಾನ ಇವು ಅಲ್ಲಿನ ಪ್ರಸಿದ್ಧ ಕ್ಷೇತ್ರಗಳು. ॥೧-೨॥

ಆ ಕ್ಷೇತ್ರಗಳ ಉತ್ತರದಿಕ್ಕಿನಲ್ಲಿ ಸೋಮೇಶ್ವರ, ಪುಣ್ಯಪ್ರದವಾದ ಮಾರುತೇಶ್ವರಸ್ಥಾನಗಳಿರುವುವು. ಅವುಗಳಿಗೆ ಪೂರ್ವದಲ್ಲಿ ವಾಲಿಯಿಂದ ಹಿಂದೆ ಪೂಜಿಸಲ್ಪಟ್ಟ

ತತ್ರಾರಾಧ್ಯೇಶ್ವರಂ ವಾಲೀ ಸಪ್ತಸಾಗರಲಂಘನೇ ।
ಶಕ್ತಿಂ ಪ್ರಾಪೇಶ್ವರಚ್ಛಾಯಾಲಿಂಗಸ್ಯೈವ ಪ್ರಭಾವತಃ ॥೪॥
ತುಷ್ಟಾವೇಶಂ ತಥಾ ವಾಲೀ ಕಿಷ್ಕಿಂಧಾಪತಿರೀಶ್ವರಂ ॥೫॥

॥ ವಾಲ್ಯುವಾಚ ॥

ಹೇ ಭರ್ಗ ತ್ರಿಪುರಾಂತಕಾಂತಕರಿಪೋ ವಿಶ್ವೇಶ ವಿಶ್ವಾಧಿಕ
ಮಾಂ ಪಾಹೀಶ್ವರ ವಾನರಂ ಸದಯಯಾ ಕಾರುಣ್ಯಪೂರ್ಣೇಕ್ಷಣ ।
ತೇನಾಹಂ ಬಲವಾನ್ಸದೈವ ಭವಿತಾ ಚಾಲ್ಯೇಽಪ್ಯಹಂ ವೈಭವಃ
ಪ್ರಾಗ್ಜ್ಞಾನಾಮಿ ಹಿ ವೈಭವೋತ್ತಮಮತಿರ್ಧನ್ಯಃ ಕೃತಾರ್ಥೋ ಭುವಿ ॥೬॥

ಇತ್ಥಂ ಸಂಸ್ತುತ್ಯ ಕಪಿರಾಡಭವಚ್ಛಿವಭಾವಿತಃ ।
ತ್ರ್ಯಕ್ಷೋಽದಾತ್ಕಪಯೇ ಮುಕ್ತಿಸ್ಥಾನಂ ತತ್ಪ್ರೀತಿಕೃದ್ವಿಭೋಃ ॥೭॥

---

ಬಾಧಕವೆಂಬ ಪುಣ್ಯಸ್ಥಾನವಿರುವುದು. ಆ ಬಾಧಕಸ್ಥಾನದಲ್ಲಿ ಈಶ್ವರನನ್ನು ಪೂಜಿಸಿ, ವಾಲಿಯು ಏಳು ಸಮುದ್ರಗಳನ್ನೂ ಹಾರಬಲ್ಲ ಶಕ್ತಿಯನ್ನು ಆ ಛಾಯಾಲಿಂಗ ಸ್ವರೂಪಿಯಾದ ಮಹೇಶ್ವರನಿಂದ ಪಡೆದಿದ್ದನು. ಆವೇಳೆಯಲ್ಲಿ ಕಿಷ್ಕಿಂಧಾಪಟ್ಟಣಕ್ಕೆ ರಾಜನಾದ ವಾಲಿಯು ಹೀಗೆ ಈಶ್ವರನನ್ನು ಸ್ತೋತ್ರಮಾಡಿದನು. ॥೩-೪-೫॥

ಮನ್ಮಥ ಮತ್ತು ಯಮ ಮುಂತಾದವರನ್ನೆಲ್ಲಾ ನಾಶಮಾಡಿದವನೂ, ತ್ರಿಪುರಾಸುರಸೂದನನೂ, ಯಮವೈರಿಯೂ, ಜಗದೀಶ್ವರನೂ, ಸರ್ವೋತ್ಕೃಷ್ಟನೂ ಆದ ಈಶ್ವರನೇ, ದಯಾಪೂರ್ಣವಾದ ದೃಷ್ಟಿಯುಳ್ಳ ನೀನು ಕಪಿಯಾದ ನನ್ನನ್ನು ಕರುಣೆಯಿಂದ ಕಾಪಾಡು. ನಿನ್ನ ಈರೀತಿಯಾದ ಕರುಣಾದೃಷ್ಟಿಯನ್ನು ಹೊಂದಿದ ನಾನು ಬಲಶಾಲಿಯಾಗಿಯೂ, ವಿಶೇಷ ವೈಭವವುಳ್ಳವನಾಗಿಯೂ ಆಗುವೆನು. ದೇವ, ಮೊದಲು ನಿನ್ನ ಈ ವೈಭವದಿಂದ ಉತ್ತಮವಾದ ಬುದ್ಧಿಯುಳ್ಳವನೂ, ಧನ್ಯನೂ ಮತ್ತು ಕೃತಾರ್ಥನೂ ಎಂಬುದಾಗಿ ಪ್ರಪಂಚದಲ್ಲಿ ನಾನು ಎಲ್ಲರಿಂದಲೂ ತಿಳಿಯಲ್ಪಡುವೆನು. ॥೬॥

ಈ ರೀತಿ ಸ್ತೋತ್ರಮಾಡಿ, ಆ ಕಪಿರಾಜನಾದ ವಾಲಿಯು ಶಿವನ ಅನುಗ್ರಹ ವನ್ನು ಪಡೆದು ದಿವ್ಯಬಲಯುತನಾದನು. ಆ ಮುಕ್ಕಣ್ಣನು ಸಂತುಷ್ಟನಾಗಿ ಆ ವಾಲಿಗೆ ನಿತ್ಯಸುಖಪ್ರದವಾದ ತನ್ನ ಸ್ಥಾನವನ್ನು ಕೊಟ್ಟನು. ದೇವರಾಜೇಶ್ವರಸ್ಥಲ

ದೇವರಾಜೇಶ್ವರಂ ಪ್ರಾಚ್ಯಾಂ ಕಾವೇರ್ಯಾ ದಕ್ಷಿಣೇ ತಟೇ ।
ದೇವರಾಜಃ ಪುರಾಹಲ್ಯಾಸಂಗಮೋಽದ್ಭುತಪಾತಕಾತ್ ॥೮॥

ವಿಮುಕ್ತಸ್ತತ್ರ ಸಂಪೂಜ್ಯ ಭಗವಂತಂ ಪಿನಾಕಿನಂ ।
ತುಷ್ಟಾವೈವಂ ಸಹಸ್ರಾಕ್ಷೋ ತ್ರ್ಯಕ್ಷಮೀಶಾನಮವ್ಯಯಂ ॥೯॥

॥ ದೇವೇಂದ್ರ ಉವಾಚ ॥

ತ್ರ್ಯಕ್ಷಾಕ್ಷಯ್ಯಫಲಪ್ರದೋಕ್ಷವಹನ ಸ್ವಾಮಿನ್ದಯೇಕ್ಷ ಪ್ರಭೋ
ವೀಕ್ಷಾ ಶಿಕ್ಷಿತಮನ್ಮಥಾಂಧಕರಿಪೋ ದಕ್ಷಾಧ್ವರೇ ಶಿಕ್ಷಕ ।
ಕಕ್ಷಾಣಾಂ ವಸತೇ ಗರೋತ್ಥಸುಮಹಾಜ್ವಾಲಾದಿಭಕ್ಷಾಯ ತೇ
ದೇವಾನ್ಪಾಲಯ ತೇ ಸದಾಶಿವ ಸದಾ ಕರ್ತ್ರೇ ನಮಸ್ತೇ ನಮಃ ॥೧೦॥

ಸ್ತುವತಸ್ತತ್ರ ದೇವೇಶೋ ದೇವರಾಜಸ್ಯ ಪಾತಕಂ ।
ಅಹಲ್ಯಾಸಂಗಮಾನೀತಂ ನಾಶಯಾಮಾಸ ಶಂಕರಃ ॥೧೧॥

---

ವೆಂಬ ಮತ್ತೊಂದು ಕ್ಷೇತ್ರವಿರುವುದು. ಅಲ್ಲಿ ಹಿಂದೆ ದೇವೇಂದ್ರನು ಗೌತಮಪತ್ನಿಯಾದ ಅಹಲ್ಯೆಯ ಸಂಗಮದಿಂದ ಉಂಟಾದ ಶಾಪದಿಂದ ಬಿಡುಗಡೆ ಹೊಂದಲು, ಪಿನಾಕಪಾಣಿಯೂ, ಭಗವಂತನೂ ನಾಶರಹಿತನೂ ಮುಕ್ಕಣ್ಣನೂ ಆದ ಮಹೇಶ್ವರನನ್ನು ಭಕ್ತಿಪೂರ್ವಕವಾಗಿ ಪೂಜೆಮಾಡಿ ಇಂತು ಸ್ತೋತ್ರಮಾಡಿದನು. ||೭-೮-೯||

ತ್ರಿಲೋಚನನೂ, ನಾಶರಹಿತವಾದ ಫಲವನ್ನು ಕೊಡುವವನೂ, ವೃಷಭವಾಹನನೂ, ದಯಾದೃಷ್ಟಿಯುಳ್ಳವನೂ ಆದ ಸ್ವಾಮಿಯೇ! ಸರ್ವಸಮರ್ಥನಾದ ನೀನು ದೃಷ್ಟಿಮಾತ್ರದಿಂದ ಮನ್ಮಥ ಮತ್ತು ಅಂಧಕಾಸುರ ಇವರನ್ನು ಭಸ್ಮಮಾಡಿರುವೆ. ಯಜ್ಞದಲ್ಲಿ ಅಹಂಕಾರದಿಂದ ತನಗೆ ಹವಿಸ್ಸು ಕೊಡದೇ ಯಾಗಮಾಡುತ್ತಿದ್ದ ದಕ್ಷಬ್ರಹ್ಮನನ್ನು ಸಂಹರಿಸಿರುವೆ; ದೇವಮನುಜಾದಿ ಸಕಲ ದೇಹಗಳಲ್ಲಿಯೂ ಸರ್ವಾಂತರ್ಯಾಮಿಯಾಗಿ ವಾಸಮಾಡುತ್ತಿರುವೆ. ಸಮುದ್ರಮಥನಕಾಲದಲ್ಲುದ್ಭವಿಸಿದ ಮಹಾಭಯಂಕರವಾದ ಕಾಲಕೂಟವಿಷವನ್ನೇ ಭಕ್ಷಿಸಿರುವೆ. ದೇವತೆಗಳನ್ನು ಯಾವಾಗಲೂ ಕಾಪಾಡುತ್ತಾ ಸಕಲ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಕರ್ತೃವಾಗಿರುವ ನಿನಗೆ ನಮಸ್ಕಾರಮಾಡುತ್ತೇನೆ ||೧೦||

ಹೀಗೆ ದೇವತಾಧಿಪನಾದ ಮಹಾದೇವನನ್ನು ದೇವೇಂದ್ರನು ಸ್ತೋತ್ರಮಾಡಲು, ಸಂತುಷ್ಟನಾದ ದೇವದೇವನು ಅಹಲ್ಯಾಸಂಗಮದಿಂದುಂಟಾಗಿದ್ದ

**ತತ್ಪ್ರಾಚ್ಯಾಮಷ್ಟದಶಕಂ ಲಿಂಗಸ್ಥಾನಂ ವಿಮುಕ್ತಿದಂ ।**
**ತೀರ್ಥಲಿಂಗಂ ಕವೇರಾಣಾಂ ಪಾಪಭಂಗಕರಂ ನೃಣಾಂ ॥೧೨॥**

**ರಾಘವೇಣಾರ್ಚಿತಂ ಲಿಂಗಂ ರಾಮೇಶ್ವರಸಮಾಹ್ವಯಂ ।**
**ಹನೂಮತಾರ್ಚಿತಂ ಲಿಂಗಂ ದೇವರ್ಷಿಗಣಪಾರ್ಚಿತಂ ॥೧೩॥**

॥ ರಾಘವ ಉವಾಚ ॥

**ದೇವೇಶಂ ತತ್ರ ಲಿಂಗೇಷು ತುಷ್ಟಾವ ಚ ಮಹೇಶ್ವರಂ ॥೧೪॥**

॥ ಹನೂಮಾನುವಾಚ ॥

**ಶಂಭೋ ಪನ್ನಗಹಾರ ಸನ್ಮೃಗಧರ ಸ್ವಾಮಿನ್ ತ್ರಿನೇತ್ರಾವ ಮಾಂ ।**
**ಕೈಲಾಸಾಚಲವಾಸ ಶಾಶ್ವತವಿಭೋ ಭಕ್ತಂ ಹಿ ಮಾಂ ಪಾಲಯ ॥೧೫॥**

---

ಇಂದ್ರನ ಪಾಪವನ್ನು ಪರಿಹರಿಸಿದನು. ಅಲ್ಲಿಂದ ಪೂರ್ವದಿಕ್ಕಿನಲ್ಲಿ ಮೋಕ್ಷಪ್ರದವಾದ ಹದಿನೆಂಟು ಶಿವಲಿಂಗಸ್ಥಾನಗಳಿರುವುವು. ಆ ಕಾವೇರೀನದಿಯ ದಡದಲ್ಲಿರುವ ಲಿಂಗಗಳೂ ಮತ್ತು ತೀರ್ಥಗಳೂ ಮಾನವರ ಸಕಲ ಪಾಪಗಳನ್ನೂ ನಾಶಮಾಡುವುದರಲ್ಲಿ ಸಮರ್ಥವಾಗಿರುವುವು. ॥೧೧-೧೨॥

ರಾಮೇಶ್ವರದಲ್ಲಿ ಹಿಂದೆ ರಾಮಚಂದ್ರನು ರಾಮೇಶ್ವರಸಂಜ್ಞಕವಾದ ಶಿವಲಿಂಗವನ್ನು ಪೂಜಿಸಿದನು. ಹನುಮಂತನೂ ಮತ್ತು ದೇವತೆಗಳೂ ಋಷಿಗಳೂ ಇತರ ಗಣಗಳೂ ಸಹ ಈ ರಾಮೇಶ್ವರಲಿಂಗವನ್ನು ಭಕ್ತಿಯಿಂದಾರಾಧಿಸಿದರು. ಆ ರಾಮಚಂದ್ರನು ತಾನು ರಾಮೇಶ್ವರನನ್ನು ಪೂಜಿಸಿದ ಮೇಲೆ ಲಿಂಗಾಂತರ್ಗತನಾಗಿರುವ ದೇವತೋತ್ತಮನಾದ ಮಹೇಶ್ವರನನ್ನು ಹೀಗೆ ಸ್ತೋತ್ರಮಾಡಿದನು. ॥೧೩-೧೪॥

ಸರ್ಪವನ್ನೇ ಹಾರವನ್ನಾಗಿ ಮಾಡಿಕೊಂಡಿರುವವನೂ, ಶ್ರೇಷ್ಠವಾದ ಜಿಂಕೆಯನ್ನು ಹಸ್ತದಲ್ಲಿ ಧರಿಸಿರುವವನೂ, ಮೂರುಕಣ್ಣುಗಳಿಂದ ಶೋಭಿಸುತ್ತಿರುವವನೂ, ಕೈಲಾಸಪರ್ವತದಲ್ಲಿ ವಾಸಮಾಡುತ್ತಿರುವವನೂ, ಶಾಶ್ವತನೂ, ವಿಭುವೂ ಆದ ಮಹಾದೇವನೇ! ಭಕ್ತನಾದ ನನ್ನನ್ನು ಕಾಪಾಡು. ॥೧೫॥

ಆ ಸಮಯದಲ್ಲಿ ಆಂಜನೇಯನು ರಾಮೇಶ್ವರನನ್ನು ಈರೀತಿ ಸ್ತೋತ್ರಮಾಡಿದನು. ಮಂಗಳಕರನೂ, ತ್ರಿಪುರರನ್ನು ನಾಶಮಾಡಿದವನೂ, ಮನ್ಮಥ

(ದಂಡಕಂ)

**ಶಂಕರ ಪುರಹರ ಭರ್ಗ ಭವಾಂತಕ ಘೋರತರಾಂತಕದರ್ಪವಿನಾಶಕ ಸರ್ಪಪರೀವೃತಚಾರುಕಲೇಬರ, ಯಕ್ಷಪತಿಸ್ತುತ, ದಕ್ಷಮಖಾಪಹ, ವೀಕ್ಷಣಶಿಕ್ಷಿತಮನ್ಮಥ, ಭೋ, ಪಾಹಿ, ವಿಭೋ, ಕಮಲಾಪತಿಪೂಜಿತ, ಪದ್ಮಭವಸ್ತುತ ದೇವದಯಾಪರ ಶಂಕರ ಚಂದ್ರಕಲಾಧರ ಹರ ಹರ ಹರ ಪುರಹರ ಹರವೇದಶಿರಸ್ಸ್ತುತ ಪಾಹಿ ಸದಾಶಿವ ದೇವ ನಮಸ್ತೇ॥೧೬॥**

॥ ದೇವರ್ಷಯ ಊಚುಃ ॥

**ಕಂದರ್ಪದರ್ಪಶಮನಾಂತಕ ಸಂಪ್ರಹಾರ**
**ಚಂದ್ರಾರ್ಕವಹ್ನಿನಯನಾತುಲವಿಕ್ರಮಾಢ್ಯ ।**
**ವೈದ್ಯೋತ್ತಮಾನಲಸುಫಾಲವಿಶಸ್ತಕಾಲ**
**ಕಾಲೋರುದಭ್ರಕಲಿತಾಲಕ ತೇ ನಮಸ್ತೇ ॥೧೭॥**

---

ಯಮ ಮುಂತಾದವರ ಅಹಂಕಾರವನ್ನು ಮುರಿದವನೂ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಸಂಹರಿಸುವವನೂ, ಅತಿ ಭಯಂಕರನಾದ ಯಮಧರ್ಮನ ಅಹಂಕಾರವನ್ನು ಮಾರ್ಕಂಡೇಯನ ರಕ್ಷಣಾಸಮಯದಲ್ಲಿ ನಾಶಮಾಡಿದವನೂ, ಹಾವಿನಿಂದ ಸುತ್ತುವರಿಯಲ್ಪಟ್ಟ ಸುಂದರವಾದ ಶರೀರವುಳ್ಳವನೂ, ಯಕ್ಷೇಶ್ವರ ನಾದ ಕುಬೇರನಿಂದ ಸ್ತೋತ್ರಮಾಡಲ್ಪಟ್ಟವನೂ, ದಕ್ಷಬ್ರಹ್ಮನ ಯಾಗವನ್ನು ಧ್ವಂಸ ಮಾಡಿದವನೂ, ದರ್ಶನಮಾತ್ರದಿಂದ ಮನ್ಮಥನನ್ನು ಶಿಕ್ಷಿಸಿದವನೂ, ಆದ ಸ್ವಾಮಿಯೇ! ನನ್ನನ್ನು ಕಾಪಾಡು; ಇಚ್ಛಾಮಾತ್ರದಿಂದ ನಾನಾರೂಪಗಳನ್ನಾಶ್ರಯಿಸುವವನೂ, ಲಕ್ಷ್ಮೀಕಾಂತನಾದ ನಾರಾಯಣನಿಂದ ಪೂಜಿಸಲ್ಪಟ್ಟವನೂ, ಬ್ರಹ್ಮನಿಂದ ಸ್ತುತಿಸಲ್ಪಟ್ಟವನೂ, ಕ್ರೀಡಾದಿ ಗುಣಸಂಪನ್ನನೂ, ಕರುಣಾಮಯನೂ, ಸುಖಕರನೂ, ಚಂದ್ರನ ಕಲೆಗಳನ್ನು ಧರಿಸಿದವನೂ, ಭಕ್ತರ ಪಾಪಗಳನ್ನೆಲ್ಲಾ ನಾಶ ಮಾಡುವವನೂ, ದುಷ್ಟರನ್ನು ಯಾವಾಗಲೂ ಶಿಕ್ಷಿಸುವವನೂ, ತ್ರಿಪುರಾಸುರ ಸೂದನನೂ, ವೇದಾಂತಗಳಿಂದ ಯಾವಾಗಲೂ ಸ್ತೋತ್ರಮಾಡಲ್ಪಡುವವನೂ ಆದ ಸದಾಶಿವ ದೇವನೇ! ನನ್ನನ್ನು ಕಾಪಾಡು; ನಿನಗೆ ನಮಸ್ಕಾರಮಾಡುವೆನು. ॥೧೬॥

ಆಗಲೇ ದೇವತೆಗಳೂ ಮತ್ತು ಇತರ ಋಷಿಗಳೂ ರಾಮೇಶ್ವರಲಿಂಗವನ್ನು ಈರೀತಿ ಸ್ತೋತ್ರಮಾಡಿದರು.—ಮನ್ಮಥನ ಅಹಂಕಾರವನ್ನಿಳಿಸಿದವನೇ, ಯಮನನ್ನು ನಿಗ್ರಹಿಸಿದವನೇ, ಚಂದ್ರ, ಸೂರ್ಯ ಮತ್ತು ಅಗ್ನಿ ಇವರನ್ನು ನೇತ್ರದಲ್ಲಿ

ತತ್ಪ್ರಾಚ್ಯಾಂ ಕ್ಷೀರಿಣೀಶಾನಂ ಸ್ಥಾನಮಸ್ತಿ ಚಿರಂತನಂ ।
ಕ್ಷೀರತೀರ್ಥಂ ಚ ತತ್ರಾಸ್ತಿ ಶಿವಸ್ಯಾಗ್ರೇ ಶಿವಪ್ರದಂ ॥೧೮॥

ತಮಾರಾಧ್ಯಾವಸತ್ಪಶ್ಚಾತ್ಪಾಪನಾಶಾಖ್ಯಕೋ ಮುನಿಃ ।
ತುಷ್ಟಾವೇಶಂ ಕ್ಷೀರಿಣೀಶಂ ಪ್ರಾಂಜಲಿಃ ಪಾಪನಾಶಕಃ ॥೧೯॥

॥ ಪಾಪನಾಶಕ ಉವಾಚ ॥

ಶಂಭೋ ತ್ವಂ ಗರಕಂಧರಃ ಪಶುಪತೇ ದೇವೈಃ ಸ್ತುತೋಽಸಿ ಪ್ರಭೋ
ವಿಶ್ವಾಶಾಸ್ಯ ದಯಾಂ ವಿಧೇಹಿ ಭಗವನ್ಪಾಹಿ ಪ್ರಭೋ ಮಾಮವ ।
ಪಾಂಡ್ಯೇಶಸ್ಯ ವಿಮೋಚಕೋಽಸಿ ಚ ಮುನೇಃ ಕೋಪಾತ್ತು ಭಲ್ಲಾಕಿನಃ
ಪಾಹಿ ತ್ವಂ ಧವಲಸ್ಮಿತಃ ಪಶುಪತೇ ನಿತ್ಯಂ ನಮಸ್ತೇ ನಮಃ ॥೨೦॥

---

ಹೊಂದಿರುವವನೇ, ಅಪರಿಮಿತವಾದ ಪರಾಕ್ರಮವುಳ್ಳ ಸ್ವಾಮಿಯೇ, ಆದಿಪುರುಷನೂ, ವೈದ್ಯೋತ್ತಮನೂ, ಹಣೆಯಲ್ಲಿ ಅಗ್ನಿಯನ್ನು ಧರಿಸಿರುವವನೂ, ಕಾಲನನ್ನು ಶಿಕ್ಷಿಸಿದವನೂ; ಕಪ್ಪಾಗಿ ವಿಶೇಷವಾಗಿ ಶೋಭಿಸುತ್ತಿರುವ ಮುಂಗುರುಳುಗಳುಳ್ಳವನೂ ಆದ ನಿನಗೆ ನಮಸ್ಕಾರಮಾಡುವೆನು. ॥೧೭॥

ಆ ರಾಮೇಶ್ವರಕ್ಷೇತ್ರಕ್ಕಿಂತಲೂ ಪೂರ್ವದಿಕ್ಕಿನಲ್ಲಿ ಪುರಾತನವಾದ ಕ್ಷೀರಿಣೀಶ್ವರನ ಸ್ಥಾನವಿರುವುದು. ಆ ಶಿವನ ಮುಂಭಾಗದಲ್ಲಿ ಮಂಗಳಕರವಾದ ಕ್ಷೀರತೀರ್ಥವಿರುವುದು. ಹಿಂದೆ ಪಾಪನಾಶಕಸಂಜ್ಞಕನಾದ ಮುನಿಯೊಬ್ಬನು ಆ ಕ್ಷೇತ್ರದಲ್ಲಿ ಕ್ಷೀರಿಣೀಶ್ವರನನ್ನು ಪೂಜೆಮಾಡುತ್ತಾ ವಾಸಮಾಡಿಕೊಂಡಿದ್ದು ಪರಮೇಶ್ವರನನ್ನು ಕೈಮುಗಿದು ಹೀಗೆ ಸ್ತೋತ್ರಮಾಡುತ್ತಿದ್ದನು. ॥೧೮-೧೯॥

ಶಂಭುವೇ! ನೀನು ವಿಷಕಂಠನು, ಸಕಲಜೀವರಾಶಿಗಳಿಗೂ ಒಡೆಯನು, ಪ್ರಭುವೇ, ನೀನು ಅನೇಕಮಂದಿ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟಿರುವೆ, ಸಕಲ ಪ್ರಪಂಚವನ್ನೂ ಶಿಕ್ಷಿಸುವ ಭಗವಂತನೇ, ಪ್ರಭುವಾದ ನೀನು ನನ್ನಲ್ಲಿ ದಯೆಯಿಟ್ಟು ಕಾಪಾಡು, ಭಲ್ಲಾಕಿಮುನಿಯ ಮೇಲಿನ ಕೋಪದಿಂದ ಪಾಂಡ್ಯೇಶ್ವರನನ್ನು ಬಿಡುಗಡೆ ಮಾಡಿರುವೆ. ಶುಭ್ರವಾದ ಮಂದಹಾಸವುಳ್ಳ ಪಶುಪತಿಯೇ, ನಿತ್ಯವೂ ನಿನಗೆ ನಮಸ್ಕಾರಮಾಡುವೆನು; ನನ್ನನ್ನು ಕಾಪಾಡು. ॥೨೦॥

ತದಾರ್ಯೋ ಮಾಧವೀಶೋ ಹಿ ಮಾಧವೀಗುಲ್ಮಮಧ್ಯಗಃ ।
ಕ್ಷಯಿಷ್ಣುನಾ ಚ ಸೋಮೇನ ತತ್ರ ಸಂಪೂಜಿತೋ ಹರಃ ॥೨೧॥

ಸಂಪೂಜ್ಯ ಮಾಧವೀಶಾನಂ ಸೋಮಃ ಸೋಮಮಭೀಷ್ಟವತ್ ॥೨೨॥

॥ ಸೋಮ ಉವಾಚ ॥

ಹೇ ಸ್ವಾಮಿ ಸೋಮಾಸ್ತುತ ಸ್ವಾಮಿ ಸೋಮ
ಮೌಲೇ ಉಮಾಕಾಂತ ವಿಭೋ ಪ್ರಸೀದ ।
ಭೂಮಾಸಿ ಭಾಮಾರ್ಧಧೃತಾರ್ಗಕಾಸಿ
ಭಿಷಕ್ತಮೋಽಸಿ ಪ್ರಭವೋಽಸಿ ತೇ ನಮಃ ॥೨೩॥

ತತ್ಸ್ತುತ್ಯಾ ತುಷ್ಟಹೃದಯಃ ಅರೋಗಿಣಮಥಾಕರೋತ್ ।
ಕಾವೇರ್ಯಾ ಉತ್ತರೇ ತೀರೇ ಸಾಕ್ಷೀನಾಥಾಭಿಧಂ ಸ್ಥಲಂ ॥೨೪॥

ದ್ರೋಣೇನಾರಾಧಿತಸ್ತತ್ರ ಪುತ್ರಾರ್ಥಂ ಸಾಕ್ಷಿನಾಯಕಃ ।
ಪೂಜಿತಸ್ತು ಶಿವಸ್ತತ್ರ ದದೌ ಪುತ್ರಂ ಧನುರ್ಧರಂ ॥೨೫॥

---

ಮಾಧವೀಗುಲ್ಮಲತಾಮಧ್ಯದಲ್ಲಿ ನೆಲಸಿರುವ ಪೂಜ್ಯನಾದ ಆ ಮಾಧವೀಶ್ವರಸಂಜ್ಞಕನಾದ ಪರಮೇಶ್ವರನನ್ನು ದಕ್ಷಬ್ರಹ್ಮನ ಶಾಪದಿಂದ ಕ್ಷಯಹೊಂದುತ್ತಿದ್ದ ಚಂದ್ರನು ಭಕ್ತಿಯಿಂದ ಪೂಜಿಸಿ, ಶಾಪಪರಿಹಾರಕ್ಕಾಗಿ ಉಮಾರಮಣನನ್ನು ಇಂತು ಸ್ತೋತ್ರಮಾಡಿದನು. ॥೨೧-೨೨॥

ಎಲೈ ಅರ್ಧಚಂದ್ರನಿಂದ ಸ್ತೋತ್ರಮಾಡಲ್ಪಟ್ಟು ಅವನನ್ನೇ ತನ್ನ ತಲೆಯಲ್ಲಿ ಧರಿಸಿಕೊಂಡಿರುವ ಸ್ವಾಮಿಯೇ, ಉಮಾರಮಣನೂ, ವಿಭುವೂ ಆದ ನೀನು ಪ್ರಸನ್ನನಾಗು ; ತೇಜಸ್ಸಿಗೆ ಆಶ್ರಯನೂ ಅರ್ಧನಾರೀಶ್ವರನೂ (ನಾರಿಯ ಅರ್ಧದೇಹವನ್ನು ಧರಿಸಿರುವವನೂ) ವೈದ್ಯರಲ್ಲಿ ಶ್ರೇಷ್ಠನೂ, ಸಕಲ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಕನೂ ಆಗಿರುವ ನಿನಗೆ ನಮಸ್ಕಾರಮಾಡುವೆನೆಂದು ಚಂದ್ರನು ಸ್ತೋತ್ರಮಾಡಿದನು. ॥೨೩॥

ಹೀಗೆ ಆ ಚಂದ್ರನ ಸ್ತೋತ್ರದಿಂದ ಸಂತುಷ್ಟಮನಸ್ಕನಾದ ಮಹಾದೇವನು ಅವನಿಗುಂಟಾಗಿದ್ದ ಕ್ಷಯರೋಗವು ನಾಶವಾಗುವಂತೆ ಅನುಗ್ರಹಿಸಿದನು. ಕಾವೇರೀ ನದಿಯ ಉತ್ತರದ ದಡದಲ್ಲಿ 'ಸಾಕ್ಷಿನಾಥ' ಸಂಜ್ಞಕವಾದ ಒಂದು ಪುಣ್ಯಸ್ಥಳವಿರು

ಅಶ್ವತ್ಥಾಮಕನಾಮಾನಂ ಸ್ತುತಸ್ತತ್ರೇಶ್ವರೋ ಮುದಾ ॥೨೬॥

॥ ದ್ರೋಣ ಉವಾಚ ॥

ಶಂಭೋ ಜಗತ್ಸಾಕ್ಷಿ ತ್ರಿಲೋಚನಾದ್ಯ
ವೈದ್ಯೋಽಸಿ ಭೇದ್ಯೋಽಸಿ ಚ ಸರ್ವಗೋಽಸಿ ।
ಪತಿಸ್ತ್ವಮೇವಾಸಿ ಮಹೇಶ್ವರೋಽಸಿ
ದೇವಾದಿದೇವೋಽಸಿ ಸದಾ ನಮಸ್ತೇ ॥೨೭॥

ತತ್ಪಶ್ಚಾತ್ತ್ರಿದಿವೇಶಾಖ್ಯೇ ದರ್ಶನಾದಿಷ್ಟಕಾಮದೇ ।
ಸ್ಮರಣಾದೇವ ಸರ್ವೇಷಾಂ ಶಿವರಾತ್ರ್ಯಾಂ ವಿಶೇಷತಃ ॥೨೮॥

ಪ್ರಾದಾದ್ವ್ಯಾಧಾಯ ಮುಕ್ತಿಂ ಚ ಬಿಲ್ವಪತ್ರಾರ್ಚನಾಚ್ಛಿವಃ ।
ವ್ಯಾಧೇನಾತ್ರ ಸ್ಥಿತೋ ದೇವಸ್ತತ್ರ ತಸ್ಮೈ ವಿಮುಕ್ತಿದಃ ॥೨೯॥

---

ವುದು. ಹಿಂದೆ ದ್ರೋಣಾಚಾರ್ಯನು ಪುತ್ರಸಂತಾನಕ್ಕೋಸ್ಕರ ಅಲ್ಲಿ ಸಾಕ್ಷಿನಾಯಕನನ್ನು ಪೂಜೆಮಾಡಿದನು. ಈ ಪೂಜೆಯಾದ ಮೇಲೆ ದ್ರೋಣನು ಸಾಕ್ಷಿನಾಯಕನನ್ನು ಹೀಗೆ ಸ್ತೋತ್ರಮಾಡಿದನು. ಇದರಿಂದ ಅವನಿಗೆ ಮಹೇಶ್ವರನು ತೃಪ್ತನಾಗಿ ಧನುರ್ಧರನಾದ ಅಶ್ವತ್ಥಾಮನೆಂಬ ಮಗನನ್ನು ಸಂತೋಷದಿಂದ ಅನುಗ್ರಹಿಸಿದನು. ॥೨೪-೨೫-೨೬॥

ಜಗತ್ಸಾಕ್ಷಿಸಂಜ್ಞಕನಾದ ಶಂಭುವೇ, ಮುಕ್ಕಣ್ಣನೂ, ಆದಿಪುರುಷನೂ, ವೈದ್ಯನೂ, ದುಷ್ಟರನ್ನು ಭೇದಿಸುವವನೂ ಮತ್ತು ಸರ್ವವ್ಯಾಪಿಯೂ ನೀನಾಗಿರುವೆ. ಚರಾಚರಾತ್ಮಕವಾದ ಜಗತ್ತಿಗೆಲ್ಲಾ ನೀನೇ ಒಡೆಯನಾಗಿರುವೆ. ಸಕಲೈಶ್ವರ್ಯ ಭರಿತನೂ, ದೇವತೆಗಳನ್ನೆಲ್ಲಾ ತನ್ನ ಅಧೀನದಲ್ಲಿಟ್ಟುಕೊಂಡಿರುವವನೂ ಆದ ನಿನಗೆ ನಮಸ್ಕಾರಮಾಡುವೆನು. ॥೨೭॥

ಆ ಜಗತ್ಸಾಕ್ಷಿಕ್ಷೇತ್ರಕ್ಕೆ ಪಶ್ಚಿಮದಿಕ್ಕಿನಲ್ಲಿ ದರ್ಶನಮಾತ್ರದಿಂದಲೇ ಸಕಲ ಇಷ್ಟಾರ್ಥಗಳನ್ನೂ ಕೊಡುವ ತ್ರಿದಿವೇಶಕ್ಷೇತ್ರವಿರುವುದು. ಶಿವರಾತ್ರಿಯ ದಿನ ವಿಶೇಷವಾದ ಸ್ಮರಣಮಾತ್ರದಿಂದಲೇ ಎಲ್ಲರಿಗೂ ಸಕಲ ಇಷ್ಟಾರ್ಥಗಳನ್ನೂ ಈ ಕ್ಷೇತ್ರವು ಉಂಟುಮಾಡುವುದು. ಹಿಂದೆ ಈ ಕ್ಷೇತ್ರದಲ್ಲಿ ಬಿಲ್ವದಳಗಳಿಂದ ತನ್ನನ್ನು ಪೂಜೆ ಮಾಡಿದ ಬೇಡನಿಗೆ ಆ ಪರಶಿವನು ಮುಕ್ತಿಯನ್ನು ಕರುಣಿಸಿದನು ಮೋಕ್ಷಪ್ರದ

ಅನ್ಯಾಧಿನೇ ಪಶುಪತೇ ಭಗಣೇಶಚೂಡ
ಆನ್ಯಾಧಿನೇ ಹರ ಮಹೇಶ ಪಿನಾಕಪಾಣೇ ।
ಪಾಹಿ ತ್ವಮಾದ್ಯ ಭಗವನ್ನಿಗಮಾಂತವೇದ್ಯ
ಆಲಾದ್ಯಸಾರ್ಥ ಭವಸಾಗರಕರ್ಣಧಾರ ॥೩೦॥

॥ ಸ್ಕಂದ ಉವಾಚ ॥

ಇತ್ಥಂ ಸ್ಥಾನವರೇಷು ದೇವಮುನಿಭಿಃ ಸಂಪೂಜಿತಃ ಶಂಕರಃ
ತೇಷಾಂ ಭಕ್ತಿಮತಾಂ ಪ್ರಸೀದತಿ ಸದಾ ಸಂಪೂರಯನ್ ಸ್ವೇಪ್ಸಿತಂ ।
ಪಾರಾವಾರಭವೋರುಸಾಗರ ಪರೀವಾರೋರುಪಾರೇಕ್ಷಕಃ
ದೇವೋ ಭಕ್ತಸುಭಾಷಿತಾಂತರಧರೋ ವಿಶ್ವೇಶ್ವರಃ ಪಾತು ನಃ ॥೩೧॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಅನೇಕ ಶಿವಕ್ಷೇತ್ರ
ವೈಭವ ಕಥನಂ ನಾಮ ಪಂಚದಶೋಽಧ್ಯಾಯಃ

---

ನಾದ ಆ ದೇವನನ್ನು ಆ ಬೇಡನು ಇದೇ ಕ್ಷೇತ್ರದಲ್ಲಿ ನಿಂತು ಇಂತು ಸ್ತೋತ್ರ ಮಾಡಿದನು. ॥೨೮-೨೯॥

ರೋಗರಹಿತನೂ, ಪಶುಗಳೆನಿಸಿದ ಸಕಲ ಪ್ರಾಣಿಗಳಿಗೂ ಒಡೆಯನೂ, ನಕ್ಷತ್ರಸಮೂಹಗಳಿಗೆಲ್ಲಾ ಒಡೆಯನಾದ ಚಂದ್ರನನ್ನೇ ತಲೆಯಲ್ಲಿ ಧರಿಸಿರುವವನೂ, ವ್ಯಾಧರಸಮೂಹಗಳಿಗೆಲ್ಲಾ ಸ್ವಾಮಿಯೂ, ಪಾಪನಾಶಕನೂ, ಪೂರ್ಣೈಶ್ವರ್ಯ ಸಂಪನ್ನನೂ, ಪಿನಾಕವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವವನೂ, ಭಗವಂತನೂ, ವೇದಾಂತವೇದ್ಯನೂ, ಪಾಪರಾಶಿಯನ್ನು ಒಂದೆಡೆ ಬಂಧಿಸಿರುವವನೂ, ಸಂಸಾರ ವೆಂಬ ಸಾಗರವನ್ನು ದಾಟಿಸಲು ಅತ್ಯಂತ ಸಮರ್ಥನೂ ಆಗಿರುವ ಸ್ವಾಮಿಯೇ, ನನ್ನನ್ನು ಕಾಪಾಡು. ॥೩೦॥

ಈ ರೀತಿ ಶ್ರೇಷ್ಠವಾದ ಈ ಸ್ಥಾನಗಳಲ್ಲಿ ದೇವತೆಗಳಿಂದಲೂ ಮುನಿಗಳಿಂದಲೂ ಪೂಜಿಸಲ್ಪಟ್ಟ ಆ ಶಂಕರನು ತನ್ನ ಭಕ್ತರ ಮೇಲೆ ಅನುಗ್ರಹಮಾಡುತ್ತಾ ಅವರವರಿಗೆ ಬೇಕಾದ ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುತ್ತಿರುವನು ಕೊನೆಮೊದಲಿಲ್ಲದ ಈ ಸಂಸಾರವೆಂಬ ಘೋರಸಾಗರವನ್ನು ದಾಟಿಸುವುದರಲ್ಲಿ ಅದರ ಕೊನೆಯಭಾಗ

ವನ್ನು ಕಾಣುವವನೂ, ಕೈಲಾಸಪರ್ವತದಲ್ಲಿ ವಿಹರಿಸುತ್ತಿರುವವನೂಭಕ್ತಿಯಿಂದ ತನ್ನನ್ನು ಪೂಜಿಸುವವರಿಗೆ ಹಿತನುಡಿಗಳನ್ನುಪದೇಶಿಸಿ, ಅವರನ್ನು ಕಾಪಾಡುವವನೂ ಆದ ವಿಶ್ವೇಶ್ವರನು ನಮ್ಮನ್ನು ಸಲಹಲಿ; ಎಂದು ಕುಮಾರಸ್ವಾಮಿಯು ಸ್ತೋತ್ರಮಾಡಿದನು. ||೩೧||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಅನೇಕ ಶಿವಕ್ಷೇತ್ರಗಳ ವೈಭವಗಳನ್ನು ತಿಳಿಸುವಿಕೆಯೆಂಬ ಹದಿನೈದನೆಯ ಅಧ್ಯಾಯುವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಷೋಡಶೋಽಧ್ಯಾಯಃ

॥ ಸ್ಕಂದ ಉವಾಚ ॥

ಕ್ಷೀರಿಣೀವನಮಾಗ್ನೇಯ್ಯಾಂ ದೇವಃ ಕಲ್ಯಾಣಸುಂದರಃ ।
ಪುಷ್ಪೇಶ್ವರಃ ಪುಷ್ಪವನೇ ಪುಷ್ಪದಂತೇನ ಪೂಜಿತಃ ॥೧॥

ತಸ್ಮೈ ತುಷ್ಟೋ ಮಹಾದೇವಃ ಪ್ರಸನ್ನಸ್ತತ್ರ ವೈ ಸ್ಥಲೇ ।
ಪುಷ್ಪೇಶ್ವರಾಗ್ರೇ ತೇನೈವ ಸ್ತುತಶ್ಚೈವ ಪ್ರಸಾದಿತಃ ॥೨॥

ನಮಸ್ತೇ ನಿವೇಷ್ಯಾಯ ಶರ್ವಾಯ ಪುಷ್ಪೈಃ
ಪ್ರಪೂಜ್ಯಾಯ ಇಜ್ಯಾಯ ವಿಪ್ರೈಶ್ಚ ಸತ್ರೈಃ ।

---

## ಹದಿನಾರನೆಯ ಅಧ್ಯಾಯ

ಪುನಃ ಕುಮಾರಸ್ವಾಮಿಯು ಮುಂದುವರಿದು ಜೈಗೀಷವ್ಯಾದಿಮುನಿಗಳಿಗೆ ಕ್ಷೇತ್ರಗಳವಿಷಯವನ್ನು ಈರೀತಿ ಹೇಳಿದನು. ತ್ರಿದಿವೇಶಕ್ಷೇತ್ರದ ಆಗ್ನೆಯದಿಕ್ಕಿನಲ್ಲಿ ಕ್ಷೀರಿಣೀವನವೆಂಬ ಸ್ಥಳದಲ್ಲಿ ಕಲ್ಯಾಣಸುಂದರನೆಂಬ ಹೆಸರಿನಿಂದ ಪರಶಿವನು ನೆಲಸಿರುವನು. ಹಾಗೆಯೇ ಪುಷ್ಪವನದಲ್ಲಿ ಪುಷ್ಪೇಶ್ವರನೆಂಬ ಹೆಸರಿನಿಂದಲೂ ಪ್ರಖ್ಯಾತನಾಗಿರುವನು. ಆ ಪುಷ್ಪವನದಲ್ಲಿರುವ ಪುಷ್ಪೇಶ್ವರನನ್ನು ಪುಷ್ಪದಂತನು ಪೂಜಿಸಲು ಅದರಿಂದ ಸಂತುಷ್ಟನಾದ ಮಹಾದೇವನು ಅವನಿಗೆ ಪ್ರಸನ್ನನಾದನು. ಆಗ ಆ ಪುಷ್ಪದಂತನು ಮಹಾದೇವನ ಅನುಗ್ರಹಕ್ಕೆ ಪಾತ್ರನಾದಮೇಲೆ ಅವನ ಮುಂದೆಯೇ ನಿಂತು ಈರೀತಿ ಸ್ತೋತ್ರಮಾಡಿದನು. ॥೧-೨॥

ನಿವೇಷ್ಯನೂ (ಹಿಮಜಲದಲ್ಲಿ ಉದ್ಭವಿಸುವವನು) ಪ್ರಳಯಕಾಲದಲ್ಲಿ ಸಕಲ ಪ್ರಾಣಿಗಳನ್ನೂ ನಾಶಮಾಡುವವನೂ, ಹೂವಿನಿಂದ ಪೂಜಿಸಲ್ಪಡುವವನೂ,

ಮಹಾಶೇಷಭೂಷಾಯ ಪೂಷೇಂದುವಹ್ನಿ-
ಜ್ವಲಚ್ಚಾರುನೇತ್ರಾಯ ಪಾರ್ಥಪ್ರಿಯಾಯ ॥೩॥

ಇತ್ಥಂ ಪುಷ್ಪವನೋತ್ಕಂಠಂ ಪುಷ್ಪದಂತೇನ ಪೂಜಿತಃ ।
ಕಿಂಪೂರುಷಾಧಿಪತ್ಯಂ ಚ ದದೌ ತಸ್ಮೈ ತ್ರಿಲೋಚನಃ ॥೪॥

ತತ್ಪ್ರಾಚ್ಯಾಂ ಸ್ಥಾನಮುತ್ಕೃಷ್ಟಂ ಮುನಿದೇವಾರ್ಚಿತಂ ಪುರಾ ।
ಕಲ್ಯಾಣಸುಂದರೇಶತ್ವಂ ನಾಮ್ನಾ ದೇವೀ ಚ ಸುಂದರೀ ॥೫॥

ಪುರಾ ಸುಘೋರಕಲ್ಪೇ ವೈ ಮೇರೋಶ್ಚ ಶಿಖರೇ ಗಣಾಃ ।
ಈಶಾನಸ್ಥಾಯಿಕೈಲಾಸೇ ಸಹಸ್ರಶಿಖರೈರ್ಯುತೇ ॥೬॥

ದಕ್ಷಿಣೇ ತತ್ರ ಭಕ್ತಾನಾಂ ಶಾಂಭವಾನಾಂ ನಿವಾಸಿನೇ ।
ನಾರದೋಪ್ಯಾಯಯೌ ತತ್ರ ಪಾತಾಲಾಚ್ಚ ಮುನೀಶ್ವರಾಃ ॥೭॥

---

ಬ್ರಾಹ್ಮಣರಿಂದಲೂ ಯಾಗಗಳಿಂದಲೂ ಪೂಜ್ಯನೂ, ದೊಡ್ಡ ಸರ್ಪವನ್ನೇ ಅಲಂಕರಿಸಿ ಕೊಂಡಿರುವವನೂ, ಸೂರ್ಯ, ಚಂದ್ರ, ಮತ್ತು ಅಗ್ನಿ ಈ ಮೂರು ಮಂದಿಯಿಂದ ಪ್ರಜ್ವಲಿಸುತ್ತಿರುವ ಮನೋಹರವಾದ ಮೂರುಕಣ್ಣುಗಳುಳ್ಳವನೂ, ಅರ್ಜುನನಿಗೆ ಪ್ರೀತಿಪಾತ್ರನೂ ಆದ ನಿನಗೆ ನಮಸ್ಕಾರಮಾಡುತ್ತೇನೆ. ॥೩॥

ಹೀಗೆ ಪುಷ್ಪವನದಲ್ಲಿ ಪುಷ್ಪದಂತನಿಂದ ವಿಶೇಷವಾಗಿ ಪೂಜಿಸಲ್ಪಟ್ಟ ಮಹಾದೇವನು ಸಂತೃಪ್ತನಾಗಿ ಆ ಪುಷ್ಪದಂತನಿಗೆ ಕಿಂಪುರುಷರಾಜ್ಯಪದವಿಯನ್ನು ಕೊಟ್ಟನು. ಆ ಪುಷ್ಪವನಕ್ಕೆ ಪೂರ್ವದಲ್ಲಿ ಹಿಂದೆ ಸಕಲಮುನಿಗಳು ಮತ್ತು ದೇವತೆಗಳಿಂದ ಪೂಜಿಸಲ್ಪಟ್ಟ ಒಂದುಕ್ಷೇತ್ರವಿರುವುದು. ಅಲ್ಲಿ ಕಲ್ಯಾಣಸುಂದರೇಶನೆಂಬ ಹೆಸರಿನಿಂದ ಮಹಾದೇವನೂ, 'ಸುಂದರೀ' ಎಂಬಹೆಸರಿನಿಂದ ಅಂಬಿಕೆಯೂ ನೆಲಸಿರುವರು. ॥೪-೫॥

ಹಿಂದೆ ಸುಘೋರನಾಮಕವಾದ ಕಲ್ಪದಲ್ಲಿ ಮೇರುಪರ್ವತದ ಶಿಖರದಲ್ಲಿ ವಾಸಮಾಡುವ ದೇವಗಣಗಳೆಲ್ಲರೂ, ಸಾವಿರಶಿಖರಗಳಿಂದ ಶೋಭಿಸುತ್ತಾ ಈಶಾನನಿಗೆ ನೆಲೆಯಾಗಿ ದಕ್ಷಿಣಕೈಲಾಸಪರ್ವತಕ್ಕೆ (ಶಾಂಭವಭಕ್ತರ ವಾಸಸ್ಥಾನ) ನಾರದಮುನಿಯೂ ಪಾತಾಲಲೋಕದಿಂದ ಇತರ ಮುನಿಪುಂಗವರೂ ಬಂದುಸೇರಿದರು. ॥೬-೭॥

ಈಶಾನಂ ದದೃಶೇ ತತ್ರ ಗಣೈಶ್ಚ ಪರಿಚಾರಿತಂ ।
ತ್ರಿನೇತ್ರಂ ನೀಲಕಂಠಂ ಚ ಚಂದ್ರಾಪೀಡಂ ಚ ದಿಕ್ಪತಿಂ ॥೮॥

ಭಸ್ಮತ್ರಿಪುಂಡ್ರರುದ್ರಾಕ್ಷಮಾಲಾಕಲಿತಕಂಧರಂ ।
ಭುವಸ್ಥಲಾಗತೈರ್ಭಕ್ತೈರ್ಭಸ್ಮರುದ್ರಾಕ್ಷಧಾರಿಭಿಃ ॥೯॥

ಶಿವಲಿಂಗಾರ್ಚಕೈಃ ಶೈವೈಃ ಶಿವಕ್ಷೇತ್ರನಿವಾಸಿಭಿಃ ।
ರುದ್ರಪಂಚಾಕ್ಷರಪರೈಃ ರುದ್ರಲಿಂಗನಿರೀಕ್ಷಕೈಃ ॥೧೦॥

ಪ್ರದೋಷೇ ಸೋಮವಾರೇಷು ಭೂತಾಯಾಮಷ್ಟಮೀಷು ಚ ।
ಶಿವಕೈಂಕರ್ಯಕೃದ್ಭಿಶ್ಚ ಬ್ರಹ್ಮಕ್ಷತ್ರವಿಶೋಽಂಘ್ರಿಜೈಃ ॥೧೧॥

ದೇಹಾಂತಶಿವಭಕ್ತ್ಯೈವ ಶಿವಲೋಕಸಮಾಹ್ವಯೇ ।
ಮೇರೌ ದಕ್ಷಿಣಕೈಲಾಸೇ ಸಹಸ್ರಶಿಖರೈರ್ಯುತೇ । ॥೧೨॥

ಸಮಾಸೀನಂ ಮುದೇಶಾನಂ ಶಿವವರ್ಗಗಣೈರ್ಯುತಂ ।
ಶಿವಾಜ್ಞಯಾ ಭಕ್ತಪೂಜಾಂ ಕುರ್ವಂತೋ ನಾರದೋಽಭ್ಯಗಾತ್ ॥೧೩॥

---

ಅವರೆಲ್ಲರೂ ಆ ದಕ್ಷಿಣಕೈಲಾಸದಲ್ಲಿ ಶಿವಗಣಗಳಿಂದ ಸೇವಿಸಲ್ಪಡುತ್ತಿರುವ ಮುಕ್ಕಣ್ಣನೂ, ವಿಷಭಕ್ಷಣದಿಂದ ಕಪ್ಪಾದ ಕೊರಳುಳ್ಳವನೂ, ಚಂದ್ರಶೇಖರನೂ, ದಿಕ್ಕುಗಳಿಗೆ ಅಧಿಪತಿಯೂ, ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳಿಂದ ಶೋಭಿಸುತ್ತಿರುವ ಕುತ್ತಿಗೆಯುಳ್ಳವನೂ ಆದ ಮಹೇಶ್ವರನನ್ನು ನೋಡಿದರು. ॥೮-೯॥

ಇವರ ಜೊತೆಗೆ ಭೂಲೋಕದಿಂದ ಬಂದಿದ್ದ ಭಸ್ಮರುದ್ರಾಕ್ಷಧಾರಿಗಳಾದ ಶೈವಶ್ರೇಷ್ಠರೂ ಇದ್ದರು ಅವರೆಲ್ಲರೂ ಶಿವಲಿಂಗಪೂಜೆಮಾಡುತ್ತಾ ಯಾವಾಗಲೂ ಶಿವಕ್ಷೇತ್ರಗಳಲ್ಲಿ ವಾಸಮಾಡುವವರಾಗಿ ಶೈವಧರ್ಮವನ್ನವಲಂಬಿಸಿದ್ದರು. ರುದ್ರಮಂತ್ರ, ಶಿವಪಂಚಾಕ್ಷರ ಈ ಮಂತ್ರಗಳನ್ನು ಜಪಿಸುವುದರಲ್ಲಿ ನಿರತರೂ, ಶಿವಲಿಂಗನಿರೀಕ್ಷಣೆ ಮಾಡುವವರೂ, ಪ್ರದೋಷ, ಸೋಮವಾರ, ಚತುರ್ದಶೀತಿಥಿ ಮತ್ತು ಅಷ್ಟಮೀತಿಥಿಗಳಲ್ಲಿ ಶಿವನ ಅರ್ಚನೆ ಮಾಡುವವರೂ ಆದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತುಶೂದ್ರ ಈ ಚಾತುರ್ವರ್ಣ್ಯದವರೂ ಅಲ್ಲಿ ಬಂದು ನೆರೆದಿದ್ದರು.॥೧೦-೧೧॥

ಈ ಶರೀರತ್ಯಾಗ ಮಾಡುವವರೆಗೂ ಶಿವಭಕ್ತಿಯುಕ್ತರಾಗಿರುವ ಈ ನಾಲ್ಕು ವರ್ಣದವರೂ, ಶಿವಲೋಕವೆಂದು ಹೆಸರುಳ್ಳ ಮೇರುಪರ್ವತದಲ್ಲಿ ಅಂದರೆ ಸಾವಿರ

॥ ಶ್ರೀ ಸ್ಕಂದ ಉವಾಚ ॥

ಈಶಾನ ತ್ವಂ ದಿಕ್ಪತಿಷು ಭಾಸಿ ನಿತ್ಯಂ ಶಿವಾಜ್ಞಯಾ ।
ಶಾಂಭವಾನಾಂ ಪೂಜಕೋಽಸಿ ಧನ್ಯಸ್ತ್ವಂ ಶಿವಪೂಜಕಃ ॥೧೪॥

ತತೋ ದಕ್ಷಿಣಕೈಲಾಸೇ ಮಹಾಕೈಲಾಸಸನ್ನಿಭೇ ।
ಸಹಸ್ರಶಿಖರಸ್ಥಾನೇ ದಿವ್ಯಲಿಂಗಪರೀವೃತೇ ॥೧೫॥

ಶಿವಸಂಪೂಜನಾದೇವ ಪ್ರಾಪ್ತೋಽಸಿ ಸುಮಹತ್ಪದಂ ।
ಉತ್ತರಾಶಾಪತಿಸ್ತ್ವದ್ಯ ಧನದೋ ನಿತ್ಯತಃ ಸಖಾ ॥೧೬॥

ಏತಾದೃಶಂ ಮಹದ್ಭಾಗ್ಯಂ ದಿಕ್ಪತೀಷು ನ ದೃಶ್ಯತೇ ।
ಕಿಂತ್ವೈಕಂ ಚಿತ್ರಮುತ್ಕೃಷ್ಟಂ ಪಾತಾಲಸ್ಯ ಗತೋಽಸ್ಮ್ಯಹಂ ॥೧೭॥

ವಾಯುನಾ ಚಾಮುನಾ ನಿತ್ಯಂ ಸ್ಪರ್ಧತೇ ನಾಗರಾಡಯಂ ।
ಶೇಷೋ ಶೇಷಫಣೀಂದ್ರೇಷು ಸ್ಥಿತೇಷು ಪ್ರೋಕ್ತವಾನ್ವಚಃ ॥೧೮॥

---

ಶಿಖರಗಳಿಂದ ಕೂಡಿದ ದಕ್ಷಿಣಕೈಲಾಸಕ್ಕೆ ಬಂದರು. ಶಿವಗಣಗಳ ಗುಂಪಿನೊಡನೆ ಕೂಡಿ, ಆ ಪರಶಿವನ ಅಪ್ಪಣೆಯಿಂದ ಶಾಂಭವಶ್ರೇಷ್ಠರನ್ನು ಸಂತೋಷದಿಂದ ಪೂಜಿಸುತ್ತಿರುವ ಈಶಾನನ ಸಮೀಪಕ್ಕೆ ನಾರದನು ಹೋದನು. ||೧೨-೧೩||

ಹಾಗೆ ನಾರದಮುನಿಯು ಈಶಾನನ ಸಮೀಪಕ್ಕೆ ಬಂದು ಈಶಾನನನ್ನು ಕುರಿತು, ಓ ಈಶಾನದೇವ, ದಿಕ್ಪಾಲಕರ ಮಧ್ಯದಲ್ಲಿ ಪರಶಿವನ ಅಪ್ಪಣೆಯಿಂದ ನೀನು ಪ್ರಕಾಶಿಸುತ್ತಿರುವೆ. ನಿತ್ಯವೂ ಶಿವಪೂಜಾನಿರತನಾದ ನೀನು ಶಂಭುವಿನ ಭಕ್ತರನ್ನು ಪೂಜೆಮಾಡುತ್ತಾ ಧನ್ಯನೆನಿಸಿರುವೆ. ಮಹಾಕೈಲಾಸಪರ್ವತಕ್ಕೆ ಸಮಾನ ವಾಗಿ ಸಹಸ್ರ ಶಿಖರಗಳಿಂದಲೂ, ಅನೇಕ ದಿವ್ಯ ಶಿವಲಿಂಗಗಳಿಂದಲೂ, ಯುಕ್ತವಾಗಿ ರುವ ಈ ದಕ್ಷಿಣಕೈಲಾಸದಲ್ಲಿ ಶಿವನನ್ನು ಪೂಜೆಮಾಡಿದುದರಿಂದಲೇ ಇಂತಹ ಉತ್ತಮವಾದ ಪದವಿಯನ್ನು ನೀನು ಪಡೆದಿರುವೆ. ಉತ್ತರದಿಕ್ಕಿಗೆ ಒಡೆಯನಾದ ಕುಬೇರನು ನಿತ್ಯವೂ ನಿನಗೆ ಮಿತ್ರನಾಗಿರುವನು. ||೧೪-೧೫-೧೬||

ಇಂತಹ ಉತ್ತಮವಾದ ಮಹಾಭಾಗವು ಇತರ ಮತ್ತಾವ ದಿಕ್ಪಾಲಕರಲ್ಲಿಯೂ ಕಾಣುವುದಿಲ್ಲ. ಓ ಈಶಾನನೇ, ಆದರೆ ಅದ್ಭುತವೂ ಶ್ರೇಷ್ಠವೂ ಆದ ಒಂದು ವಿಷಯವನ್ನು ಹೇಳುವೆನು ಕೇಳು, ನಾನು ಈಗ ಪಾತಾಳಲೋಕಕ್ಕೆ ಹೋಗಿದ್ದೆ.

ಮಾಂ ದೃಷ್ಟ್ವಾಭ್ಯರ್ಚ್ಯ ಹೃಷ್ಟಾತ್ಮಾ ಮಾಮುವಾಚ ಸ ನಾಗರಾಟ್ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಮನಾಃ ಪರಂ ॥೧೯॥

॥ ಶೇಷ ಉವಾಚ ॥

ವಿಶೇಷಾದಾಗತೋಽಸ್ಯತ್ರ ಚಿರಾಯ ತ್ವಂ ಹಿ ನಾರದ ।
ದೃಷ್ಟಂ ಕಿಂ ವಾ ತ್ವಯಾಶ್ಚರ್ಯಂ ದೇವಲೋಕೇಷು ಸತ್ತಮ ॥೨೦॥

ಧನ್ಯಸ್ತ್ವಂ ಸರ್ವಮಿತ್ರೋಽಸಿ ನೇದೃಶೋ ಮುನಿಸತ್ತಮಃ ।
ಕಿಂತ್ವೇಕಂ ಹೃದ್ಗತಂ ಮೇಽದ್ಯ ಚಿರಾಯ ಹೃದಿ ಗೋಪ್ಯತಾಂ ॥೨೧॥

ಪಾತಾಲೇ ಹಾಟಕೇಶಾರ್ಚಾಪ್ರಭಾವೇನೈವ ನಾರದ ।
ಪಾತಾಲಸ್ಥಾ ಯತಃ ಸರ್ವೇ ಭೋಗಿನೋ ಭೋಗಸಂಯುತಾಃ ॥೨೨॥

ಗಣಯಾಮೋ ವಯಂ ನೈವ ದಿವಸ್ಥಾನಮರಾನಪಿ ।
ಫಣಾಸಹಸ್ರೈರ್ದೇವೇಶಂ ಪಶ್ಯಾಮಿ ಸ್ತೌಮಿ ಶಂಕರಂ ॥೨೩॥

---

ಸರ್ಪರಾಜನಾದ ಆದಿಶೇಷನು ಈ ವಾಯುವಿನೊಡನೆ ನಿತ್ಯವೂ ಸ್ಪರ್ಧೆಗೈಯುತ್ತಿರುವನು. ಇತರ ಸರ್ಪರಾಜರೆಲ್ಲಾ ಇದ್ದಾಗ ಆ ಶೇಷನು, ನಾನು ಬಂದದ್ದನ್ನು ಕಂಡು ಸಂತುಷ್ಟನಾಗಿ ನನ್ನನ್ನು ಪೂಜಿಸಿ ಹೀಗೆ ನುಡಿದನು. ಅದನ್ನು ನಿನಗೆ ತಿಳಿಸುವೆನು. ಸಾವಧಾನವಾದ ನೆಟ್ಟಮನಸ್ಸಿನಿಂದ ಕೇಳುವನಾಗು. ||೧೭-೧೮-೧೯||

ಎಲೈ ನಾರದಮುನಿಯೇ, ಅಪೂರ್ವವಾಗಿ ಬಹುಕಾಲದಿಂದೀಚೆಗೆ ನೀನು ಇಲ್ಲಿಗೆ ಬಂದಿರುವೆ; ಅಯ್ಯ ಶ್ರೇಷ್ಠನೇ, ನೀನು ದೇವಲೋಕಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸುವಾಗ ಅಲ್ಲಲ್ಲಿ ಕಂಡ ಆಶ್ಚರ್ಯ ಸಂಗತಿಯೇನು? ಸಕಲರಿಗೂ ಸ್ನೇಹಿತನಾದ ನೀನೇ ಧನ್ಯನು. ಮುನಿಶ್ರೇಷ್ಠನಾದ ನಿನ್ನಂತಹವನನ್ನು ನಾನೆಲ್ಲಿಯೂ ಕಾಣೆನು. ಅಯ್ಯ ಮುನಿಪುಂಗವನೇ, ನನ್ನ ಹೃದಯದಲ್ಲಡಗಿರುವ ಒಂದು ವಿಶೇಷವನ್ನು ನಿನಗೆ ತಿಳಿಸುವೆನು. ಆದನ್ನು ಕೊಂಚಕಾಲ ನಿನ್ನಲ್ಲಿ ಗುಟ್ಟಾಗಿ ಮನಸ್ಸಿನಲ್ಲಿಟ್ಟಿರು. ||೨೦-೨೧||

ಅಯ್ಯ ನಾರದಮುನಿಯೇ, ಪಾತಾಳಲೋಕದಲ್ಲಿ ಸುವರ್ಣಮಯನಾದ ಹಾಟಕೇಶ್ವರನ ಪೂಜಾಪ್ರಭಾವದಿಂದಲೇ ಈ ಪಾತಾಳಲೋಕವಾಸಿಗಳಾದ ಸರ್ಪಗಳೆಲ್ಲವೂ ಸಕಲ ಭೋಗಸಂಪನ್ನರಾಗಿ ವಿರಾಜಿಸುತ್ತಿರುವರು. ಇಂತಹ ದಿವ್ಯಭೋಗ

ಮದಂಗಂ ಸ್ವಾಂಗಭೂಷಾಯೈ ಕಲ್ಪಯಾಮಾಸ ಶಂಕರಃ ।
ಮಮಾಂಗತಲ್ಪವೈಕುಂಠೇ ಶೇತೇನಂದಾಯು ವೈ ಹರಿಃ ॥೨೪॥

ಮತ್ಪಾರಣಾಭಿಭೂತಾಸ್ತೇ ತುಲ್ಯಾಃ ಕಿಮು ಸಮೀರಣಾಃ ।
ಪಂಚಾಶತ್ಕೋಟಿಪೃಥಿವೀ ನದನದ್ಯಾದಿ ಸಾಗರಾಃ ॥೨೫॥

ಸಹಸ್ರಶಿರಸಾಂ ಮಧ್ಯೇ ಏಕಸರ್ಷಪವತ್ಸ್ಥಿತಾಃ ।
ಶಿವಪದಾಂಬುಜಾರ್ಚಾತೋ ಈದೃಗ್ಭಾಗ್ಯಬಲಂ ಮಮ ॥೨೬॥

ಸಖಾಸೀತಿ ಮಯೋಕ್ತಂ ತೇ ಪ್ರಶಂಸಾ ನಾತ್ಮನೋಚಿತಾ ।
ಏವಂ ರಹಸ್ಯೇ ಮಾಂ ವೋಢುಮುಕ್ತವಾನ್ವಾಯುಧಿಕ್ಕೃತಿಂ ॥೨೭॥

ಏತದೇವ ಹಿ ಪಾತಾಲೇ ದೃಷ್ಟವಾನಸ್ಮಿ ವಾದ್ಭುತಂ ।
ಈಶಾನಃ ಶಂಸತಿ ತದಾ ಶ್ರುತ್ವಾ ನಾರದಭಾಷಿತಂ ॥೨೮॥

---

ಸಂಪನ್ನರಾಗಿರುವ ನಾವು ಸ್ವರ್ಗವಾಸಿಗಳಾದ ದೇವತೆಗಳನ್ನು ಗಣನೆಮಾಡುವುದಿಲ್ಲ. ಸಾವಿರ ಹೆಡೆಗಳಿಂದ ನಾನು ಆ ದೇವತೋತ್ತಮನಾದ ಶಂಕರನನ್ನು ನೋಡುತ್ತಾ ಸ್ತೋತ್ರಮಾಡುತ್ತಿರುವೆನು. ॥೨೨-೨೩॥

ನನ್ನ ಈ ದೇಹವನ್ನು ತನ್ನ ದೇಹದ ಅಲಂಕಾರಕ್ಕೋಸ್ಕರ ಶಂಕರನು ಆಭರಣವನ್ನಾಗಿ ಮಾಡಿಕೊಂಡು ಉಪಯೋಗಿಸುತ್ತಿರುವನು. ನನ್ನ ದೇಹವನ್ನೇ ಸುಪ್ಪತ್ತಿಗೆಯನ್ನಾಗಿ ರಚಿಸಿಕೊಂಡು ವೈಕುಂಠದಲ್ಲಿ ಆನಂದದಿಂದ ವಿಷ್ಣುವು ಮಲಗಿ ನಿದ್ರಿಸುತ್ತಿರುವನು. ಆ ವಾಯುವಾದರೋ ನಿತ್ಯವೂ ನನಗೆ ಆಹಾರರೂಪವಾಗಿರುವನು. ಆದ್ದರಿಂದ ಆ ವಾಯುವು ನನಗೆ ಸಮಾನವಾಗುವುದೆಂತು? ಐವತ್ತುಕೋಟಿ ನದ, ನದಿ ಮತ್ತು ಸಾಗರ ಮುಂತಾದವುಗಳೆಲ್ಲವೂ ನನ್ನ ಈ ಸಾವಿರ ತಲೆಗಳ ಮಧ್ಯದಲ್ಲಿ ಒಂದು ಸಾಸುವೆ ಕಾಳಿನಂತಿರುವುವು. ಅಯ್ಯ ನಾರದಮುನಿಯೇ, ಆ ಪರಶಿವನ ಪಾದಕಮಲಪೂಜೆಯಿಂದ ನನಗೆ ಇಷ್ಟೊಂದು ಭಾಗ್ಯವೂ ಮತ್ತು ಬಲವೂ ಉಂಟಾಗಿರುವುದು. ॥೨೪-೨೫-೨೬॥

ಅಯ್ಯ ನಾರದನೇ, ನೀನು ನನ್ನ ಸ್ನೇಹಿತನೆಂದು ನಾನಿಷ್ಟು ನಿನಗೆ ಹೇಳಿರುವೆನಲ್ಲದೆ, ಇದರಲ್ಲಿ ಆತ್ಮಪ್ರಶಂಸೆಯೇ ಮುಖ್ಯವಾಗಿರುವುದೆಂದು ಭಾವಿಸಬೇಡ; ಎಂಬುದಾಗಿ ಆದಿಶೇಷನು ನನಗೆ ರಹಸ್ಯವನ್ನು ಹೇಳುವ ನೆಪದಲ್ಲಿ ವಾಯುವನ್ನು

ವಾಯುಃ ಕೋಪಪರೀತಾತ್ಮಾ ನಾರದಂ ಪ್ರತ್ಯಭಾಷತ ॥೨೯॥

॥ ವಾಯುರುವಾಚ ॥

ಶೇಷ ಏವ ಬಲೀ ಲೋಕೇ ಶಿವಪಾದಾಂಬುಜಾರ್ಚಕಃ।
ನಾನ್ಯೋ ದೇವೇಷು ಮುನಿಷು ಗಣೇಷು ಶಿವಸಕ್ತಧೀಃ ॥೩೦॥

ತತ್ಕುಕ್ಷಿಪೂರಣಾಯಾಲಮಹಂ ಯಾಮಿ ಶಿವಾಜ್ಞಯಾ ।
ಶಿವಾಜ್ಞಯಾ ಜಗತ್ಸರ್ವಂ ಬ್ರಹ್ಮಾ ಸೃಜತಿ ಪಾತ್ಯಪಿ ॥೩೧॥

ವಿಷ್ಣುಶ್ಚಾತ್ರಾಂತಿಮೋ ಕಾಲೇ ಈಶಾನೋಽಯಂ ಹರತ್ಯಪಿ ।
ಇಂದ್ರಸ್ತ್ರಿವಿಷ್ಟಪಂ ಪಾತಿ ವಿಶ್ವಸ್ಯ ಮರುತಾಂ ಗಣೈಃ ॥೩೨॥

ಉದೇತಿ ಭಾನುರಿಂದುಶ್ಚ ಹವ್ಯಂ ವಹತಿ ಪಾವಕಃ ।
ದಿಶಾಂ ಪಾಲಾಃ ಶಿವಾಜ್ಞಾತೋ ಪಾಲಯಂತಿ ಚರಾಚರಂ ॥೩೩॥

---

ಧಿಕ್ಕಾರಮಾಡಿದನು. ಓ ಈಶಾನನೇ, ಈ ರೀತಿ ನಾನು ಪಾತಾಳಲೋಕವಲ್ಲಿ ಅದ್ಭುತ ಸಮಾಚಾರವನ್ನು ಕಂಡಿರುವೆನೆಂದು ಈಶಾನನಿಗೆ ನಾರದಮುನಿಯು ಹೇಳುತ್ತಿರಲು ಆ ನಾರದಮುನಿಯ ಮಾತುಗಳನ್ನು ಕೇಳಿ ವಾಯುವು ಅಲ್ಲಿದ್ದ ಕೋಪದಿಂದ ಕಿಡಿಕಿಡಿಯಾದವನಾಗಿ ನಾರದನೊಡನೆ ಹೀಗೆ ಮಾತನಾಡಿದನು. ॥೨೭-೨೮-೨೯॥

ಪ್ರಪಂಚದಲ್ಲೆಲ್ಲಾ ಶಿವನ ಪಾದಕಮಲಪೂಜಕನಾದ ಆದಿಶೇಷನೇ ಬಲಿಷ್ಠನು. ಇತರ ದೇವತೆಗಳು, ಮುನಿಗಳು ಮತ್ತು ಶಿವಗಣಗಳಲ್ಲಿ ಯಾರೂ ಅವನಿಗೆ ಸರಿಯಾಗಲಾರರು. ಶಿವನಲ್ಲಿಯೇ ನೆಟ್ಟಮನಸ್ಸುಳ್ಳ ನಾನೂ ಆ ಶಿವನ ಪ್ರೇರಣೆಯಿಂದಲೇ ಅವನ ಹೊಟ್ಟೆಯನ್ನು ತುಂಬಿಸುವುದಕ್ಕೋಸ್ಕರ ಅವನ ಶರೀರವನ್ನು ಪ್ರವೇಶಿಸುತ್ತಿರುವೆನು. ಈ ಪ್ರಪಂಚವೆಲ್ಲವೂ ಪರಶಿವನ ಆಜ್ಞೆಯಿಂದಲೇ ನಡೆಯುತ್ತಿರುವುದು. ಶಿವಾಜ್ಞೆಯಿಂದಲೇ ಬ್ರಹ್ಮನು ಪ್ರಪಂಚವನ್ನು ಸೃಷ್ಟಿಮಾಡುತ್ತಿರುವನು. ವಿಷ್ಣುವು ಪಾಲನೆಮಾಡುತ್ತಿರುವನು. ಪ್ರಳಯಕಾಲದಲ್ಲಿ ಈ ಈಶಾನನು ಸಂಹರಿಸುತ್ತಿರುವನು. ಆ ಶಿವನಪ್ಪಣೆಯಿಂದಲೇ ಇಂದ್ರನು ದೇವಗಣಗಳೊಡನೆ ಈ ಸ್ವರ್ಗಲೋಕವನ್ನು ರಕ್ಷಿಸುತ್ತಿರುವನು. ॥೩೦-೩೧-೩೨॥

ಪರಶಿವನ ಆಜ್ಞೆಯಿಂದಲೇ ಸೂರ್ಯಚಂದ್ರರಿಬ್ಬರೂ ಉದಯಿಸುತ್ತಿರುವರು. ಅಗ್ನಿಯು ಹವಿಸ್ಸನ್ನು ಸ್ವೀಕರಿಸುತ್ತಿರುವನು. ದಿಕ್ಪಾಲಕರೂ ಶಿವನಪ್ಪಣೆಯಿಂದಲೇ

ಯಮೋ ಯಮಯತೇ ಪಾಪಾನ್ಧರ್ಮಾರ್ಥಮವಿಚಾರಯನ್ ।
ನದೀನದಾ ವಹಂತ್ಯೇವ ನೋದ್ವೇಲಂ ಯಾಂತಿ ಸಾಗರಾಃ ॥೩೪॥

ಶ್ರುತಿಸ್ಮೃತ್ಯುಕ್ತಕರ್ಮಾಣಸ್ತಪಂತಿ ಪರಮರ್ಷಯಃ ।
ಗ್ರಹಾಶ್ಚ ಭಗಣೈಃ ಸಾರ್ಧಂ ಮೇರುಮೌಲಿಂ ಭ್ರಮಂತ್ಯಪಿ ॥೩೫॥

ಮನವಃ ಕಲ್ಪಸಂಖ್ಯಾತಂ ಕುರ್ವಂತ್ಯೇವ ಶಿವಾಜ್ಞಯಾ ।
ಶಿವಾಜ್ಞಯೈವ ವಸುಧಾಂ ಧತ್ತೇ ಮೌಲೌ ಸ ನಾಗರಾಟ್ ॥೩೬॥

ದೃಷ್ಟಂ ತಸ್ಯ ಬಲಂ ಲೋಕೇ ಕಿಮೇಕೋ ಧಾರಯಚ್ಚ ಗಾಂ ।
ಕುಲಾಚಲಾ ಧಾರಯಂತಿ ಧಾರಯಂತಿ ಚ ದಿಗ್ಗಜಾಃ ॥೩೭॥

ಕೂರ್ಮೋಽಯಂ ಶಿಂಶುಮಾರಶ್ಚ ಧತ್ತೇ ನೈಕೋಽಹ್ಯಹೇಃ ಪತಿಃ ।
ಅಹಂ ಶಿವಾಜ್ಞಯಾ ಸರ್ವಂ ಶರೀರಂ ಚೇಷ್ಟಯಾಮ್ಯಹಂ ॥೩೮॥

---

ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವನ್ನೆಲ್ಲಾ ಕಾಪಾಡುತ್ತಿರುವರು. ಯಮ ಧರ್ಮನು ಪಾಪಿಗಳನ್ನು ಅವರು ಮಾಡಿದ ಧರ್ಮವೇ ಮೊದಲಾದವನ್ನೊಂದನ್ನೂ ವಿಚಾರಮಾಡದೇ ಶಿಕ್ಷಿಸುತ್ತಿರುವನು. ನದಿಗಳೂ ಮತ್ತು ನದಗಳೂ ಶಿವಭಯ ದಿಂದಲೇ ಹರಿಯುತ್ತಿರುವುವು. ಸಾಗರಗಳೂ ಎಲ್ಲೆ ಮೀರದೇ ಗಂಭೀರವಾಗಿರುವುವು. ಪರಮಶ್ರೇಷ್ಠರಾದ ಋಷಿಗಳೆಲ್ಲರೂ ಶ್ರುತಿ, ಸ್ಮೃತಿಗಳಲ್ಲಿ ಹೇಳಿದ ಕರ್ಮಗಳನ್ನು ಸರಿಯಾಗಿ ನಡೆಸಿಕೊಂಡು ತಪಸ್ಸುಮಾಡುತ್ತಿರುವರು. ಗ್ರಹಗಳೆಲ್ಲವೂ ನಕ್ಷತ್ರ ಸಮೂಹಗಳೊಡನೆ ಮೇರುಪರ್ವತದ ಶಿಖರದಲ್ಲಿ ಅಲೆಯುತ್ತಿರುವುವು. ಹದಿನಾಲ್ಕು ಮಂದಿ ಮನುಗಳೂ ಕಲ್ಪಗಳನ್ನು ಎಣಿಸಿ ಲೆಕ್ಕಮಾಡುತ್ತಿರುವರು. ಅದರಂತೆ ಈ ನಾಗರಾಜನೂ ಸಹ ಪರಶಿವನ ಅಪ್ಪಣೆಯಿಂದಲೇ ತನ್ನ ತಲೆಯಮೇಲೆ ಭೂಮಿ ಯನ್ನು ಧರಿಸಿರುವನು. ॥೩೩-೩೪-೩೫-೩೬॥

ಆ ನಾಗರಾಜನ ಬಲವು ನನಗೆ ಗೊತ್ತಿದೆ, ಅವನೊಬ್ಬನೇ ಏನಾದರೂ ಭೂಮಿಯನ್ನು ಹೊತ್ತಿರುವನೇ? ಮಹೇಂದ್ರ, ಮಲಯ ಮುಂತಾದ ಏಳು ಕುಲ ಪರ್ವತಗಳೂ, ಎಂಟು ದಿಗ್ಗಜಗಳೂ, ಆದಿಕೂರ್ಮ, ಮತ್ತು ವರಾಹ, ಇವರೆಲ್ಲರೂ ಈ ಭೂಮಿಯನ್ನು ಧರಿಸಿರುವರು. ಈ ಸರ್ಪರಾಜನೊಬ್ಬನೇ ತಾನು ಈ ಭೂಮಿ

ದಶಭಿಃ ಪ್ರಾಣವರ್ಗೈಶ್ಚ ಸರ್ವಮೇವ ಚರಾಚರಂ ।
ಶಿವೇನ ಕಲ್ಪಿತಂ ಭೋಜ್ಯಂ ದ್ವಿಪಾದಸ್ತ್ರಿಚತುಷ್ಪದೈಃ ॥೩೯॥

ವಯಂ ಸಮೀರಣಾ ಯಾಮೋ ಸರ್ಪಾಣಾಮತ್ರ ಪಾರಣಂ ।
ಕಿಂ ನೋಚ್ಯೇ ನಾತ್ರ ವಚಸಾ ಪಶ್ಯಂತು ಬಲಮಾವಯೋಃ ॥೪೦॥

ಸಾಗರಂ ಶೋಷಯಿಷ್ಯಾಮಿ ಗಿರೀನುನ್ಮೂಲಯಾಮ್ಯಹಂ ।
ಪಶ್ಯಂತು ಮದ್ಬಲಂ ದೇವಾಃ ನಾರದಾತ್ರ ಚರಾಚರಾಃ ॥೪೧॥

ಇಮಾನಿ ಶಿಖರಾಣ್ಯದ್ಯ ಮೇರೋರುನ್ಮೂಲಯಾಮ್ಯಹಂ ।
ಹಿತ್ವೈಕಂ ದೇವದೇವಸ್ಯ ಮಹಾಕೈಲಾಸಮುನ್ನತಂ ॥೪೨॥

---

ಯನ್ನು ಹೊತ್ತಿಲ್ಲವಲ್ಲಾ! ನಾನೂ ಪರಶಿವನ ಆಜ್ಞೆಯಂತೆಯೇ ಎಲ್ಲರ ಶರೀರದಲ್ಲಿಯೂ ಸಂಚರಿಸಿ, ಅವು ತಮ್ಮ ತಮ್ಮ ಕೆಲಸಗಳಲ್ಲಿ ತೊಡಗುವಂತೆ ಮಾಡುತ್ತಿರುವೆನು. ॥೩೭-೩೮॥

ಬಾಹ್ಯಾಭ್ಯಂತರರೂಪವಾದ ಹತ್ತು ಪ್ರಾಣಗಳ ಸಮೂಹಗಳಿಂದಲೂ ನಾನು ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚವನ್ನೆಲ್ಲಾ ಚೇಷ್ಟೆಗೊಳಿಸುವೆನು. ಎರಡು, ಮೂರು ಮತ್ತು ನಾಲ್ಕು ಪಾದಗಳುಳ್ಳ ಪ್ರಾಣಿಗಳೆಲ್ಲರೂ ಶಿವನಿಂದ ಕಲ್ಪಿಸಲ್ಪಟ್ಟ ಆಹಾರವನ್ನೇ ಊಟಮಾಡಬೇಕು. ವಾಯುಸ್ವರೂಪದಿಂದ ನಾವೂ ಆ ಶಿವನ ಅಪ್ಪಣೆಯನ್ನು ಹೊತ್ತು ಸರ್ಪಗಳಿಗೆ ಆಹಾರವಾಗಿರುವೆವು. ವ್ಯರ್ಥಾಲಾಪದಿಂದ ಏನುಪ್ರಯೋಜನ? ಆಯ್ಯಾ ನಾರದಮುನಿಯೇ! ನಮ್ಮಿಬ್ಬರಬಲವನ್ನೂ ಪ್ರತ್ಯಕ್ಷವಾಗಿ ನೋಡು. ॥೩೯-೪೦॥

ಸಾಗರವನ್ನು ಬೇಕಾದರೂ ಒಣಗಿಸುವೆನು, ಸಣ್ಣಪುಟ್ಟ ಬೆಟ್ಟಗುಡ್ಡಗಳನ್ನೆಲ್ಲಾ ಬುಡಸಹಿತ ಉರುಳಿಸುವೆನು. ಓ ದೇವತೆಗಳಿರಾ! ನಾರದಮುನಿ ಮತ್ತು ಚರಾಚರಪ್ರಾಣಿಗಳಿರಾ! ಈಗ ನನ್ನ ಬಲವನ್ನು ನೀವು ನೋಡಿರಿ: ಮಹಾದೇವನ ಅತ್ಯುನ್ನತವಾದ ಕೈಲಾಸಶಿಖರವನ್ನೊಂದನ್ನು ಬಿಟ್ಟು ಉಳಿದ ಈ ಮೇರುವಿನ ಶಿಖರಗಳನ್ನೆಲ್ಲಾ ಬುಡಸಹಿತ ಕಿತ್ತುಹಾಕುವೆನು. ॥೪೧-೪೨॥

ಕುಲಾಚಲಾಂಶ್ಚ ಸೋನ್ಮೂಲಾನ್ದೃಶಾ ಪಶ್ಯಾದ್ಯ ನಾರದ ।
ಅಹಂ ದಕ್ಷಿಣಕೈಲಾಸಂ ಸಹಸ್ರಶಿಖರೈರ್ಯುತಂ ॥೪೩॥

ಈಶಾನೇನಾಮುನಾ ವಾರ್ಧೌ ಪಾತಯಾಮಿ ದ್ರುತಂ ಬಲಾತ್ ।
ಓಜೋವತೀಪುರಸ್ಥಂ ವೈ ಬ್ರಹ್ಮಾಣಮಪಿ ಪಾತಯೇ ॥೪೪॥

ವಿಷ್ಣುಂ ಲಕ್ಷ್ಮ್ಯಾ ತಾರ್ಕ್ಷ್ಯಯುಕ್ತಂ ಸ ವೈಕುಂಠಂ ಪ್ರಪಾತಯೇ ।
ಆಹೂಯತಾಂ ಸಶೇಷೋಽತ್ರ ವಿಶೇಷಂ ಪಶ್ಯತಾವಯೋಃ ॥೪೫॥

ಇತ್ಯುಕ್ತಮಾತ್ರೇ ವಾಯೌ ತು ನಾರದೋಽಗಾದ್ರಸಾತಲಂ ।
ಶೇಷಾಯಾಕಥಯತ್ಸರ್ವಂ ವಾಯುನೋಕ್ತಂ ಚ ಸಂಸದಿ ॥೪೬॥

ಉರಗಾಧಿಪತಿಃ ಕ್ರೋಧಾತ್ಪಾತಾಲಾನ್ನಿರಗಾತ್ತದಾ ।
ತುರಗಾಧಿಪವೇಗೇನ ತತ್ರಾಗಾನ್ಮೇರುಮಸ್ತಕಂ ॥೪೭॥

ಈಶಾನೇನಾರ್ಚಿತಸ್ತಸ್ಥೌ ಶಿವಾಂಗವರಭೂಷಣಃ ।
ಜಿಹ್ವಾಃ ಸಂಲೇಲಿಹನ್ನೇತ್ರೈರ್ದಹನ್ವಾಯುಮಭಾಷತ ॥೪೮॥

---

ಓ ನಾರದಮುನಿಯೇ! ಕುಲಪರ್ವತಗಳು ಬುಡಸಹಿತವಾಗಿ ಬೀಳುವುದನ್ನು ಈಗ ನೀನೇ ಕಣ್ಣಿನಿಂದ ನೋಡುವೆ. ಸಾವಿರಶಿಖರಗಳಿಂದ ಯುಕ್ತವಾಗಿರುವ ಈ ದಕ್ಷಿಣಕೈಲಾಸವನ್ನು ಈಶಾನನೊಡನೆ ಜಾಗ್ರತೆಯಾಗಿ ಪರಾಕ್ರಮದಿಂದ ಸಮುದ್ರದಲ್ಲಿ ಬೀಳಿಸುವೆನು. ಓಜೋವತೀಪಟ್ಟಣದಲ್ಲಿರುವ ಬ್ರಹ್ಮನನ್ನು ಸಹ ಸಮುದ್ರಕ್ಕೆ ಬೀಳಿಸುವೆನು. ಲಕ್ಷ್ಮೀ, ಗರುಡರೊಡಗೂಡಿದ ವಿಷ್ಣುವನ್ನು ಅವನ ವೈಕುಂಠ ಲೋಕದೊಡನೆ ಈ ಸಮುದ್ರಕ್ಕೆ ಬೀಳಿಸುವೆನು. ಓ ನಾರದಮುನಿಯೇ! ಆ ಶೇಷನನ್ನು ಕರೆಯುವನಾಗು; ನಮ್ಮಿಬ್ಬರ ಬಲವನ್ನೂ ವಿಶೇಷವಾಗಿ ನೀವೇ ನೋಡುವಿರಂತೆ; ಎಂದು ವಾಯುವು ನಾರದನಿಗೆ ಹೇಳಿದನು. ॥೪೩-೪೪-೪೫॥

ವಾಯುವು ಹೀಗೆ ನುಡಿದ ಮಾತ್ರದಿಂದಲೇ ನಾರದಮುನಿಯು ಅಲ್ಲಿಂದ ಪಾತಾಳಲೋಕಕ್ಕೆ ಬಂದು ಆ ವಾಯುವು ಸಭೆಯಲ್ಲಿ ಹೇಳಿದುದನ್ನೆಲ್ಲಾ ಆದಿಶೇಷನಿಗೆ ಹೇಳಿದನು. ಅದನ್ನು ಕೇಳಿ ಸರ್ಪರಾಜನು ಕೋಪದಿಂದ ಪಾತಾಲದಿಂದ ಹೊರಟು ಉತ್ತಮವಾದ ಕುದುರೆಯು ವೇಗದಿಂದ ಮೇರುಪರ್ವತದ ಶಿಖರಕ್ಕೆ ಬಂದು

|| ಶೇಷ ಉವಾಚ ||

ಕಿಮುಕ್ತಮಧುನಾ ವಾಯೋ ಪಶ್ಯ ಮದ್ಬಲಪೌರುಷಂ ।
ಏಷ ದಕ್ಷಿಣಕೈಲಾಸಃ ಸಹಸ್ರಶಿಖರೈರ್ಯುತಃ ||೪೯||

ಮೇರುಮಧ್ಯಗ ಮಧ್ಯಸ್ಥಸ್ತತ್ಪೃಷ್ಠೇ ಫಣಕೈಃ ಸ್ವಕೈಃ ।
ಈರ್ಷ್ಯಯಾ ಧಾರಯಾಮ್ಯದ್ಯ ಸೋಽಸ್ಮುಖಂ ಕುರು ಮಾಚಿರಂ||೫೦||

ಸಗರ್ವಯೋಸ್ತತ್ರ ಪ್ರವಾಯುಶೇಷಯೋ-
ರ್ವೈರೇಣ ಲೋಕಾನಪನೀಯ ಭೀತಿಂ ।
ಶಾಂತಿಂ ಚ ಜೇಪುಃ ಕ್ಷುಭಿತಾ ಮಹರ್ಷಯಃ
ಕ್ಷುದ್ರಾಚಲಾಃ ಪೇತುರಥಾಬ್ಧಿಮಧ್ಯೇ ||೫೧||

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶೇಷವಾಯುಸ್ಪರ್ಧಾ
ಪರಾಕ್ರಮವರ್ಣನಂ ನಾಮ ಷೋಡಶೋಽಧ್ಯಾಯಃ

---

ಸೇರಿದನು. ಅಲ್ಲಿ ಈಶ್ವರನ ಅವಯವಕ್ಕೆ ಶ್ರೇಷ್ಠವಾದ ಆಭರಣವೆನಿಸಿದ ಆದಿಶೇಷನು ಈಶಾನನಿಂದ ಪೂಜಿಸಲ್ಪಟ್ಟವನಾಗಿ ನೆಲಸಿದನು. ವಾಯುವಿನ ಮೇಲಿನ ಕೋಪದಿಂದ ನಾಲಿಗೆಗಳನ್ನು ನೆಕ್ಕುತ್ತಾ, ಕಣ್ಣುಗಳಿಂದ ವಾಯುವನ್ನು ಸುಡುವನೋ ಎಂಬಂತೆ ವಾಯುವಿನೊಡನೆ ಇಂತು ಮಾತನಾಡಿದನು. ||೪೬-೪೭-೪೮||

ಹೇ ವಾಯುವೇ, ನೀನು ಈಗ ಏನು ಹೇಳಿದೆ? ನನ್ನ ಬಲವನ್ನೂ ಪರಾಕ್ರಮವನ್ನೂ ನೋಡು, ಇಗೋ ಈ ಸಾವಿರಶಿಖರಗಳಿಂದ ಕೂಡಿದ ದಕ್ಷಿಣ ಕೈಲಾಸಪರ್ವತವನ್ನು ನಿನ್ನ ಮೇಲಿನ ಅಸೂಯೆಯಿಂದಲೇ ನನ್ನ ಹೆಡೆಗಳಿಂದ ಧರಿಸುವೆನು. ಇದೇ ಮೇರುಪರ್ವತ ಮಧ್ಯದಲ್ಲಿರುವ ನೀನು ಕುಪಿತನಾಗಿ ನಿನ್ನ ಬಲವನ್ನು ಯಾವ ರೀತಿ ಪ್ರದರ್ಶಿಸುವೆಯೋ, ಅದನ್ನು ಜಾಗ್ರತೆಯಾಗಿಯೇ ತೋರಿಸಿಬಿಡು ; ಎಂದು ಶೇಷನು ವಾಯುವಿಗೆ ಹೇಳಿದನು. ||೪೯-೫೦||

ತಮ್ಮ ತಮ್ಮ ಗುಂಪುಗಳೊಡನೆ ಕೂಡಿ ಪರಸ್ಪರ ವೈರದಿಂದ ಸೆಣಸಾಡುತ್ತಿರುವ ವಾಯು ಮತ್ತು ಆದಿಶೇಷರ ಸಂಬಂಧವಾದ ಕೋಪದಿಂದ ಪ್ರಪಂಚಕ್ಕೆ ಉಂಟಾಗುವ ಭಯವನ್ನು ಹೋಗಲಾಡಿಸುವುದಕ್ಕೋಸ್ಕರ ಕ್ಷೋಭೆಹೊಂದಿದ

ಮಹರ್ಷಿಗಳು ಶಾಂತಿಮಂತ್ರಗಳನ್ನು ಜಪಿಸಿದರು. ಈ ವಾಯು ಮತ್ತು ಸರ್ಪರಾಜರ ದ್ವೇಷದ ಕಾರ್ಯದಿಂದ ಅನೇಕ ಸಣ್ಣ ಬೆಟ್ಟಗಳು ಸಮುದ್ರಮಧ್ಯದಲ್ಲಿ ಬಿದ್ದು ಹೋದವು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಕ್ಷೇತ್ರಮಹಿಮೆಯನ್ನು ವಿವರಿಸಿದನು. ||೫೧||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶೇಷ, ವಾಯು ಇವರಿಬ್ಬರ ಪರಸ್ಪರ ಸ್ಪರ್ಧೆಯಿಂದ ಅವರ ಪರಾಕ್ರಮವರ್ಣನೆಯೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಸಪ್ತದಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಏನಂ ದಕ್ಷಿಣಕೈಲಾಸಶಿಖರಂ ಪಾತಯಸ್ವ ಭೋಃ ।
ಈಶ್ವರೌ ಮುನಿಶೈಲಂ ವಾ ಅಬ್ಧೌ ಪಾತಯ ಸತ್ತಮ ॥೧॥

ಬಲಂ ಪ್ರಪಶ್ಯಂತು ಸುರಾಃ ಮುನಯಸ್ತ್ವಾವಯೋರ್ದ್ವಯೋಃ ।
ಇತ್ಯುಕ್ತ್ವಾ ಸ್ವಫಣಾಭಿಸ್ತಂ ಧರ್ಷಯಾಮಾಸ ಭೋಗಿರಾಟ್ ॥೨॥

ವಾಯುರ್ದುರ್ಧರ್ಷಬಲತಃ ಸಪ್ತಭಿಃ ಪ್ರಳಯಸ್ಥಿತೈಃ ।
ವಾಯುಭಿಃ ಸಹಿತೋತ್ಯಂತಂ ಬಲವೀರ್ಯಮದಾಧಿಕಃ ॥೩॥

---

## ಹದಿನೇಳನೆಯ ಅಧ್ಯಾಯ

ಕುಮಾರಸ್ವಾಮಿಯು ಮುಂದುವರಿದು ಹೀಗೆಂದನು. — "ವಾಯುವೇ, ಈ ದಕ್ಷಿಣಕೈಲಾಸಶಿಖರವನ್ನು ಬೀಳಿಸು. ಅಥವಾ ಪಾರ್ವತೀಪರಮೇಶ್ವರರನ್ನೂ, ಇಲ್ಲದಿದ್ದರೆ ಮುನಿಶೈಲವನ್ನೂ ಸಮುದ್ರದಲ್ಲಿ ಮುಳುಗಿಸು ನೋಡೋಣ! ನಮ್ಮಿಬ್ಬರ ಪರಾಕ್ರಮವನ್ನು ಈ ದೇವತೆಗಳೂ ಮತ್ತು ಮುನಿಗಳೂ ಈಗಲೇ ನೋಡಲಿ" ಎಂದು ಆ ಸರ್ಪರಾಜನು ತನ್ನ ಹೆಡೆಗಳಿಂದ ದಕ್ಷಿಣಕೈಲಾಸಶಿಖರವನ್ನು ತನ್ನ ಫಣಾಭಾಗದಲ್ಲಿ ಬಿಗಿಯಾಗಿ ಹಿಡಿದುಕೊಂಡನು. ॥೧-೨॥

ಆಗ ವಾಯುವು ಅಪರಿಮಿತ ಬಲವುಳ್ಳವನಾಗಿ ಪ್ರಳಯಕಾಲದಲ್ಲುಂಟಾಗುವ ಸಪ್ತ ವಾಯುಸ್ಕಂಧಗಳೊಡನೆ ಕೂಡಿ ವೀರ್ಯಮದದಿಂದ ಕೊಬ್ಬಿ ವೇಗದಿಂದ

ದೇವಗಂಧರ್ವಮುನಯೋ ವಿಸ್ಮಿತಾಶ್ಚ ಚರಾಚರಾಃ ।
ಕುಲಾಚಲಾಸ್ತದಾ ಚೇಲುರುಲ್ಲೋಲಾಶ್ಚ ತಥಾಬ್ಧಯಃ ॥೪॥

* ..........................ಬಲವಾನ್ವಾಯುತೋಽಧಿಕಃ ।
ಮಾಜಗನ್ನಾಶಮಾಪ್ನೋತು ಶಿವಸೃಷ್ಟಂ ಚರಾಚರಂ ॥೫॥

ಪರಾಜಯೋಽಸ್ಮದ್ವಚಸಾ ಲೋಕಾನಾಂ ಸ್ಥಿತಿಹೇತವೇ ।
ಜಾನೀಮ ತೇ ಬಲಂ ಶೇಷ ವಾಯೋಶ್ಚೈವ ಸುರಾ ಹೃದಿ ॥೬॥

ಫಣಾತ್ರಯಮಥೋದ್ಧೃತ್ಯ ಶಿಖರಾಣಾಂ ತ್ರಯಂ ತಥಾ ।
ಭವೇತ್ಸಹರ್ಷೋ ವಾಯುಶ್ಚ ಲೋಕಾಸ್ತಿಷ್ಠಂತು ಸಾಸುರಾಃ ॥೭॥

ವಾಯೋರ್ವೈ ಪಕ್ಷಪಾತೇನ ಭೂಯಾತ್ಕಿಂ ನೋ ಪರಾಜಯಃ ।
ಪರಾಜಯೋ ರಿಪೋರಗ್ರೇ ಮರಣಾದತಿರಿಚ್ಯತೇ ॥೮॥

ಪುನರೂಚುಃ ಸುರಾಃ ಸರ್ವೇ ಲೋಕಾನಾಂ ಸ್ಥಿತಿಹೇತವೇ ॥೯॥

---

ಬೀಸತೊಡಗಿದನು. ಆ ವಾಯುವಿನ ಬೀಸುವಿಕೆಯಿಂದ ದೇವತೆಗಳೂ, ಗಂಧರ್ವರೂ ಮತ್ತು ಮುನಿಗಳೂ, ಸ್ಥಾವರ ಜಂಗಮಾತ್ಮಕವಾದ ಲೋಕಗಳೂ ತತ್ತರಿಸಿದುವು. ಕುಲಪರ್ವತಗಳು ಅಲ್ಲಾಡಿದವು. ಸಮುದ್ರಗಳು ಎಲ್ಲೆಮೀರಿ ತುಳುಕಿದುವು. ||೩-೪||

ಅತ್ಯಂತ ಬಲಶಾಲಿಯೂ, ವಾಯುವಿಗಿಂತಲೂ ಗಟ್ಟಿಗನೂ ಆದ ಆದಿಶೇಷನು ಕೊಂಚವೂ ಕದಲದೇ ನಿಶ್ಚಲನಾಗಿಯೇ ಕೈಲಾಸಗಿರಿಯನ್ನು ಧರಿಸಿ ನಿಂತನು. ಆಗ ದೇವತೆಗಳು ಶಿವನಿಂದ ಸೃಷ್ಟಿಮಾಡಲ್ಪಟ್ಟಿರುವ ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವು ನಾಶವಾಗಬಾರದೆಂದು, ಓ ಆದಿಶೇಷ ಮತ್ತು ವಾಯುಗಳಿರಾ, ನಿಮ್ಮಿಬ್ಬರ ಬಲಗಳನ್ನೂ ದೇವತೆಗಳಾದ ನಾವು ಮನಸ್ಸಿನಲ್ಲಿ ತಿಳಿದಿರುವೆವು. ನಿಮ್ಮಿಬ್ಬರ ಬಲಾಬಲ ಪರೀಕ್ಷೆಗಳಲ್ಲಿ ಪಾಲನೆಗೆ ವಿಷಯವಾಗಿರುವ ಈ ಪ್ರಪಂಚಕ್ಕೆ ತೊಂದರೆಯೇ ಹೊರತು ಬೇರೆ ಇಲ್ಲವೆಂದು ತೋರುವುದು. ||೫-೬||

ಶೇಷನು ತನ್ನ ಮೂರು ಹೆಡೆಗಳನ್ನು ಮೇಲೆತ್ತಿ ಮೂರು ಶಿಖರಗಳನ್ನು ಧರಿಸಿ ಸಂತುಷ್ಟನಾಗಲಿ. ವಾಯುವೆನಿಸಿದ ನೀನೂ ಇತರ ಶಿಖರಗಳಿಂದ ಹರ್ಷಸಂಪನ್ನನಾಗು. ಇದರಿಂದ ದೇವರಾಕ್ಷಸಾದಿಯುಕ್ತವಾದ ಲೋಕವೆಲ್ಲವೂ ಶಾಂತಿಯಿಂದಿರಲೆಂದು

---

* ವಿ. ಸೂ. — ಮೂಲಗ್ರಂಥದಲ್ಲಿ ಒಂದು ಪಾದವು ಬಿಟ್ಟುಹೋಗಿದೆ

॥ ದೇವಾ ಊಚುಃ ॥

**ಕ್ಷಮಸ್ವಾಗೋ ಮಹದ್ವಾಯೋ ಕ್ಷಾಂತಿಸಾರಾ ಹಿ ಸಾಧವಃ ।**
**ಜಗಚ್ಛರೀರಂ ಶಂಭೋರ್ವೈ ಮಾದ್ರುಹಸ್ತ್ವಂ ಮಹೇಶ್ವರೇ ॥೧೦॥**

**ವಿಶೇಷಾದೀಶಭಕ್ತೋಽಸಿ ವಚೋ ನಃ ಕರ್ತುಮರ್ಹಸಿ ॥೧೧॥**

॥ ಸ್ಕಂದ ಉವಾಚ ॥

**ನಿಶಮ್ಯ ಶಮ್ಯಾಕಸುಪುಷ್ಪಮೌಳೇ**
**ರ್ಭಕ್ತಸ್ಸಶೇಷಃ ಸುರವೃಂದವಾಕ್ಯಾತ್ ।**
**ಜಹರ್ಷ ವಾಯುಶ್ಚ ದೃಶಾ ಮಥಾಸಾ**
**ವುವಾಚ ರೂಕ್ಷಂ ಪ್ರಸಭಂ ನಿರೀಕ್ಷ್ಯ ॥೧೨॥**

---

ಹೇಳಲು, ಆಗ ವಾಯುವು, ಈ ದೇವತೆಗಳು ಪಕ್ಷಪಾತದಿಂದ ವಾಯುವೆನಿಸಿದ ನನಗೂ ಪರಾಜಯವುಂಟಾಗುವುದೆಂದು ಹೇಳುತ್ತಿರುವಂತೆ ಕಾಣುವುದು. ಶತ್ರುವಿನ ಮುಂದೆ ಸೋಲುವುದು, ಮರಣಕ್ಕಿಂತಲೂ ಅತಿಶಯವೇ ಸರಿ. ಆದ್ದರಿಂದ ನಾನು ನನ್ನ ಬಲವನ್ನು ತೋರಿಸಿಯೇ ಬಿಡುವೆನೆಂದು ಪ್ರಯತ್ನಿಸುತ್ತಿರುವ ವಾಯುವನ್ನು ಕುರಿತು, ದೇವತೆಗಳೆಲ್ಲರೂ ಈ ಪ್ರಪಂಚದ ರಕ್ಷಣೆಗಾಗಿ ಮತ್ತೆ ಹೀಗೆ ಹೇಳಿದರು. ॥೭-೮-೯॥

ಓ ವಾಯುವೇ, ನೀನು ಮಾಡುತ್ತಿರುವ ಮಹಾಪರಾಧವನ್ನು ಕ್ಷಮಿಸು; ಸತ್ಪುರುಷರು ಯಾವಾಗಲೂ ಕ್ಷಮೆಯೇ ಸಾರಭೂತವಾಗುಳ್ಳವರು. ಈ ಪ್ರಪಂಚವೇ ಪರಮೇಶ್ವರನ ಶರೀರವು, ನಿನ್ನ ಬಲಪ್ರಯೋಗದಿಂದ ಈ ಜಗತ್ತಿಗೇನಾದರೂ ಅಪಾಯವುಂಟಾಗುವುದಾದರೆ, ಮಹೇಶ್ವರನಲ್ಲಿಯೇ ನೀನು ದ್ರೋಹಮಾಡಿದಂತಾಗುವುದು. ವಿಶೇಷವಾಗಿ ಇದಲ್ಲದೇ ನೀನೇ ಈಶ್ವರಭಕ್ತನಾಗಿರುವೆಯಾದ್ದರಿಂದ ಈ ನಮ್ಮ ಮಾತುಗಳನ್ನು ನಡೆಸಿಕೊಡಲು ಸಮರ್ಥನಿದ್ದೀಯೆಂದು ದೇವತೆಗಳು ವಾಯುವನ್ನು ಪ್ರಾರ್ಥಿಸಿದರು. ॥೧೦-೧೧॥

ಉತ್ತಮವಾದ ಶಮೀಪುಷ್ಪಮಾಲಾಧಾರಿಯಾದ ಪರಶಿವನ ಭಕ್ತನೆನಿಸಿದ ಆದಿಶೇಷನು ಆ ದೇವವೃಂದದ ಮಾತುಗಳನ್ನು ಕೇಳಿ ಶಾಂತನಾದನು. ಹಾಗೆಯೇ ವಾಯುವೂ ಸಂತುಷ್ಟನಾದನು. ಅನಂತರ ಆದಿಶೇಷನು ವಾಯುವನ್ನು ತನ್ನ ಸಹಸ್ರದೃಷ್ಟಿಗಳಿಂದಲೂ ಕ್ರೂರವಾಗಿ ನೋಡಿ ಹೀಗೆಂದನು. ॥೧೨॥

॥ ಶಿವ ಉವಾಚ ॥

ಸುರಾಸುರಾಣಾಂ ವಚನಾನ್ಮುನೀನಾಂ
ಲೋಕಾಭವಂತು ನಿರುಜಸ್ತವ ವೀರ್ಯಮತ್ರ ।
ದೃಷ್ಟಂ ಸುರೈಸ್ತತ್ಕಥಿತಂ ಶ್ರುತಂ ಚ
ನೇದೃಗ್ವಿಕತ್ಥಂತಿ ಮಹಾನುಭಾವಾಃ ॥೧೩॥

ಭವೈಕಚಿತ್ತೋ ಸುಭೃಶಂ ವಿರಕ್ತಃ
ಶಾಂತಾ ಮತಿಃ ಸ್ಯಾಚ್ಛಿವನಿತ್ಯಸಂಗತಾ ।
ತ್ವಂ ಬಾಹ್ಯವರ್ತೀ ನ ವಿಮೋಚಸೇ ಕ್ರುಧಾ
ತ್ವತ್ತೋ ನಮಸ್ತೇ ನ ಪರಾಜಯೋಽಣ್ವಪಿ ॥೧೪॥

ಸುರಾಸುರಾಣಾಂ ವಚನಾನ್ಮುನೀನಾ-
ಮೀಶಾನವಾಕ್ಯೇನ ಚ ಹರ್ಷಿತೋಽಸ್ಮ್ಯಹಂ ।
ಕ್ರೋಧಾತ್ಸದಾವಾಂ ನಿವಿಶಂತಿ ಲೋಕಾಃ
ಮೌಲಿತ್ರಯಂ ಚೋಚ್ಚ್ರಫಣಂ ಕರೋಮಿ ॥೧೫॥

---

ಓ ವಾಯುವೇ, ದೇವತೆಗಳೂ, ರಾಕ್ಷಸರೂ, ಮುನಿಗಳೂ ಪ್ರಾರ್ಥಿಸಿಕೊಳ್ಳುವಂತೆ ಈ ಲೋಕಗಳೆಲ್ಲವೂ ಯಾವ ವಿಧವಾದ ತೊಂದರೆಗಳನ್ನೂ ಹೊಂದದಿರಲಿ; ನಿನ್ನ ಪರಾಕ್ರಮವನ್ನು ಇಂದು ನೋಡಿದೆನು. ದೇವತೆಗಳೂ ಇದನ್ನೇ ಹಿಂದೆ ಹೇಳಿದ್ದರು. ಪ್ರತ್ಯಕ್ಷವಾಗಿ ಈಗ ನಾನೇ ನೋಡಿದಂತಾಯಿತು. ನಿಜವಾದ ಇಂತಹ ಪರಾಕ್ರಮವನ್ನು ಮಹಾತ್ಮರು ಎಂದಿಗೂ ಹೊಗಳಿಕೊಳ್ಳುವುದಿಲ್ಲ. ॥೧೩॥

ಆ ಶಿವನೊಬ್ಬನಲ್ಲಿಯೇ ಇಟ್ಟ ಮನಸ್ಸುಳ್ಳ ನೀನು ಈ ಕೋಪಕಾರ್ಯದಿಂದ ವಿರಕ್ತನಾಗು. ಪರಶಿವನಲ್ಲಿಯೇ ನಿತ್ಯವೂ ನೆಲಸಿರುವ ನಿನ್ನ ಈ ಬುದ್ಧಿಯು ಶಾಂತವಾಗಲಿ; ಬಾಹ್ಯಪ್ರಪಂಚದಲ್ಲಿ ತೊಡಗಿರುವ ನೀನು ಕೋಪದಿಂದ ಶಾಂತವಾಗುವುದಿಲ್ಲವೆಂದು ತೋರುವುದು. ಅಯ್ಯ ಮಹಾನುಭಾವನೇ, ನಿನಗೆ ನಮಸ್ಕಾರ ಮಾಡುವೆನು. ನಿನಗೆ ಕೊಂಚವೂ ಪರಾಜಯವೇ ಇಲ್ಲವೆಂದು ಭಾವಿಸುವನಾಗು; ॥೧೪॥

ಅಯ್ಯ ವಾಯುವೇ, ದೇವಾಸುರರ ಮಾತಿನಿಂದಲೂ ಮುನಿಗಳ ವಚನಗಳಿಂದಲೂ ನಾನೀಗ ಸಂತೋಷಭರಿತನಾಗಿರುವೆನು. ನಮ್ಮಿಬ್ಬರ ಪರಸ್ಪರ

ಫಣಾತ್ರಯಂ ಚೋರ್ಧ್ವಮುಖಂ ತದಾಽಕರೋ
ದ್ದುಧಾವ ಶೃಂಗತ್ರಯಮಾಶು ವಾಯುಃ ।
ತತ್ಸುಂದರಾಖ್ಯಂ ಚ ಮಮಾಪ್ರವಾಸಂ
ತತ್ಸ್ವಾಮಿಶೃಂಗಂ ಪಶುಪೇಶಶೃಂಗಂ ॥೧೬॥

ತದ್ವಾಯುನಾನೀತಮಧಃ ಪಪಾತ
ಸಹ್ಯಾಪಗಾತೀರಗತೇಽತ್ರ ಚೋಲೇ ।
ಸ ಲಿಂಗಸದ್ಗೋಪುರಮಂಟಪಾದ್ಯಂ
ಕೈಲಾಸಶೃಂಗತ್ರಯಮಾಶು ಮಹ್ಯಂ ॥೧೭॥

ಶೃಂಗದ್ವಯಂ ದಕ್ಷಿಣತೀರಸಂಸ್ಥಂ
ಶ್ರೀಸುಂದರೇಶಃ ಪಶುಪೇಶಶೃಂಗಂ ।

---

ಕೋಪದಿಂದ ಪ್ರಪಂಚವೆಲ್ಲವೂ ಹಿಂಸೆಗೆ ಗುರಿಯಾಗುತ್ತದೆ. ಆದ್ದರಿಂದ ಇನ್ನು ನಿನ್ನಮೇಲಿನ ಕೋಪವನ್ನು ಬಿಟ್ಟು ಮೂರು ಶಿಖರಗಳನ್ನೂ ಹಿಡಿದುಕೊಂಡಿದ್ದ ನನ್ನ ಮೂರು ಹೆಡೆಗಳನ್ನೂ ಮೇಲೆತ್ತುವೆನು; ಎಂದು ಶೇಷನು ವಾಯುವಿಗೆ ಹೇಳಿದನು. ॥೧೫॥

ಹೀಗೆ ಶೇಷನು ತಾನು ಹೇಳಿದಂತೆ ತನ್ನ ಹೆಡೆಯನ್ನು ಹಿಂಜರಿಸಲು ವಾಯುವು ಜಾಗ್ರತೆಯಾಗಿ ಆ ಮೂರು ಶಿಖರಗಳ ಮೇಲೂ ತನ್ನ ಬಲವನ್ನೆಲ್ಲಾ ಪ್ರಯೋಗಿಸಿ ಬೀಸಿದನು. ನನಗೆ ವಾಸಸ್ಥಾನವಾಗಿದ್ದ ಆ ಮೂರು ಶೃಂಗಗಳೂ ಕ್ರಮವಾಗಿ ಸುಂದರಶೃಂಗ, ಸ್ವಾಮಿಶೃಂಗ, ಪಶುಪೇಶಶೃಂಗಗಳೆಂಬ ಹೆಸರಿನಿಂದ ಪ್ರಸಿದ್ಧಿಪಡೆದಿದ್ದುವು. ॥೧೬॥

ಹಾಗೆ ವಾಯುವಿನಿಂದ ಹೊಡೆಯಲ್ಪಟ್ಟ ಕೈಲಾಸಪರ್ವತದ ಆ ಮೂರು ಶಿಖರಗಳೂ ಹಾರಿಬಂದು ಕಾವೇರೀನದಿಯ ದಡದಲ್ಲಿ ಅಂದರೆ ಚೋಲದೇಶದಲ್ಲಿ ಬಂದು ಬಿದ್ದವು. ಅಲ್ಲಿದ್ದ ದಿವ್ಯಲಿಂಗ, ಗೋಪುರ, ಮಂಟಪ ಮುಂತಾದುವುಗಳಿಂದ ಶೋಭಿಸುತ್ತಾ ಆ ಮೂರು ಶಿಖರಗಳೂ ನನಗೆ ದಕ್ಷಿಣ ಭಾರತದಲ್ಲಿ ಈಗಲೂ ಆವಾಸಸ್ಥಾನವಾಗಿರುವುವೆಂದು ಪರಶಿವನು ದೇವಿಗೆ ಹೇಳಿದನು. ॥೧೭॥

ಆ ದಕ್ಷಿಣಕೈಲಾಸದ ಎರಡು ಶೃಂಗಗಳೂ ಕಾವೇರೀನದಿಯ ದಕ್ಷಿಣದಡದಲ್ಲಿ ಬಿದ್ದು ಶ್ರೀಸುಂದರೇಶ, ಪಶುಪೇಶಶೃಂಗವೆಂದು ಪ್ರಸಿದ್ಧವಾದವು. ಸ್ವಾಮಿ

ಮತ್ಸ್ವಾಮಿಶೃಂಗಂ ಕಿಲ ಸಹ್ಯಜಾಯಾಃ
ಮನ್ಮೂರ್ತಿಯುಕ್ತಂ ಶಿವಲಿಂಗಸಂಗವತ್ ॥೧೮॥

ತದುತ್ತರೇ ಸಂಪತಿತಂ ಕವೇರಜಾ
ತಟೇ ಜಹರ್ಷೇಽಥ ತದೈವ ವಾಯುಃ ।
ದಿಶಃ ಪ್ರಶಾಂತಾ ವಿರುಜಾ ಭವತ್ಪ್ರಜಾಃ
ಪಾತಾಲಮೂಲಂ ಪ್ರಯಯೌ ಸಶೇಷಃ ॥೧೯॥

ಸುರೇಂದ್ರವೃಂದಾಃ ಪ್ರಯಯುಸ್ತ್ರಿವಿಷ್ಟಪಂ
ಮುದಾ ಪ್ರಶಂಸಂತಿ ಚ ಭೋಗಿರಾಜಂ ।
ತದಾ ಪ್ರಭೃತ್ಯತ್ರ ಭುವಂಗತಾನಿ
ಕೈಲಾಸಶೃಂಗಾಣಿ ಸಲಿಂಗಕಾನಿ ॥೨೦॥

ಸ್ಪೃಷ್ಟಾನಿ ದೃಷ್ಟಾನಿ ಸುಪೂಜಿತಾನಿ
ಸರ್ವೈಃ ಸದಾಂಹೋವಿನಶೀನಿ ಸತ್ತಮಾಃ ॥೨೧॥

---

ಶೃಂಗವಾದರೋ ನನ್ನ ಆಕೃತಿ ಮತ್ತು ಲಿಂಗಗಳಿಂದ ಯುಕ್ತವಾಗಿ ಅದೇ ಕಾವೇರಿಯ ಮತ್ತೊಂದು ದಡದಲ್ಲಿ ಪ್ರಖ್ಯಾತವಾಗಿದೆ. ॥೧೮॥

ಆ ಕಾವೇರಿಯ ಉತ್ತರದಡದಲ್ಲಿ ಬಿದ್ದ ಸ್ವಾಮಿಶೃಂಗವನ್ನು ನೋಡಿ ವಾಯುವು ಸಂತೋಷಭರಿತನಾದನು. ಆಗ ದಿಕ್ಕುಗಳೆಲ್ಲವೂ ನಿರ್ಮಲವಾಗಿ ಪ್ರಜೆಗಳೆಲ್ಲರೂ ಯಾವ ಕ್ಲೇಶವೂ ಇಲ್ಲದವರಾದರು. ಆಮೇಲೆ ಆದಿಶೇಷನೂ ಸಹ ಪಾತಾಳಲೋಕದ ಬುಡಕ್ಕೆ ಹೋಗಿ ಸಂತೋಷದಿಂದ ನೆಲಸಿದನು. ॥೧೯॥

ದೇವಶ್ರೇಷ್ಠರೆಲ್ಲರೂ ತಮ್ಮ ಗುಂಪುಗಳೊಡನೆ ಸಂತೋಷದಿಂದ ಸರ್ಪರಾಜನನ್ನು ಹೊಗಳುತ್ತಾ ಸ್ವರ್ಗಲೋಕವನ್ನೈದಿದರು. ಅದು ಮೊದಲುಮಾಡಿಕೊಂಡು ಭೂಮಿಗೆ ಬಂದ ಕೈಲಾಸಪರ್ವತದ ಶಿಖರಗಳು ಲಿಂಗಸಮೇತವಾಗಿ ಇಂದಿಗೂ ವಿರಾಜಿಸುತ್ತಿರುವುವು. ॥೨೦॥

ಎಲೈ ಶ್ರೇಷ್ಠರಾದ ಜೈಗೀಷವ್ಯಾದಿ ಮುನಿಗಳಿರಾ, ಈ ಕೈಲಾಸಶಿಖರಸಂಬಂಧವಾದ ಶಿವಲಿಂಗಗಳನ್ನು ಮುಟ್ಟುವುದು, ದರ್ಶನಮಾಡುವುದು ಮತ್ತು ಪೂಜಿಸ್ತು

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ವಾಯುಶೇಷ
ಪರಾಕ್ರಮವರ್ಣನಂ ನಾಮ ಸಪ್ತದಶೋಽಧ್ಯಾಯಃ

---

ವುದು ಈ ರೀತಿಯಾಗಿ ಸೇವೆಮಾಡುವ ಮಾನವರ ಪಾಪಗಳೆಲ್ಲವೂ ಕ್ಷಣಕಾಲದಲ್ಲಿ ನಾಶವಾಗುವುವು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ನುಡಿದನು. ||೨೧||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ವಾಯು ಮತ್ತು ಆದಿಶೇಷ-ಇವರಿಬ್ಬರ ಪರಾಕ್ರಮವರ್ಣನೆಯೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಅಷ್ಟಾದಶೋಽಧ್ಯಾಯಃ

॥ ಜೈಗೀಷವ್ಯ ಉವಾಚ ॥

**ಕುತ್ರ ದಕ್ಷಿಣಕೈಲಾಸೇ ಶೃಂಗಾಣ್ಯಭ್ಯಪತದ್ಭುವಿ ।**
**ಕಾವೇರ್ಯಾ ದಕ್ಷಿಣೇ ತೀರೇ ಉತ್ತರೇ ಕಾನಿ ಮೇ ವದ ॥೧॥**

॥ ಸ್ಕಂದ ಉವಾಚ ॥

**ಶೃಣುಷ್ವ ಜೈಗೀಷವ್ಯಾದ್ಯ ಕೈಲಾಸಂ ದಕ್ಷಿಣಾತ್ತದಾ ।**
**ಶೃಂಗಾಣಿ ವಾಯುನಾ ಭೂಮೌ ನಿನಾದಾತ್ಯಂತವೇಗತಃ ॥೨॥**

---

## ಹದಿನೆಂಟನೆಯ ಅಧ್ಯಾಯ

ಅಯ್ಯ ಕುಮಾರಸ್ವಾಮಿಯೇ, ದಕ್ಷಿಣಕೈಲಾಸಕ್ಷೇತ್ರದ ಯಾವ ಸ್ಥಳದಲ್ಲಿ ಕೈಲಾಸಪರ್ವತದ ಶಿಖರಗಳು ಬಿದ್ದುವು ? ಕಾವೇರೀನದಿಯ ದಕ್ಷಿಣ ಮತ್ತು ಉತ್ತರ ತೀರಗಳಲ್ಲಿರುವ ಕ್ಷೇತ್ರಗಳಲ್ಲಿ ಅವು ಯಾವುವು? ಅದನ್ನು ನನಗೆ ವಿಸ್ತಾರವಾಗಿ ತಿಳಿಸಬೇಕು. ಎಂದು ಜೈಗೀಷವ್ಯಮುನಿಯು ಕುಮಾರಸ್ವಾಮಿಯನ್ನು ಪ್ರಾರ್ಥಿಸಿದನು. ಆಗ ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಈ ರೀತಿ ಉಸುರಿದನು.॥೧॥

ಜೈಗೀಷವ್ಯಮುನಿಯೇ, ನಾನು ಹೇಳುವುದನ್ನು ಕೇಳು. ಆಗ ದಕ್ಷಿಣಕೈಲಾಸ ಪರ್ವತದಿಂದ ವಾಯುವು ಜೋರಾಗಿ ಬೀಸಲು ಮೂರು ಶಿಖರಗಳೂ ಬಹುವೇಗದಿಂದ ಧ್ವನಿಮಾಡುತ್ತಾ ಚೋಲದೇಶದಲ್ಲಿ ಹರಿಯುವ ಕಾವೇರೀ ನದಿಯ ದಡದಲ್ಲಿ

ನಿಪೇತುರ್ಧರಣೀಪೃಷ್ಠೇ ಚೋಲೇ ವೈ ಸಹ್ಯಜಾತಟೇ ।
ಶೃಂಗದ್ವಯಂ ದಕ್ಷಿಣೇ ತು ಮಮ ಶೃಂಗಂ ತು ಚೋತ್ತರೇ ॥೩॥

ಸ್ವಾಮಿಶೈಲಾಖ್ಯಕಂ ಶೃಂಗಂ ಸುಂದರಂ ಪಶುಪಾಭಿಧಂ ।
ಕಲ್ಯಾಣಸುಂದರೇಶಸ್ಯ ಲಿಂಗಂ ಶೃಂಗೇಣ ಸಂಗತಂ ॥೪॥

ಪುರಮಂಟಪಮಾಸಾದ್ಯ ಗಿರಿಸುಂದರಿಕಾಂಬಯಾ ।
ದೃಷ್ಟ್ವಾತ್ರ ಭೂಮೌ ಪತಿತಂ ಕಾವೇರೀತೀರವಾಸಿನಃ ॥೫॥

ವಿಸ್ಮಯೇನ ಯುತಾಃ ಸರ್ವೇ ತತ್ರ ದೇವೈರ್ಮಹರ್ಷಯಃ ।
ಯಯುಸ್ತೇ ಸುಂದರೇಶಾಗ್ರೇ ತೀರ್ಥತೀರೇ ಮುದಾನ್ವಿತಾಃ ॥೬॥

ಸಪ್ತಸಾಗರಸಂಜ್ಞೇಽತ್ರ ಮಾಘ್ಯಾಂ ನೄಣಾಂ ನಿಮಜ್ಜತಾಂ ।
ಪಾಪನಾಶಕರೇ ಪುಣ್ಯೇ ಶಿವದೃಕ್ಪಾವನೀಕೃತೇ ॥೭॥

---

ಬಂದು ಬಿದ್ದವು. ಅವುಗಳಲ್ಲಿ ಎರಡು ಶಿಖರಗಳು ದಕ್ಷಿಣದಡದಲ್ಲಿಯೂ ನನಗೆ ಪ್ರಿಯಕರವಾದ ಇನ್ನೊಂದು ಶಿಖರವು ಉತ್ತರದಿಕ್ಕಿನಲ್ಲಿಯೂ ನಿಂತುಬಿಟ್ಟವು. ॥೨ ೩॥

ಸ್ವಾಮಿಶೈಲವೆಂಬ ಹೆಸರಿನ ಶಿಖರವೂ, ಸುಂದರೇಶ, ಪಶುಪೇಶ ಎಂಬ ಇನ್ನೆರಡು ಶಿಖರಗಳೂ ಒಟ್ಟು ಆ ಮೂರೂ ಭೂಮಿಯಮೇಲೆ ಬಿದ್ದವು. ಅವುಗಳಲ್ಲಿ ಕಲ್ಯಾಣಸುಂದರೇಶ್ವರನ ಲಿಂಗವು ಆ ಶಿಖರದೊಡನೆಯೇ ಇಲ್ಲಿಗೆ ಬಂದುಬಿಟ್ಟಿತು. ಆ ಶಿವಲಿಂಗವು ಬರುವಾಗಲೇ ಪಟ್ಟಣ, ಮಂಟಪ ಮುಂತಾದವುಗಳಿಂದ ಯುಕ್ತವಾಗಿ ಗಿರಿಸುಂದರಿಕಾಸಂಜ್ಞೆಯುಳ್ಳ ದೇವಿಯಿಂದ ಕೂಡಿ, ಈ ಭೂಮಿಯಮೇಲೆ ಬಿದ್ದು ಜನಗಳಿಗೆ ಗೋಚರವಾಯಿತು. ಕಾವೇರೀನದಿಯ ದಡದಲ್ಲಿ ವಾಸಮಾಡುವ ದೇವತೆಗಳೂ ಮತ್ತು ಮಹರ್ಷಿಗಳೂ, ಹೀಗೆ ಇದ್ದಕ್ಕಿದ್ದಂತೆ ಬಂದು ಬಿದ್ದ ಕೈಲಾಸ ಶಿಖರವನ್ನು ನೋಡಿ, ಎಲ್ಲರೂ ಆಶ್ಚರ್ಯಚಕಿತರಾಗಿ ಆ ಸುಂದರೇಶ್ವರನ ಮುಂದಿರುವ ತೀರ್ಥವನ್ನು ನೋಡಿ ಸಂತೋಷದಿಂದ ಅಲ್ಲಿಗೆ ಎಲ್ಲರೂ ಹೋದರು. ॥೪-೫-೬॥

ಅಲ್ಲಿ ಸಪ್ತಸಾಗರವೆಂಬ ಹೆಸರಿನ ಒಂದು ತೀರ್ಥವಿದೆ. ಅದು ಮಾಘಮಾಸದಲ್ಲಿ ಸ್ನಾನಮಾಡುವ ಮಾನವರ ಪಾಪಗಳನ್ನು ನಾಶಮಾಡುತ್ತಾ ಪುಣ್ಯ

ಕೇಚಿಲ್ಲಿಂಗಾರ್ಚಕಾಃ ಶಾಂತಾಸ್ತ್ರಿಕಾಲಂ ಬಿಲ್ವಪಲ್ಲವೈಃ ।
ರುದ್ರಜಾಪ್ಯಪರಾಃ ಕೇಚಿತ್ಕೇಚಿತ್ಪಂಚಾಕ್ಷರಾದರಾಃ ॥೮॥

ಅಗ್ನಿರಿತ್ಯಾದಿಭಿರ್ಮಂತ್ರೈಸ್ತ್ರಿಕಾಲಂ ಭಸ್ಮಧಾರಿಣಃ ।
ತ್ರಿಯಾಯುಷೇಣ ಮಂತ್ರೇಣ ಧೃತಾಷ್ಟಸ್ಥಾನಪುಂಡ್ರಕಾಃ ॥೯॥

ಕಲ್ಯಾಣಸುಂದರೇಶಾನವೀಕ್ಷಕಾಶ್ಚಾಂಬಯಾ ಸಹ ।
ತೀರ್ಥೇ ತ್ರಿಷವಣಂ ತತ್ರ ಸ್ನಾಯಿನಃ ಸಹ್ಯಜಾಂಭಸಿ ॥೧೦॥

ಸುಂದರೇಶಂ ಬಿಲ್ವದಲೈಃ ಸೋಮವಾರೇ ಪ್ರದೋಷಕೇ ।
ಅಷ್ಟಮೀಷು ಚ ಭೂತಾಸು ಶಿವರಾತ್ರ್ಯಾಂ ಸಮರ್ಚಕಾಃ ॥೧೧॥

ಫಲಮೂಲಾಶನಾಃ ಕೇಚಿತ್ತೇಂಭಸಾಂಪಾರಣೇ ರತಾಃ ।
ನಿರತಾಃ ಸರ್ವಭೋಗೇಭ್ಯಃ ಶಿವಭಕ್ತಾಃ ಕ್ಷಮಾನ್ವಿತಾಃ ॥೧೨॥

---

ಕರವೂ ಶಿವದರ್ಶನದಿಂದ ಪಾಪನಾಶಕವೂ ಆಗಿರುವುದು. ಕೆಲವರು, ಈ ತೀರ್ಥದ ಬಳಿ ಶಾಂತಸ್ವಭಾವದಿಂದ ಮೂರು ಕಾಲಗಳಲ್ಲಿಯೂ ಬಿಲ್ವದಳಗಳಿಂದ ಶಿವಲಿಂಗಪೂಜೆಮಾಡುತ್ತಿದ್ದರು. ಕೆಲವರು ರುದ್ರಜಪಾಸಕ್ತರಾಗಿಯೂ ಮತ್ತೆ ಕೆಲವರು ಶಿವಪಂಚಾಕ್ಷರಮಂತ್ರಜಪದಲ್ಲಿ ಆದರವುಳ್ಳವರಾಗಿಯೂ ಇದ್ದರು. ॥೭-೮॥

ಅವರೆಲ್ಲರೂ 'ಅಗ್ನಿರಿತಿಭಸ್ಮ' ಮುಂತಾದ ಮಂತ್ರಗಳಿಂದ ಮೂರು ಕಾಲಗಳಲ್ಲಿಯೂ ಭಸ್ಮಧಾರಣೆಮಾಡುತ್ತಾ 'ತ್ರಿಯಾಯುಷಂ' ಎಂಬ ಮಂತ್ರದಿಂದ ಶರೀರದ ಎಂಟು ಕಡೆಗಳಲ್ಲಿ ಭಸ್ಮತ್ರಿಪುಂಡ್ರಗಳನ್ನು ಧಾರಣೆಮಾಡುತ್ತಿದ್ದರು. ಹೀಗೆ ಭಸ್ಮಧಾರಣೆಮಾಡಿದ ಮೇಲೆ ಅಂಬಿಕೆಯೊಡನೆ ವಿರಾಜಿಸುವ ಆ ಕಲ್ಯಾಣಸುಂದ ರೇಶಾನನನ್ನು ದರ್ಶನಮಾಡುತ್ತಿದ್ದರು. ಕಾವೇರೀನದಿಯ ಭಾಗವಾದ ಸಪ್ತಸಾಗರ ತೀರ್ಥದಲ್ಲಿ ಅವರೆಲ್ಲರೂ ಪ್ರಾತಃ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಸ್ನಾನ ಮಾಡಿ ಆಹ್ನಿಕಗಳಿಂದ ತೃಪ್ತರಾಗುತ್ತಿದ್ದರು. ॥೯-೧೦॥

ಸೋಮವಾರ, ಪ್ರದೋಷಕಾಲ, ಅಷ್ಟಮೀ, ಚತುರ್ದಶೀ ಮತ್ತು ಶಿವರಾತ್ರೀ ಈ ಕಾಲಗಳಲ್ಲಿ ಬಿಲ್ವದಳಗಳಿಂದ ಆ ಸುಂದರೇಶ್ವರನನ್ನು ಪೂಜೆಮಾಡುತ್ತಾ ಹಣ್ಣು ಹಂಪಲು, ಗೆಡ್ಡೆಗೆಣಸುಗಳನ್ನು ತಿಂದು ಕಾಲಕಳೆಯುತ್ತಿದ್ದರು. ಇನ್ನು ಕೆಲವರು ಕೇವಲ ನೀರನ್ನೇ ಕುಡಿದು ಜೀವಿಸುತ್ತಿದ್ದರು. ಸ್ರಕ್ಚಂದನವನಿತಾವಿಷಯಕವಾದ

ಶಿವನಾಮಪರಾ ವಿಪ್ರಾಸ್ತುಷ್ಟುವುಃ ಸುಂದರೇಶ್ವರಂ ॥೧೩॥

॥ ಮುನಯ ಊಚುಃ ॥

(ದಂಡಕಂ)

ಶಿವಂ ನಮಃ ಸದಾಶಿವಂ ಗಿರೀಶಮೌಲಿವಾಸಿನಂ
ಅಪರ್ಣಯಾ ವಿಹಾರಿಣಂ ಫಣಾಧರೇಂದ್ರಧಾರಿಣಂ ।
ಸುಶಂಬಕಾಂಕಧಾರಿಣಂ ಗಜೇಂದ್ರಕೃತ್ತಿಧಾರಿಣಂ
ಮುನೀಂದ್ರಮುಕ್ತಿದಾಯಿನಂ ಸುಸುಂದರೇಶಮಂಬಯಾ ॥೧೪॥

ಸ ತಿರ್ಯಗ್ಭಸ್ಮಮಾತ್ರತಃ ಸುತಿಗ್ಮಪೂತದೇಹಿನಂ
ಮಹೇಶಲಿಂಗಪೂಜಿತಂ ಸುರುದ್ರಮಂತ್ರಜೀವಿನಂ ।
ಸುರುದ್ರನೇತ್ರಜಾಕ್ಷಪದ್ಮಜಾದ್ಯ ದೃಶ್ಯಮೂಲಮೌಲಿಕಂ
ಉಮಾಧವಂ ರಮಾಧವಾಕ್ಷಿ ಪಂಕಜಾರ್ಚಿತಾಂಘ್ರಿಕಂ ॥೧೫॥

---

ಸಕಲ ಭೋಗಗಳಿಂದಲೂ ಬಿಡಲ್ಪಟ್ಟವರಾಗಿ ಶೈವಧರ್ಮವನ್ನವಲಂಬಿಸಿ ಬ್ರಾಹ್ಮಣೋತ್ತಮರು ಕ್ಷಮಾಗುಣಪೂರ್ಣರಾಗಿ ಆ ಸುಂದರೇಶ್ವರನನ್ನು ಇಂತು ಸ್ತೋತ್ರ ಮಾಡುತ್ತಿದ್ದರು. ॥೧೧-೧೨-೧೩॥

ಯೋಗಿಗಳ ಮನಸ್ಸಿನಲ್ಲಿ ಯಾವಾಗಲೂ ನೆಲಸಿರುವವನೂ, ಸಿತ್ಯಮಂಗಳ ಸ್ವರೂಪನೂ, ಪರ್ವತರಾಜನೆನಿಸಿದ ಹಿಮವಂತನ ಶಿಖರದಲ್ಲಿ ವಾಸಿಸುವವನೂ, ಅಪರ್ಣಾದೇವಿಯೆನಿಸಿದ (ತಪಸ್ಸುಮಾಡುತ್ತಿದ್ದಾಗ ಎಲೆಗಳನ್ನೂ ಸಹ ತಿನ್ನದೇ ಕಠಿಣತರವಾಗಿ ಶಿವನನ್ನುದ್ದೇಶಿಸಿ ನಿಯಮದಿಂದ ಇದ್ದುದರಿಂದ ಪಾರ್ವತಿಗೆ ಅಪರ್ಣಾ ಎಂದು ಹೆಸರಾಯಿತು.) ಪಾರ್ವತಿಯೊಡನೆ ವಿಹರಿಸುವವನೂ, ಸರ್ಪ ರಾಜನನ್ನು ಧರಿಸಿರುವವನೂ, ಮೃಗಾಂಕನೆನಿಸಿದ ಚಂದ್ರನನ್ನು ಹೊತ್ತಿರುವವನೂ, ಗಜಚರ್ಮವನ್ನು ಹೊದಿಯುವವನೂ, ಅಂಬಿಕೆಯೊಡನೆ ಕಲೆತು, ಮುನಿವರ್ಯ ರಿಗೆಲ್ಲಾ ಮುಕ್ತಿಯನ್ನು ಕೊಡುವವನೂ ಆದ ಸುಂದರೇಶಸ್ವಾಮಿಗೆ ನಮಸ್ಕಾರ ಮಾಡುವೆವು. ॥೧೪॥

ಕೋಟ್ಯಂತರ ಜನ್ಮಗಳಲ್ಲಿ ಮಾಡಿದ ಪುಣ್ಯಕರ್ಮಗಳಿಂದ ಸೇವೆಮಾಡುವ ಜನರನ್ನು ತಿರ್ಯಕ್ಪುಂಡ್ರಭಸ್ಮಧಾರಣೆಯಿಂದ ಪಾವನರನ್ನಾಗಿ ಮಾಡುವವನೂ, ಲಿಂಗಾಕಾರದಿಂದ ಮಹೇಶ್ವರನೆನಿಸಿ ಸಕಲ ಪೂಜೆಯನ್ನು ಕೈಕೊಳ್ಳುವವನೂ, ಉತ್ತಮವಾದ ರುದ್ರಮಂತ್ರಜಾಪಕರನ್ನು ಉದ್ಧಾರಮಾಡುವವನೂ, ಕಮಲಾಕ್ಷನಾದ

ಪ್ರಸೀದ ಭೋಭಜಾಮ ಸೋಮಶೇಖರಂ
ಅಹಸ್ಕರೋಕ್ಷಭಾಸ್ವರಂ ಮಹೇಶ್ವರಂ ಚ ಭಾಸ್ವರಂ।
ಸುಂದರಮನಂಗಾರಾಧಕಂ ಸುಸೇವ್ಯಮಾನನಂದಿನಂ ॥೧೬॥

ಗಿರೀಶವ್ಯೋಮಕೇಶಮಾಶು ಆಶ್ರಯಾಮಹೇ
ನೃತ್ಯಂತಿ ಗಾಯಂತಿ ಸದಾ ಮುನಯೋ ಭಕ್ತಿಭಾವಿತಾಃ ।
ದಿಶಾಂಪತಿಂಚ ಸಂಪತ್ತೇಃ ಪತಿಂ ಪಶೋಃ ಪತಿಂ ಸಭಾಪತಿಂ
ವಯಂನುಮಃ ॥೧೭॥

ಸದಾ ಮುದಾ ಹೃದಾಭಿಧಾವಿಹೀನಮಾಶ್ರಯಾಮಹೇ
ಏವಂ ಚ ಸ್ತುವತಾಂ ತೇಷಾಂ ಮುನೀನಾಂ ಸುಂದರೇಶ್ವರಃ ।
ಮುಕ್ತಿಂ ಚ ಪ್ರದದೌ ಲಿಂಗೇ ಸ್ವಲಿಂಗೇ ಸಂಗತಃ ಸದಾ ॥೧೮॥

---

ವಿಷ್ಣುವಿಗೂ, ಕಮಲಸಂಭವನಾದ ಬ್ರಹ್ಮನಿಗೂ ಗೋಚರವಾಗದ ಬುಡ ಮತ್ತು ಶಿಖರವುಳ್ಳವನೂ, ಅಂದರೆ (ಕೊನೆ ಮೊದಲಿಲ್ಲದವನೂ) ಉಮಾರಮಣನೂ, ಲಕ್ಷ್ಮೀರಮಣನ ಕಣ್ಣುಗಳಿಂದಲೇ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ ಆದ ಸದಾಶಿವನಿಗೆ ನಮಸ್ಕರಿಸಿ ಸ್ತೋತ್ರಮಾಡುವೆವು. ॥೧೫॥

ಭೋ ದೇವದೇವನೇ, ನನ್ನಲ್ಲಿ ಪ್ರಸನ್ನನಾಗು ; ಚಂದ್ರಶೇಖರನೂ, ಸೂರ್ಯನಂತೆ ಹೊಳೆಯುವ ವೃಷಭದಿಂದ ಪ್ರಕಾಶಿಸುವವನೂ, ಸಕಲೈಶ್ವರ್ಯಸಂಪನ್ನನೂ, ಮನ್ಮಥನನ್ನು ಸಂಹರಿಸಿ ಅವನಿಂದ ಪೂಜಿತನಾದವನೂ, ನಂದಿಕೇಶ್ವರನಿಂದ ಸೇವಿಸಲ್ಪಡುತ್ತಿರುವವನೂ ಆದ ಸುಂದರೇಶನನ್ನು ಭಜನೆಮಾಡೋಣ. ಆದರಿಂದ ಮಹಾದೇವನು ಪ್ರಸನ್ನನಾಗುವನು. ॥೧೬॥

ಬೆಟ್ಟಗಳಿಗೆಲ್ಲಾ ಒಡೆಯನಾಗಿ, ಆಕಾಶವನ್ನೇ ಕೇಶಪಾಶವನ್ನಾಗಿ ಧರಿಸಿರುವ ಮಹಾದೇವನನ್ನು ನಾವು ಜಾಗ್ರತೆಯಾಗಿ ಆಶ್ರಯಿಸೋಣ. ಭಕ್ತಿಯಿಂದ ಭಾವಿತರಾದ ಮುನಿಗಳು ಯಾವಾಗಲೂ ನಾಟ್ಯವಾಡುತ್ತಾ, ಹಾಡುತ್ತಾ, ಪರಶಿವನನ್ನು ತೃಪ್ತಿಗೊಳಿಸುತ್ತಿರುವರು. ಸಮಸ್ತ ದಿಕ್ಕುಗಳಿಗೂ, ಸಮಸ್ತ ಐಶ್ವರ್ಯಕ್ಕೂ ಅಜ್ಞಾನಿಗಳಾದ ಎಲ್ಲ ಮಾನವವೃಂದಕ್ಕೂ, ಎಲ್ಲಾರೀತಿಯ ಸಭೆಗಳಿಗೂ ಸ್ವಾಮಿಯೆನಿಸಿದ ಮಹಾದೇವನನ್ನು, ನಾವು ಸರ್ವದಾ ಧ್ಯಾನಿಸುತ್ತಾ ತೃಪ್ತಿಗೊಳಿಸಬೇಕು. ॥೧೭॥

ಯಾವಾಗಲೂ ನಾವು ಪ್ರೀತಿಯಿಂದಲೂ, ಮನಸ್ಸಿನಿಂದಲೂ ಉತ್ಪತ್ತಿ ಮತ್ತು ವಿನಾಶರಹಿತನಾದ ಶಿವನನ್ನೇ ಆಶ್ರಯಿಸೋಣ, ಎಂಬುದಾಗಿ ತನ್ನನ್ನು

ಭ್ರಮರಾಕೃತಯಾ ಭೂತ್ವಾ ಲಿಂಗೇ ತಸ್ಮಿನ್ತಿರೋಽಭವತ್ ।
ದೃಶ್ಯಂತೇಽದ್ಯಾಪಿ ಲಿಂಗೇಽತ್ರ ಸುಕ್ಷೀರಾಣಿ ಸಮಂತತಃ ॥೧೯॥

ಪ್ರಾತಸ್ತಾಮ್ರಮಯಂ ವಿಭಾತಿ ಸುಮಹಾಲಿಂಗಾರುಣಂ ಸುಂದರಂ
ಮಧ್ಯಾಹ್ನೇ ಕನಕಪ್ರಭಂ ಮರಕತಂ ಸಾಯಂ ಪುನಃ ಪಶ್ಯತಾಂ ।
ಅಪರಾಹ್ಣೇ ಕಪಿಲಪ್ರಭಂ ಕಲಯತಾಂ ಸಾಯಂತನೇ ಪಶ್ಯತಾಂ
ಮುಕ್ತಿಂ ದಾಸ್ಯತಿ ಶಂಕರೋಽತ್ರ ವಸತಾಂ ಕಲ್ಯಾಣಭೂಭೃದ್ಧನುಃ ॥೨೦॥

ದೇವೀ ಶ್ರೀ ಗಿರಿಸುಂದರೀಪತಿರುಮಾಕಾಂತೋಽತ್ರ ರಾರಾಜತೇ
ಭಕ್ತಾನಾಂ ನಿವಹೈಃ ಸದಾರ್ಚಿತಪದೋ ದೇವೈರ್ಮುನೀನಾಂಗಣೈಃ ।
ತತ್ರಾಗತ್ಯ ಘಟೋದ್ಭವೋ ಮುನಿವರೋ ಸಂಪೂಜ್ಯ ಬಿಲ್ವಾದಿಭಿಃ
ದೇವೀಂ ಸುಂದರಸಂಜ್ಞಕಂ ಪಶುಪತಿಂ ತುಷ್ಟಾವ ಭಕ್ತ್ಯಾ ಮುದಾ ॥೨೧॥

---

ಸ್ತೋತ್ರಮಾಡುತ್ತಿದ್ದ ಮುನಿಗಳಿಗೆಲ್ಲಾ ಸುಂದರೇಶ್ವರನು ತನ್ನ ಲಿಂಗೈಕ್ಯರೂಪವಾದ ಮೋಕ್ಷವನ್ನು ಕೊಟ್ಟು ತಾನು ತನ್ನ ಶಿವಲಿಂಗದಲ್ಲಿ ಮರೆಯಾದನು. ॥೧೮॥

ಆಗ ಆ ಮುನಿಗಳೆಲ್ಲರೂ ದುಂಬಿಯ ಆಕಾರವನ್ನು ಹೊಂದಿ ಆ ಲಿಂಗದಲ್ಲಿ ಐಕ್ಯರಾದರು. ಈಗಲೂ ಆ ಲಿಂಗದಲ್ಲಿ ಸುತ್ತಲೂ ಉತ್ತಮವಾದ ಹಾಲಿನ ಗುರುತುಗಳಿವೆ. ॥೧೯॥

ಆ ಸುಂದರೇಶನ ದೊಡ್ಡಲಿಂಗವು ಬೆಳಗಿನ ಹೊತ್ತು ತಾಮ್ರದಂತೆ ಕೆಂಪಾಗಿ ತೋರುವುದು. ಮಧ್ಯಾಹ್ನವೇಳೆಯಲ್ಲಿ ಚಿನ್ನದ ಬಣ್ಣದಂತೆಯೂ, ಸಾಯಂಕಾಲದಲ್ಲಿ ನೋಡುವವರಿಗೆ ಮರಕತವಜ್ರಬಣ್ಣವುಳ್ಳದ್ದಾಗಿಯೂ, ಅಪರಾಹ್ಣದಲ್ಲಿ ಹೊಂಬಣ್ಣವಾಗಿಯೂ ಪ್ರಕಾಶಿಸುವುದು. ಸಾಯಂಕಾಲದಲ್ಲಿ ತನ್ನನ್ನು ದರ್ಶನ ಮಾಡುವವರಿಗೆ ಮೇರುಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡಿದ್ದ ಆ ಶಂಕರನು ಕರುಣೆಯಿಂದ ಮೋಕ್ಷವನ್ನು ದಯಪಾಲಿಸುವನು. ॥೨೦॥

ಶ್ರೀ ಗಿರಿಸುಂದರೀದೇವಿಯ ಪತಿಯಾದ ಉಮಾರಮಣನು ದೇವಿಯೊಡನೆ ಇಲ್ಲಿ ಪ್ರಕಾಶಿಸುತ್ತಾ ತನ್ನ ಭಕ್ತರಾದ ದೇವತೆಗಳು ಮತ್ತು ಮುನಿಗಳ ಗುಂಪಿನಿಂದ ಯಾವಾಗಲೂ ಪೂಜಿಸಲ್ಪಟ್ಟ ಪಾದಪದ್ಮಗಳುಳ್ಳವನಾಗಿರುವನು. ಇಂತಹ ದಿವ್ಯ ಕ್ಷೇತ್ರಕ್ಕೆ ಮುನಿಶ್ರೇಷ್ಠನಾದ ಅಗಸ್ತ್ಯಮುನಿಯು ಬಂದು ಬಿಲ್ವದಳಗಳೇ ಮುಂತಾದ ಸಾಧನಗಳಿಂದ ಸುಂದರಸಂಜ್ಞಕನಾದ ಶಿವನನ್ನೂ, ದೇವಿಯನ್ನೂ ಪೂಜಿಸಿ, ಪ್ರೀತಿ

ಸ್ವನಾಮಲಿಂಗಂ ಚ ಸುಸುಂದರೇಶಂ
ವೇದ್ಯಾಂ ಮುದಾ ದಕ್ಷಿಣತೋಽಭಿಪೂಜ್ಯ ।
ದದರ್ಶ ಭಕ್ತ್ಯಾ ಶಿವಲಿಂಗಪಶ್ಚಾ
ಜ್ಜೃಂಭುಂ ಚ ಕಲ್ಯಾಣತನುಂ ತಥಾಂಬಯಾ ॥೨೨॥

॥ ಅಗಸ್ತ್ಯ ಉವಾಚ ॥

ಕಲ್ಯಾಣಸುಂದರ ಮಹೇಶ ಪಿನಾಕಪಾಣೇ
ಗಂಗಾಧರಾಂತಕರಿಪೋ ಪ್ರಮಥಾಧಿನಾಥ ।
ಪಾಹಿ ಪ್ರಸೀದ ಪರಿಪಾಲಯ ಶೈಲವಾಸ
ತ್ವಲ್ಲಿಂಗಪೂಜನರತರ್ನಿವಸಾಮಿ ಚಾತ್ರ ॥೨೩॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ಶ್ರೀಗಿರಿಸುಂದರೀ ಕುಚತಟೀಪಾಟೀರವಕ್ಷೋಂಕಿತಂ
ಚಂದ್ರೋತ್ತಂಸಕಿರೀಟಿನಂ ಶ್ರುತಿಶಿರಃ ಸಂವೇದ್ಯಪಾದಾಂಬುಜಂ ।

---

ಯಿಂದಲೂ, ಭಕ್ತಿಯಿಂದಲೂ, ದೇವಿಯನ್ನೂ, ಪಶುಪತಿಯನ್ನೂ ಈರೀತಿ ಸ್ತುತಿಸಿದನು. ॥೨೧॥

ತನ್ನ ಹೆಸರಿನಿಂದಲೇ ಸುಂದರವಾಗಿ ಪ್ರಕಾಶಿಸುವ ಸುಂದರೇಶ್ವರನ ಲಿಂಗವನ್ನು ವೇದಿಕೆಯ ದಕ್ಷಿಣದಿಕ್ಕಿನಲ್ಲಿ ಸಂತೋಷದಿಂದ ಪೂಜೆಮಾಡಿದ ನಂತರ, ಆ ಅಗಸ್ತ್ಯಮುನಿಯು ಶಿವಲಿಂಗದ ಹಿಂಭಾಗದಲ್ಲಿ ಅಂಬಿಕೆಯೊಡನೆ ಶೋಭಿಸುವ ಮಂಗಳಮೂರ್ತಿಯಾದ ಪರಶಿವನನ್ನು ದರ್ಶನಮಾಡಿದನು. ॥೨೨॥

ಸಕಲೈಶ್ವರ್ಯಸಂಪನ್ನನೂ, ಪಿನಾಕವೆಂಬ ಬಿಲ್ಲನ್ನು ಹಿಡಿದಿರುವವನೂ, ಗಂಗೆಯನ್ನು ತಲೆಯಲ್ಲಿ ಹೊತ್ತಿರುವವನೂ, ಅಂಧಕಾಸುರಶತ್ರುವೂ, ಪ್ರಮಥಗಣಗಳಿಗೆಲ್ಲಾ ಒಡೆಯನೂ ಆದ ಕಲ್ಯಾಣಸುಂದರೇಶಸ್ವಾಮಿಯೇ, ಬೆಟ್ಟದಲ್ಲಿ ವಾಸಮಾಡುತ್ತಿರುವ ನೀನು ನನ್ನಮೇಲೆ ಅನುಗ್ರಹಮಾಡಿ ಕಾಪಾಡು. ನಿನ್ನ ಲಿಂಗವನ್ನು ಪೂಜೆಮಾಡಬೇಕೆಂಬ ಆಸಕ್ತಿಯಿಂದ ನಾನು ಇಲ್ಲಿ ವಾಸಮಾಡುತ್ತಿರುವೆನು, ಎಂದು ಅಗಸ್ತ್ಯಮುನಿಯು ಸುಂದರೇಶ್ವರನನ್ನು ಸ್ತೋತ್ರಮಾಡಿದನು. ॥೨೩॥

ಹೀಗೆಂದು ಕುಮಾರಸ್ವಾಮಿಯು ಕಲ್ಯಾಣಸುಂದರೇಶನನ್ನು ಸ್ಮರಿಸಿಕೊಂಡು ತಾನೂ ಈ ರೀತಿ ಸ್ತೋತ್ರಮಾಡಿದನು :—ಶ್ರೀ ಗಿರಿಸುಂದರೀದೇವಿಯ ಆಲಿಂಗನ

ಧ್ಯಾಯನ್ಧ್ಯೇಯಮುಮಾಂಗಸಂಗವಿಲಸಲ್ಲಿಂಗಾಧಿಪಂ ಸುಂದರಂ
ಕಲ್ಯಾಣಾಖ್ಯಕಮದ್ಭುತಂ ಚ ಭಜತಾಂ ಮುಕ್ತಿಃ ಕರಸ್ಥಾ ಭವೇತ್ ॥೨೪॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಕಲ್ಯಾಣಸುಂದರೇಶ
ವೈಭವವರ್ಣನಂ ನಾಮಾಷ್ಟಾದಶೋಽಧ್ಯಾಯಃ

---

ದಿಂದ ದೇವಿಯ ಸ್ತನತಟಗಳಿಗೆ ಲೇಪನ ಮಾಡಿಕೊಂಡಿದ್ದ ಚಂದನದ ಚಿಹ್ನೆಯನ್ನು ತನ್ನ ವಕ್ಷಃಸ್ಥಳದಲ್ಲಿ ಹೊಂದಿರುವವನೂ, ಚಂದ್ರನನ್ನೇ ತನ್ನ ಕಿರೀಟದಲ್ಲಿ ಅಲಂಕರಿಸಿಕೊಂಡಿರುವವನೂ, ವೇದಾಂತಗಳಿಂದ ತಿಳಿಯಲ್ಪಡುವ ಪಾದಕಮಲಗಳುಳ್ಳವನೂ, ಉಮಾದೇವಿಯ ಅವಯವ ಸಂಬಂಧದಿಂದ ಶೋಭಿಸುತ್ತಿರುವ ಉತ್ತಮವಾದ ಲಿಂಗಸ್ವರೂಪಿಯೂ ಆದ ಅದ್ಭುತಮಹಿಮನೆನಿಸಿದ ಆ ಕಲ್ಯಾಣಸುಂದರೇಶ್ವರನನ್ನು ಧ್ಯಾನಮಾಡಿ, ಯಾವಾಗಲೂ ಭಕ್ತಿಯಿಂದ ಭಜಿಸುವವರಿಗೆ ಮೋಕ್ಷವು ಕರಗತವೇ ಆಗುವುದು. ಇದರಲ್ಲಿ ಸಂಶಯವಿಲ್ಲ. ಹೀಗೆಂದು ಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಮಹಿಮೆಯನ್ನು ತಿಳಿಯಪಡಿಸಿದನು. ॥೨೪॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಕಲ್ಯಾಣಸುಂದರೇಶನ ವೈಭವವರ್ಣನೆಯೆಂಬ ಹದಿನೆಂಟನೆಯ
ಅಧ್ಯಾಯವು ಮುಗಿಯಿತು



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಏಕೋನವಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

**ಸುಂದರೇಶಾತ್ತಥಾಗ್ನೇಯ್ಯಾಂ ಶೃಂಗಂ ಪಶುಪತೀಶ್ವರಂ ।**
**ಪಶುಪಾಶವಿಮೋಕ್ಷಾಯ ವಸಂತಿ ಚ ಮಹರ್ಷಯಃ ॥೧॥**

**ಅಭಕ್ಷಾ ವಾಯುಭಕ್ಷಾಶ್ಚ ಫಲಪರ್ಣಾಂಬುಭೋಜಿನಃ ।**
**ಅಗ್ನಿರಿತ್ಯಾದಿಭಿರ್ಮಂತ್ರೈಸ್ತ್ರ್ಯಾಯುಷೈಶ್ಚ ತ್ರಿಪುಂಡ್ರಕಾಃ ॥೨॥**

**ರುದ್ರಾಕ್ಷಾಭರಣಾಃ ಶೈವಾಃ ರುದ್ರಪಂಚಾಕ್ಷರಾದರಾಃ ।**
**ಶಿವಲಿಂಗಾರ್ಚನಪರಾಃ ಸ್ತುವಂತಿ ಪರಮೇಶ್ವರಂ ॥೩॥**

---

## ಹತ್ತೊಂಬತ್ತನೆಯ ಅಧ್ಯಾಯ

ಪುನಃ ಕುಮಾರಸ್ವಾಮಿಯು ಶಿವಕ್ಷೇತ್ರಗಳ ವಿಷಯವನ್ನು ಈ ರೀತಿ ತಿಳಿಸಿದನು:—ಆ ಸುಂದರೇಶಕ್ಷೇತ್ರಕ್ಕೆ ಆಗ್ನೇಯದಿಕ್ಕಿನಲ್ಲಿ ಪಶುಪತೀಶ್ವರನ ಶಿಖರವಿರುವುದು. ಅಲ್ಲಿ ಮಹರ್ಷಿಗಳು ಪಶುಗಳೆನಿಸಿದ ಅಜ್ಞಾನಿಗಳ ಜನನಮರಣರೂಪವಾದ ಬಂಧನವನ್ನು ಹೋಗಲಾಡಿಸಿಕೊಳ್ಳುವುದಕ್ಕೋಸ್ಕರ ವಾಸಮಾಡುತ್ತಿರುವರು. ಅವರಲ್ಲಿ ಕೆಲವರು ಆಹಾರವನ್ನೇ ತೆಗೆದುಕೊಳ್ಳದೇ ತಪಸ್ಸು ಮಾಡುತ್ತಿರುವರು. ಮತ್ತೆ ಕೆಲವರು ಗಾಳಿ, ಹಣ್ಣು, ಎಲೆ, ನೀರು ಇವುಗಳನ್ನು ಸೇವಿಸುತ್ತಿರುವರು. 'ಅಗ್ನಿರಿತಿಭಸ್ಮ' ಮುಂತಾದ ಮಂತ್ರಗಳಿಂದಲೂ, 'ತ್ರ್ಯಾಯುಷೈಃ' ಎಂಬ ಮಂತ್ರಗಳಿಂದಲೂ ಭಸ್ಮತ್ರಿಪುಂಡ್ರಗಳನ್ನು ಧರಿಸಿ, ರುದ್ರಾಕ್ಷಗಳನ್ನಲಂಕರಿಸಿಕೊಂಡು,

ಅಂಬಾದ್ವಯಯುತಂ ದೇವಂ ತ್ರ್ಯಂಬಕಂ ಶಶಿಶೇಖರಂ ।
ತಸ್ಮಿನ್ ಶೃಂಗೇ ಮಹಾಲಿಂಗಂ ದೇವಂ ಪಶುಪತೀಶ್ವರಂ ॥೪॥

ಅಭ್ಯರ್ಚ್ಯ ನಿಯಮೇನೈವ ಫಲಪತ್ರೈಃ ಸುಮೈರಪಿ ।
ಸ್ತುವಂತಿ ಮುನಯೋ ನಿತ್ಯಂ ಭಕ್ತಿಪೂತಾ ಮಹೇಶ್ವರಂ ॥೫॥

॥ ಮುನಯ ಊಚುಃ ॥

ಹರ ಶಿವ ಪರಮಾತ್ಮನ್ದೇವದೇವ ಮಹೇಶ
ಉರಗವರಸುಹಾರ ಪಾಹಿ ಗಂಗಾಧರೇಶ ।
ಭವಭಯಹರ ಶಂಭೋ ವಿಶ್ವ ವಿಶ್ವಾಧಿಕೇಶ
ಪುರಹರ ಹರ ವಿಪ್ರಾನ್ದೇವದೇವಾಬ್ಜಪೂಜ್ಯ ॥೬॥

---

ಶಿವಧರ್ಮನಿರತರಾಗಿ ಶ್ರೀರುದ್ರ, ಶಿವಪಂಚಾಕ್ಷರಮಂತ್ರಗಳನ್ನೇ ಜಪಿಸುವುದರಲ್ಲಿ ನಿರತರಾಗಿ ಯಾವಾಗಲೂ ಶಿವಲಿಂಗಪೂಜೆಯನ್ನು ಮಾಡುತ್ತಾ ಪರಮೇಶ್ವರನನ್ನೇ ಸ್ತೋತ್ರಮಾಡುತ್ತಿರುವರು. ॥೧-೨-೩॥

ಗಂಗಾ, ಅಂಬಿಕೆ ಈ ಇಬ್ಬರು ದೇವಿಯರಿಂದಲೂ ಯುಕ್ತನಾಗಿ, ಮೂರು ಕಣ್ಣುಗಳಿಂದ ಶೋಭಿಸುತ್ತಾ ಚಂದ್ರಶೇಖರನಾಗಿರುವ ಆ ಪಶುಪತೀಶ್ವರದೇವನ ಮಹಾಲಿಂಗವನ್ನು ಆ ಶಿಖರದಲ್ಲಿ ಮುನಿಗಳು, ನಿಯಮದಿಂದ ಹಣ್ಣು, ಹೂ, ಪತ್ರೆ ಮುಂತಾದವುಗಳಿಂದ ಪೂಜಿಸಿ, ನಿತ್ಯವೂ ಭಕ್ತಿಯಿಂದ ಪಾವನರಾಗಿ ಮಹೇಶ್ವರನನ್ನು ಸ್ತೋತ್ರಮಾಡುತ್ತಿರುವರು. ॥೪-೫॥

ಭಕ್ತರ ಪಾಪಗಳನ್ನು ನಾಶಮಾಡುವವನೂ, ಯೋಗಿಗಳ ಮನಸ್ಸಿನಲ್ಲಿ ಸದಾ ನೆಲಸಿರುವವನೂ, ಪರಮಾತ್ಮನೂ, ದೇವಾದಿದೇವತೆಗಳಿಗೆಲ್ಲಾ ಒಡೆಯನೂ ಆದ ಮಹೇಶ್ವರನೇ, ನಿನಗೆ ಸರ್ಪಶ್ರೇಷ್ಠನೇ ಹಾರವಾಗಿರುವನು. ಗಂಗಾನದಿಯನ್ನು ತಲೆಯಲ್ಲಿ ಹೊತ್ತಿರುವ ಈಶ್ವರನೇ, ಈ ಸಂಸಾರಭಯವನ್ನು ಹೋಗಲಾಡಿಸಿ, ಜಗತ್ತಿಗೆ ಸುಖವನ್ನುಂಟುಮಾಡು. ಜಗತ್ಸ್ವರೂಪನೂ, ಜಗಚ್ಛ್ರೇಷ್ಠರೆನಿಸಿದವರಿಗೆಲ್ಲಾ ಒಡೆಯನೂ, ತ್ರಿಪುರರನ್ನು ನಾಶಮಾಡಿದವನೂ, ದೇವಾಧಿದೇವನೂ, ಕಮಲದಿಂದ ಪೂಜಿಸಲ್ಪಡುವವನೂ ಆದ ಹರನೇ, ವಿಪ್ರರೆನಿಸಿದ ಜ್ಞಾನಿಗಳನ್ನು ಕಾಪಾಡು. ॥೬॥

ಕೋಸಲೇಶೋ ದಶರಥಃ ಸಂಪೂಜ್ಯ ಪಶುಪೇಶ್ವರಂ ।
ಅಪುತ್ರಃ ಪುತ್ರಲಾಭಾಯ ತ್ರಿನೇತ್ರಂ ತತ್ರ ಶಂಕರಂ ॥೭॥

ತುಷ್ಟಾವಾಷ್ಟಾಕೃತಿಂ ಶಂಭುಂ ಭಕ್ತಿಯುಕ್ತೋ ನೃಪಃ ಶಿವಂ ॥೮॥

ಹಸ್ತಶಸ್ತವಿಧೃತಾಜಕಂಧರಂ
ಅಂಕಸಂಸ್ಥಮುಗಜಾಮುಖಲೋಕಂ ।
ಭಕ್ತವೃಂದನಿಹತಾತುಲಶೋಕಂ
ತ್ವಾಂ ಪ್ರಣೌಮಿ ಭಗವನ್ಪರಮೇಕಂ ॥೯॥

ತಸ್ಮೈ ಪಶುಪತೀಶಾನೋ ದದೌ ಪುತ್ರಚತುಷ್ಟಯಂ ।
ತದಾ ಪ್ರಭೃತಿ ನೈ ನತ್ವಾ ದೇಶಂ ಚ ಪ್ರಯಯೌ ಮುದಾ ॥೧೦॥

ತದುತ್ತರೇ ತು ಪಟ್ಟೇಶಂ ದೇವಸ್ಥಾನಂ ತು ಪಾಪಹಂ ।
ತತ್ರ ಸಂಪೂಜಯಾಮಾಸ ಪಟ್ಟಿಕಾಖ್ಯೋ ಮಹಾಮುನಿಃ ॥೧೧॥

---

ತ್ರೇತಾಯುಗದಲ್ಲಿ ಕೋಸಲದೇಶಾಧಿಪತಿಯಾದ ದಶರಥನು ಮಕ್ಕಳಿಲ್ಲದ್ದರಿಂದ ಪುತ್ರಪ್ರಾಪ್ತಿಗೋಸ್ಕರ ಮುಕ್ಕಣ್ಣನೂ, ಜಗನ್ಮಂಗಳಕರನೂ, ಆದ ಪಶುಪೇಶ್ವರನನ್ನು ಪೂಜಿಸಿ, ಅಷ್ಟಮೂರ್ತಿಯೆನಿಸಿದ (ಪೃಥಿವಿ, ನೀರು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಯಜಮಾನರೂಪವಾದ ಎಂಟು ಶರೀರಗಳುಳ್ಳ) ಮಹಾದೇವನನ್ನು ಭಕ್ತಿಪೂರ್ವಕವಾಗಿ ಆ ರಾಜನು ಈರೀತಿ ಸ್ತೋತ್ರಮಾಡಿದನು. ॥೭-೮॥

ಬ್ರಹ್ಮನ ತಲೆಯನ್ನು ಕತ್ತರಿಸಿ ಕೈಯ್ಯಲ್ಲಿ ಹಿಡಿದಿರುವವನೂ, ತೊಡೆಯ ಮೇಲಿರುವ ಪಾರ್ವತಿಯ ಮುಖವನ್ನೇ ಸದಾ ನೋಡುತ್ತಿರುವವನೂ, ತನ್ನ ಭಕ್ತ ಸಮೂಹಗಳ ಶೋಕವನ್ನು ನಾಶಮಾಡುವವನೂ, ಷಡ್ಗುಣೈಶ್ವರ್ಯಭರಿತನೂ, ಪರಮಶ್ರೇಷ್ಠನೂ, ಅದ್ವಿತೀಯನೂ ಆದ ನಿನ್ನೊಬ್ಬನನ್ನೇ ನಾನು ನಮಸ್ಕರಿಸುತ್ತೇನೆಂದು ದಶರಥನು ಪಶುಪತೀಶ್ವರನನ್ನು ಬಹಳವಾಗಿ ಸ್ತೋತ್ರಮಾಡಿದನು. ॥೯॥

ಕೊನೆಯಲ್ಲಿ ಆ ದಶರಥನಿಗೆ ಸ್ತೋತ್ರದಿಂದ ಸಂತುಷ್ಟನಾದ ಪಶುಪತೀಶ್ವರನು ನಾಲ್ಕುಮಂದಿಮಕ್ಕಳನ್ನು ಕರುಣಿಸಿದನು. ಅದುಮೊದಲು ದಶರಥನು ಆ ಕ್ಷೇತ್ರಕ್ಕೆ ಬಂದು ದೇವನಿಗೆ ನಮಸ್ಕಾರಮಾಡಿ ಸಂತೋಷದಿಂದ ತನ್ನ ದೇಶಕ್ಕೆ ಹಿಂದಿರುಗುತ್ತಿದ್ದನು. ಪಶುಪತೀಶ್ವರಕ್ಷೇತ್ರಕ್ಕೆ ಉತ್ತರದಿಕ್ಕಿನಲ್ಲಿ ಪಾಪನಾಶಕವಾದ ಪಟ್ಟೇಶನ

ತುಷ್ಟಾವ ದೇವಂ ಪಟ್ಟೇಶಂ ವಿಶ್ವೇಶಂ ಚಾಂಬಿಕಾಯುತಂ ॥೧೨॥

॥ ಪಟ್ಟಕ ಉವಾಚ ॥

ಹೇ ದೇವದೇವ ಗರಕಂಧರ ಪಾಶನಾಶ
ಭೂಷಾಂಗ ಪಾಹಿ ಹರಶಂಕರ ವ್ಯೋಮಕೇಶ ।
ಗಂಗಾಧರಾಂತಕರಿಪೋ ಪರಿಪಾಹಿ ದೀನಂ
ದೇವ ತ್ವದೀಯಪದಪೂಜನತೋಽತಿಧನ್ಯಂ ॥೧೩॥

ಪಟ್ಟಕಃ ಸಿದ್ಧಿಮಾಪಾಥ ಸಂಪೂಜ್ಯಾತ್ರ ಮಹೇಶ್ವರಂ ।
ತದುತ್ತರೇ ಸ್ಥಾನಮೇಕಂ ಶಿವಲಿಂಗಸಮಾಹ್ವಯಂ ॥೧೪॥

ದೇವೀಪ್ರೀತ್ಯಾ ತತ್ರ ಸಂಸ್ಥಂ ತಮಾಲಿಂಗ್ಯ ಮಹೇಶ್ವರಂ ।
ಸಂಪೂಜ್ಯ ಬಿಲ್ವೈಃ ಕಮಲೈಸ್ತುಷ್ಟಾವಾಷ್ಟಾಕೃತಿಂ ಶಿವಂ ॥೧೫॥

---

ದೇವಸ್ಥಾನವಿರುವುದು. ಆ ಸ್ಥಳದಲ್ಲಿ ಪಟ್ಟಕಸಂಜ್ಞಕನಾದ ಮಹಾಮುನಿಯು ಮಹಾದೇವನನ್ನು ಪೂಜಿಸಿ, ಜಗದೊಡೆಯನೂ, ಅಂಬಿಕಾಸಮೇತನೂ ಆದ ಪಟ್ಟೇಶನನ್ನು ಈರೀತಿ ಸ್ತೋತ್ರಮಾಡಿದನು. ॥೧೦-೧೧-೧೨॥

ದೇವತೆಗಳಿಗೂ ದೇವನೂ, ವಿಷಕಂಠನೂ, ಸಂಸಾರಬಂಧನವನ್ನು ನಾಶಮಾಡುವವನೂ, ಸರ್ಪಾಲಂಕೃತದೇಹನೂ, ಹರನೂ (ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನೂ) ಜಗನ್ಮಂಗಳಕರನೂ, ಅಂತರಿಕ್ಷವನ್ನೇ ತಲೆಗೂದಲಾಗುಳ್ಳವನೂ, ಗಂಗೆಯನ್ನು ತಲೆಯಲ್ಲಿ ಧರಿಸಿರುವವನೂ ಆದ ಪಶುಪತೀಶ್ವರನೇ, ನಿನ್ನ ಪಾದಪೂಜೆಯಿಂದ ಧನ್ಯನೆನಿಸಿರುವ ದೀನನಾದ ನನ್ನನ್ನು ಕಾಪಾಡು. ॥೧೩॥

ಈ ಕ್ಷೇತ್ರದಲ್ಲಿ ಪಟ್ಟಕಮುನಿಯು ಮಹೇಶ್ವರನನ್ನು ಪೂಜಿಸಿ ಕೊನೆಗೆ ಸಿದ್ಧಿಯನ್ನು ಪಡೆದನು. ಅದಕ್ಕೆ ಉತ್ತರದಿಕ್ಕಿನಲ್ಲಿ ಶಿವಲಿಂಗನಾಮಕವಾದ ಒಂದು ಸ್ಥಾನವಿರುವುದು. ದೇವಿಯು ಪ್ರೀತಿಯಿಂದ ಅಲ್ಲಿದ್ದ ಮಹೇಶ್ವರನನ್ನು ಬಿಲ್ವದಳ ಮತ್ತು ತಾವರೆಹೂಗಳಿಂದ ಪೂಜಿಸಿ, ಅಷ್ಟಮೂರ್ತಿಯಾದ ಪರಶಿವನನ್ನು ಹೀಗೆ ಸ್ತೋತ್ರಮಾಡಿದಳು. ॥೧೪-೧೫॥

॥ ದೇವ್ಯುವಾಚ ॥

ಕಪರ್ದಗಂಗಾಧೃತಚಾರುಮೌಳೇ
ಕಪಾಲಜಾಲಾವೃತಕಂಧರಾಢ್ಯ ।
ಅಭೇದ್ಯವೇದ್ಯೈಕಶಿರೋಭವೋದ್ಯ
ವೇದ್ಯಾದಿಮ ತ್ವಾಂ ಭಗವನ್ನತಾಸ್ಮಿ ॥೧೬॥

ದೇವ್ಯೈವಂ ಸಂಸ್ತುತಸ್ತತ್ರ ಸ್ವಾರ್ಧಾಂಗಂ ಪ್ರದದೌ ಶಿವಃ ।
ತದುತ್ತರೇ ಸ್ಥಾನಮೇಕಂ ದಕ್ಷಿಣಾವರ್ತಸಂಜ್ಞಕಂ ॥೧೭॥

ಆವರ್ತಾಭಿಮುಖೀ ತತ್ರ ಸಹ್ಯಜಾ ವಿವರಂ ಗತಾ ।
ಲೋಕಾನಾಮುಪಕಾರಾಯ ಹೇರಂಬಃ ಪ್ರಾವಿಶದ್ಬಿಲಂ ॥೧೮॥

ತತ್ರ ಹೇರಂಡಕೇಶಾನಂ ಶಿವಲಿಂಗಂ ಚ ಸಂಸ್ಥಿತಂ ।
ತತ್ರೇಶ್ವರೋ ಧೇನುಕೇಶಃ ವಾಯುನಾ ಪೂಜ್ಯ ಸಂಸ್ತುತಃ ॥೧೯॥

---

ಜಡೆಯಲ್ಲಿ ಗಂಗೆಯನ್ನು ಧರಿಸಿದ ಮನೋಹರವಾದ ತಲೆಯುಳ್ಳವನೇ! ಕಪಾಲಮಾಲಿಕೆಗಳಿಂದ ವ್ಯಾಪ್ತವಾದ ಕುತ್ತಿಗೆಯಿಂದ ಯುಕ್ತನಾದವನೇ, ದುರ್ಗಮ ವಾದ ವೇದಾಂತವೊಂದರಿಂದ ಮಾತ್ರ ಗೋಚರನಾಗುವವನೇ, ವೈದ್ಯರಲ್ಲಿ ಅಗ್ರೇ ಸರನೂ (ಮೊದಲನೆಯವನೂ) ಆದ ಭಗವಂತನೇ, ನಿನಗೆ ನಮಸ್ಕಾರಮಾಡು ವೆನು, ಎಂದು ದೇವಿಯು ಭಕ್ತಿಯಿಂದ ಧ್ಯಾನಿಸಿದಳು. ॥೧೬॥

ಹೀಗೆ ದೇವಿಯಿಂದ ಸ್ತೋತ್ರಮಾಡಲ್ಪಟ್ಟ ಶಿವನು ದೇವಿಗೆ ತನ್ನ ಅರ್ಧ ಶರೀರವನ್ನೇ ಪ್ರೀತಿಯಿಂದ ಕೊಟ್ಟನು. ಅದಕ್ಕೆ ಉತ್ತರದಿಕ್ಕಿನಲ್ಲಿ ದಕ್ಷಿಣಾವರ್ತ ನಾಮಕವುಳ್ಳ ಒಂದು ಸ್ಥಾನವಿರುವುದು. ಅಲ್ಲಿ ಕಾವೇರೀನದಿಯು ಸುಳಿಗೆ ಅಭಿಮುಖ ವಾಗಿ ಒಂದು ವಿವರ (ಗುಹೆ) ವನ್ನು ಮಾಡಿತು. ಲೋಕೋಪಕಾರಕ್ಕೋಸ್ಕರ ಏರ್ಪಟ್ಟ ಈ ಗುಹೆಗೆ ಹೇರಂಬನು ಪ್ರವೇಶಿಸಿದನು. ಆ ಬಿಲದಲ್ಲಿ ಹೇರಂಡಕೇಶ ಸಂಜ್ಞಕವಾದ ಶಿವಲಿಂಗವೊಂದು ಸ್ಥಾಪಿತವಾಗಿರುವುದು. ಮತ್ತು ವಾಯುದೇವನು ಅಲ್ಲಿ ಧೇನುಕೇಶ್ವರನನ್ನು ಸ್ಥಾಪಿಸಿ ಪೂಜೆಮಾಡಿ ಹೀಗೆ ಸ್ತೋತ್ರಮಾಡಿದನು. ॥೧೭-೧೮-೧೯॥

॥ ವಾಯುರುವಾಚ ॥

ವಿಧಿಹರಿಪೂಜ್ಯ ಮಹೇಶ ದೇವಶಂಭೋ
ಅಹಿಭೂಷಾ ಪೂಷನೇತ್ರಭರ್ಗ ।
ವಿವಿಧಾಗಮಸಂಸ್ತುತಾದ್ಯ ದೇವ
ಪಾಪಂ ಸಂಹರ ಸೋಮಶೇಖರಾದ್ಯ ॥೨೦॥

ತತ್ಸ್ತುತ್ಯಾ ತುಷ್ಟಹೃದಯೋ ವಾಯೋಃ ಪ್ರಾದಾತ್ಸದಾಗತಿಂ ।
ತದಗ್ರೇ ಶ್ವೇತವಿಘ್ನೇಶೋ ನಮತಾಂ ವಿಘ್ನನಾಶಕಃ ॥೨೧॥

ಪುರಾರ್ಚಿತಸ್ತ್ರ್ಯಂಬಕೇಣ ತ್ರಿಪುರಂ ಹಂತುಮಿಚ್ಛತಾ ।
ಇಂದ್ರೇಣ ವೃತ್ರಯುದ್ಧಾದೌ ವಿಷ್ಣುನಾ ದೈತ್ಯಸಂಗರೇ ॥೨೨॥

ದೇವ್ಯಾ ಮಹಿಷಯುದ್ಧಾದೌ ಪೂಜಿತಃ ಶ್ವೇತವಿಘ್ನಪಃ ।
ಸಂಸ್ತುತೋ ದೇವಮುನಿಭಿರಗಸ್ತ್ಯೇನಾಪಿ ವಿಘ್ನಪಃ ॥೨೩॥

---

ಬ್ರಹ್ಮ ವಿಷ್ಣ್ವಾದಿಗಳಿಂದ ಪೂಜಿತನೂ, ಐಶ್ವರ್ಯಪರಿಪೂರ್ಣನೂ, ಕ್ರೀಡಾದಿ ಗುಣಸಂಪೂರ್ಣನೂ, ಆದ ಶಂಭುವೇ! ಸರ್ಪಾಭರಣನೂ, ಚಂದ್ರಸೂರ್ಯನೇತ್ರನೂ, ನಾನಾವೇದ, ಮತ್ತು ಆಗಮಗಳಿಂದ ಸ್ತೋತ್ರಮಾಡಲ್ಪಟ್ಟವನೂ, ಆದಿದೇವನೂ, ಮತ್ತು ಚಂದ್ರಶೇಖರನೂ ಆದ ದೇವದೇವನೇ! ಇಂದು ನನ್ನ ಪಾಪಗಳನ್ನೆಲ್ಲಾ ನಾಶಮಾಡುವನಾಗು. ॥೨೦॥

ಆ ಸ್ತುತಿಯಿಂದ ಸಂತುಷ್ಟಹೃದಯನಾದ ಶಿವನು ವಾಯುವಿಗೆ ಯಾವಾಗಲೂ ಸಂಚಾರಮಾಡುವ ಶಕ್ತಿಯನ್ನು ಕೊಟ್ಟನು. ಆ ಧೇನುಕೇಶ್ವರನ ಮುಂದೆ, ಭಕ್ತರ ಸಕಲ ವಿಘ್ನಗಳನ್ನೂ ನಾಶಮಾಡುವ ಶ್ವೇತಗಣಪತಿಯು (ಬಿಳಿಯ ಗಣಪತಿಯು) ಇರುವನು. ಹಿಂದೆ ತ್ರಿಪುರಾಸುರನನ್ನು ಕೊಲ್ಲುವಾಗ ಪರಮೇಶ್ವರನೇ ಈ ಶ್ವೇತಗಣಪತಿಯನ್ನು ಪೂಜಿಸಿದ್ದನು. ಹಾಗೆಯೇ, ವೃತ್ರಾಸುರನನ್ನು ಕೊಲ್ಲುವಾಗ ಮತ್ತು ರಾಕ್ಷಸರಮೇಲಿನ ಯುದ್ಧದಲ್ಲಿ ಇಂದ್ರನೂ, ವಿಷ್ಣುವೂ ಸಹ ಪೂಜೆ ಮಾಡಿದ್ದರು. ಮಹಿಷಾಸುರನನ್ನು ಕೊಲ್ಲುವಕಾಲದಲ್ಲಿ ಸಾಕ್ಷಾತ್ ದೇವಿಯಿಂದಲೂ ಈ ಶ್ವೇತವಿಘ್ನೇಶ್ವರನು ಪೂಜಿಸಲ್ಪಟ್ಟನು. ಹೀಗೆ ಶ್ವೇತಗಣಪತಿಯು ದೇವತೆಗಳಿಂದಲೂ ಮುನಿಗಳಿಂದಲೂ ಸ್ತೋತ್ರಮಾಡಲ್ಪಟ್ಟಿರುವನಲ್ಲದೇ ಅಗಸ್ತ್ಯಮುನಿಯಿಂದಲೂ ಸ್ತುತಿಸಲ್ಪಟ್ಟಿರುವನು. ॥೨೧-೨೨-೨೩॥

ಸಿದ್ಧಿಬುದ್ಧೀ ಸಮುದ್ವಾಹ್ಯ ತತ್ರ ಭಕ್ತೇಷ್ಟಕಾಮದಃ ।
ಸ್ಥಿತಸ್ತ್ರೈಲೋಕ್ಯರಕ್ಷಾರ್ಥಂ ಗಣರಾಜೋ ಮಹಾಬಲಃ ॥೨೪॥

॥ ಪುರಹರ ಉವಾಚ ॥

ವಿಘ್ನಪೂಗಪರಿಭೇದನಶೀಲಂ
ಕರ್ಣತಾಲಚಲಿತಾಚಲಮೂಲಂ ।
ದೈತ್ಯವರ್ಗಹೃದಯಾಂತಕಶೂಲಂ
ವಿಘ್ನಪಂ ನಮತ ದೈವತಮೂಲಂ ॥೨೫॥

ತತ್ರ ಸಂಸ್ತುತ್ಯ ವಿಘ್ನೇಶಮಜಯತ್ಸುಮಹದ್ರಿಪೂನ್ ।
ಮಹಾದೇವಸ್ತ್ರಿಪುರಹಾ ಶ್ವೇತವಿಘ್ನೇಶ್ವರಂ ತಥಾ ॥೨೬॥

ಇಂದ್ರಸ್ತುಷ್ಟಾವ ವಿಘ್ನೇಶಂ ವಿಘ್ನಸ್ಯಾದೌ ಸಮರ್ಚ್ಯ ಚ ॥೨೭॥

---

ಸಿದ್ಧಿ, ಬುದ್ಧಿ ಎಂಬೀರ್ವರನ್ನು ಮದುವೆಯಾಗಿ ಆ ಮಹಾಬಲಶಾಲಿಯಾದ ಗಣಪತಿಯು ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತಾ ಮೂರು ಲೋಕದ ಸಂರಕ್ಷಣೆಗೋಸ್ಕರವಾಗಿ ಅಲ್ಲಿಯೇ ನೆಲಸಿರುವನು. ॥೨೪॥

ಹಿಂದೆ ತ್ರಿಪುರಾಂತಕನಾದ ಪರಶಿವನು ಗಜಾನನನನ್ನು ಸ್ತೋತ್ರಮಾಡಿದ ಕ್ರಮ ಹೀಗಿದೆ: — ವಿಘ್ನಗಳ ಸಮೂಹಗಳನ್ನು ನಾಶಮಾಡುವ ಸ್ವಭಾವವುಳ್ಳವನೂ, ತಾಲವೃಕ್ಷಗಳಂತಿರುವ ಕಿವಿಯ ಗಾಳಿಯಿಂದಲೇ ಅಲ್ಲಾಡಿಸಲ್ಪಟ್ಟ ಪರ್ವತಮೂಲವುಳ್ಳವನೂ, ರಾಕ್ಷಸರ ಸಮೂಹವನ್ನು ನಾಶಮಾಡಿ ಭಕ್ತರನ್ನು ಕಾಪಾಡಲು ದಯಾಯುಕ್ತನಾಗಿ ಶೂಲಾಯುಧವನ್ನು ಹಿಡಿದಿರುವವನೂ, ದೇವತೆಗಳ ಸಕಲ ಕಾರ್ಯಗಳಿಗೂ ಮೂಲಭೂತನೂ ಆದ ವಿಘ್ನೇಶ್ವರನನ್ನು ಎಲ್ಲರೂ ಭಕ್ತಿಯಿಂದ ನಮಸ್ಕರಿಸಿರಿ. ॥೨೫॥

ತ್ರಿಪುರಾಸುರರನ್ನು ನಾಶಮಾಡಲುದ್ಯುಕ್ತನಾದ ಮಹಾದೇವನು ಅಲ್ಲಿ ಹೀಗೆ ಶ್ವೇತ ಗಣಪತಿಯನ್ನು ಸ್ತೋತ್ರಮಾಡಿ ಪ್ರಬಲ ಶತ್ರುಗಳನ್ನು ಜಯಿಸಿದನು. ಹಾಗೆಯೇ ಇಂದ್ರನೂ ವೃತ್ರಾಸುರನ ಮೇಲೆ ಯುದ್ಧಮಾಡಲು ಮೊದಲು ತನಗೆ ವಿಜಯವಾಗುವುದಕ್ಕೋಸ್ಕರ ವಿಘ್ನೇಶ್ವರನನ್ನು ಪೂಜಿಸಿ ಹೀಗೆ ಸ್ತೋತ್ರ ಮಾಡಿದನು. ॥೨೬-೨೭॥

॥ ಇಂದ್ರ ಉವಾಚ ॥

ಗಜಾನನಂ ನೌಮಿ ಸದೈವ ವಿಘ್ನ
ವಿನಾಶನಂ ಕಾಮಿತಕಾಮದಾಯಿನಂ ।
ಸನಾತನಂ ದೇವಗಣಾವನಂ ಸದಾ
ಸದಾಂತರಂ ತಂ ಗಣಪಂ ಚ ಪಾವನಂ ॥೨೮॥

॥ ವಿಷ್ಣುರುವಾಚ ॥

ವಿಘ್ನನಿವಾರಣ ವಾರಣವಕ್ತ್ರ
ಕಾರಣತಾರಣ ವಾರಣರೂಪ ।
ವಾರಣಭೂತಸಮೀರಣಭೂಭೃ
ದ್ಧಾರಣ ದೇವ ಸದಾ ಪ್ರಣತೋಽಸ್ಮಿ ॥೨೯॥

॥ ದೇವ್ಯುವಾಚ ॥

ಇಭಾನನಂ ಮತ್ಕುಲಭೂತನಂದನಂ
ಚಿರಂತನಂ ವಿಘ್ನಗಣಪ್ರಶಾತನಂ ।

---

ಭಕ್ತರ ಸಕಲ ವಿಘ್ನಗಳನ್ನು ನಾಶಮಾಡಿ, ಇಷ್ಟಾರ್ಥಗಳನ್ನು ಕೊಡುವ ಆ ಸನಾತನನೂ, ದೇವಗಣಗಳನ್ನು ಯಾವಾಗಲೂ ಕಾಪಾಡುವವನೂ, ಸದಾ ಆರಾಧಕರ ಸಮೀಪದಲ್ಲಿಯೇ ಇರುವವನೂ, ಪಾವನನೂ, ಆನೆಯ ಮುಖವುಳ್ಳವನೂ ಆದ ಗಣೇಶ್ವರನನ್ನು ನಮಸ್ಕರಿಸುತ್ತೇನೆಂದು ಇಂದ್ರನು ಭಕ್ತಿಯಿಂದ ಪ್ರಾರ್ಥಿಸಿದನು. ॥೨೮॥

ಸಕಲ ವಿಘ್ನಗಳನ್ನೂ ನಾಶಮಾಡುವವನೂ, ಆನೆಯಂತೆ ಮುಖವುಳ್ಳವನೂ ಪ್ರಪಂಚದ ಮಹಾಕಾರ್ಯಗಳಿಗೆ ಮೂಲ ಕಾರಣಭೂತನೂ, ಜಗತ್ತನ್ನು ಕಾಪಾಡುವವನೂ, ಆನೆಯ ರೂಪವುಳ್ಳವನೂ, (ಅಥವಾ ದುರ್ಮಾರ್ಗಪ್ರವರ್ತಕವಾಗದಂತೆ ಪ್ರಪಂಚವನ್ನು ತಡೆಯುವವನೂ) ಆನೆಯಂತಿರುವ ಪಂಚಮಹಾಭೂತಗಳನ್ನು ಸ್ವೇಚ್ಛೆಯಾಗಿ ಎಳೆಯುವ ಸರ್ವವ್ಯಾಪಿಯೂ, ವಿಘ್ನಪರ್ವತವನ್ನು ಧರಿಸಿದವನೂ ಆದ ದೇವನೇ, ನಿನಗೆ ಯಾವಾಗಲೂ ನಾನು ನಮಸ್ಕಾರಮಾಡುತ್ತೇನೆಂದು ವಿಷ್ಣುವು ಸ್ತೋತ್ರಮಾಡಿದನು. ॥೨೯॥

ಆನೆಯಮುಖದಂತೆಮುಖವುಳ್ಳವನೂ, ನಮ್ಮ ವಂಶಕ್ಕೆ ಆನಂದವನ್ನುಂಟು

ಫಲಾದನಂ ಶೋಕವಿನಾಶನಂ ಸತಾಂ
ತ್ವದ್ಭಕ್ತಿಭಾಜಂ ಹೃದಯೇ ಪ್ರಣಮ್ಯತಾಂ ॥೩೦॥

॥ ಅಗಸ್ತ್ಯ ಉವಾಚ ॥

ಅಪಿ ಹರಸಿ ಪಾಪವೃಂದಂ ಲೋಕಂ
ಸೃಜಸ್ಯವಸಿ ನೋ ಭವ ಮೇ ಶರಣ್ಯಃ ।
ಕಾರುಣ್ಯಪೂರ್ಣಹೃದಯೋಽಸಿ ಸನಾತನೋಽಸಿ
ತ್ವಾಮಾಶ್ರಯಾಮಿ ಸತತಂ ವಿತಥಂ ದಧಸ್ವ ॥೩೧॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ತೇ ಗಣನಾಯಕಂ ಶ್ರುತಿಶಿರೋವೇದ್ಯಾತ್ಮಕಂ ತತ್ರ ವೈ
ಸಂಪೂಜ್ಯ ಪ್ರಮಥಾಧಿನಾಥಮಹಾಲಿಂಗಂ ಚ ದೇವೀಮಪಿ ।

---

ಮಾಡುವವನೂ, ಪುರಾತನನೂ, ವಿಘ್ನಸಮೂಹವನ್ನು ನಾಶಮಾಡುವವನೂ, ಹಣ್ಣುಗಳನ್ನು ತಿನ್ನುವವನೂ, ಮನಸ್ಸಿನಲ್ಲಿ ನಿನ್ನಲ್ಲಿ ಭಕ್ತಿಯಿಟ್ಟು ನಿನಗೆ ನಮಸ್ಕಾರ ಮಾಡುವ ಸತ್ಪುರುಷರಿಗೆ ಉಂಟಾಗುವ ಶೋಕವನ್ನು ನಾಶಮಾಡುವವನೂ, ಆದ ಗಣಪತಿಯನ್ನು ನಾನು ನಮಸ್ಕರಿಸುವೆನೆಂದು ದೇವಿಯು ಭಕ್ತಿಯಿಂದ ಸ್ತೋತ್ರ ಮಾಡಿದಳು. ॥೩೦॥

ಪಾಪಗಳ ಸಮೂಹದಿಂದ ನರಳುತ್ತಿರುವ ಜನಗಳನ್ನು ಸಂಹರಿಸಿ, ಈ ಪ್ರಪಂಚದ ಸೃಷ್ಟಿ, ಸ್ಥಿತಿ, ಕಾರ್ಯಗಳನ್ನೆಸಗುವ ಸ್ವಾಮಿಯೇ! ಶರಣಾಗತನಾಗಿ ಬಂದಿರುವ ನನ್ನನ್ನು ಕಾಪಾಡು. ದಯಾಪೂರ್ಣವಾದ ಹೃದಯವುಳ್ಳವನೂ, ಪರಮ ಪ್ರಾಚೀನನೂ ನೀನೇ ಆಗಿರುವೆ. ಆದ್ದರಿಂದಲೇ ಅನವರತವೂ ನಿನ್ನನ್ನೇ ನಾನು ಆಶ್ರಯಿಸಿರುವೆನು. ಸತ್ಯವಾಗಿಯೂ ನನ್ನನ್ನು ಬಿಡದೇ ಉದ್ಧಾರಮಾಡುವನಾಗೆಂದು ಅಗಸ್ತ್ಯಮುನಿಯು ಶ್ವೇತಗಣಪತಿಯನ್ನು ಸ್ತೋತ್ರಮಾಡಿದನು. ॥೩೧॥

ಈರೀತಿ ಮುನಿಗಳೆಲ್ಲರೂ ಒಂದುಸಾರಿ ಬ್ರಹ್ಮವಿಷ್ಣ್ವಾದಿದೇವತೆಗಳೊಡನೆ ವೇದಾಂತಗೋಚರಸ್ವರೂಪನಾದ ಆ ಗಣಾಧಿಪತಿಯನ್ನು ಅಲ್ಲಿ ಪೂಜಿಸಿ, ಪ್ರಮಥ ಗಣಗಳಿಗೆ ಅಧಿಪತಿಯಾದ ಪರಶಿವನ ಉನ್ನತವಾದ ಲಿಂಗವನ್ನೂ ದೇವಿಯನ್ನೂ ಸಹ ಪೂಜೆಮಾಡಿದರು. ನಮಸ್ಕಾರಮಾಡುವ ತನ್ನ ಭಕ್ತರಿಗೆ ಇಷ್ಟಾರ್ಥಗಳನ್ನು

**ವಿಘ್ನೇಶಂ ನತಕಾಮದಂ ಪ್ರತಿಪದಂ ಸಂಪತ್ಪ್ರದಂ ಶಾಶ್ವತಂ**
**ಶ್ವೇತಾಖ್ಯಂ ಕಿಲ ದಕ್ಷಿಣಾವೃತಿಮಹಾಸ್ಥಾನೇ ಸ್ಥಿತಂ ವೈ ಮುದಾ ॥೩೨॥**

**ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ**
**ಶಿವಸ್ಥಾನಶ್ವೇತವಿಘ್ನೇಶವೈಭವೋನಾಮೈಕೋನವಿಂಶೋಽಧ್ಯಾಯಃ**

---

ಕೊಡುವವನೂ, ಹೆಜ್ಜೆಹೆಜ್ಜೆಗೂ ಐಶ್ವರ್ಯವನ್ನುಂಟುಮಾಡುವವನೂ, ಶಾಶ್ವತ ಸ್ವರೂಪನೂ, ವಿಘ್ನಗಳಿಗೆಲ್ಲಾ ಒಡೆಯನೂ, ಆದ ಶ್ವೇತಗಣಪತಿಯನ್ನು ಆ ದಕ್ಷಿಣಾವೃತಿಮಹತ್ಸ್ಥಾನದಲ್ಲಿ ಪ್ರೀತಿಯಿಂದ ಪೂಜಿಸಿ ಸ್ತೋತ್ರಮಾಡಿ ಧನ್ಯರಾದರೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಮುನಿಗಳಿಗೆ ಹೇಳಿದನು. ॥೩೨॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶಿವಸ್ಥಾನದಲ್ಲಿರುವ ಶ್ವೇತವಿಘ್ನೇಶ್ವರನ ವರ್ಣನೆಯೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ವಿಂಶೋಽಧ್ಯಾಯಃ

|| ಸ್ಕಂದ ಉವಾಚ ||

**ತದ್ವೈಭವಂ ತದಾ ಪ್ರಾಹ ಸ್ಕಂದಸ್ಸ್ವಾಮಿಗಿರೇಸ್ತದಾ ।**
**ಜೈಗೀಷವ್ಯಾಯ ಮುನಯೇ ಪೃಚ್ಛತೇ ಭಕ್ತಿಪೂರ್ವಕಂ ॥೧॥**

|| ಮುನಯ ಊಚುಃ ||

**ಜೈಗೀಷವ್ಯೇನ ಮುನಿನಾ ಪೃಚ್ಛತೇ ತೇನ ತತ್ರ ಹಿ ।**
**ಸ ಸ್ವಾಮಿಶೈಲವಿಭವಂ ಕಥಮುಕ್ತಂ ವದಾಧುನಾ ॥೨॥**

---

## ಇಪ್ಪತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಪಶುಪೇಶಗಿರಿಯ ವರ್ಣನೆಯಾದ ಮೇಲೆ ಸ್ವಾಮಿಗಿರಿಯ ವೈಭವವನ್ನು ಭಕ್ತಿಪುರಸ್ಸರವಾಗಿ ಪ್ರಶ್ನೆಮಾಡುತ್ತಿರುವ ಜೈಗೀಷವ್ಯಮುನಿಗೆ ಈರೀತಿ ಹೇಳಿದನು, ಎಂದು ಸೂತಮಹಾಮುನಿಗಳು ಋಷಿಗಳ ಸಮಕ್ಷಮದಲ್ಲಿ ನುಡಿಯಲು, ಕೂಡಲೇ ಆ ಋಷಿಗಳೆಲ್ಲರೂ, ॥೧॥

ಸೂತಮಹಾಮುನಿಯೇ, ಕುಮಾರಸ್ವಾಮಿಯನ್ನು ಕುರಿತು ಪ್ರಶ್ನೆಮಾಡಿದ ಜೈಗೀಷವ್ಯಮುನಿಗೆ ಸ್ಕಂದದೇವನು ಸ್ವಾಮಿಶೈಲವೈಭವವನ್ನು ಹೇಗೆ ವಿವರಿಸಿದನು, ಅದನ್ನು ಈಗ ನನಗೆ ಹೇಳುವನಾಗು, ಎಂದು ಸೂತಮುನಿಯನ್ನು ವಿನಯದಿಂದ ಪ್ರಾರ್ಥಿಸಿದರು. ಅವರ ಪ್ರಾರ್ಥನೆಯಂತೆ ಸೂತರು ಸ್ವಾಮಿಶೈಲವನ್ನು ವರ್ಣಿಸಿ ಹೇಳತೊಡಗಿದರು. ॥೨॥

॥ ಸೂತ ಉವಾಚ ॥

ಜೈಗೀಷವ್ಯಸ್ತದಾ ಪ್ರಾಹ ಸ್ಕಂದಂ ತಾರಕನಾಶನಂ ।
ಮುನಿಭಿರ್ಗಣವೃಂದೈಶ್ಚ ತಮುಪೃಚ್ಛಚ್ಚ ಶಾಂಕರಂ ॥೩॥

॥ ಜೈಗೀಷವ್ಯ ಉವಾಚ ॥

ವೃದ್ಧಾದ್ರಿಶೃಂಗಂ ಕೈಲಾಸಾತ್ಕಾವೇರ್ಯಾ ಉತ್ತರೇ ತಟೇ ।
ನಿಪಾತಿತಂ ವಾಯುನೇತಿ ತ್ವಯೋಕ್ತಂ ಪೂರ್ವಮೇವ ಹಿ ॥೪॥

ತದ್ವೈಭವಂ ಮಮ ಬ್ರೂಹಿ ಸ್ಕಂದ ಭಕ್ತಸ್ಯ ತೇಽಧುನಾ ।
ಸಹೈಭಿರ್ಮುನಿಭಿರ್ದೇವೈರ್ಗಣವೃಂದೈಶ್ಚ ಸತ್ತಮ ॥೫॥

ಜೈಗೀಷವ್ಯವಚಃ ಶ್ರುತ್ವಾ ತಾರಕಾರಿರಭಾಷತ ।೬॥

॥ ಶ್ರೀ ಸ್ಕಂದ ಉವಾಚ ॥

ಮೇರೋರ್ಮೂರ್ಧ್ನಿ ಸ್ಥಿತೇ ತತ್ರ ಕೈಲಾಸೇ ದಕ್ಷಿಣೇ ಮಮ ।
ಶೃಂಗಸಂಗಸಮಾಭಾಸಮಣಿಗೋಪುರಮಂಟಪಂ ॥೭॥

---

ಓ ಶೌನಕಾದಿಮುನಿಗಳಿರಾ, ಆ ಜೈಗೀಷವ್ಯಮುನಿಯು ಇತರ ಮುನಿಗಳೊಡನೆಯೂ, ಶಿವಗಣಗಳೊಡನೆಯೂ ಕೂಡಿ ಶಂಕರಪುತ್ರನೂ, ತಾರಕಾಸುರನನ್ನು ನಾಶಮಾಡಿದವನೂ ಆದ ಕುಮಾರಸ್ವಾಮಿಯನ್ನು ಕುರಿತು ಈರೀತಿ ಪ್ರಶ್ನೆ ಮಾಡಿದನು. ॥೩॥

ಕುಮಾರಸ್ವಾಮಿಯೇ, ಹಿಂದೆ ನೀನು ಪುರಾತನವಾದ ಕೈಲಾಸಪರ್ವತದ ಶೃಂಗವು ವಾಯುವಿನಿಂದ ಹೊಡೆಯಲ್ಪಟ್ಟು ಕಾವೇರೀನದಿಯ ಉತ್ತರತೀರದಲ್ಲಿ ಬಿದ್ದಿತೆಂದು ಹೇಳಿದೆಯಲ್ಲವೆ? ಆ ಶಿಖರದ ವೈಭವವನ್ನು ನಿನ್ನ ಭಕ್ತನಾದ ನನಗೆ ಈಗ ಹೇಳುವನಾಗು. ದೇವಶ್ರೇಷ್ಠನೇ, ಈ ಮುನಿಗಳೂ, ದೇವತೆಗಳೂ ಮತ್ತು ಶಿವಗಣಗಳ ಸಮೂಹಗಳೊಡನೆ ಅದನ್ನು ಕೇಳಲು ಕುತೂಹಲವುಳ್ಳವನಾಗಿರುವೆನೆಂದು ಜೈಗೀಷವ್ಯಮುನಿಯು ಪ್ರಾರ್ಥಿಸಲು ಆಗ ತಾರಕಾಸುರಶತ್ರುವಾದ ಕುಮಾರಸ್ವಾಮಿಯು ಅವನ ಮಾತುಗಳನ್ನು ಕೇಳಿ ಇಂತೆಂದನು. ॥೪-೫-೬॥

ಜೈಗೀಷವ್ಯಮುನಿಯೇ, ಮೇರುಪರ್ವತದ ಶಿಖರದಲ್ಲಿರುವ ದಕ್ಷಿಣಕೈಲಾಸ ಪರ್ವತದಲ್ಲಿ ದಿವ್ಯಶಿಖರಗಳಿಂದ ಹೊಳೆಯುತ್ತಿದ್ದ ರತ್ನಗೋಪುರಗಳೂ, ದಿವ್ಯ

ಮಯೂರರಾಜಪ್ರಾಕಂಪಮಣಿಧ್ವಜವಿರಾಜಿತಂ ।
ಚಂಪಕಾಶೋಕಪೂತಾಂಕಂ ದೇವ್ಯಾ ಪುಣ್ಯವನಾವೃತಂ ॥೮॥

ಮತ್ತಕೋಕಿಲಹಂಸಾಲಿಮಯೂರಖಗಶೋಭಿತಂ ।
ಶುಕಶಾರಿಕನಾದ್ಯೈಶ್ಚ ಸುಪಂಕಜಸರೋವರೈಃ ॥೯॥

ಸಂಶೋಭ್ಯಮಾನಂ ಮೃಗಿಭಿಃ ಶೃಂಗಂ ರೌಪ್ಯಚಲಾಭಿಧಂ ।
ತತ್ರೇಶಾನೇನ ಮತ್ಪೂಜಾ ಕೃತಾ ಮನ್ಮೂರ್ತಿಮಸ್ತಕೇ ॥೧೦॥

ಹಸ್ತಶಕ್ತಿಧರಾಂ ಮೂರ್ತಿಂ ಸೋಷ್ಣೀಷಮಣಿಕುಂಡಲಾಂ ।
ಕಟಿಕಾಕ್ರಾಂತಹಸ್ತಾದ್ಯಾಂ ಕಟಿಕಾಂಚೀವಿರಾಜಿತಾಂ ॥೧೧॥

ಸುವರ್ಣೋತ್ಪಲಪತ್ರಾದಿಹಾರಧಾರಿತಕಂಧರಾಂ ।
ಪದ್ಮಪತ್ರೇಕ್ಷಣಾಂ ದಿವ್ಯಾಂ ಬಿಂಬಾಧರಸುಶೋಭಿತಾಂ ॥೧೨॥

---

ಮಂಟಪಗಳೂ ವಿಶೇಷವಾಗಿದ್ದುವು. ಗಂಡುನವಿಲುಗಳ ಆಕೃತಿಯಿಂದ ಚಲಿಸುತ್ತಿರುವ ಅನೇಕ ರತ್ನಧ್ವಜಗಳಿದ್ದವು. ಸಂಪಿಗೆ, ಅಶೋಕ ಮುಂತಾದ ವೃಕ್ಷರಾಜಿಗಳಿಂದ ಶೋಭಿಸುವ ದೇವಿಯ ಪುಣ್ಯವನವು ಸರ್ವತ್ರ ಆವರಿಸಿದ್ದಿತು. ॥೭-೮॥

ಆ ಶಿಖರದಲ್ಲಿ ಮದಿಸಿದ ಕೋಗಿಲೆಗಳೂ, ಹಂಸಸಮೂಹಗಳೂ, ನವಿಲುಗಳೂ ಇವೇ ಮುಂತಾದ ನಾನಾ ಪ್ರಾಣಿಗಳು ಗುಂಪುಗುಂಪಾಗಿ ಶೋಭಿಸುತ್ತಿದ್ದುವು. ಗಿಣಿ, ಶಾರಿಕ ಮುಂತಾದ ಪಕ್ಷಿಗಳ ಧ್ವನಿಗಳಿಂದಲೂ, ಉತ್ತಮವಾದ ಕಮಲ ಸರಸ್ಸುಗಳಿಂದಲೂ, ಹೆಣ್ಣುಜಿಂಕೆಗಳಿಂದಲೂ, ರಜತಾಚಲ ಸಂಜ್ಞಕವಾದ ಈ ಶಿಖರವು ವಿರಾಜಿಸುತ್ತಿದ್ದಿತು. ಆ ಶಿಖರದಲ್ಲಿ ಈಶಾನನು ನನ್ನ ಮೂರ್ತಿಯನ್ನಿಟ್ಟು ವಿಧಿವತ್ತಾಗಿ ಪೂಜೆಮಾಡುತ್ತಿದ್ದನು. ॥೯-೧೦॥

ಅಲ್ಲಿ ನನ್ನ ಮೂರ್ತಿಯಾದರೋ ಕೈಯಲ್ಲಿ ಶಕ್ತ್ಯಾಯುಧವನ್ನು ಹಿಡಿದು ನಿಂತಿರುವಂತಿದ್ದಿತು. ರತ್ನಮಯವಾದ ಕವಚ ಕುಂಡಲಗಳಿಂದ ಯುಕ್ತವಾಗಿದ್ದಿತು. ಕಟಕ (ತೋಳ್ಬಂದಿ) ದಿಂದಲಂಕೃತವಾದ ಕೈಗಳಿಂದಲೂ, (ಅಥವಾ ಕೈಬಳೆಗಳಿಂದ ಕೂಡಿದುದೂ) ಪಟ್ಟೆಯಿಂದ ಶೋಭಿಸುತ್ತಿದ್ದ ಸೊಂಟದಿಂದಲೂ, ಚಿನ್ನದ ನೈದಿಲೆ ಹೂ, ಪತ್ರೆ ಮುಂತಾದವುಗಳಿಂದ ರಚಿತವಾದ ಹಾರವನ್ನು ಧರಿಸಿದ ಕೊರಳಿನಿಂದಲೂ ಸುಂದರವಾಗಿದ್ದಿತು. ತಾವರೆಯ ಎಸಳಿನಂತೆ ನೀಳವೂ, ವಿಶಾಲವೂ ಆದ

ಪೀತಕೌಶೇಯವಸನಾಂ ಸರ್ವಾಂಗಾಲಿಪ್ತಚಂದನಾಂ ।
ಸಂಪೂಜ್ಯ ವರಿವಸ್ಯಾಭಿಃ ಸದೈವ ಹಿ ಸುರಾದಿಭಿಃ ॥೧೩॥

ಧೂಪೈರ್ದೀಪೈಶ್ಚ ನೈವೇದ್ಯೈರ್ಭಕ್ಷ್ಯೈರ್ಭೋಜ್ಯೈರ್ಮನೋಹರೈಃ ।
ತಾಂಬೂಲನೀರಾಜನಕೈಃ ಪ್ರಣಾಮೈಃಪ್ರಕ್ರಮೈಸ್ತವೈಃ ॥೧೪॥

ಸ್ತೌತಿ ಸ್ಮ ಪ್ರಾಂಜಲಿರ್ಮಾಂ ಹಿ ಈಶಾನೋ ಮಾಂ ಚ ತತ್ರ ವೈ ॥೧೫॥

॥ ಈಶಾನ ಉವಾಚ ॥

ಸ್ಕಂದಾನಂದಿತ ದೇವವೃಂದನಿವಹಹಸ್ತಸ್ಥಶಕ್ತ್ಯಾ ಸುರಾ
ಶೂರಾಪಾರ ಸುತಾರಕಪ್ರಹರಣೇ ಸಿಂಹಶ್ಚ ಶತ್ರೋರ್ನಮಃ ।
ವಲ್ಲೀರಲ್ಲಕಭಲ್ಲಶೂಲನಿಹತಾಪಾರಾರಿವೃಂದಾಂತಕ
ಧ್ವಾಂತಾಪಾರವಿಕಾರ ಶೂರ ಭಗವನ್ಶಂಭೋಃ ಪ್ರಿಯಸ್ತ್ವಂ ಸುತಃ ॥೧೬॥

---

ಕಣ್ಣುಗಳೂ, ದೇವಾಂಶಸಂಭೂತವಾದ ತೇಜಸ್ಸೂ, ತೊಂಡೆಯ ಹಣ್ಣಿನಂತಿರುವ ಕೆಳದುಟಿಯೂ, ಹೊಂಬಣ್ಣದ ರೇಷ್ಮೆಯ ಉಟ್ಟ ಬಟ್ಟೆಯೂ, ಸಕಲ ಅವಯವಗಳಿಗೂ ಲೇಪನಮಾಡಿಕೊಂಡಿರುವ ದಿವ್ಯ ಚಂದನವೂ, ನನ್ನ ಮೂರ್ತಿಯನ್ನು ಹೆಚ್ಚು ಕಾಂತಿಯುಕ್ತವನ್ನಾಗಿ ಮಾಡಿದ್ದುವು. ಇಂತಹ ದಿವ್ಯಮೂರ್ತಿಯನ್ನು ಈಶಾನನು ಇತರ ದೇವಾದಿಗಳೊಡನೆ ನಿತ್ಯವೂ ಪೂಜಿಸುತ್ತಿದ್ದನು. ॥೧೧-೧೨-೧೩॥

ಅನಂತರ ಧೂಪ, ದೀಪ, ಭಕ್ಷ್ಯ, ಭೋಜ್ಯ ಮುಂತಾದ ಮನೋಹರವಾದ ನೈವೇದ್ಯಪದಾರ್ಥಗಳಿಂದಲೂ, ತಾಂಬೂಲ, ಆರತಿ, ನಮಸ್ಕಾರ, ಉಪಚಾರ ಮತ್ತು ಸ್ತೋತ್ರಗಳಿಂದಲೂ ಸೇವಿಸಿ, ಈಶಾನನು ಅಲ್ಲಿ ಕೈಮುಗಿದುಕೊಂಡು ನನ್ನನ್ನು ಈರೀತಿ ಸ್ತುತಿಸುತ್ತಿದ್ದನು. ॥೧೪-೧೫॥

ದೇವತೆಗಳ ಸಮೂಹಕ್ಕೆ ಆನಂದವನ್ನುಂಟುಮಾಡಿದ ಕುಮಾರಸ್ವಾಮಿಯೇ, ನಿನ್ನ ಕೈಯಲ್ಲಿ ಹಿಡಿದಿರುವ ಶಕ್ತ್ಯಾಯುಧದಿಂದ ಶೂರರಾದ ಅಪರಿಮಿತ ರಾಕ್ಷಸರನ್ನು ಹೊಡೆದು ನಾಶಗೊಳಿಸಿದವನೇ, ಶತ್ರುಗಳನ್ನು ಹೊಡೆದೋಡಿಸುವುದರಲ್ಲಿ ಸಿಂಹಸದೃಶನಾದ ನಿನಗೆ ನಮಸ್ಕಾರ ಮಾಡುವೆನು. ವಲ್ಲೀದೇವಿಗೆ ಅತ್ಯಂತ ಪ್ರಿಯನಾದ ಕುಮಾರಸ್ವಾಮಿಯೇ, ಶೂಲಾಯುಧದಿಂದ ಅಪಾರವಾದ ಶತ್ರುಸಮೂಹಗಳನ್ನೆಲ್ಲಾ ಕೊಂದು, ಶತ್ರುಗಳಿಗೆ ಯಮಸದೃಶನಾದವನೇ, ಶತ್ರುಗಳೆಂಬ ಅಂಧಕಾರವ

ಪುರಾಽಸುರಭಯಾರ್ತಾಸ್ತೇ ದೇವಾ ಈಶಂ ಮಹೇಶ್ವರಂ ।
ಪ್ರಾರ್ಥಯಂತಿ ಮದುತ್ಪತ್ತಿಂ ಬ್ರಹ್ಮವಿಷ್ಣ್ವಾದಯಃ ಸುರಾಃ ॥೧೭॥

ತತಃ ಕಾಲೇನ ಮಹತಾ ಸಮುತ್ಪನ್ನೋಽಸ್ಮಿ ಶಂಕರಾತ್ ।
ಷಣ್ಮುಖಃ ಕೃತ್ತಿಕಾಸ್ತನ್ಯರಸೇನಾಪೋಷಯತ್ತನುಂ ॥೧೮॥

ಮಾಂ ದೇವಾಃ ಸೈನ್ಯನಿವಹೇ ಸೇನಾಪತ್ಯೇಽಭ್ಯಷೇಚಯನ್ ।
ಮಯಾ ಶಕ್ತಿಧರೇಣೈವ ತಾರಕೋ ನಿಹತೋ ಯುಧಿ ॥೧೯॥

ಭೂರೋಧಃ ಸಿಂಹವಕ್ರಶ್ಚ ದೈತ್ಯಾಶ್ಚಾನ್ಯೇ ಮಹಾಬಲಾಃ ।
ವವರ್ಷುಃ ಕುಸುಮಂ ದೇವಾಃ ದುಂದುಭೀಶ್ಚಾಪ್ಯವಾದಯನ್॥೨೦॥

ನೃತ್ಯಂತ್ಯಪ್ಸರಸಾಂ ಸಂಘಾ ಗಂಧರ್ವಾಶ್ಚ ಜಗುಃ ಕಲಂ ।
ನಿಹತೇ ತಾರಕೇ ತತ್ರ ಶೂರೇ ಸಿಂಹಾಸ್ಯಕೇ ರಿಪೌ ॥೨೧॥

---

ನ್ನೆಲ್ಲಾ ಹೋಗಲಾಡಿಸಿ, ಶೂರನೆನಿಸಿದ ದೇವನೇ, ಶಂಭುವಿನ ಪ್ರೀತಿಪಾತ್ರನಾದ ಕುವರನೆನಿಸಿದ ನೀನು ಭಗವಂತನೆಂದು ಪ್ರಖ್ಯಾತನಾಗಿರುವೆ. ಇಂತಹ ನಿನಗೆ ನಮಸ್ಕಾರ ಮಾಡುತ್ತೇನೆ. ||೧೬||

ಹಿಂದೆ ತಾರಕನೇ ಮೊದಲಾದ ರಾಕ್ಷಸರ ಭಯದಿಂದ ಪೀಡಿತರಾದ ಬ್ರಹ್ಮ, ವಿಷ್ಣು ಮುಂತಾದ ದೇವತೆಗಳು ಸರ್ವೇಶ್ವರನಾದ ಮಹೇಶನಲ್ಲಿಗೆ ಹೋಗಿ ನನ್ನ ಉತ್ಪತ್ತಿಗಾಗಿ ಪ್ರಾರ್ಥನೆ ಮಾಡಿದರು. ಆದಾದ ಎಷ್ಟೋ ಕಾಲವಾದಮೇಲೆ ಷಣ್ಮುಖನೆನಿಸಿದ ನಾನು ಶಂಕರನಿಂದಲೇ ಜನಿಸಿದೆನು. ಕೃತ್ತಿಕಾದೇವಿಯರು ತಮ್ಮ ಎದೆಹಾಲಿನಿಂದ ನನ್ನ ಈ ಶರೀರವನ್ನು ಕಾಪಾಡಿದರು. ||೧೭-೧೮||

ಆಮೇಲೆ ದೇವತೆಗಳು ನನಗೆ ದೇವಸೇನಾಧಿಪತ್ಯವನ್ನು ಕೊಟ್ಟು ಅಭಿಷೇಕ ಮಾಡಿದರು. ದೇವಸೇನಾಪತಿಯೆನಿಸಿದ ನಾನು ಶಕ್ತ್ಯಾಯುಧಧಾರಿಯಾಗಿ ಯುದ್ಧದಲ್ಲಿ ತಾರಕನನ್ನು ಸಂಹರಿಸಿದೆನು. ಭೂರೋಧ, ಸಿಂಹವಕ್ರರೆಂಬ ಅತ್ಯಂತ ಬಲಶಾಲಿಗಳಾದ ಇತರ ದೈತ್ಯರೂ ನನ್ನಿಂದ ಸಂಹರಿಸಲ್ಪಟ್ಟರು. ||೧೯||

ಅದನ್ನು ನೋಡಿ ದೇವತೆಗಳು ಹೂಮಳೆಗರೆದರು ಮತ್ತು ದುಂದುಭಿವಾದ್ಯಗಳಿಂದ ಧ್ವನಿಮಾಡಿದರು, ಅಪ್ಸರಸ್ತ್ರೀಯರು ಗುಂಪಾಗಿ ನಾಟ್ಯವಾಡಿದರು, ಗಂಧರ್ವರು ಅವ್ಯಕ್ತಮಧುರವಾಗಿ ಸಂಗೀತವನ್ನು ಪಾಡಿದರು. ಸಿಂಹದಂತೆ ಮುಖ

ಇಂದ್ರಃ ಸ್ವಕನ್ಯಕಾಂ ಮಹ್ಯಮುದದಾದ್ದೇವಸೇನಕಾಂ ।
ವಲ್ಲೀ ಪರಿಣತಾ ಚಾಪಿ ಪ್ರಿಯಂಗುಪರಿಪಾಲಿನೀ ॥೨೨॥

ತತ್ಪಿತ್ರಾ ದಾಶನಾಥೇನ ದತ್ತಾ ಮಹ್ಯಂ ಸ್ವಕನ್ಯಕಾ ।
ಧ್ವಜಶ್ಚ ಕೌಕ್ಕುಟೋ ಮೇಽದ್ಯ ಮಯೂರೋ ವಾಹನಂ ಮಮ ॥೨೩॥

ಹತ್ವಾ ಭವದ್ದ್ರುಹಾನ್ಸರ್ವಾನ್ ಶೂರಸ್ತಾರಕಮೇವ ಚ ।
ಪಿತರಂ ದೇವಮೀಶಾನಮಪಶ್ಯಂ ಗಣಸಂವೃತಂ ॥೨೪॥

ಮಜ್ಜನನ್ಯಾ ಮಹಾದೇವ್ಯಾ ಪ್ರಣಮ್ಯೇಶಸ್ತಥಾಬ್ರವೀತ್ ।
ಶೂರತಾರಕಸಂಹಾರಂ ಕನ್ಯಾದ್ವಯಪರೀಣಯಂ ॥೨೫॥

ಏತಸ್ಮಿನ್ನಂತರೇ ಬ್ರಹ್ಮಾ ಶಿವಸೇವಾರ್ಥಮಾಗತಃ ।
ಔದ್ಧತ್ಯೇನಾಬ್ರುವಂತಂ ಚ ಕಿಂ ತ್ವರ್ಚಸಿ ಚತುರ್ಮುಖ ॥೨೬॥

---

ವುಳ್ಳವನೂ, ಶೂರನೂ, ಶತ್ರುವೂ ಆದ ತಾರಕಾಸುರನು ನನ್ನಿಂದ ಕೊಲ್ಲಲ್ಪಟ್ಟ ಮೇಲೆ ಇಂದ್ರನು ಸಂತುಷ್ಟನಾಗಿ ತನ್ನ ಮಗಳಾದ ದೇವಸೇನೆಯನ್ನು ಕೊಟ್ಟು ಮದುವೆ ಮಾಡಿದನು. ॥೨೦-೨೧॥

ಅನಂತರ ಪ್ರಿಯಂಗುವೃಕ್ಷದಂತೆ ರಕ್ಷಿಸಲ್ಪಟ್ಟಿದ್ದ ವಿದ್ಯಾವತಿಯಾದ ವಲ್ಲೀ ದೇವಿಯನ್ನು ನಾನು ಅವಳ ತಂದೆಯಾದ ಬೇಡರ ರಾಜನಿಂದ ಪೂಜಿಸಲ್ಪಟ್ಟವನಾಗಿ ಮದುವೆಯಾದೆನು. ನನ್ನ ಧ್ವಜವು ಕೋಳಿಯ ಗುರುತುಳ್ಳದ್ದು. ನವಿಲು ನನಗೆ ವಾಹನವಾಗಿರುವುದು. ಈ ರೀತಿಯಾದ ನಾನು ನಿಮಗೆ ದ್ರೋಹಿಗಳಾಗಿದ್ದವರನ್ನೆಲ್ಲಾ ಕೊಂದು, ಶೂರನಾದ ತಾರಕನನ್ನೂ ಸಂಹರಿಸಿದಮೇಲೆ ಶಿವಗಣಗಳೊಡನೆ ಯುಕ್ತನಾಗಿದ್ದ ತಂದೆಯಾದ ಈಶಾನದೇವನನ್ನು ದರ್ಶನಮಾಡಿದೆನು. ॥೨೨-೨೩-೨೪॥

ವಿನಯದಿಂದ ನಾನು ನಮಸ್ಕರಿಸಿದಮೇಲೆ, ಮಹೇಶ್ವರನು, ನನ್ನನ್ನು ನೋಡಿ, ದೇವಿಯ ಕಡೆ ತಿರುಗಿಕೊಂಡು, ಶೂರನಾದ ತಾರಕನನ್ನು ಕೊಂದ ಸಮಾಚಾರವನ್ನೂ, ಎರಡು ಕನ್ಯೆಯರ ಪಾಣಿಗ್ರಹಣದ ವಿಷಯವನ್ನೂ ವಿನೋದದಿಂದ ಮಾತನಾಡುತ್ತಿರುವಾಗ, ಅದೇ ಸಂದರ್ಭದಲ್ಲಿ ಬ್ರಹ್ಮನು ಶಿವನನ್ನು ಸೇವೆಮಾಡುವುದಕ್ಕೋಸ್ಕರ ಹಠಾತ್ತಾಗಿ ಅಲ್ಲಿಗೆ ಬಂದನು. ಹಾಗೆ ಉದ್ಧತನಾಗಿ

ಮದುಕ್ತಂ ಸರ್ವಮಾಕರ್ಣ್ಯ ಶಿವಾಮುಖಮಥಾಭ್ಯಗಾತ್ ।
ಬದ್ಧಃ ಕಾರಾಗೃಹೇ ಕ್ಷಿಪ್ತಃ ದೃಷ್ಟ್ವಾ ಮಚ್ಚೇಷ್ಟಿತಂ ಹರಃ ॥೨೭॥

ಮಾಮಾಹ ಮುಂಚ ಮುಂಚೇತಿ ಬ್ರಹ್ಮಾಣಂ ವಚನಂ ಮಮ ।
ಪಿತರಂ ಪ್ರಾಂಜಲಿರಹಮಬ್ರುವಂ ಕಿಮಯಂ ವಿಧಿಃ ॥೨೮॥

ಪ್ರಣವಾರ್ಥಂ ವಿಜಾನಾತಿ ಅರ್ಥಂ ಪಂಚಾಕ್ಷರಸ್ಯ ಚ ।
ಔದ್ಧತ್ಯಗರ್ವಸಂವೀತಃ ತ್ವತ್ಸಮೀಪಮಿಹಾಗತಃ ॥೨೯॥

ಮದ್ವಾಕ್ಯಂ ತತ್ಸಮಾಕರ್ಣ್ಯ ಮಾಮಭಾಷತ ಶಂಕರಃ ।
ಕಿಂ ತೇ ಚಿಕೀರ್ಷಿತಂ ಸ್ಕಂದ ಪ್ರಣವಾರ್ಥೋಽತ್ರ ಕೋಽತ್ರ ವೈ ॥೩೦॥

ಪಂಚಾಕ್ಷರಸ್ಯ ವಾ ಪುತ್ರ ಮಹ್ಯಂ ತ್ವಂ ಬ್ರೂಹಿ ಕೇವಲಂ ।
ಶಂಭೋರ್ವಚನಮಾಕರ್ಣ್ಯ ತಮಹಂ ತತ್ರ ಚಾಬ್ರುವಂ ॥೩೧॥

---

ಅಲ್ಲಿಗೆ ಬಂದದ್ದನ್ನು ನೋಡಿ, ಓ ಚತುರ್ಮುಖನೇ, ಮಾತನ್ನೇ ಆಡದೆ ಸಮಯವನ್ನು ನಿರೀಕ್ಷಿಸದೆ ಪೂಜೆಮಾಡಲು ಹೀಗೆ ಬರಬಹುದೇ ಎಂದು ಕೇಳಿದೆನು. ||೨೫-೨೬||

ಹೀಗೆ ನಾನಾಡಿದ ಬಿರುನುಡಿಗಳನ್ನು ಕೇಳಿ ಬ್ರಹ್ಮನು ದೇವಿಯ ಮುಖದ ಕಡೆಗೆ ನೋಡಿದನು. ಆಗ ನಾನು ಉದ್ಧತನಾದ ಬ್ರಹ್ಮನನ್ನು ಕಂಡಕೂಡಲೇ ಕಟ್ಟಿ ಕಾರಾಗೃಹದಲ್ಲಿಟ್ಟೆನು. ಈ ರೀತಿಯಾದ ನನ್ನ ವ್ಯಾಪಾರಗಳನ್ನು ನೋಡಿ, ಪರಶಿವನು, ಆ ಬ್ರಹ್ಮನನ್ನು ಬಿಟ್ಟುಬಿಡು ಎಂದು ಹೇಳಲು, ತಂದೆಯ ಮಾತುಗಳನ್ನು ಕೇಳಿ ನಾನು ಕೈಮುಗಿದುಕೊಂಡು ತಂದೆಯೇ, ಈ ಬ್ರಹ್ಮನಿಗೆ ಓಂಕಾರದ ಅರ್ಥವು ಗೊತ್ತಿದೆಯೇ? ಇವನು ಪಂಚಾಕ್ಷರಮಂತ್ರದ ಅರ್ಥವನ್ನು ಬಲ್ಲನೇ? ಏನೂ ಇಲ್ಲದೇ ಕೇವಲ, ಔದ್ಧತ್ಯ ಮತ್ತು ಅಹಂಕಾರಗಳಿಂದ ಯುಕ್ತನಾಗಿ ನಿನ್ನ ಸಮೀಪಕ್ಕೆ ಬಂದಿರುವನೆಂದು ಹೇಳಿದೆನು. ||೨೭-೨೮-೨೯||

ಆ ನನ್ನ ಮಾತುಗಳನ್ನು ಕೇಳಿ ಶಂಕರನು ನನ್ನೊಡನಿಂತೆಂದನು; ಮಗನೇ, ಈಗ ನೀನು ಅವನನ್ನು ಏನು ಮಾಡಬೇಕೆಂದಿರುವೆ? ಪ್ರಣವದ ಅರ್ಥವಾವುದು? ಪುತ್ರನೇ, ಶಿವಪಂಚಾಕ್ಷರ ಮಂತ್ರದ ಅರ್ಥವಾದರೂ ಏನಿರುವುದು? ಅದನ್ನು ನನಗೆ ಹೇಳೆಂದು ಕೇಳಲು ಆ ಶಂಭುವಿನ ಮಾತುಗಳನ್ನು ಕೇಳಿ ನಾನು ನಮ್ಮ ತಂದೆಗೆ ಇಂತೆಂದನು. ||೩೦-೩೧||

ಶಿಷ್ಯಾಯ ವೈ ವಿನೀತಾಯ ದದಾಮಿ ಪ್ರಣವಾರ್ಥಕಂ ।
ನಾಶಿಷ್ಯಾಯ ವದಾಮೀಶ ಪ್ರತಿಜ್ಞೇಯಂ ಮಮಾಧುನಾ ॥೩೨॥

ದೇವೋ ಮದ್ವಚಸಾ ತುಷ್ಟಃ ಪ್ರತ್ಯಭಾಷತ ಶಂಕರಃ ॥೩೩॥

॥ ಈಶ್ವರ ಉವಾಚ ॥

ಶಿಷ್ಯೋಽಹಂ ಭವತಃ ಸ್ವಾಮಿನ್ಪ್ರಣವಾರ್ಥಂ ವದಾದ್ಯ ಮಾಂ ॥೩೪॥

॥ ಸ್ಕಂದ ಉವಾಚ ॥

ತದಾ ಶಿವೇನ ಸಹಿತಃ ಶೃಂಗೇ ಸ್ವಾಮ್ಯಭಿಧೇ ಮಮ ।
ಸಮಾಗತೋಽಸ್ಮಿ ಕೈಲಾಸಾತ್ಕೈಲಾಸೇ ದಕ್ಷಿಣೇ ಮಮ ॥೩೫॥

ತಾರಕಬ್ರಹ್ಮಸಂಜ್ಞೇಶೋ ಲಿಂಗರೂಪೋ ಮದಗ್ರತಃ ।
ಶಿಷ್ಯಭಾವಮಗಾತ್ತತ್ರ ಸ್ವಾಮಿಶೈಲಾಖ್ಯಶೃಂಗಕೇ ॥೩೬॥

ತಸ್ಮೈ ಮಯಾಕಥಿ ಮುನೇ ಪ್ರಣವಾರ್ಥಂ ಮಹತ್ತರಂ ।
ಪಂಚಾಕ್ಷರೇಣ ಸಹಿತಃ ಶಿವಸ್ತತ್ರಾರ್ಚಯಚ್ಚ ಮಾಂ ॥೩೭॥

---

ಈಶ್ವರದೇವನೇ, ವಿನಯಗುಣಸಂಪನ್ನನಾದ ಶಿಷ್ಯನಿಗೆ ಮಾತ್ರ ನಾನು ಈ ಪ್ರಣವದ ಅರ್ಥವನ್ನು ಉಪದೇಶಮಾಡುವೆನು. ಶಿಷ್ಯನಲ್ಲದವನಿಗೆಂದಿಗೂ ಇದನ್ನು ಹೇಳುವುದಿಲ್ಲವೆಂದು ನನ್ನ ಪ್ರತಿಜ್ಞೆಯಿರುವುದು ಎಂದು ಹೇಳಿದ ನನ್ನ ಮಾತುಗಳಿಂದ ಸಂತುಷ್ಟನಾದ ಶಂಕರನು ನನ್ನನ್ನು ಕುರಿತು ಹೀಗೆಂದನು. ||೩೨-೩೩||

ಕುಮಾರಸ್ವಾಮಿಯೇ, ನಾನು ನಿನ್ನ ಶಿಷ್ಯನಾಗಿರುವೆನು ; ಈಗ ನನಗೆ ಪ್ರಣವಮಂತ್ರಾರ್ಥವನ್ನುಪದೇಶಿಸೆಂದು ಕೇಳಿದನು. ||೩೪||

ಆಗ ಕುಮಾರಸ್ವಾಮಿಯೆನಿಸಿದ ನಾನು ಶಿವನೊಡನೆ ಸ್ವಾಮಿ ಶೃಂಗಸಂಜ್ಞಕವಾದ ನನ್ನ ಶಿಖರಕ್ಕೆ ದಕ್ಷಿಣಕೈಲಾಸಶಿಖರದಿಂದ ಬಂದೆನು. ಅಲ್ಲಿಗೆ ಬಂದಮೇಲೆ ತಾರಕಬ್ರಹ್ಮಸಂಜ್ಞಕನಾಗಿ ಲಿಂಗರೂಪಿಯಾದ ಈಶ್ವರನೇ ನನ್ನ ಮುಂದೆ ಆ ಸ್ವಾಮಿಶೈಲಸಂಜ್ಞಕ ಶಿಖರದಲ್ಲಿ ಶಿಷ್ಯಭಾವವನ್ನೈದಿದನು. ||೩೫-೩೬||

ಜೈಗೀಷವ್ಯಮುನಿಯೇ, ಆಗ ನಾನು ಪರಶಿವನಿಗೆ ಅತ್ಯಂತ ಮಹಿಮಾಪೂರ್ಣವಾದ ಪ್ರಣವಾರ್ಥವನ್ನು ಹೇಳಿದೆನು. ಅದರಿಂದ ತುಷ್ಟನಾದ ಪರಶಿವನು

ಹೇ ಸ್ವಾಮಿಶೈಲವಸತೇ ವರಶಕ್ತಿಹಸ್ತ
ಶಸ್ತಾಸುರಾರಿನಿವಹಾಹವಶೋಭ್ಯಮಾನ ।
ತ್ವಾಂ ನೌಮಿ ಸೋಮಶಕಲಾಪರಿಪೂರ್ಣಮೌಲಿಃ
ತ್ವಚ್ಛೈಲಮೂಲಚಲತಾಂ ಕ್ವನು ದುಃಖಲೇಶಃ ॥೩೯॥

॥ ಸ್ಕಂದ ಉವಾಚ ॥

ಇತ್ಥಂ ಶ್ರೀಸ್ವಾಮಿಶೈಲೇ ಪ್ರಣವಮನುಮಹಾವಾಕ್ಯತಾತ್ಪರ್ಯಕಾರ್ಥಂ
ಜ್ಞಾತ್ವಾಭೂದಿತಿ ನಿಶ್ಚಲಾತ್ಮವಿಭವಃ ಸ್ಥಾಣುಃ ಪಿತಾ ಮೇ ಮುನೇ ।
ತತ್ರೈವೇಷ್ಟಫಲಪ್ರದಾನನಿಪುಣೇ ಸ್ಥಾನೇ ವರೇ ಪಾವನೇ
ಮಾಮಭ್ಯರ್ಚ್ಯ ನಿವಾಸಿನಂ ತ್ರಿಭುವನೇ ಸಿದ್ಧಿಂಗತಾಃ ಸಿದ್ಧಯಃ ॥೪೦॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಭಾಗೇ ಸ್ವಾಮಿಶೈಲವಿಭವೇ ಸ್ಕಂದಚಾರಿತ್ರವರ್ಣನಂ ನಾಮ ವಿಂಶೋಽಧ್ಯಾಯಃ

---

ಪಂಚಾಕ್ಷರಮಂತ್ರದೊಡನೆ ನನ್ನನ್ನು ಪೂಜೆಮಾಡಿ, ಸ್ವಾಮಿನಾಥನೆನಿಸಿದ ನನ್ನನ್ನು ನಾನಾರೀತಿ ಸ್ತೋತ್ರಮಾಡಿದನು. ಸಕಲ ಗುರುಗಳಿಗೂ ಗುರುವೆನಿಸಿದ ಆ ಪರಶಿವನು ತಾನು ನನಗೆ ನಮಸ್ಕಾರವನ್ನೂ ಮಾಡಿ ಇಂತೆಂದನು. ॥೩೭-೩೮॥

ಎಲೈ, ಸ್ವಾಮಿಶೈಲದಲ್ಲಿ ವಾಸಮಾಡುವವನೂ, ಉತ್ತಮವಾದ ಶಕ್ತ್ಯಾಯುಧವನ್ನು ಧರಿಸಿದವನೂ ಆದ ಸ್ಕಂದದೇವನೇ, ಸಕಲ ರಾಕ್ಷಸರನ್ನೂ ಇತರ ಶತ್ರುಗಳನ್ನೂ ಕತ್ತರಿಸಿ ಯುದ್ಧಭೂಮಿಯಲ್ಲಿ ಶೋಭಿಸುತ್ತಿರುವ ನಿನ್ನನ್ನು ಚಂದ್ರಕಲಾಪರಿಪೂರ್ಣಶಿರಸ್ಕನಾದ ನಾನು ಈಗ ನಮಸ್ಕರಿಸುವೆನು. ಎಲೈ ಕುಮಾರಸ್ವಾಮಿಯೇ, ನಿನ್ನ ಬೆಟ್ಟದ ಬುಡದಲ್ಲಿ ಸಂಚರಿಸುವವರಿಗೆ ದುಃಖದ ಲೇಶಾಂಶವಾದರೂ ಎಲ್ಲಿತಾನೇ ಉಂಟಾದೀತು ? ಎಂದು ಶಂಕರನು ಸ್ತೋತ್ರಮಾಡಿದನು.

ಜೈಗೀಷವ್ಯಮುನಿಯೇ, ಹೀಗೆ ನಮ್ಮ ತಂದೆಯೂ ಸಹ ಶ್ರೀ ಸ್ವಾಮಿಶೈಲದಲ್ಲಿ ನನ್ನಿಂದ ಪ್ರಣವಮಂತ್ರದ ಮಹಾವಾಕ್ಯಾರ್ಥದ ತಾತ್ಪರ್ಯವನ್ನರಿತು, ಶಾಶ್ವತವಾದ (ಚಂಚಲರಹಿತವಾದ) ಆತ್ಮವೈಭವವುಳ್ಳವನಾಗಿ ಸ್ಥಾಣುವೆಂದು ಪ್ರಖ್ಯಾತನಾದನು. ಸಕಲ ಇಷ್ಟಾರ್ಥಗಳನ್ನೂ ಕೊಡುವುದರಲ್ಲಿ ನಿಪುಣನೆನಿಸಿದ ಪಾವನವೂ

ಶ್ರೇಷ್ಠವೂ ಆದ ಸ್ಥಳದಲ್ಲಿ ನೆಲಸಿರುವ ನನ್ನನ್ನು ಪೂಜೆಮಾಡಿ, ಮೂರುಲೋಕದ ಸಿದ್ಧಪುರುಷರೂ ಸಿದ್ಧಿಯನ್ನು ಪಡೆದಿರುವರೆಂದು ಕುಮಾರಸ್ವಾಮಿಯು ಜೈಗೀಷವ್ಯ ಮುನಿಗೆ ಹೇಳಿದನು. ||೪೦||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದಲ್ಲಿನ ಉತ್ತರಾರ್ಧದಲ್ಲಿ ಸ್ವಾಮಿಶೈಲ ವೈಭವ ವರ್ಣನೆಯೆಂಬ ಇಪ್ಪತ್ತನೆಯ ಅಧ್ಯಾಯವು ಸಮಾಪ್ತವಾದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಏಕವಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ತತ್ಸ್ವಾಮಿಶೈಲಪ್ರಾಚ್ಯಾಂ ವೈ ಸ್ಥಾನಂ ಕೋಟೀಶ್ವರಾಭಿಧಂ ।
ಕೋಟೀಶ್ವರೋ ಮಹೇಶಾನಃ ಹೇರಂಡೇನ ಸಮರ್ಚಿತಃ ॥೧॥

ತುಹುಂಡಪುತ್ರೋ ಹೇರಂಡೋ ಮುನಿಃ ಕೋಟೀಶ್ವರಸ್ಥಲೇ ।
ಭಸ್ಮರುದ್ರಾಕ್ಷಸಂಪನ್ನೋ ರುದ್ರಪಂಚಾಕ್ಷರಾದರಃ ॥೨॥

ಶ್ವೇತಶ್ಮಶ್ರುಜಟಾಃ ಕುರ್ವನ್ಬ್ರಹ್ಮಪುತ್ರೋಪಶೋಭಿತಃ ।
ಕೋಟೀಶ್ವರಂ ತತ್ರ ಮುನಿಸ್ತ್ರಿವಾರಂ ಪೂಜಯನ್ ಸ್ಥಿತಃ ॥೩॥

ತುಷ್ಟುವೇ ತತ್ರ ದೇವೇಶಂ ಕೋಟೀಶಾನಂ ಶಿವಾಮಪಿ ॥೪॥

---

## ಇಪ್ಪತ್ತೊಂದನೆಯ ಅಧ್ಯಾಯ

ಆ ಸ್ವಾಮಿಶೈಲಕ್ಕೆ ಪೂರ್ವದಿಕ್ಕಿನಲ್ಲಿ ಕೋಟೀಶ್ವರಸಂಜ್ಞಕವಾದ ಮಹೇಶ್ವರನ ಕ್ಷೇತ್ರವೊಂದಿರುವುದು. ಕೋಟೀಶ್ವರಕ್ಷೇತ್ರದಲ್ಲಿರುವ ಮಹಾದೇವನನ್ನು ಹೇರಂಡಮುನಿಯು ಪೂಜಿಸಿದ್ದನು. ತುಹುಂಡನ ಮಗನಾದ ಹೇರಂಡಮುನಿಯು ಕೋಟೀಶ್ವರಕ್ಷೇತ್ರದಲ್ಲಿ ಭಸ್ಮರುದ್ರಾಕ್ಷಸಂಪನ್ನನಾಗಿ, ರುದ್ರ ಮತ್ತು ಪಂಚಾಕ್ಷರ ಮಂತ್ರಜಪದಲ್ಲಿ ಆದರವುಳ್ಳವನಾಗಿ, ನೊರೆತ ಗಡ್ಡ, ಮತ್ತು ಜಡೆಗಳಿಂದ ಬ್ರಹ್ಮಪುತ್ರನಂತೆ ಶೋಭಿಸುತ್ತಾ, ಆ ಕೋಟೀಶ್ವರ ದೇವನನ್ನು ಪ್ರತಿದಿನವೂ ಮೂರು ವೇಳೆಗಳಲ್ಲಿಯೂ ಪೂಜೆಮಾಡುತ್ತಾ ಇದ್ದನು. ಅವನು ಆ ಕೋಟೀಶ್ವರದೇವನನ್ನೂ

|| ಹೇರಂಡ ಉವಾಚ ||

ಶಂಭೋ ನಮಸ್ತೇಽಸ್ತು ಮಹೇಶ್ವರಾಯ
ಉಗ್ರಾಯ ಭೀಮಾಯ ಚ ಶಂಕರಾಯ ।
ಮೃತ್ಯುಂಜಯಾಯಾಂಧಕಸೂದನಾಯ
ಸನಾತನಾಯಾಥ ನಮಃ ಪರಸ್ಮೈ ||೫||

ತತ್ಸ್ತುತ್ಯಾ ತುಷ್ಟಹೃದಯೋ ತಸ್ಮೈ ಮುಕ್ತಿಂ ಪ್ರದತ್ತವಾನ್ ।
ತದಾರಭ್ಯ ಮಹತ್ಸ್ಥಾನಂ ಕಾವೇರ್ಯಾ ದಕ್ಷಿಣೇ ತಟೇ ||೬||

ಕುಂಭಘೋಣಾಭಿದಂ ಪುಣ್ಯಂ ಪಾವನಂ ಮುಕ್ತಿದಂ ಪರಂ ।
ಪೂರ್ವಮೇಕಾರ್ಣವೇ ಜಾತೇ ಕಲ್ಪೇ ತತ್ಪುರುಷೇಚ್ಛಯಾ ||೭||

ಪ್ರಳಯಂ ಹ್ಯಚರಚ್ಛಂಭುರ್ಜಾನುದಘ್ನೇಽಥ ಸಾಗರೇ ।
ಊರ್ಧ್ವಲೋಕಸಮಾಕೀರ್ಣಂ ತದಂಡಾರ್ಣವಲೇಪಿತೇ ||೮||

---

ಮತ್ತು ಜಗನ್ಮಂಗಳೆಯಾದ ದೇವಿಯನ್ನೂ ಆಗಾಗ ಈರೀತಿ ದರ್ಶನಮಾಡಿ ಸ್ತುತಿ ಸುತ್ತಿದ್ದನು. ||೧-೨-೩-೪||

ಸಮಗ್ರವಾದ ಐಶ್ವರ್ಯಸಂಪನ್ನನೂ, ಶತ್ರುಗಳಿಗೆ ಭಯಂಕರನೂ, ಉಗ್ರ ರೂಪನೂ, ಜಗನ್ಮಂಗಳಕರನೂ, ಮೃತ್ಯುವನ್ನು ಜಯಿಸಿದವನೂ, ಅಂಧಕಾಸುರ ನನ್ನು ನಾಶಮಾಡಿದವನೂ, ಪುರಾತನನೂ, ಪರಮಶ್ರೇಷ್ಠನೂ ಆದ ಶಂಭುವೇ, ನಿನಗೆ ನಮಸ್ಕಾರಮಾಡುತ್ತೇನೆಂದು ಹೇರಂಡಮುನಿಯು ಕೋಟೇಶ್ವರನನ್ನು ಪ್ರಾರ್ಥಿಸುತ್ತಿದ್ದನು. ||೫||

ಆ ಹೇರಂಡಮುನಿಯ ಸ್ತೋತ್ರದಿಂದ ಸಂತುಷ್ಟಾಂತರಂಗನಾದ ಪರಶಿವನು ಅವನಿಗೆ ಮೋಕ್ಷವನ್ನು ಕರುಣಿಸಿದನು. ಅದು ಮೊದಲುಗೊಂಡು ಕಾವೇರೀನದಿಯ ದಕ್ಷಿಣದಡದಲ್ಲಿ ಅದು ಪುಣ್ಯಕ್ಷೇತ್ರವೆನಿಸಿಕೊಂಡಿದೆ. ಹಾಗೆಯೇ ಕುಂಭಕೋ(ಘೋ)ಣ ವೆಂಬ ಮತ್ತೊಂದು ಪಾವನವೂ, ಮೋಕ್ಷಪ್ರದವೂ ಆದ ಕ್ಷೇತ್ರವೊಂದಿರುವುದು. ಹಿಂದೆ ಆ ಪರಮಪುರುಷನ ಇಚ್ಛೆಯಂತೆ ಕಲ್ಪಾಂತದಲ್ಲಿ ಪ್ರಪಂಚವೆಲ್ಲವೂ ಜಲ ಮಯವಾಗಿ ಒಂದೇ ಸಮುದ್ರವಾಗಿ ಗೋಚರಿಸಲು, ಆಗ ಶಂಭುವು ತನಗೆ ಮೊಳಕಾಲುದ್ದ ಬರುವ ಆ ಸಮುದ್ರದ ನೀರಿನಲ್ಲಿ ನಿಂತು ಲೋಕಪ್ರಳಯವನ್ನು

ದಿಗಂಬರೋ ಜಟಾಮೌಲಿಶ್ಚಂದ್ರಾಂಕೋ ನಾಗಭೂಷಣಃ ।
ಶೂಲಂ ಸ್ಕಂಧೇ ಸಮಾಧಾಯ ಭಸ್ಮಪುಂಡ್ರಾದಿಸೇವಿತಃ ॥೯॥

ಧುನ್ವನ್ಶೂಲಾಗ್ರತೋ ಧೂತಕುಲಾಚಲಗಣಂ ಶಿವಃ ।
ಉಚ್ಚೈರ್ಘೋಷೋ ಮಹಾದೇವಃ ಸಂಚರನ್ಸಾಗರಾಂಭಸಿ ॥೧೦॥

ದದರ್ಶ ಕಲಶಂ ತತ್ರ ವಿಹಿತಂ ಸಂಪ್ಲವೇ ಸ್ಥಿತಂ ।
ಬ್ರಹ್ಮಣಾ ಅಮೃತಂ ತಸ್ಮಿನ್ನಿಕ್ಷಿಪ್ತಂ ಸರ್ವಾಂತಕಾಲಕೇ ॥೧೧॥

ಕಲಶಂ ಪ್ರಲಯಾಂತೇಶೋ ಶೂಲಾಗ್ರೇಣಾಹರದ್ಧರಃ ।
ತದ್ಭಿನ್ನಂ ಕಲಶಂ ತತ್ರ ದ್ವೀಪೇ ಶೂನ್ಯಂತು ದಕ್ಷಿಣೇ ॥೧೨॥

ತದ್ಭಿನ್ನಂ ಕಲಶಂ ತತ್ರ ತದ್ಘೋಣಂ ಪೂರ್ವತಃ ಪತತ್ ।
ತಲ್ಲಿಂಗಂ ಘೋಣಕೇಶಾಖ್ಯಂ ದೃಷ್ಟಂ ಪಾಪಭಯಾಪಹಂ ॥೧೩॥

---

ನಿರೀಕ್ಷಿಸುತ್ತಿದ್ದನು. ಆ ಶಂಭುವಿನ ಅಂಡಪ್ರದೇಶದ ವರೆಗೂ ವ್ಯಾಪಿಸಿದ್ದ ಸಮುದ್ರದ ನೀರೂ, ಊರ್ಧ್ವಲೋಕಗಳನ್ನೂ ವ್ಯಾಪಿಸಿದ್ದಿತು. ||೬-೭-೮||

ಆಗ ಮಹಾದೇವನು ದಿಗಂಬರನಾಗಿಯೂ, ಜಟಾಮೌಳಿಯಾಗಿಯೂ, ಚಂದ್ರಕಲೆಯನ್ನು ತಲೆಯಲ್ಲಿಉಳ್ಳವನಾಗಿಯೂ, ಸರ್ಪಭೂಷಣನಾಗಿಯೂ ಭಸ್ಮ ತ್ರಿಪುಂಡ್ರಾದಿಗಳನ್ನು ಧರಿಸಿ, ಹೆಗಲಮೇಲೆ ಶೂಲವನ್ನಿಟ್ಟು ಗಟ್ಟಿಯಾಗಿ ಧ್ವನಿಮಾಡುತ್ತಾ ಸಾಗರದ ನೀರಿನಲ್ಲಿ ಸಂಚರಿಸುತ್ತಿದ್ದನು. ಆಗ ಆ ನೀರಿನ ಪ್ರವಾಹದಲ್ಲಿ ಒಂದು ಕಲಶವು ತೇಲಿಬರುತ್ತಿದ್ದುದು ಪರಶಿವನಿಗೆ ಗೋಚರವಾಯಿತು. ಹಿಂದೆ ಬ್ರಹ್ಮನು ತನ್ನ ಕೊನೆಗಾಲಕ್ಕೋಸ್ಕರ ಅದರಲ್ಲಿ ಅಮೃತವನ್ನಿಟ್ಟುಕೊಂಡಿದ್ದನು. ||೯-೧೦-೧೧||

ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವ ಈಶ್ವರನಾದ ಹರನು ಆ ಕಲಶವನ್ನು ತನ್ನ ಶೂಲದ ತುದಿಯಿಂದ ಎತ್ತಿದನು. ಅದರಿಂದ ಆ ಕಲಶವು ಒಡೆದು, ದಕ್ಷಿಣದ್ವೀಪದಲ್ಲಿ ಬರಿದಾಯಿತು. ಆ ಒಡೆದ ಕಲಶದ ಮುಖಭಾಗವು ಪೂರ್ವದಲ್ಲಿ ಬಿದ್ದಿತು. ಆ ಸ್ಥಳದಲ್ಲಿ ಘೋಣಕೇಶಾಖ್ಯಲಿಂಗವುದ್ಭವಿಸಿ, ಜನರಿಗೆ ಗೋಚರವಾಗಿ ಸಕಲ ಪಾಪಭಯವನ್ನೂ ಹೋಗಲಾಡಿಸುತ್ತಾ ಇಂದಿಗೂ ಅದು ಕುಂಭಘೋಣಕ್ಷೇತ್ರವಾಗಿ ಪ್ರಸಿದ್ಧವಾಗಿದೆ. ||೧೨-೧೩||

ತತ್ರಾಭೂಲ್ಲಿಂಗಮುತ್ಕೃಷ್ಟಂ ದರ್ಶನಾನ್ಮೋಕ್ಷದಂ ಪರಂ ।
ಮಹಾಪಾಪಹರಂ ನೃಣಾಂ ದರ್ಶನಾರ್ಚನತಿಸ್ತವೈಃ ॥೧೪॥

ಕಾಲಾಂತರೇಽಸ್ಯ ಲಿಂಗಸ್ಯ ರಾಜಾಯೋಧ್ಯಾಧಿಪೋ ಮುದಾ ।
ಚಕಾರ ಶಂಭೋಃ ಕೈಂಕರ್ಯಂ ಗರ್ಭಗೇಹಂ ತು ಗೋಪುರಂ ॥೧೫॥

ಮಂಗಲಾಂಬಾಪತೇಸ್ತಸ್ಯ ಕುಂಭೇಶಸ್ಯ ತದಾ ಪುರಂ ।
ಸಂಪೂಜ್ಯ ರಾಜಾ ಕುಂಭೇಶಂ ಮಾಂಧಾತಾ ಸಂಸ್ತುವಾನ್ನರಂ ॥೧೬॥

॥ ಮಾಂಧಾತಾ ಉವಾಚ ॥

ನಮಸ್ತೇ ಕುಂಭೇಶ ತ್ರಿನಯನ ಮಹಾದೇವ ಭಗವನ್
ವಿಭೋ ಶಂಭೋ ದೇವ ತ್ರಿಪುರಹರ ವಿಶ್ವಾಧಿಕ ವಿಭೋ ।
ಪ್ರಭೋ ಭೂತೇಶಾನ ಪ್ರಮಥಪ ಪ್ರಭೋ ವಾಮವ ವಿಭೋ
ತ್ವಮೇಕೋ ಲೋಕಾನಾಂ ಮಮ ಚ ಗತಿರನ್ಯೋ ನ ಹಿ ಧ್ರುವಂ ॥೧೭॥

---

ಆ ಸ್ಥಳದಲ್ಲಿ ಕೇವಲ ದರ್ಶನಮಾತ್ರದಿಂದಲೇ ಮೋಕ್ಷವನ್ನುಂಟುಮಾಡುವ ಅಂತಹ ಶ್ರೇಷ್ಠವಾದ ಶಿವಲಿಂಗವು ಆವಿರ್ಭವಿಸಿತು. ಆ ಲಿಂಗವು ತನ್ನನ್ನು ದರ್ಶನ, ಪೂಜೆ ಮತ್ತು ಸ್ತೋತ್ರಮಾಡುವವರ ಮಹಾಪಾಪಗಳನ್ನೂ ನಾಶಮಾಡುತ್ತಿರುವುದು. ಕೆಲವು ಕಾಲವಾದ ಮೇಲೆ ಈ ಶಿವಲಿಂಗಕ್ಕೆ ಅಯೋಧ್ಯಾಪಟ್ಟಣಾಧಿಪತಿಯಾದ ಮಾಂಧಾತರಾಜನು ಸಂತೋಷದಿಂದ ಪರಶಂಭುವಿನ ಸೇವೆಯನ್ನು ಮಾಡಿ, ಆ ಲಿಂಗಕ್ಕೆ ಗರ್ಭಗುಡಿಯನ್ನೂ ಮತ್ತು ಗೋಪುರವನ್ನೂ ಕಟ್ಟಿಸಿದನು. ಅಂದಿನಿಂದ ಮಂಗಲಾಂಬಾದೇವಿಯು ಪತಿಯಾದ ಆ ಕುಂಭೇಶ್ವರನ ಪಟ್ಟಣವೆಂದು ಅದು ಪ್ರಸಿದ್ಧವಾಯಿತು. ಮಾಂಧಾತರಾಜನು ಕುಂಭೇಶ್ವರನನ್ನು ಪೂಜೆಮಾಡಿ, ಆ ದೇವನನ್ನು ಇಂತು ಸ್ತೋತ್ರಮಾಡಿದನು. ॥೧೪-೧೫-೧೬॥

ಕುಂಭೇಶ್ವರನೂ, ಮುಕ್ಕಣ್ಣನೂ, ಮಹಾದೇವನೂ ಆದ ಭಗವಂತನೇ, ನಿನಗೆ ನಮಸ್ಕಾರಮಾಡುತ್ತೇನೆ. ವಿಭುವಾದ ಶಂಭುವೇ, ಕ್ರೀಡಾದಿಗುಣಭರಿತನೂ, ಶಂಭುವೂ, ತ್ರಿಪುರಾಸುರರನ್ನು ಸಂಹಾರಮಾಡಿದವನೂ, ಜಗಚ್ಛ್ರೇಷ್ಠನೂ, ವಿಭುವೂ ಆದ ನೀನೊಬ್ಬನೇ ಸಕಲ ಲೋಕಗಳಿಗೂ ಮತ್ತು ನನಗೂ ಗತಿಯಾಗಿರುವೆ! ಇತರರಾರೂ ನನಗೆ ರಕ್ಷಕರೆನಿಸಲಾರರು, ಇದು ನಿಶ್ಚಯವು, ಎಂದು ಮಾಂಧಾತನು ಶಿವನನ್ನು ಸ್ತೋತ್ರಮಾಡಿದನು. ॥೧೭॥

ತತ್ಸ್ತುತ್ವಾ ತುಷ್ಟಹೃದಯಸ್ತಸ್ಮೈ ರಾಜ್ಯಂ ಪ್ರದತ್ತವಾನ್ ।
ಸೋಮೇನಾರಾಧಿತಸ್ತತ್ರ ಕುಂಭೇಶಸ್ತೇನ ಸಂಸ್ಥಿತಃ ॥೧೮॥

ಕುಂಭೇಶಾಗ್ರೇ ಮಹತ್ತೀರ್ಥಂ ಹೇಮಪುಷ್ಕರಸಂಜ್ಞಕಂ ।
ತತ್ತೀರೇ ಪುಣ್ಯಕಾಲೇಷು ಸ್ನಾತ್ವಾ ಕಾವೇರಿಪಾಥಸಿ ॥೧೯॥

ದೃಷ್ಟ್ವಾಭ್ಯರ್ಚ್ಯ ಚ ಕುಂಭೇಶಂ ದಂಭೋಽಪಿ ಸುಕೃತಾಂ ವರಃ ।
ಸರಸಸ್ತೂದ್ಧೃತಃ ಪ್ರಾಚ್ಯಾಂ ಸೋಮಃ ಸೋಮೇಶ್ವರಾಭಿಧಂ ॥೨೦॥

ಸಂಸ್ಥಾಪ್ಯ ಪೂಜಯಾಮಾಸ ತುಷ್ಟಾವೈವಂ ಸ ಸೋಮರಾಟ್॥೨೧॥

॥ ಸೋಮ ಉವಾಚ ॥

ಹೇ ಸೋಮ ಸೀಮಾಸ್ತುತದೇವದೇವ
ವಿಶ್ವೇಶ್ವರಾನಂತಜಗತ್ಪ್ರಭೋ ತ್ವಂ ।
ಮಹೇಶ ಸೋಮೇಶ್ವರ ಪಾಹಿ ಮಾಂ ವಿಭೋ
ಸೋಮೇಽಸ್ತಿ ಸತ್ಯಂ ಹೃದಯಪ್ರವೃತ್ತಿಃ ॥೨೨॥

---

ಆ ದೇವದೇವನು, ಮಾಂಧಾತನಸ್ತುತಿಯಿಂದ ಸಂತುಷ್ಟಮನಸ್ಕನಾಗಿ ಅವನಿಗೆ ಸಂಪೂರ್ಣ ರಾಜ್ಯವನ್ನು ಕೊಟ್ಟನು. ಆ ಕುಂಭೇಶ್ವರನು ಚಂದ್ರನಿಂದಲೂ ಪೂಜಿಸಲ್ಪಟ್ಟವನು. ಕುಂಭೇಶ್ವರನ ಮುಂಭಾಗದಲ್ಲಿ ಹೇಮಪುಷ್ಕರವೆಂಬ ಹೆಸರಿನ ಒಂದು ದೊಡ್ಡ ತೀರ್ಥವಿರುವುದು. ಆ ಸುವರ್ಣಪುಷ್ಕರದಲ್ಲಿ ಅಥವಾ ಕಾವೇರೀ ನದಿಯ ನೀರಿನಲ್ಲಿ ಸ್ನಾನಮಾಡಿ, ಪುಣ್ಯಕಾಲಗಳಲ್ಲಿ ಆ ಕುಂಭೇಶ್ವರನನ್ನು ದರ್ಶನ ಮಾಡಿದವರು ಎಷ್ಟೇ ಆಡಂಬರಗಾರನಾದರೂ ಪುಣ್ಯಶಾಲಿಗಳಲ್ಲಿ ಉತ್ತಮನೆನಿಸುವನು. ಚಂದ್ರನು ಈ ಸುವರ್ಣಪುಷ್ಕರ ಸರಸ್ಸಿನಿಂದ ಸ್ನಾನಮಾಡಿ, ಮೇಲೆದ್ದು, ಆ ಸರಸ್ಸಿನ ಪೂರ್ವದಿಕ್ಕಿನಲ್ಲಿ ಸೋಮೇಶ್ವರಸಂಜ್ಞಕವಾದ ಶಿವಲಿಂಗವನ್ನು ಸ್ಥಾಪನೆ ಮಾಡಿ, ಪೂಜಿಸಿ, ಅನಂತರ ಹೀಗೆ ಸ್ತುತಿಗೈದಿರುವನು. ||೧೮-೧೯-೨೦-೨೧||

ಹೇ ಸೋಮೇಶ್ವರ ಸ್ವಾಮಿಯೇ, ನಿನಗೆ ನಾನು ಸ್ಥಾಪಿಸಿರುವ ಸ್ಥಳವೇ ಎಲ್ಲೆಯಾಗಿರಲಿ, ಅಂದರೆ ನೀನು ಯಾವಾಗಲೂ ಈ ಶಿವಲಿಂಗದಲ್ಲಿಯೇನೆಲಸಿರು. ಜಗದೊಡೆಯನೂ, ಆದ್ಯಂತವಿಲ್ಲದವನೂ, ಜಗತ್ತಿಗೆಲ್ಲಾ ಸ್ವಾಮಿಯೂ ನೀನೇ ಆಗಿರುವೆ. ಪೂರ್ಣೈಶ್ವರ್ಯಸಂಪನ್ನನಾದ ಸೋಮೇಶ್ವರನೇ, ವ್ಯಾಪಕನಾದ ನೀನು

ತದಾಗ್ನೇಯ್ಯಾಂ ತು ನಾಗೇಶಃ ಪೂಜಿತೋ ನಾಗಭೂಷಣಃ ।
ತತ್ರೈವ ನಟಿ ಈಶಾನ ಉಮಾಭಾಗಃ ಸಭಾಪತಿಃ ॥೨೩॥

ಪಾತಾಲಮೂಲಾದಾಗತ್ಯ ಶೇಷೋ ಶೇಷೋ ಹಿ ಸಂವೃತಃ ।
ಕರೋತಿ ಪೂಜನಂ ತತ್ರ ನಾಗೇಶಸ್ಯ ಚ ಶೇಷರಾಟ್ ॥೨೪॥

ಸಹಸ್ರವದನೈಃ ಸ್ತೌತಿ ದೇವಂ ನಾಗೇಶ್ವರಂ ಹರಂ ॥೨೫॥

॥ ಶೇಷ ಉವಾಚ ॥

ನಮಸ್ತೇ ತ್ರಿಣೇತ್ರಾಯ ತ್ರಿಪುರಹರ ದಕ್ಷಾಂಧಕಹರ
ಪ್ರಪದ್ಯೇ ಪಾದಾಬ್ಜಂ ತವ ಹರ ವಿಭೋ ಪಾಪಹರಣ ।
ತವಾರ್ಚಾಸೌಭಾಗ್ಯಪ್ರಮಥಸುರವಿಪ್ರಾದಿನಿವಹಾತ್
ನ ಮನ್ಯೇ ಸ್ವಲ್ಪೇಽಪಿ ತ್ರಿನಯನ ವಿಭೋಽನಂತಮಹಿಮನ್ ॥೨೬॥

---

ನಮ್ಮನ್ನು ಸದಾ ಕಾಪಾಡು; ಸತ್ಯವಾಗಿಯೂ ನನ್ನ ಮನಃಪ್ರವೃತ್ತಿಯೆಲ್ಲವೂ ನಿನ್ನಲ್ಲಿಯೇ ಇರುವುದು. ॥೨೨॥

ಆ ಸೋಮೇಶ್ವರನ ಆಗ್ನೇಯ ದಿಕ್ಕಿನಲ್ಲಿ ಪೂಜೆಮಾಡಲ್ಪಟ್ಟ ಸರ್ಪಭೂಷಣನಾದ ನಾಗೇಶ್ವರನಿರುವನು. ಅಲ್ಲಿಯೇ ಉಮಾದೇಹಾರ್ಧಭಾಗವುಳ್ಳವನೂ, ಸಭಾಪತಿಯೂ ಆದ ನಟೇಶ್ವರನಿರುವನು. ಆದಿಶೇಷನು ಪಾತಾಳಲೋಕದ ಬುಡದಿಂದ ಬಂದು ಶೇಷನೆಂದೇ ವ್ಯವಹೃತನಾಗಿರುವನು. ಆದಿಶೇಷನು, ನಾಗೇಶ್ವರನನ್ನು ಸದಾ ಪೂಜೆಮಾಡುತ್ತಿರುವನು. ॥೨೩-೨೪॥

ಆದಿಶೇಷನು ತನ್ನ ಸಾವಿರ ಮುಖಗಳಿಂದಲೂ ದೇವದೇವನೆನಿಸಿದ ಪಾಪನಾಶಕನಾದ ನಾಗೇಶ್ವರನನ್ನು ಹೀಗೆ ಸ್ತೋತ್ರಮಾಡುತ್ತಿರುವನು. ॥೨೫॥

ಮೂರುಕಣ್ಣುಗಳುಳ್ಳವನೂ, ತ್ರಿಪುರಾಸುರರನ್ನೂ, ದಕ್ಷಬ್ರಹ್ಮ, ಅಂಧಕಾಸುರ ಮುಂತಾದವರನ್ನು ನಾಶಮಾಡಿದವನೂ, ಆದ ಹರನೇ! ನಿನ್ನ ಪಾದಕಮಲವನ್ನು ಆಶ್ರಯಿಸುವೆನು. ಸರ್ವವ್ಯಾಪಕನೂ, ಪಾಪನಾಶಕನೂ ಆದ ಸ್ವಾಮಿಯೇ! ನಿನ್ನ ಪೂಜಾಸೌಭಾಗ್ಯವನ್ನು ಪಡೆದಿರುವ ಪ್ರಮಥಗಣಗಳು, ದೇವತೆಗಳು, ಮತ್ತು ಬ್ರಾಹ್ಮಣರ ಗುಂಪನ್ನು ಧನ್ಯರೆಂದು ನಾನು ಭಾವಿಸುವೆನು. ಅಪಾರಮಹಿಮನಾದ ತ್ರಿನಯನಸ್ವಾಮಿಯೇ! ನಿನ್ನನ್ನಾರಾಧಿಸುವವರೆಲ್ಲರೂ ಸಾಧಾರಣರಲ್ಲವೆಂದೇ ನನ್ನ ಭಾವನೆ. ಎಂದುಆದಿಶೇಷನು ಪ್ರಾರ್ಥಿಸುತ್ತಿದ್ದನು. ॥೨೬॥

ಸೂರ್ಯೋಽಪಿ ಪೂಜಯಾಮಾಸ ನಾಗೇಶಂ ತತ್ರ ಶಂಕರಂ ।
ತುಷ್ಟಾವೇಶಂ ಸಮಭ್ಯರ್ಚ್ಯ ನಾಗೇಶಂ ಪರಮೇಶ್ವರಂ ॥೨೭॥

॥ ಸೂರ್ಯ ಉವಾಚ ॥

ನಾಗೇಶಮೀಶಂ ಶರಣಂ ಶರಣ್ಯಂ
ವರೇಣ್ಯಮುಕ್ತಿಪ್ರದವ್ಯೋಮಕೇಶಂ ।
ತಮಂಬಿಕೇಶಂ ಚ ಗಣೇಶವಂದ್ಯಂ
ನಿಶೀಶಮೌಲಿಂ ಪ್ರಣತೋಽಸ್ಮಿ ನಿತ್ಯಂ ॥೨೮॥

ತಸ್ಯಾಗ್ನೇಯ್ಯಾಂ ಮಹಾತೀರ್ಥಂ ಮಘಾಖ್ಯಮಘನಾಶನಂ ।
ಶಿವತೀರ್ಥಂ ಮಹತ್ಪುಣ್ಯಂ ಸಿಂಹಸಂಸ್ಥೇ ಬೃಹಸ್ಪತೌ ॥೨೯॥

ಸ್ವಪಾಪವಿನಿವೃತ್ತ್ಯರ್ಥಂ ಗಂಗಾನದನದೀಗಣೈಃ ।
ಕುಂಭಘೋಣೇ ಮಹಾಮಾಘೇ ಮಹಾಪಾಪನಿಬರ್ಹಣೇ ॥೩೦॥

---

ಸೂರ್ಯನೂ ಸಹ ಜಗನ್ಮಂಗಳಕರನಾದ ಆ ನಾಗೇಶ್ವರನನ್ನು ಪೂಜಿಸಿ, ಪರಮೈಶ್ವರ್ಯಭರಿತನಾದ ನಾಗೇಶ್ವರನನ್ನು ಹೀಗೆ ಸ್ತೋತ್ರಮಾಡಿದನು. ॥೨೭॥

ಶ್ರೇಷ್ಠನೂ, ಮೋಕ್ಷವನ್ನು ಕೊಡುವವನೂ, ಅಂತರಿಕ್ಷವನ್ನೇ ಕೂದಲನ್ನಾಗಿ ಧರಿಸಿರುವವನೂ, ಆದ ಆ ನಾಗೇಶ್ವರನನ್ನೇ ನಾನು ಶರಣುಹೊಂದಿರುವೆನು. ಅಂಬಿಕಾರಮಣನೂ, ಗಣಾಧಿಪತಿಗಳಿಂದ ನಮಸ್ಕೃತನೂ, ಚಂದ್ರಮೌಳಿಯೂ ಆದ ಆ ನಾಗೇಶ್ವರನನ್ನೇ ನಾನು ನಿತ್ಯವೂ ನಮಸ್ಕರಿಸುತ್ತಿರುವೆನೆಂದು ಸೂರ್ಯನು ನಾಗೇಶ್ವರನನ್ನು ಸ್ತೋತ್ರಮಾಡಿದನು. ॥೨೮॥

ಆ ನಾಗೇಶಕ್ಷೇತ್ರಕ್ಕೆ ಆಗ್ನೇಯದಲ್ಲಿ ಮಘಸಂಜ್ಞಕವಾದ ಒಂದು ಮಹಾ ತೀರ್ಥವಿರುವುದು. ಆ ಶಿವತೀರ್ಥವು ತುಂಬಾಪುಣ್ಯಪ್ರದವಾದುದು. ಗುರುವು ಸಿಂಹರಾಶಿಯಲ್ಲಿದ್ದಾಗ ತಮ್ಮತಮ್ಮ ಮಹಾಪಾಪಗಳ ನಿವೃತ್ತಿಗಾಗಿ, ಗಂಗಾನದಿಯೇ ಮೊದಲಾದ ಇತರನದಿಗಳ ಸಮೂಹಗಳೆಲ್ಲವೂ ಮಹಾಪಾಪಗಳನ್ನೂ ನಾಶ ಮಾಡಲು ಸಮರ್ಥವಾದ ಕುಂಭಘೋಣದ ಈ ಮಹಾಮಾಘಕ್ಷೇತ್ರಕ್ಕೆ ಬರುವುವು. ಕಲ್ಪವೃಕ್ಷಕ್ಕೆ ಸಮಾನವಾದ ಈ ತೀರ್ಥದಲ್ಲಿ ಸ್ನಾನಮಾಡುವವರಿಗೆ ಮೋಕ್ಷವು ಹಸ್ತಗತವೆಂದೇ ತಿಳಿದುಕೊ. ॥೨೯-೩೦॥

ತೀರ್ಥೇ ಮಹಾಕಲ್ಪತರೌ ಸ್ನಾಸ್ಯತಾಂ ಮುಕ್ತಯಃ ಕರೇ ।
ತತ್ರ ಸ್ನಾತ್ವಾ ತುಲೇ ಕಾಲೇ ದ್ವಾದಶಾಂತಮನಾಗತೇ ॥೩೧॥

ದೃಷ್ಟ್ವಾ ತತ್ರತ್ಯಲಿಂಗಾನಿ ಕುಂಭೀಶಾನಂ ಪ್ರಣಮ್ಯ ಚ ।
ಪಂಚಪಾತಕನಿರ್ಮುಕ್ತಃ ಶಿವಲೋಕೇ ವಸೇಚ್ಚಿರಂ ॥೩೨॥

ಗಂಗಾದ್ಯಾಃ ಸಕಲಾ ನದ್ಯಃ ಸ್ವಪಾಪವಿನಿವೃತ್ತಯೇ ।
ಮಘಾಖ್ಯೇ ಸರಸಿ ಸ್ನಾತ್ವಾ ಕುಂಭೀಶಾನಂ ಪ್ರಣಮ್ಯ ಚ ॥೩೩॥

ಸರಸ್ಯಾ ಉತ್ತರೇ ತಸ್ಯಾಃ ವಿಶ್ವನಾಥಪ್ರತಿಷ್ಠಿತಂ ।
ಅವಿಮುಕ್ತೇಶ್ವರಂ ಪಶ್ಚಾತ್ಪೂಜ್ಯ ಲಿಂಗದ್ವಯಂ ತದಾ ॥೩೪॥

ಸಂತುಷ್ಟುವುಸ್ತದಾ ನದ್ಯೋ ಗಂಗಾದ್ಯಾಸ್ತಂ ಮಹೇಶ್ವರಂ ।
ಗಂಗಾ ಚ ಯಮುನಾ ರೇವಾ ತುಂಗಭದ್ರಾ ಸರಸ್ವತೀ ॥೩೫॥

---

ತುಲಾಮಾಸದಲ್ಲಿ ಈ ತೀರ್ಥದಲ್ಲಿ ಸ್ನಾನಮಾಡಿ, ಹನ್ನೆರಡು ದಿವಸಗಳಿದ್ದು, ಅಲ್ಲಿರುವ ಶಿವಲಿಂಗಗಳನ್ನೆಲ್ಲಾ ದರ್ಶನಮಾಡಿ, ಕುಂಭೀಶ್ವರನನ್ನು ನೋಡಿ ನಮಸ್ಕರಿಸಿದವನು ಬ್ರಹ್ಮಹತ್ಯಾ, ಸುರಾಪಾನ, ಚಿನ್ನಕದಿಯುವುದು, ಗುರುಪತ್ನೀ ಸಮಾಗಮ, ಈ ನಾಲ್ವರ ಸಹವಾಸರೂಪವಾದ ಪಂಚಮಹಾಪಾತಕಗಳಿಂದಲೂ. ಬಿಡುಗಡೆಹೊಂದಿದವನಾಗಿ ಬಹಳಕಾಲ ಶಿವಲೋಕದಲ್ಲಿ ವಾಸಮಾಡುವನು. ||೩೧-೩೨||

ಗಂಗೆಯೇ ಮೊದಲಾದ ಸಕಲ ನದಿಗಳೂ ತಮ್ಮ ತಮ್ಮ ಪಾಪಗಳನ್ನು ಕಳೆದುಕೊಳ್ಳುವುದಕ್ಕೋಸ್ಕರ ಈ ಮಘಾಸರಸ್ಸಿಗೆ ಬಂದು ಅಲ್ಲಿ ಸ್ನಾನಮಾಡಿ, ಕುಂಭೀಶ್ವರನಿಗೆ ನಮಸ್ಕರಿಸಿ, ಈ ಸರಸ್ಸಿನ ಉತ್ತರದಡದಲ್ಲಿ ವಿಶ್ವನಾಥನಿಂದ ಪ್ರತಿಷ್ಠೆ ಮಾಡಲ್ಪಟ್ಟಿರುವ ಅವಿಮುಕ್ತೇಶ್ವರನಿಗೆ ಪೂಜೆಮಾಡಿ, ಅನಂತರ ಇತರ ಶಿವಲಿಂಗಗಳೆರಡನ್ನೂ ಪೂಜಿಸಿ, ಎಲ್ಲಾ ನದಿಗಳೂ ಆ ಮಹೇಶ್ವರನನ್ನು ಇಂತು ಸ್ತೋತ್ರ ಮಾಡುವುವು. ||೩೩-೩೪||

ಗಂಗಾ, ಯಮುನಾ, ರೇವಾ, ತುಂಗಭದ್ರಾ, ಸರಸ್ವತೀ, ವಿಪಾಶಾ, ಕಾವೇರಿ, ಸರಯೂ ಮುಂತಾದ ನದಿಗಳ ಅಭಿಮಾನದೇವತಾಕುಮಾರಿಯರು, ಆ ತೀರ್ಥದ

ವಿಪಾಶಾ ಚೈವ ಕಾವೇರೀ ಸರಯೂ ನಿತ್ಯಕನ್ಯಕಾಃ ।
ತತ್ತೀರ್ಥತೀರೇ ನಿತ್ಯಂ ವೈ ಶಿವಮರ್ಚಂತಿ ಕಾಮದಂ ॥೩೭॥

॥ ಗಂಗಾದ್ಯಾ ಊಚುಃ ॥

ಹೇ ವಿಶ್ವನಾಥ ಭಗವನ್ನವಿಮುಕ್ತವಾಸ
ಭಕ್ತ್ಯೈವ ಸೇವ್ಯ ಭಗವನ್ಭವಭೀತಿನಾಶ ।
ಪಾಹೀಶಾನ ಪ್ರಮಥಪ ಸದಾಸ್ಮದೀಯಪಾಪಾನಿ
ಲೋಕನಿಹಿತಾನಿ ವಿನಾಶಯಸ್ವ ॥೩೭॥

ಗೌತಮಾತ್ಸರಸಃ ಪಶ್ಚಾದ್ಗೌತಮಾಖ್ಯಮಿತೀಶ್ವರಂ ।
ಸಂಪೂಜ್ಯ ಸ್ತೌತಿ ದೇವೇಶಂ ಮಹೇಶಂ ಗೌತಮೋ ಮುನಿಃ ॥೩೮॥

॥ ಗೌತಮ ಉವಾಚ ॥

ತಮೋಹರ ಗಂಗಾಧರ ದೇವದೇವೇಶ ಶಂಭೋ
ತ್ರಿನಯನ ಪಾಹಿ ಸದೇಶ ಪಿನಾಕಧಾರಿನ್ ।

---

ದಡದಲ್ಲಿ ನಿಂತು ನಿತ್ಯವೂ ಇಷ್ಟಾರ್ಥಗಳನ್ನು ಕೊಡುವ ಶಿವನನ್ನು ಸ್ತುತಿಸುತ್ತಿರುವರು. ॥೩೫-೩೬॥

ಜಗದೊಡೆಯನೂ, ಅವಿಮುಕ್ತಕ್ಷೇತ್ರವಾಗಿಯೂ ಆದ ಭಗವಂತನೇ, ಸಂಸಾರಭೀತಿಯನ್ನು ನಾಶಮಾಡುವ ನೀನು ಕೇವಲ ಭಕ್ತಿಯಿಂದಲೇ ಸೇವಿಸಲ್ಪಡಲು ಅರ್ಹನಾಗಿದ್ದೀಯೆ. ಪ್ರಮಥಗಣಗಳಿಗೆ ಪಾಲಕನಾದ ಈಶಾನನೇ, ಲೋಕದ ಜನಗಳು ನಮ್ಮಲ್ಲಿ ಸ್ನಾನಪಾನಾದಿಗಳನ್ನು ಮಾಡಿ, ನಮ್ಮಲ್ಲಿ ಬಿಟ್ಟಿರುವ ಪಾಪಗಳನ್ನು ಯಾವಾಗಲೂ ನೀನು ಹೋಗಲಾಡಿಸು, ದೇವ, ಎಂದು ಗಂಗಾದಿ ದೇವತೆಗಳು ಸ್ತೋತ್ರಮಾಡುವರು. ॥೩೭॥

ಗೌತಮಸರಸ್ಸಿಗಿಂತಲೂ ಹಿಂಭಾಗದಲ್ಲಿ ಗೌತಮೇಶಸಂಜ್ಞಕನಾದ ಈಶ್ವರನಿರುವನು. ಆ ದೇವತಾಧಿಪತಿಯನ್ನು ಗೌತಮಮುನಿಯು ಪೂಜಿಸಿ, ಹೀಗೆ ಸ್ತೋತ್ರಮಾಡುತ್ತಿರುವನು. ॥೩೮॥

ಭಕ್ತರ ಅಜ್ಞಾನಾಂಧಕಾರವನ್ನು ನಾಶಮಾಡುವವನೂ, ಗಂಗೆಯನ್ನು ತಲೆಯಲ್ಲಿ ಧರಿಸಿರುವವನೂ, ದೇವಾದಿದೇವತೆಗಳಿಗೂ ಒಡೆಯನೂ, ಆದ ಶಂಭುವೇ,

ಭವಭಯಹರ ಭುಕ್ತಿಮುಕ್ತಿದಾಯಿನ್
ವಿಬುಧಗಣಾರ್ಚಿತ ತ್ವಾಂ ನತೋಽಸ್ಮಿ ನಿತ್ಯಂ ॥೩೯॥

ಬ್ರಹ್ಮಾ ಸತ್ರಪತಿರ್ಹ್ಯೇಷ ಸಾವಿತ್ರ್ಯಾ ಕುಂಭಘೋಣಕೇ ।
ಸ್ತುವನ್ನಭ್ಯರ್ಚ್ಯ ಕುಂಭೀಶಂ ತಂ ದೃಷ್ಟ್ವಾ ಸ್ಥಾನವೈಭವಂ ॥೪೦॥

॥ ಬ್ರಹ್ಮೋವಾಚ ॥

ಮಹ್ಯಂ ಪ್ರಸೀದ ಭಗವನ್ಪ್ರತಿಸೃಷ್ಟಿಮಿಚ್ಛುಃ
ನಿತ್ಯಂ ಜರಾಮರಣಸರ್ಜನತೋಽತಿದುಃಖಂ ।
ಹೃಲ್ಲಿಂಗಸಂಗತದೃಶಾ ಪರಿಪೂತಚಿತ್ತ
ಸಂತಾಪಮತ್ರ ನಿವಹಾಮಿ ಮಹೇಶ ಶಂಭೋ ॥೪೧॥

---

ಮೂರುಕಣ್ಣುಳ್ಳವನೂ, ಪಿನಾಕಪಾಣಿಯೂ ಆದ ಈಶನೇ, ನೀನು ಯಾವಾಗಲೂ ಕಾಪಾಡು. ಸಂಸಾರಸಂಬಂಧವಾದ ಭಯವನ್ನು ಹೋಗಲಾಡಿಸುವವನೇ, ಇಹದಲ್ಲಿ ಸಕಲ ಭೋಗಗಳನ್ನೂ ಪರದಲ್ಲಿ ಮುಕ್ತಿಯನ್ನೂ ಕೊಡುವವನೇ, ದೇವಗಣಗಳಿಂದ ಪೂಜಿಸಲ್ಪಟ್ಟವನೇ, ನಿತ್ಯವೂ ನಿನಗೆ ನಮಸ್ಕಾರಮಾಡುತ್ತೇನೆಂದು ಗೌತಮ ಮುನಿಯು ಸ್ತೋತ್ರಮಾಡಿದನು. ॥೩೯॥

ಯಜ್ಞಪತಿಯಾದ ಬ್ರಹ್ಮದೇವನು ಸಾವಿತ್ರೀದೇವಿಯೊಡನೆ, ಈ ಕುಂಭಘೋಣಕ್ಷೇತ್ರದಲ್ಲಿದ್ದುಗೊಂಡು, ಕುಂಭೀಶ್ವರನನ್ನು ದರ್ಶನಮಾಡುತ್ತಾ ಸ್ಥಾನವೈಭವವನ್ನು ಕೊಂಡಾಡುತ್ತಾ, ಕುಂಭೀಶ್ವರನನ್ನು ಪೂಜಿಸಿ, ಸ್ತೋತ್ರ ಮಾಡಿದನು. ॥೪೦॥

ಭಗವಂತನೇ, ನನ್ನಮೇಲೆ ಅನುಗ್ರಹಮಾಡು ; ಪ್ರತಿಸೃಷ್ಟಿಮಾಡಬೇಕೆಂದು ಅಪೇಕ್ಷಿಸಿ, ನಿತ್ಯವೂ ಮುಪ್ಪು, ಸಾವು, ಸೃಷ್ಟಿ ಮುಂತಾದವುಗಳಿಂದ ತುಂಬಾ ದುಃಖಾಸ್ಪದವಾಗಿರುವ ಈ ಪ್ರಪಂಚವನ್ನು ನೋಡುತ್ತಾ, ದುಃಖಿಸುತ್ತಿರುವೆನು. ಮನೋಲಿಂಗದಲ್ಲಿ ನೆಲಸಿದ ಜ್ಞಾನದೃಷ್ಟಿಯಿಂದ ಪರಿಶುದ್ಧಮನಸ್ಕನಾದ ನೀನು, ಅವುಗಳ ಸಂತಾಪವು ನನಗೆ ಕಡಿಮೆಯಾಗುವಂತೆ ಸೃಷ್ಟಿಸುವ ಶಕ್ತಿಯನ್ನು ಕರುಣಿಸು. ಮಹೇಶ್ವರನೂ ಶಂಭುವೂ ಎನಿಸಿದ ಸ್ವಾಮಿಯೇ, ನೀನು ನನಗೆ ಅನುಗ್ರಹಿಸು ; ಎಂದು ಬ್ರಹ್ಮನು ಸ್ತೋತ್ರಮಾಡಿದನು. ॥೪೧॥

ದೈತ್ಯಾನಾಂ ಹರಣಾರ್ಥಂ ಚ ಚಕ್ರಂ ದತ್ತಂ ಶಿವೇನ ಹಿ ।
ವಿಷ್ಣವೇಽತ್ರ ಸದಾ ದೈತ್ಯೈರಯಂ ಸಂಪೀಡಿತೋಽಭ್ಯಗಾತ್ ॥೪೨॥

ತಪಸ್ತಪ್ತುಂ ಕುಂಭಘೋಣೇ ವೈಕುಂಠಾದಾಗತೋ ಹರಿಃ ।
ದೈತ್ಯೇಭ್ಯಃ ಸ್ವಸ್ಯರಕ್ಷಾಯೈ ಸಹ್ಯಜಾತೀರದಕ್ಷಿಣೇ ॥೪೩॥

ಚಕ್ರಂ ತತ್ರ ವಿನಿಕ್ಷಿಪ್ಯ ತ್ರ್ಯಕ್ಷದತ್ತಂ ಹರಿಸ್ತದಾ ।
ಹೇಮಾಸ್ಥಾಹ್ವಸರಃ ಪ್ರಾಚ್ಯಾಂ ಸರಸಸ್ಥೋ ಹರಿರ್ಮುದಾ ॥೪೪॥

ಶಿವಾಜ್ಞಯೈವ ಹೇಮಾಖ್ಯಾಂ ಹರಯೇ ಸ್ವಾಂ ಚ ಕನ್ಯಕಾಂ ।
ತತ್ಪಾಣಿಗ್ರಹಣಂ ತತ್ರ ಚಕಾರ ಶಿವಸಂನಿಧೌ ॥೪೫॥

ಚಕಾರ ಶಾರ್ಙ್ಗಪಾಣಿಂ ತಂ ಸೋಮೇಶಶ್ಚೋತ್ತರೇ ತದಾ ।
ಸ್ಥಾನಂ ಪ್ರಕಲ್ಪಯಾಮಾಸ ತೇನ ಸಂಪೂಜಿತಸ್ತತಃ ॥೪೬॥

---

ಹಿಂದೆ ರಾಕ್ಷಸರನ್ನು ಸಂಹಾರಮಾಡುವುದಕ್ಕೋಸ್ಕರ ಪರಶಿವನು ವಿಷ್ಣುವಿಗೆ ಸುದರ್ಶನಚಕ್ರವನ್ನು ಕೊಟ್ಟನು. ವಿಷ್ಣುವು ಅಷ್ಟಾದರೂ ಯಾವಾಗಲೂ ರಾಕ್ಷಸರಿಂದ ಪೀಡಿತನಾಗಿ ಈ ದೇವನ ಸಮೀಪಕ್ಕೆ ವೈಕುಂಠಲೋಕದಿಂದ ಬಂದು ಆ ಕಾವೇರೀನದಿಯ ದಕ್ಷಿಣತೀರದಲ್ಲಿ ದೈತ್ಯರಿಂದ ತನ್ನನ್ನು ಕಾಪಾಡಿಕೊಳ್ಳುವುದಕ್ಕೋಸ್ಕರ ಕುಂಭಘೋಣಕ್ಷೇತ್ರದಲ್ಲಿ ತಪಸ್ಸುಮಾಡುತ್ತಿದ್ದನು. ॥೪೨-೪೩॥

ವಿಷ್ಣುವು ಮುಕ್ಕಣ್ಣನಾದ ಮಹಾದೇವನು ತನಗೆ ಕೊಟ್ಟಿದ್ದ ಚಕ್ರವನ್ನು ಅಲ್ಲಿಯೇ ಇಟ್ಟು 'ಹೇಮಾಸ್ಥಾ' ಎಂಬ ಹೆಸರಿನ ಸರೋವರದ ಪೂರ್ವದಿಕ್ಕಿನಲ್ಲಿ ತಪಸ್ಸುಮಾಡುತ್ತಿದ್ದನು. ಆಗ ಆ ಸರೋವರದಲ್ಲಿದ್ದ (ಹೇಮಾಸ್ಥನೆಂಬುವನು) ಶಿವನ ಅಪ್ಪಣೆಯಿಂದ 'ಹೇಮಾ' ಎಂಬ ಹೆಸರುಳ್ಳ ತನ್ನ ಮಗಳನ್ನು ವಿಷ್ಣುವಿಗೆ ಕೊಟ್ಟು ಶಿವನ ಸಂನಿಧಿಯಲ್ಲಿಯೇ ಅವರಿಬ್ಬರಿಗೂ ಪಾಣಿಗ್ರಹಣ ನಡೆಸಿದನು. ॥೪೪-೪೫॥

ಆ ಮೇಲೆ ಸೋಮೇಶ್ವರನು ತನಗೆ ಉತ್ತರದಿಕ್ಕಿನಲ್ಲಿ ವಿಷ್ಣುವಿನಿಂದ ಪೂಜಿತನಾಗಿ, ಶೃಂಗವಿಕಾರವಾದ ಧನುಸ್ಸನ್ನು ಹಿಡಿದಿರುವ ಮಹಾವಿಷ್ಣುವಿಗೆ ಒಂದು ಸ್ಥಾನವನ್ನು ಅಲ್ಲಿಯೇ ಕಲ್ಪಿಸಿಕೊಟ್ಟನು. ॥೪೬॥

॥ ಶಾರ್ಙ್ಗಪಾಣಿರುವಾಚ ॥

ಕುಂಭೇಶ ವಿಶ್ವೇಶ ಮಹೇಶ ಶಂಭೋ
ಪಾಹಿ ಪ್ರಸೀದ ಭಗವನ್ನವ ಮಾಂ ಪ್ರಸೀದ ।
ತ್ವತ್ಸ್ಥಾನಸಂವಾಸರತಿಸ್ತವಾರ್ಚಾ-
ಮತ್ಯಾ ಚ ಮೇ ಚಿತ್ತಮಿಹ ಪ್ರಬೋಧಿ ॥೪೭॥

ತುಷ್ಟೋನ್ವೈ ಹಿ ವಿಷ್ಣುಃ ಸಕಲದಿವಿಷದಬ್ರಹ್ಮವಿಷ್ಣ್ವಾದಿ ಸೇವ್ಯೇ
ನಿತ್ಯಂ ಶ್ರೀಕುಂಭಘೋಣೆ ಮುನಿವರನಿವಹೈಃ ಸೇವಿತೇ ಸ್ಥಾನವರ್ಯೇ ।
ಭಸ್ಮಾಕ್ಷಾದಿವಿಭೂಷಣೈಃ ಶಿವಮಹಾದೇವೇತಿ ಸಂನಾದಿಭಿಃ
ಕುಂಭೇಶಾನನತಿಸ್ತುತೀಷು ನಿರತೈಃ ಸ್ಥೇಯಂ ಮಹೇಶಸ್ಥಲೇ ॥೪೮॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಕುಂಭಘೋಣಮಹಿಮಾ ವರ್ಣನಂ
ನಾಮೈಕವಿಂಶೋಽಧ್ಯಾಯಃ

---

ಜಗದೊಡೆಯನೂ, ಮಹೇಶ್ವರನೂ, ಜಗನ್ಮಂಗಳಕರನೂ ಆದ ಕುಂಭೇಶ್ವರನೇ, ಭಗವಂತನಾದ ನೀನು ಪ್ರಸನ್ನನಾಗಿ ನನ್ನನ್ನು ಕಾಪಾಡು; ನಿನ್ನ ಸ್ಥಾನವಾಸದಲ್ಲಿ ಆಸಕ್ತನಾಗಿ, ನಿನ್ನ ಪೂಜಾ ಮತ್ತು ಧ್ಯಾನವಿಷಯಕವಾದ ಬುದ್ಧಿಯಿಂದ ನನ್ನ ಮನಸ್ಸು ಇಲ್ಲಿ ಜ್ಞಾನೋದಯಹೊಂದಿತು. ಎಂದು ವಿಷ್ಣುವು ಆಗ ಸ್ತುತಿಸಿದನು. ॥೪೭॥

ಸಮಸ್ತ ದೇವತೆಗಳಿಗೂ, ಬ್ರಹ್ಮನೇ ಮುಂತಾದ ದೇವತೋತ್ತಮರಿಗೂ ಸೇವಾರ್ಹವಾದುದೂ, ಮುನಿಶ್ರೇಷ್ಠರ ಗುಂಪಿನಿಂದ ಸೇವಿಸಲ್ಪಟ್ಟುದೂ ಆದ ಶ್ರೀ ಕುಂಭಘೋಣಕ್ಷೇತ್ರದಲ್ಲಿ ನಿಂತು, ನಿತ್ಯವೂ ಭಸ್ಮರುದ್ರಾಕ್ಷಭೂಷಣರಾಗಿ, ಶಿವ, ಮಹಾದೇವ ಎಂಬುದಾಗಿ ಸ್ತೋತ್ರಮಾಡುತ್ತ, ಕುಂಭೇಶ್ವರನ ನಮಸ್ಕಾರ ಸ್ತೋತ್ರಗಳಲ್ಲಿ ನಿರತರಾಗಿರುವ ಭಕ್ತರೂ, ಮಹೇಶ್ವರನ ದಿವ್ಯಕ್ಷೇತ್ರದಲ್ಲಿ ಯಾವಾಗಲೂ ನೆಲಸಬೇಕೆಂದು ವಿಷ್ಣುವು ಆ ಕುಂಭೇಶ್ವರನನ್ನು ಸ್ತೋತ್ರಮಾಡಿದನು. ॥೪೮॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಕುಂಭಘೋಣಕ್ಷೇತ್ರಮಹಿಮಾವರ್ಣನೆಯೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ದ್ವಾವಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಹರಿಶ್ರಿತಾನದೀತೀರೇ ದಕ್ಷಿಣೇ ಪಾಪನಾಶನಂ ।
ಕುಂಭಘೋಣಸ್ಯ ನೈಋತ್ಯಾಂ ಯಮೇನಾರಾಧಿತಂ ಸ್ಥಲಂ ॥೧॥

ಧಾರಾಖ್ಯಂ ನಾಮ ಚೋತ್ಕೃಷ್ಟಂ ಲಿಂಗಮೈರಾವತೇಶ್ವರಂ ।
ಯಮತೀರ್ಥಂ ತದತ್ರಾಂತು ದರ್ಶೇ ಶ್ರಾವಣಕೇ ತು ಯಃ ॥೨॥

ಸ್ನಾತ್ವಾ ಯಮಾರ್ಚಿತಂ ಲಿಂಗಂ ದೃಷ್ಟ್ವಾ ನೈವೇಕ್ಷತೇ ಯಮಂ ॥೩॥

---

## ಇಪ್ಪತ್ತೆರಡನೆಯ ಅಧ್ಯಾಯ

ಹರಿಶ್ರಿತಾ ಎಂಬ ನದಿಯ ದಡದಲ್ಲಿ ದಕ್ಷಿಣ ದಿಕ್ಕಿನಲ್ಲಿ ಪಾಪನಾಶಕವೂ ಯಮನಿಂದ ಪೂಜಿಸಲ್ಪಟ್ಟುದೂ ಆದ ಒಂದು ಶಿವಸ್ಥಾನವು ಕುಂಭಘೋಣ ಕ್ಷೇತ್ರಕ್ಕೆ ನೈಋತ್ಯ ದಿಕ್ಕಿನಲ್ಲಿರುವುದು. ಆ ಕ್ಷೇತ್ರವು ಧಾರಾಕ್ಷೇತ್ರವೆಂದು ಪ್ರಖ್ಯಾತವಾಗಿ ಉತ್ಕೃಷ್ಟವಾದ ಐರಾವತಲಿಂಗದಿಂದ ಶೋಭಿಸುತ್ತಿರುವುದು. ಇಲ್ಲಿರುವ ಯಮತೀರ್ಥದಲ್ಲಿ ಅಮಾತಿಥಿಗಳಲ್ಲಿಯೂ, ಶ್ರಾವಣಮಾಸದ ಪೂರ್ಣಿಮಾ ಮುಂತಾದ ಪರ್ವತಿಥಿಗಳಲ್ಲಿಯೂ ಸ್ನಾನಮಾಡಿ, ಯಮನಿಂದ ಪೂಜಿಸಲ್ಪಟ್ಟ ಶಿವಲಿಂಗವನ್ನು ದರ್ಶನಮಾಡುವವನು ಪುನಃ ಯಮನನ್ನು ನೋಡುವುದೇ ಇಲ್ಲ. ಅಂದರೆ ಅವನಿಗೆ ನರಕದ ದರ್ಶನವೇ ಇರುವುದಿಲ್ಲ. ||೧-೨-೩||

॥ ಯಮ ಉವಾಚ ॥

ಕಾಲಕಾಲ ಶಿವಶಂಕರ ಶಂಭೋ
ಪಾಹಿ ಮಾಂ ನರಕದುಃಖಗಮೀಶ ।
ಸರ್ವದೇಹಪರಿನಿಂದಿತಪಾಪೈ
ರ್ಮಾಮವ ಪ್ರಮಥಪಾದ್ಯಮರೇಶ ॥೪॥

ಶ್ರಾವಣೇ ದರ್ಶಕೇ ಸ್ನಾತ್ವಾ ಮತ್ತೀರ್ಥೇ ತ್ವಾಂ ನಮಸ್ಯತಾಂ ।
ಜನಾನಾಂ ನೈವ ಭೀತಿರ್ನೈ ಭವೇತಾಂ ತ್ವತ್ಪ್ರಸಾದತಃ ॥೫॥

ತಥೇತ್ಯನುಮತಃ ಶಂಭುರ್ಮಹಾದೇವೋ ಘೃಣಾನಿಧಿಃ ।
ಕುಂಭಘೋಣೇ ತಥಾಗ್ನೇಯ್ಯಾಂ ಶ್ರೀನಾಗೇಶ್ವರಮುತ್ತಮಂ ॥೬॥

ಚಂಪಕದ್ರುಮಮೂಲೇ ತು ಸ್ಥಿತಂ ನಾಗೇಶ್ವರಾಭಿಧಂ ।
ಕರ್ಕೋಟಕೋದ್ಯ ಸರ್ಪೇಶಂ ದಕ್ಷಕಃ ಪೂಜಯದ್ವರಂ ॥೭॥

ತುಷ್ಟುವುಸ್ತತ್ರ ತಂ ನಾಗಾಸ್ತ್ರಿನಾಗೇಶಂ ಮಹೇಶ್ವರಂ ॥೮॥

---

ಯಮಾಂತಕನಾದ ಪರಶಿವನೇ, ಜಗನ್ಮಂಗಳಕರನಾದ ಶಂಭುವೇ, ನರಕ ದುಃಖಭಾಗಿಯಾದ ನನ್ನನ್ನು ಕಾಪಾಡು; ಓ ಈಶ್ವರನೇ, ಸಕಲ ಪ್ರಾಣಿಗಳಿಂದಲೂ ನಿಂದಿಸಲ್ಪಟ್ಟಿರುವ ಈ ಪಾಪಕರ್ಮಗಳಿಂದ ಪ್ರಮಥಗಣಗಳಿಗೆ ಒಡೆಯನೂ, ಮಹೇಶನೂ ಎನಿಸಿದ ನೀನು ನನ್ನನ್ನು ಉದ್ಧಾರಮಾಡಿ, ಇಂದು ಕಾಪಾಡು; ಎಂದು ಯಮನು ಸ್ತೋತ್ರಮಾಡಿದನು. ॥೪॥

ಶ್ರಾವಣಮಾಸದಲ್ಲಿನ ದರ್ಶತಿಥಿಗಳಲ್ಲಿ (ಸೂರ್ಯಚಂದ್ರರ ಸಮಾಗಮವಾಗುವ ಅಮಾವಾಸ್ಯೆಯ ದಿನ) ನನ್ನ ತೀರ್ಥದಲ್ಲಿ ಸ್ನಾನಮಾಡಿ, ನಿನಗೆ ನಮಸ್ಕಾರ ಮಾಡುವ ಜನಗಳಿಗೆ ನಿನ್ನನುಗ್ರಹದಿಂದ ಯಾವ ವಿಧವಾದ ಭಯವೂ ಉಂಟಾಗಲಾರದು, ಎಂದು ಯಮನು ಪರಮೇಶ್ವರನನ್ನು ಪ್ರಾರ್ಥಿಸಲು, ದೇವತೋತ್ತಮನೂ, ದಯಾನಿಧಿಯೂ ಆದ ಶಂಭುವು ಹಾಗೆಯೇ ಆಗಲೆಂದು ಸಮ್ಮತಿಯಿತ್ತನು. ಕುಂಭಘೋಣಕ್ಷೇತ್ರಕ್ಕೆ ಆಗ್ನೇಯದಿಕ್ಕಿನಲ್ಲಿ ಸಂಪಿಗೆಯ ಮರದ ಬುಡದಲ್ಲಿ ನೆಲಸಿದ್ದ ಕರ್ಕೋಟಕನೇ ಮೊದಲಾದ ಸರ್ಪಗಳಿಗೆಲ್ಲಾ ಒಡೆಯನಾಗಿದ್ದ (ಶ್ರೀ ನಾಗೇಶ್ವರ ದೇವನನ್ನು) ದಕ್ಷಬ್ರಹ್ಮನು ಪೂಜೆಮಾಡಿದನು. ಅನಂತರ ಸರ್ಪಗಳೊಡನೆ

॥ ನಾಗಾ ಊಚುಃ ॥

ನಮಸ್ತೇ ನಾಗೇಶ ತ್ರಿನಯನ ಭವಾಪಾರಜಲಧೇ
ಸ್ತರೇದಕ್ಷಧ್ವಾಂಕ್ಷಪ್ರತಿಹರಣ ಕಾರುಣ್ಯಜಲಧೇ ।
ತವಾಂಗಾಸಂಗೇಚ್ಛಾಪ್ರಾಪಿತಮಹಾಪುಣ್ಯವಿಭವಾಃ
ಇಮೇ ಸರ್ವೇ ನಾಗಾ ಪರಮಮುದಿತಾಃ ಸಂತಿ ಜಗತಿ ॥೯॥

ತಸ್ಯಾಗ್ನೇಯಭಾಗೇ ತು ತೀರ್ಥೇ ಚಂಡಾಭಿಧೇಶ್ವರೇ ।
ಕಾರ್ತಿಕಾದಿತ್ಯವಾರೇಷು ಸ್ನಾತ್ವಾ ನಾಗೇಶಮೀಕ್ಷ್ಯ ಚ ॥೧೦॥

ನಾಗದಂಶಾದಿಬಾಧೇಭ್ಯಃ ಪ್ರತಿಮುಚ್ಯೇತ ಮಾನವಃ ।
ಕುಂಭಘೋಣಾದಥೇಶಾನ್ಯಾಂ ಸ್ಥಾನಂ ಭೀಮೇಶ್ವರಾಭಿಧಂ ॥೧೧॥

ಭೀಮಪಾತಕಸಂಹಾರಂ ಹರಂ ಭೀಮೇಶ್ವರಾಭಿಧಂ ।
ಸಂಪೂಜ್ಯ ಭೀಮೋ ಭೀಮೇಶಂ ಭಕ್ತ್ಯಾ ತುಷ್ಟಾವ ಭಕ್ತಿತಃ ॥೧೨॥

---

ಶ್ರೀನಾಗೇಶ್ವರರೂಪನಾದ ಮಹೇಶ್ವರನನ್ನು ಆ ತಕ್ಷಕನು ಹೀಗೆ ಸ್ತೋತ್ರಮಾಡಿದನು. ॥೫-೬-೭-೮॥

ಸರ್ಪಗಳಿಗೊಡೆಯನೂ, ಮುಕ್ಕಣ್ಣನೂ, ಸಂಸಾರವೆಂಬ ಅಪಾರವಾದ ಸಮುದ್ರವನ್ನು ದಾಟಿಸುವುದರಲ್ಲಿ ದಕ್ಷನೂ, ದುಷ್ಟರನ್ನೆಲ್ಲಾ ಶಿಕ್ಷಿಸುವವನೂ, ದಯಾಸಾಗರನೂ ಆದ ನಾಗೇಶನೇ, ನಿನ್ನ ಅವಯವಸಂಬಂಧದಿಂದ ಉಂಟಾದ ಮಹಾಪುಣ್ಯವೈಭವಗಳುಳ್ಳ ಈ ಸರ್ಪಗಳೆಲ್ಲವೂ ಪ್ರಪಂಚದಲ್ಲಿ ಪರಮಾನಂದಭರಿತಗಳಾಗಿ ವಾಸಿಸುತ್ತಿರುವುವು. ॥೯॥

ನಾಗೇಶ್ವರಕ್ಷೇತ್ರಕ್ಕೆ ಆಗ್ನೇಯದಿಕ್ಕಿನಲ್ಲಿರುವ ಚಂಡಾಭಿಧೇಶ್ವರತೀರ್ಥದಲ್ಲಿ ಕಾರ್ತಿಕಮಾಸದ ಭಾನುವಾರಗಳಲ್ಲಿ ಸ್ನಾನಮಾಡಿ, ನಾಗೇಶ್ವರನ ದರ್ಶನಮಾಡುವ ಮಾಡುವ ಮಾನವನು ಸರ್ಪದಂಶವೇ ಮುಂತಾದ ವಿಷಬಾಧೆಗಳಿಂದ ಮುಕ್ತನಾಗುವನು. ॥೧೦॥

ಕುಂಭಘೋಣಕ್ಕೆ ಈಶಾನ್ಯದಿಕ್ಕಿನಲ್ಲಿ ಭೀಮೇಶ್ವರಸಂಜ್ಞಕವಾದ ಒಂದು ಶಿವಸ್ಥಾನವಿರುವುದು. ಆ ಸ್ಥಾನವು ಭಯಂಕರವಾದ ಸಕಲ ಪಾಪಗಳನ್ನೂ ಸಂಹಾರ ಮಾಡುವುದು. ಅಲ್ಲಿರುವ ಭೀಮೇಶ್ವರಸಂಜ್ಞಕನಾದ ಈಶ್ವರನನ್ನು ಪೂಜೆಮಾಡಿ,

|| ಭೀಮ ಉವಾಚ ||

ನಮಸ್ತೇ ಭೀಮೇಶ ಪ್ರಮಥಪ ಮಹಾದೇವ ದಯಯಾ
ಮದೀಯಾಸ್ಮಾನಾಂ ಚ ಪ್ರಹರಣ ಶರಣ್ಯಾಂಘ್ರಿಕಮಲಾ ।
ರಮಾನಾಥ ಸ್ತುತ್ಯಾ ಪ್ರಥಿತವರಕೀರ್ತೇ ಪಶುಪತೇ
ಬಲಂ ಮೇ ದೇಹೀಶಂ ಪ್ರಬಲ ರಿಪುಮೂಲಕ್ಷಯಕರಂ ||೧೩||

ನಾಗಾಯುತಾನಾಂ ಸಬಲಂ ಭೀಮೋ ಭೀಮೇಶ್ವರಾದ್ದಧೌ ।
ತತ್ಪ್ರಾಚ್ಯಾಂ ಕಂಪಹಾರೀಶಃ ಪ್ರಾಪ್ತಕಂಪನಿವಾರಕಃ ||೧೪||

ಚೋಲೇನಾರಾಧಿತಸ್ತತ್ರ ಸ್ಥಾನೇ ಪುಣ್ಯತಮೇ ಪುರಾ ।
ಚೋಲೋಽಭ್ಯರ್ಚ್ಯ ಮಹೇಶಾನಂ ಕಂಪಹಾರೀಶ್ವರಂ ಸ್ತುವನ್||೧೫||

---

ಭೀಮನು, ಆ ಭೀಮೇಶ್ವರನನ್ನು ತುಂಬಾ ಭಕ್ತಿಯಿಂದ ಸ್ತೋತ್ರಮಾಡಿದನು. ||೧೧-೧೨||

ಪ್ರಮಥಗಣಗಳಿಗೆ ಪತಿಯೂ, ದೇವತೋತ್ತಮನೂ ಆದ ಭೀಮೇಶನೇ, ನಿನಗೆ ನಮಸ್ಕಾರಮಾಡುವೆನು. ನಮ್ಮಂತಹ ಒರಟುಜನರು ಬಂದು ನಿನ್ನ ಪಾದಗಳಿಗೆ ನಮಸ್ಕಾರ ಮಾಡುವುದರಿಂದುಂಟಾಗುವ ನೋವುಗಳನ್ನು ಸಹಿಸಿ, ಶರಣಾಗತರಾದ ನಮ್ಮನ್ನು ಬಿಡದೆ ಕಾಪಾಡುವವನೇ, ಲಕ್ಷ್ಮೀರಮಣನಾದ ನಾರಾಯಣನ ಸ್ತೋತ್ರದಿಂದ ಪ್ರಖ್ಯಾತವಾದ ಶ್ರೇಷ್ಠಯಶಸ್ಸುಳ್ಳವನೇ, ಪಶುಗಳೆನಿಸಿದ ಸಕಲ ಜೀವರಾಶಿಗಳಿಗೆ ಒಡೆಯನಾದ ಭೀಮೇಶ್ವರನೇ, ಸಕಲ ಶತ್ರುಗಳೆನಿಸಿದವರ ಸೈನ್ಯವನ್ನು ನಿರ್ಮೂಲಮಾಡುವಷ್ಟು ಬಲವನ್ನು ನನಗೆ ಅನುಗ್ರಹಿಸು, ಎಂದು ಭೀಮನು ಭೀಮೇಶ್ವರನನ್ನು ಸ್ತೋತ್ರಮಾಡಿದನು. ||೧೩||

ಆ ಭೀಮನು ಭೀಮೇಶ್ವರನ ಅನುಗ್ರಹದಿಂದ ಹತ್ತುಸಾವಿರ ಆನೆಗಳ ಬಲವನ್ನು ಹೊಂದಿದನು. ಭೀಮೇಶ್ವರಕ್ಷೇತ್ರಕ್ಕಿಂತಲೂ ಪೂರ್ವದಲ್ಲಿ ತನ್ನನ್ನು ಸೇವಿಸುವವರಿಗೆ ಉಂಟಾಗಿರುವ ಭಯವನ್ನು ನಿವಾರಣೆಮಾಡುವ ಕಂಪಹಾರಿಶ್ವರ ಕ್ಷೇತ್ರವಿರುವುದು. ಅತ್ಯಂತ ಪುಣ್ಯಕರವಾದ ಸ್ಥಾನದಲ್ಲಿ ಹಿಂದೆ ಚೋಲದೇಶದ ರಾಜನು ಈ ಕಂಪಹಾರೀಶ್ವರನನ್ನು ಪೂಜೆಮಾಡಿ ಹೀಗೆ ಸ್ತೋತ್ರಮಾಡುತ್ತಿದ್ದನು. ||೧೪-೧೫||

॥ ಚೋಲ ಉವಾಚ ॥

ಹೇ ಕಂಪಹಾರಿನ್ನೃಶಿಖಂಡಚೂಡ
ಕಂಪಾಶತೋನ್ನಾಶಕ ಸಾನುಕಂಪ ।
ಕುರುಷ್ವ ಮತ್ತೇಭ ಸುಚರ್ಮಧಾರಿನ್
ಶ್ರೀನಾಗಹಾರ ಶಿವ ಮೇ ಪ್ರಸಾದಂ ॥೧೬॥

ಕಾವೇರ್ಯಾ ಉತ್ತರೇ ತೀರೇ ಸ್ಥಾನಂ ಕರ್ಕೋಟಕೇಶ್ವರಂ ।
ತತ್ರೇಂದ್ರಃ ಪೂಜಯಾಮಾಸ ಬಲೇನ ಪರಿಪೀಡಿತಃ ॥೧೭॥

ದೇಹಂ ಕರ್ಕೋಟಕಃ ಪ್ರಾಪ್ಯ ತದ್ಭಕ್ತಿಪರಿಪೋಷಿತಃ ।
ಸ್ವಮೂರ್ಧ್ನಿ ಪೂಜಿತಸ್ತೇನ ಸ್ಥಾನಂ ದೇವೋಽದಾದ್ಧರಃ ॥೧೮॥

ತುಷ್ಟಾವ ದೇವದೇವೇಶಂ ಸ್ವಭಕ್ತ್ಯಾ ಪಾಕಶಾಸನಃ ॥೧೯॥

---

ಚಂದ್ರಶೇಖರನಾದ ಕಂಪಹಾರೀಶ್ವರನೇ, ದಯಾಯುಕ್ತನಾದ ನೀನು ನಿನ್ನ ಭಕ್ತರ ನೂರಾರು ಭಯಗಳನ್ನು ಲೆಕ್ಕವಿಲ್ಲದೇ ಹೋಗಲಾಡಿಸುತ್ತಿರುವೆ. ಮದಿಸಿದ ಆನೆಯ ಉತ್ತಮವಾದ ಚರ್ಮವನ್ನು ಧರಿಸಿ, ಸರ್ಪರಾಜನಾದ ಆದಿಶೇಷನನ್ನೇ ಹಾರವನ್ನಾಗಿ ಧರಿಸಿರುವ ಶಿವನೇ, ನನ್ನ ಮೇಲೆ ಅನುಗ್ರಹಮಾಡು ಎಂದು ಚೋಲದೇಶಾಧಿಪತಿಯು ಸ್ತೋತ್ರಮಾಡಿದನು. ॥೧೬॥

ಕಾವೇರೀನದಿಯ ಉತ್ತರ ದಡದಲ್ಲಿ ಕರ್ಕೋಟಕೇಶ್ವರನ ಸ್ಥಾನವಿರುವುದು. ಇಂದ್ರನು ಬಲನೆಂಬ ರಾಕ್ಷಸನಿಂದ ಪೀಡಿಸಲ್ಪಟ್ಟು ಅಲ್ಲಿ ಬಂದು ಪೂಜೆಮಾಡಿದನು. ಕರ್ಕೋಟಕನೆಂಬ ನಾಗನ ದೇಹವನ್ನು ಹೊಂದಿ, ಆ ಇಂದ್ರನ ಭಕ್ತಿಯಿಂದ ಪೋಷಿಸಲ್ಪಟ್ಟವನಾಗಿ, ತನ್ನ ತಲೆಯಮೇಲೆ ಆ ಇಂದ್ರನು ಮಾಡಿದ ಅಭಿಷೇಕಾದಿ ಪೂಜೆಗಳಿಂದ ಸಂತುಷ್ಟನಾದ ಕರ್ಕೋಟಕೇಶ್ವರನು, ಇಂದ್ರನಿಗೆ ಅವನ ದೇವಲೋಕಾಧಿಪತ್ಯವನ್ನು ಕರುಣಿಸಿದನು. ಆಗ ದೇವೇಂದ್ರನು ದೇವಾದಿದೇವತೆಗಳಿಗೊಡೆಯನಾದ ಆ ಸ್ವಾಮಿಯನ್ನು ಭಕ್ತಿಯಿಂದ ಸ್ತೋತ್ರಮಾಡಿದನು. ॥೧೭-೧೮-೧೯॥

॥ ಇಂದ್ರ ಉವಾಚ ॥

ಶಂಭೋ ಕರ್ಕಟಕೇಶ ಪಾಹಿ ದಯಯಾ ಮಾಂ ದೈತ್ಯಭೀತಂ ಸದಾ
ಪಾಹೀಶಾನ ದಯಾನಿಧಾನ ಭಗವನ್ದೇಹಿ ಪ್ರತಿಷ್ಠ್ಯಾಮಸಿಂ ।
ದೈತ್ಯಾನಾಂ ನಿಧನಾಯ ಖಂಡಪರಶೋ ವಿಶ್ವೇಶ್ವರಾದ್ಯಾವ ಮಾಂ ॥೨೦॥

ತದೇಂದ್ರಾಯ ಮುದಾ ಪ್ರಾದಾದ್ವಜ್ರಂ ಬಲರಿಪೋರ್ವಧೇ ।
ತತಃ ಪ್ರಾಚ್ಯಾಂ ಮಹಾದೇವಃ ಶಿವಯೋಗೀಶ್ವರಾಭಿಧಃ ॥೨೧॥

ಶಿವಯೋಗೀ ಭಸ್ಮದಿಗ್ಧಃ ರುದ್ರಪಂಚಾಕ್ಷರಾದರಃ ।
ತ್ರಿವಾರಂ ತತ್ರ ತಲ್ಲಿಂಗಂ ಸಭಾರ್ಯಃ ಪರ್ಯಪೂಜಯತ್ ॥೨೨॥

ತುಷ್ಟಾವ ಶಿವಯೋಗೀಶಂ ಶಿವಯೋಗೀಶಭಕ್ತಿತಃ ॥೨೩॥

---

ಕರ್ಕಟಕೇಶ್ವರನಾದ ಶಂಭುವೇ, ದೈತ್ಯರಿಂದ ಭಯಗೊಂಡಿರುವ ನನ್ನನ್ನು ಯಾವಾಗಲೂ ಕಾಪಾಡು; ದಯಾನಿಧಿಯಾದ ಭಗವಂತನೆ, ಈ ರಾಕ್ಷಸರನ್ನು ಸಂಹರಿಸಲು, ಶಕ್ತವಾದ ಮತ್ತು ಉತ್ತಮವಾದ ಒಂದು ಆಯುಧವನ್ನು ನನಗೆ ಅನುಗ್ರಹಿಸು ಸ್ವಾಮಿ. ಕೊಡಲಿಯಿಂದ (ಪ್ರಪಂಚವನ್ನೆಲ್ಲಾ) ಶತ್ರುಗಳನ್ನೆಲ್ಲಾ ಕತ್ತರಿಸುವವನೇ, ಜಗದೊಡೆಯನೂ, ಆದಿಪುರುಷನೂ ಆದ ನೀನು ನನ್ನನ್ನು ಕಾಪಾಡು ಎಂದು ಇಂದ್ರನು ಕರ್ಕಟಕೇಶ್ವರನನ್ನು ಸ್ತೋತ್ರಮಾಡಿದನು. ॥೨೦॥

ಈ ಸ್ತೋತ್ರದಿಂದ ಪ್ರಸನ್ನನಾದ ಮಹಾದೇವನು, ಪ್ರೀತಿಯಿಂದ ಬಲಾಸುರನೆಂಬ ಶತ್ರುವಿನ ವಧೆಗೋಸ್ಕರ ಇಂದ್ರನಿಗೆ ವಜ್ರಾಯುಧವನ್ನು ಕೊಟ್ಟನು. ಆ ಕರ್ಕೋಟಕೇಶ್ವರ ಕ್ಷೇತ್ರದ ಪೂರ್ವದಿಕ್ಕಿನಲ್ಲಿ ಮಹಾದೇವನು ಶಿವಯೋಗೀಶ್ವರಸಂಜ್ಞೆಯಿಂದ ಪ್ರಕಾಶಿಸುತ್ತಿರುವನು. ಭಸ್ಮಲೇಪನಮಾಡಿಕೊಂಡು, ರುದ್ರಮಂತ್ರ ಮತ್ತು ಶಿವಪಂಚಾಕ್ಷರಮಂತ್ರಜಪಗಳಲ್ಲಿ ಆದರಯುಕ್ತನಾಗಿದ್ದ ಶಿವಯೋಗಿಯೆಂಬುವನು ಆ ಲಿಂಗವನ್ನು ತನ್ನ ಪತ್ನಿಯೊಡನೆ ಮೂರುಬಾರಿ ಪೂಜೆಮಾಡಿದನು. ಅನಂತರ ಆ ಶಿವಯೋಗಿಯು ಮಹೇಶನಲ್ಲಿ ಭಕ್ತಿಯಿಟ್ಟು ಆ ಶಿವಯೋಗೀಶ್ವರನನ್ನು ಸ್ತೋತ್ರಮಾಡಿದನು. ॥೨೧-೨೨-೨೩॥

॥ ಶಿವಯೋಗೀ ಉವಾಚ ॥

ನಮೋ ನಮಸ್ತೇ ತ್ರಿಪುರಾಂತಕಾರೇ
ಮಹೇಶ ಕಂದರ್ಪಸುದರ್ಪಹಾರಿನ್ ।
ಪ್ರಸೀದ ಮುಕ್ತಿಂ ವಿತರಾದ್ಯ ಮಹ್ಯಂ
ಕೃಪಾನಿಧೇ ಮೇ ಶಿವಯೋಗಮಾದಿಶ ॥೨೪॥

ತತಃ ಪ್ರಸನ್ನೋ ಭಗವಾನಭವಚ್ಛಿವಯೋಗಿನೇ ।
ಪ್ರದದೌ ಶಾಂಭವಂ ಯೋಗಂ ಮುಕ್ತಿಂ ತತ್ರ ಪ್ರದತ್ತವಾನ್ ॥೨೫॥

ತತ್ಪ್ರಾಚ್ಯಾಂ ಸ್ಥಾನಮೀಶಸ್ಯ ಆದ್ಯಾರ್ಜುನಸಮಾಹ್ವಯಂ ।
ಸರ್ವಪಾಪಪ್ರಶಮನಂ ರಾಮೇಶಾದಿಮುನಿಪ್ರಿಯಂ ॥೨೬॥

ಸಹ್ಯಜೋತ್ತರಭಾಗೇ ತು ಪುರಾಣಂ ಪಾವನಂ ಪರಂ ।
ತತ್ರ ಸಂಪೂಜಯಾಮಾಸ ಲೋಮಶೋ ಋಷಿಸತ್ತಮಃ ॥೨೭॥

ಪರಿಪೂಜ್ಯಾದಿಮಧ್ಯೇಶಮರ್ಜುನಂ ಪಾಪತರ್ಜನಂ ।
ತುಷ್ಟುವೇ ತತ್ರ ತಲ್ಲಿಂಗಂ ದೇವ್ಯಾ ಸಹ ಸ ಲೋಮಶಃ ॥೨೮॥

---

ತ್ರಿಪುರಾಸುರಸೂದನನೂ, ಯಮನನ್ನು ನಿಗ್ರಹಿಸಿದವನೂ, ಸಕಲೈಶ್ವರ್ಯಸಂಪನ್ನನೂ, ಮನ್ಮಥನ ಹೆಚ್ಚಾದ ಗರ್ವವನ್ನು ಹೋಗಲಾಡಿಸಿದವನೂ ಆದ ಮಹಾದೇವನೇ, ನನ್ನಲ್ಲಿ ಅನುಗ್ರಹಮಾಡಿ, ನನಗೆ ಮುಕ್ತಿಯನ್ನು ಕೊಡು. ಎಲೈ ದಯಾನಿಧಿಯೇ, ನನಗೆ ಶಿವಯೋಗವನ್ನುಪದೇಶಮಾಡುವನಾಗೆಂದು ಶಿವಯೋಗಿಯು ಸ್ತೋತ್ರಮಾಡಿದನು. ॥೨೪॥

ಆದರಿಂದ ಪ್ರಸನ್ನನಾದ ಭಗವಂತನು ಆ ಶಿವಯೋಗಿಗೆ ಶಿವಯೋಗವನ್ನೂ ಸ್ಥಿರಮುಕ್ತಿಯನ್ನೂ ಕೊಟ್ಟನು. ಆ ಶಿವಯೋಗೀಶಕ್ಷೇತ್ರಕ್ಕೆ ಪೂರ್ವದಿಕ್ಕಿನಲ್ಲಿ ಆದ್ಯಾರ್ಜುನಸಂಜ್ಞಕವಾದ ಈಶ್ವರನ ಸ್ಥಾನವಿರುವುದು. ಆ ಸ್ಥಾನವು ಸಕಲ ಪಾಪಗಳನ್ನೂ ನಾಶಮಾಡುವುದಲ್ಲದೇ, ರಾಮೇಶ್ವರ ಮುಂತಾದ ಮುನಿಗಳಿಗೆ ಪ್ರೀತಿಕರವೂ ಆಗಿದೆ. ॥೨೫-೨೬॥

ಕಾವೇರೀನದಿಯ ಉತ್ತರಭಾಗದಲ್ಲಿ ಪ್ರಸಿದ್ಧವಾಗಿರುವ ಮಧ್ಯಾರ್ಜುನ ಕ್ಷೇತ್ರವು ಪ್ರಾಚೀನವೂ ಪವಿತ್ರವೂ ಆಗಿರುವುದು. ಆ ಕ್ಷೇತ್ರದಲ್ಲಿ ಋಷಿಶ್ರೇಷ್ಠನಾದ

|| ಲೋಮಶ ಉವಾಚ ||

ಪಾಹಿ ಪ್ರಸೀದ ಸುಮುಖೋ ಭವ ಪಾರ್ವತೀಶ ।
ವೇದಾರ್ಥ ಶರ್ವ ಭಗವನ್ಭಗನೇತ್ರಹಾರಿನ್ ।
ವಿಶ್ವೇಶ್ವರಾಂತಕ ರಿಪೋ ಪ್ರಮಥಾಧಿನಾಥ
ಚಂದ್ರೋತ್ತಮಾಂಗ ಭಗವನ್ಮಮ ದೇಹಿ ಮುಕ್ತಿಂ ||೨೯||

ಇತ್ಥಂ ಸ ಲೋಮಶೇನೇಶಃ ಸಂಸ್ತುತಸ್ತತ್ರ ಶಂಕರಃ ।
ಪ್ರಾದಾನ್ಮುಕ್ತಿಂ ಲೋಮಶಾಯ ವ್ಯೋಮಕೇಶೋ ಮಹೇಶ್ವರಃ ||೩೦||

|| ಶ್ರೀಸ್ಕಂದ ಉವಾಚ ||

ಇತ್ಥಂ ಸ್ಥಾನೇಷು ಶಂಭೋರ್ಯಮ ನಿಯಮಪರಾಃ ಭಸ್ಮರುದ್ರಾಕ್ಷಹಾರಾಃ
ರುದ್ರಾಧ್ಯಾಯಜಪಾದರಾಃ ಶ್ರುತಿಗಿರಃ ಪಂಚಾಕ್ಷರೇ ಸಾದರಾಃ ।
ಸಂಪೂಜ್ಯ ಪ್ರಮಥಾಧಿನಾಥಮಗಜಾಜಾನೇಶ್ಚ ಲಿಂಗಾರ್ಚನಾತ್
ಸಂಪ್ರಾಪುಃ ಪರಮೋನ್ನತಿಂ ಸುರವರಾಃ ಕ್ಷೇತ್ರೇಷು ಸಂವಾಸಿನಃ ||೩೧||

---

ಲೋಮಶಮುನಿಯು, ಪಾಪನಾಶಕನಾದ ಆದಿಮಧ್ಯಾರ್ಜುನೇಶ್ವರನನ್ನು ಪೂಜೆ ಮಾಡಿ, ದೇವಿಯೊಡನೆ ಅಲ್ಲಿ ಶಿವಲಿಂಗವನ್ನು ಸ್ತೋತ್ರಮಾಡಿದನು. ||೨೭-೨೮||

ಪಾರ್ವತೀಕಾಂತನಾದ ಶಂಕರನೇ, ನನ್ನಮೇಲೆ ಪ್ರಸನ್ನನಾಗಿ, ಅಭಿಮುಖನಾಗು ಮತ್ತು ಕಾಪಾಡು; ವೇದಾರ್ಥವನ್ನರಿತವನೂ, ಷಡ್ಗುಣಪೂರ್ಣನೂ, ಭಗದೇವತೆಯ ಕಣ್ಣನ್ನು ಕಿತ್ತವನೂ, ಜಗದೊಡೆಯನೂ, ಯಮನ ಶತ್ರುವೂ, ಪ್ರಮಥಗಣಗಳಿಗೆಲ್ಲಾ ಒಡೆಯನೂ, ಚಂದ್ರನನ್ನು ತಲೆಯಲ್ಲಿ ಧರಿಸಿದವನೂ, ಆದ ಭಗವಂತನೇ, ನನಗೆ ಮೋಕ್ಷವನ್ನು ಕೊಡು, ಎಂದು ಲೋಮಶಮುನಿಯು ಪ್ರಾರ್ಥಿಸಿದನು. ||೨೯||

ಈ ರೀತಿಯಾಗಿ ಲೋಮಶಮುನಿಯಿಂದ ಚೆನ್ನಾಗಿ ಸ್ತೋತ್ರಮಾಡಲ್ಪಟ್ಟ ಜಗನ್ಮಂಗಳಕರನೂ, ವ್ಯೋಮಕೇಶನೂ, ಮಹೇಶ್ವರನು ಆ ಲೋಮಶಮುನಿಗೆ ಮೋಕ್ಷವನ್ನಿತ್ತನು. ||೩೦||

ಈ ರೀತಿಯಾಗಿ ಉತ್ತಮವಾದ ಶಿವಸ್ಥಾನಗಳಲ್ಲಿ ಯಮನಿಯಮನಿರತರಾಗಿ, ಭಸ್ಮ, ರುದ್ರಾಕ್ಷಗಳನ್ನು ಧಾರಣೆಮಾಡಿಕೊಂಡು, ರುದ್ರಾಧ್ಯಾಯಜಪದಲ್ಲಿ ಆದರ

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶಿವಕ್ಷೇತ್ರವೈಭವ ವರ್ಣನಂ ನಾಮ ದ್ವಾವಿಂಶೋಽಧ್ಯಾಯಃ

---

ವುಳ್ಳವರಾಗಿ, ವೇದಾಕ್ಷರಗಳು ಮತ್ತು ಶಿವಪಂಚಾಕ್ಷರಮಂತ್ರಗಳನ್ನು ಜಪಮಾಡುವುದರಲ್ಲಿ ಆಸಕ್ತಿಹೊಂದಿ, ಪ್ರಮಥಗಣಗಳಿಗೆ ಅಧಿಪತಿಯೂ, ಪರ್ವತರಾಜಕುಮಾರಿಯ ಪತಿಯೂ ಆದ ಶಿವನ ಲಿಂಗಪೂಜೆಯಿಂದ ಆ ಕ್ಷೇತ್ರದಲ್ಲಿ ವಾಸಮಾಡುವ ದೇವತೋತ್ತಮರು ಉತ್ತಮವಾದ ಮುಕ್ತಿಪದವಿಯನ್ನು ಹೊಂದುತ್ತಿರುವರು. ||೩೧||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶಿವಕ್ಷೇತ್ರವೈಭವವರ್ಣನೆಯೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ತ್ರಯೋವಿಂಶೋಽಧ್ಯಾಯಃ

|| ಸ್ಕಂದ ಉವಾಚ ||

**ಕಾವೇರ್ಯಾಂ ದಕ್ಷಿಣೇ ತೀರೇ ಸ್ಥಾನಂ ಮಧ್ಯಾರ್ಜುನಾಭಿಧಂ ।**
**ಮುನಿಭಿರ್ದೇವಗಂಧರ್ವೈಃ ಸೇವಿತಂ ಪರಮಂ ಮಹತ್ ॥೧॥**

**ವೈಖಾನಸೈರ್ವಾಲಖಿಲ್ಯೈರ್ವಿಷ್ಣುನಾ ಬ್ರಹ್ಮಣಾಪಿ ಚ ।**
**ಸೇವಿತಂ ಮುಕ್ತಿದಂ ಪುಂಸಾಂ ಮಹತ್ಪುಣ್ಯಫಲಪ್ರದಂ ॥೨॥**

**ಸರ್ವಪಾಪಹರಂ ಪುಂಸಾಂ ದರ್ಶನಾದೇವ ಕೇವಲಂ ।**
**ತತ್ರೈಕರಾತ್ರವಾಸೇನ ನ ಭೂಯೋ ಗರ್ಭಮಾವಿಶೇತ್ ॥೩॥**

---

## ಇಪ್ಪತ್ತಮೂರನೆಯ ಅಧ್ಯಾಯ

ಪುನಃ ಶ್ರೀಸ್ಕಂದಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಕ್ಷೇತ್ರಗಳ ವಿಷಯಗಳನ್ನು ನಿರೂಪಿಸ ತೊಡಗಿದನು. ಕಾವೇರೀ ನದಿಯ ದಡದಲ್ಲಿ ಮಧ್ಯಾರ್ಜುನ ಸಂಜ್ಞಕವಾದ ಒಂದು ಮಹಾಪುಣ್ಯಸ್ಥಾನವಿರುವುದು. ಆ ಸ್ಥಳವು ಮುನಿಗಳಿಂದಲೂ ದೇವತೆಗಳಿಂದಲೂ ಮತ್ತು ಗಂಧರ್ವರಿಂದಲೂ ಸೇವಿಸಲ್ಪಡುತ್ತಿದೆ. ವೈಖಾನಸಾಶ್ರಮವುಳ್ಳ ವಾಲಖಿಲ್ಯರಿಂದಲೂ, ವಿಷ್ಣು, ಬ್ರಹ್ಮ ಇವರಿಂದಲೂ ಸೇವಿಸಲ್ಪಡುತ್ತಿರುವ ಮೋಕ್ಷಪ್ರದವಾದ ಈ ಸ್ಥಾನವು ಪುರುಷರಿಗೆ ಹೆಚ್ಚು ಪುಣ್ಯಫಲವನ್ನು ಕೊಡುತ್ತಿರುವುದು. ||೧-೨||

ಅದು ಕೇವಲ ನೋಟದಿಂದಲೇ ಪುರುಷರ ಸಕಲ ಪಾಪಗಳನ್ನೂ ನಾಶಮಾಡುವುದೂ ಆಗಿರುವುದು. ಆ ಕ್ಷೇತ್ರದಲ್ಲಿ ಒಂದು ರಾತ್ರಿ ವಾಸಮಾಡುವುದರಿಂದ

|| ಪ್ರಾಜ್ಞಾ ಊಚುಃ ||

ತತ್ರ ಮಾತ್ರಾ ಪ್ರದಾನೇನ ಮಹಾದಾನಫಲಂ ಲಭೇತ್ ।
ಕಾರುಣ್ಯಾಮೃತತೀರ್ಥಾಖ್ಯಂ ಶಿವದೃಕ್ಪಾವನಂ ಮಹತ್ ॥೪॥

ಸ್ನಾನಾತ್ರೈಲೋಕ್ಯತೀರ್ಥೇ ಯತ್ಫಲಂ ತತ್ಫಲಮಾಲಭೇತ್ ।
ಪುಣ್ಯೇ ಪುಷ್ಯರ್ಕಕೇ ಸ್ನಾತ್ವಾ ಕಾವೇರ್ಯಾಂ ಶಿವಸನ್ನಿಧೌ ॥೫॥

ಬ್ರಹ್ಮಹಾಪಿ ವಿಮುಚ್ಯೇತ ಕಿಂ ಪುನಸ್ತ್ವನ್ಯಪಾತಕೀ ।
ದೇವ್ಯಾ ತತ್ರ ತಪಸ್ತಪ್ತಂ ಪುಣ್ಯೇಽರ್ಜುನವನೇ ಪುರಾ ॥೬॥

ಅಪರ್ಣಾ ಪರ್ಣವಸನಾ ತೂರ್ಣಂ ಸಿದ್ಧಿಪ್ರದೇ ಸ್ಥಲೇ ।
ಭಸ್ಮರುದ್ರಾಕ್ಷಭೂಷಾಢ್ಯಾ ರುದ್ರಪಂಚಾಕ್ಷರಾದರಾ ॥೭॥

---

ಮಾನವನು ಪುನಃ ಮಾತೃಗರ್ಭವನ್ನು ಸೇರುವುದಿಲ್ಲ. (ಅಂದರೆ ಅವನಿಗೆ ಪುನರ್ಜನ್ಮವೇ ಇಲ್ಲದಂತಾಗುವುದು.) ಅಲ್ಲಿ ಅಲ್ಪವಸ್ತುವನ್ನು ದಾನಮಾಡಿದರೂ ಮಹಾದಾನ ಮಾಡಿದ ಫಲವನ್ನೇ ಹೊಂದುತ್ತಾನೆ. ಅಲ್ಲಿ ಆ ಪರಶಿವನ ದೃಷ್ಟಿಯಿಂದ ಪಾವನವಾಗಿರುವ ಕಾರುಣ್ಯಾಮೃತತೀರ್ಥವೆಂಬ ಒಂದು ದೊಡ್ಡ ತೀರ್ಥವಿರುವುದು. ||೩-೪||

ಕಾವೇರೀನದಿಯ ಈ ತೀರ್ಥದಲ್ಲಿ, ಪುಷ್ಯನಕ್ಷತ್ರದಲ್ಲಿ ಸೂರ್ಯನಿರುವಾಗ ಪುಣ್ಯಕಾಲದಲ್ಲಿ, ಶಿವನ ಸಮಕ್ಷಮ ಸ್ನಾನಮಾಡಿದರೆ, ಮೂರುಲೋಕಗಳಲ್ಲಿರುವ ತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಹೊಂದುವನು. ಅಲ್ಲದೇ ಬ್ರಹ್ಮಹತ್ಯಾ ಮಾಡಿದವನೂ ಆ ಪಾಪಗಳಿಂದ ಬಿಡುಗಡೆ ಹೊಂದುವನೆಂದಮೇಲೆ ಇತರ ಸಣ್ಣಪಾಪಗಳನ್ನು ಮಾಡಿದವರ ವಿಷಯವನ್ನೇನೂ ಹೇಳಬೇಕಾಗಿಯೇ ಇಲ್ಲ. ಹಿಂದೆ ಪುಣ್ಯಕರವಾದ ಈ ಅರ್ಜುನಕ್ಷೇತ್ರದ ಕಾಡಿನಲ್ಲಿ ದೇವಿಯು ತಪಸ್ಸು ಮಾಡಿದಳು. ||೫-೬||

ಎಲೆಗಳಿಂದಲೇ ಬಟ್ಟೆಮಾಡಿಕೊಂಡು, ಭಸ್ಮರುದ್ರಾಕ್ಷಾದಿಗಳನ್ನಲಂಕರಿಸಿ, ಆ ಅಪರ್ಣಾದೇವಿಯು ಜಾಗ್ರತೆಯಾಗಿ ಸಿದ್ಧಿಯನ್ನುಂಟುಮಾಡುವ ಸ್ಥಳದಲ್ಲಿ, ರುದ್ರಮಂತ್ರ ಮತ್ತು ಶಿವಪಂಚಾಕ್ಷರಮಂತ್ರಗಳಲ್ಲಿ ಆದರವುಳ್ಳವಳಾಗಿ, ಶಿವಲಿಂಗ ಪೂಜೆಯಲ್ಲಿ ಆಸಕ್ತಿಹೊಂದಿ, ಶತ್ರುಗಳಿಗೆ ಭಯಂಕರಸ್ವರೂಪನೆನಿಸಿರುವ ಆ ಉಗ

ಶಿವಲಿಂಗಾರ್ಚನವ್ಯಗ್ರಾ ಉಗ್ರವಿನ್ಯಸ್ತಮಾನಸಾ ।
ಧ್ಯಾಯಂತೀ ಹೃದಯಾಂಭೋಜೇ ದೇವದೇವಂ ಮಹೇಶ್ವರಂ ॥೮॥

ಪ್ರಸನ್ನಾಸ್ಯಂ ತ್ರಿನಯನಂ ಚಂದ್ರಗಂಗಾಧರಂ ಹರಂ ।
ಭವಂ ಭೀಮಮಥೇಶಾನಂ ಕಾಲಕಾಲಂ ಚ ಶಂಕರಂ ।೯॥

ವರ್ಷಾಣಾಂ ಸಾ ಶತಂ ತತ್ರ ಧ್ಯಾಯಂತೀ ಪರಮೇಶ್ವರಂ ।
ಧ್ಯಾಯಂತ್ಯಾಶ್ಚ ಮಹಾದೇವ್ಯಾ ಹೃದಯಾಂಭೋಜಮಧ್ಯತಃ ॥೧೦॥

ಪ್ರಾದುರ್ಭೂತಂ ಮಹಾಲಿಂಗಂ ಶಿವಸ್ಯಾರ್ಜುನಮೂಲತಃ ।
ಲಿಂಗಂ ಮಧ್ಯಾರ್ಜುನೇಶಾನಂ ಮಹಾಲಿಂಗಂ ಮಹತ್ತತಃ ॥೧೧॥

ಪ್ರಾದುರ್ಭೂತಂ ಮಹಾಲಿಂಗಂ ಮಹಾದೇವೀ ನಿರೀಕ್ಷ್ಯ ಚ ।
ಉನ್ಮೀಲ್ಯ ನಯನೇಽಪಶ್ಯದ್ವಿಶ್ವೇಶಂ ಲಿಂಗರೂಪಿಣಂ ॥೧೨॥

ಪಂಚಾಮೃತೈಃ ಪಂಚಗವ್ಯೈರ್ದೇವೀ ಪಂಚಫಲೈರಸೈಃ ।
ಕವೇರಜಾಪಯಃಪೂರ್ಯೈರಭಿಷಿಚ್ಯ ಮಹೇಶ್ವರಂ ॥೧೩॥

---

ದೇವನಲ್ಲಿಯೇ ಮನಸ್ಸಿಟ್ಟು, ತನ್ನ ಮನಸ್ಸೆಂಬ ಕಮಲದಲ್ಲಿ ದೇವದೇವನಾದ ಮಹೇಶ್ವರನನ್ನು ಧ್ಯಾನಮಾಡುತ್ತಾ ತಪಸ್ಸನ್ನು ಆಚರಿಸಿದಳು. ॥೭-೮॥

ನಿರ್ಮಲನಾದ ಮುಖವುಳ್ಳವನೂ, ಮೂರುಕಣ್ಣುಗಳುಳ್ಳವನೂ, ಚಂದ್ರ ಮತ್ತು ಗಂಗೆ ಇವರನ್ನು ತಲೆಯುಲ್ಲಿ ಧರಿಸಿರುವನೂ, ಪಾಪನಾಶಕನೂ, ಜಗದುತ್ಪತ್ತಿ ಕಾರಣನೂ, ಭಯಂಕರಸ್ವರೂಪನೂ (ವೈರಿಗಳಿಗೆ) ಐಶ್ವರ್ಯಸಂಪನ್ನನೂ, ಯಮಾಂತಕನೂ, ಜಗನ್ಮಂಗಳಕರನೂ ಆದ ಆ ಮಹೇಶ್ವರನನ್ನು ನೂರುವರ್ಷಗಳ ವರೆಗೆ ಧ್ಯಾನಮಾಡುತ್ತಾ ತಪಸ್ಸುಮಾಡುತ್ತಿದ್ದಳು. ಹೀಗೆ ಧ್ಯಾನಮಾಡುತ್ತಿದ್ದ ಮಹಾದೇವಿಯು ಹೃದಯಕಮಲಮಧ್ಯದಲ್ಲಿ ನೆಲಸಿದ್ದ ಮಹಾದೇವನು, ಮತ್ತೀ ಮರದ ಬುಡದಿಂದ ಒಂದು ದೊಡ್ಡ ಲಿಂಗಾಕಾರವಾಗಿ ಪ್ರಾದುರ್ಭವಿಸಿದನು. ಆ ಮಹಾಲಿಂಗವು ಮಧ್ಯಾರ್ಜುನೇಶಲಿಂಗವೆಂದು ಪ್ರಖ್ಯಾತವಾಯಿತು. ।೯-೧೦-೧೧॥

ಹೀಗೆ ಪ್ರತ್ಯಕ್ಷವಾಗಿ ಗೋಚರಿಸಿರುವ ಮಹಾಲಿಂಗರೂಪಿಯಾದ ಮಹಾದೇವನನ್ನು ನೋಡಿ, ಮಹಾದೇವಿಯು ತನ್ನ ಕಣ್ಣುಗಳನ್ನು ಚೆನ್ನಾಗಿ ಬಿಟ್ಟುಕೊಂಡು, ಲಿಂಗರೂಪಿಯಾಗಿರುವ ವಿಶ್ವೇಶ್ವರನನ್ನು ದರ್ಶನಮಾಡಿದಳು. ಅನಂತರ

ಗಂಧೈರ್ದೇವಮುಮಾಲಿಪ್ಯ ವಸನೈರ್ಭೂಷಣೈರಪಿ ।
ಬಿಲ್ವಪತ್ರೈಶ್ಚ ಕಲ್ಹಾರೈಃ ಕರವೀರಾರ್ಕಚಂಪಕೈಃ ॥೧೪॥

ಮಲ್ಲಿಕಾಮಾಲತೀಭಿಶ್ಚ ಪೂಜಯಾಮಾಸ ಪಾರ್ವತೀ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲೈಃ ಫಲಮಂಡಲೈಃ ॥೧೫॥

ನೀರಾಜನೈಃ ಪ್ರಣತಿಭಿಃ ಪ್ರದಕ್ಷಿಣಪುರಸ್ಸರಂ ।
ತುಷ್ಟಾವೇಶಂ ಮಹಾಲಿಂಗರೂಪಿಣಂ ಪರಮೇಶ್ವರಂ ॥೧೬॥

ಮಹಾಲಿಂಗಂ ಮಹಾದೇವಂ ಬ್ರಹ್ಮವಿಷ್ಣ್ವಾದಿವಂದಿತಂ ॥೧೭॥

॥ ಶ್ರೀದೇವ್ಯುವಾಚ ॥

ಜಯ ಜಯ ಸರ್ವಸುರಾಸುರವಂದಿತ
ನಂದಿತ ವಿಬುಧಾವನ ಗಣವೃಂದ ।
ಜಯ ಜಯ ವೇದಶಿಖಾಸ್ತುತ ಶಂಕರ
ಪಾಪಮಥಃ ಕುರು ದುಃಖಭಯಂ ॥೧೮॥

---

ಪಂಚಗವ್ಯ, ಪಂಚಾಮೃತ, ಐದು ಜಾತಿಯ ಹಣ್ಣುಗಳ ರಸ ಮತ್ತು ಕಾವೇರೀನದಿಯ ಪ್ರವಾಹದ ನೀರಿನಿಂದ ಅಭಿಷೇಕಮಾಡಿದಳು. ||೧೨-೧೩||

ಅಭಿಷೇಕವಾದ ಮೇಲೆ ಆ ಉಮಾದೇವಿಯು, ಮಹಾದೇವನಿಗೆ ಗಂಧವನ್ನು ಲೇಪನಮಾಡಿ, ವಸ್ತ್ರ, ಆಭರಣಗಳನ್ನು ಸಮರ್ಪಿಸಿ, ಬಿಲ್ವಪತ್ರೆ, ಕಲ್ಹಾರ (ನೈದಿಲೆ ಹೂವಿನಲ್ಲಿ ಒಂದು ಭೇದ) ಕಣಿಗಲೆ, ಎಕ್ಕ, ಸಂಪಿಗೆ, ಮಲ್ಲಿಗೆ, ಮಾಲತೀ ಮುಂತಾದ ಹೂಗಳಿಂದ ಪತ್ರೆಗಳಿಂದ ಪೂಜೆಮಾಡಿದಳು. ಅನಂತರ ಆ ಪಾರ್ವತಿಯು, ಧೂಪ, ದೀಪಗಳನ್ನು ಹತ್ತಿಸಿ, ನೈವೇದ್ಯ, ತಾಂಬೂಲ, ಫಲಸಮರ್ಪಣ, ಆರತಿಪೂರ್ವಕವಾದ ನಮಸ್ಕಾರಗಳಿಂದ ಸೇವಿಸಿ, ಮಹಾಲಿಂಗರೂಪಿಯೂ, ಪರಮೈಶ್ವರ್ಯಭರಿತನೂ, ದೇವತೋತ್ತಮನೂ ಬ್ರಹ್ಮ-ವಿಷ್ಣ್ವಾದಿಗಳಿಂದ ನಮಸ್ಕೃತನೂ ಆದ ಮಹಾದೇವನನ್ನು ಹೀಗೆ ಸ್ತೋತ್ರಮಾಡಿದಳು. ||೧೪-೧೫-೧೬-೧೭||

ಸಕಲ ದೇವದೈತ್ಯರಿಂದ ನಮಸ್ಕೃತನೂ, ಆನಂದಯುಕ್ತರಾದ ದೇವತೆಗಳನ್ನು ಕಾಪಾಡುವವನೂ, ಗಣಗಳ ಸಮೂಹದಿಂದ ಶೋಭಿಸುವವನೂ ಆದ ದೇವನೇ,

ಜಯ ಜಯ ಪಾಹಿ ಸದಾಶಿವ
ವಿದ್ರುತರುದ್ರ ದರಿದ್ರಮಪಾಕುರು ಮೇ ।
ಜಯ ಜಯ ಹೇ ಪರಮೇಶ್ವರ
ಸಂಸ್ತುತಪಾರದವೀರ್ಯ ವರಶೂಲಧರ ॥೧೯॥

ಜಯ ಜಯ ಗಾಂಗತರಂಗ ಮಹೇಂದುಜಪೂತ
ಕಪರ್ದವಿರಾಜಿತಮೌಳೇ ।
ಪಾಹಿ ವಿಭೋ ಪರಮೇಶ್ವರ ಮಾಮವ
ದೇವ ದಯಾಕರ ಸರ್ವಗತ ॥೨೦॥

ಇತ್ಥಂ ದೇವ್ಯಾಸ್ತುತಃ ಶಂಭುರ್ಮಹಾಲಿಂಗಾಕೃತಿಃ ಶಿವಃ ।
ತತ್ಸ್ತುತ್ಯಾ ತುಷ್ಟಹೃದಯಸ್ತಾಮುವಾಚ ಮಹೇಶ್ವರಃ ॥೨೧॥

---

ನಿನಗೆ ವಿಜಯವಾಗಲಿ. ವೇದಾಂತಗಳಿಂದ ಸ್ತೋತ್ರಮಾಡಲ್ಪಟ್ಟವನಾದ ದೇವನೇ, ನಿನಗೆ ಜಯವಾಗಲಿ. ನನ್ನ ದುಃಖಭಯವನ್ನು ಹೋಗಲಾಡಿಸಿ, ಪಾಪಗಳನ್ನು ತೊಲಗಿಸು. ನಿತ್ಯಮಂಗಳಸ್ವರೂಪನೂ, ದ್ರೋಹಿಗಳನ್ನು ಶಿಕ್ಷಿಸುವವನೂ ಆದ ರುದ್ರನೇ, ನಿನಗೆ ವಿಜಯವಾಗಲಿ. ನನ್ನ ಬಡತನವನ್ನು ಹಿಂಗಿಸು. ವೇದಾಂತಗಳಿಂದ ಸ್ತೋತ್ರಮಾಡಲ್ಪಟ್ಟವನೇ, ಪಾದರಸವನ್ನೇ ವೀರ್ಯವನ್ನಾಗಿ ಧರಿಸಿರುವವನೇ, ಉತ್ತಮವಾದ ಶೂಲಾಯುಧವನ್ನು ಹಿಡಿದಿರುವವನೇ, ನಿನಗೆ ವಿಜಯವಾಗಲಿ. ॥೧೮-೧೯॥

ಅಲೆಗಳಿಂದ ಯುಕ್ತವಾದ ಗಂಗಾನದಿ, ಚಂದ್ರ ಇವರ ಕಾಂತಿಯಿಂದ ಶೋಭಿಸುವ ಜಡೆಗಳಿಂದ ವಿರಾಜಿಸುತ್ತಿರುವ ಶಿಖರವುಳ್ಳವನೇ, ನಿನಗೆ ವಿಜಯವಾಗಲಿ. ಪರಮೇಶ್ವರನೂ, ವಿಭುವೂ, ದಯಾಸಮುದ್ರನೂ, ಸರ್ವವ್ಯಾಪಿಯೂ ಆದ ದೇವನೇ, ನೀನು ನಮ್ಮನ್ನು ಕಾಪಾಡೆಂದು ದೇವಿಯು ಮಹಾದೇವನನ್ನು ಸ್ತೋತ್ರಮಾಡಿದಳು. ॥೨೦॥

ಈ ರೀತಿಯಾದ ದೇವಿಯ ಸ್ತೋತ್ರದಿಂದ ಸಂತುಷ್ಟಾಂತರಂಗನಾದ ಶಂಭುವೆನಿಸಿದ ಮಹೇಶ್ವರನು ದೇವಿಯನ್ನು ಕುರಿತು ಇಂತೆಂದನು. ॥೨೧॥

॥ ಶ್ರೀ ಈಶ್ವರ ಉವಾಚ ॥

ತ್ವತ್ತುತ್ಯಾ ತುಷ್ಟ ಹೃದಯೋ ಮಹಾಲಿಂಗಾಕೃತಿಸ್ತ್ವಹಂ ।
ಅತ್ರೈವಾರ್ಜುನಮೂಲೇ ತು ಸಂವಸಾಮ್ಯರ್ಜುನೇಶ್ವರಃ ॥೨೨॥

ಅತ್ರೈವ ವಸತಾಂ ಪುಂಸಾಂ ಭಕ್ತಾನಾಂ ಮುಕ್ತಿದೋಽಸ್ಮ್ಯಹಂ ।
ಪ್ರದೋಷೇ ಸೋಮವಾರೇಷು ತಥಾ ಭೂತಾಷ್ಟಮೀಷು ಚ ॥೨೩॥

ಪರ್ವಕಾಲೇಷು ಮಾಂ ವೀಕ್ಷ್ಯ ಸ್ನಾತ್ವಾ ವೈ ಸಹ್ಯಜಾಂಭಸಿ ।
ತಸ್ಯಾನಂತಂ ಭವೇತ್ಪುಣ್ಯಂ ಮುಕ್ತಿಸ್ತಸ್ಯ ಕರೇಸ್ಥಿತಾ ॥೨೪॥

ಇತ್ಯುಕ್ತ್ವಾಂತರ್ದಧೇ ಲಿಂಗೇ ದೇವ್ಯಾ ಸಹ ಮಹೇಶ್ವರಃ ।
ಆಜ್ಞಾಗಣಪತಿರ್ನಾಮ್ನಾ ತತ್ರ ಸಂಪೂಜಯದ್ಧರಂ ॥೨೫॥

ಮಹಾಲಿಂಗಾಕೃತಿಂ ಶಂಭುಂ ಭವ್ಯಂ ಮಧ್ಯಾರ್ಜುನೇ ಪುರಾ ।
ಸ್ವಶುಂಡಾಕರ್ಷಿತನದೀಸಾಗರಾಂಭೋಭಿರೀಶ್ವರಂ ॥೨೬॥

ದಿವ್ಯೋದ್ಯಾನಗತೈಃ ಪುಷ್ಪೈರ್ಬಿಲ್ವೈರಭ್ಯರ್ಚಯತ್ತದಾ ।
ಧೃತಪುಂಡ್ರಾಕ್ಷಮಾಲಾಢ್ಯೋ ಗಣೇಶಸ್ತತ್ರ ಶಂಕರಂ ॥೨೭॥

---

ದೇವಿ, ನಿನ್ನ ಸ್ತೋತ್ರದಿಂದ ಸಂತುಷ್ಟಾಂತರಂಗನಾದ, ಮಹಾಲಿಂಗರೂಪದಿಂದಿರುವ ನಾನು ಇಲ್ಲಿಯೇ ಈ ಮತ್ತೀಮರದ ಬುಡದಲ್ಲಿ ಅರ್ಜುನೇಶ್ವರನೆಂಬ ಹೆಸರಿನಿಂದ ವಾಸಮಾಡುವೆನು. ಇಲ್ಲಿಯೇ ವಾಸಮಾಡುವ ಭಕ್ತಪುರುಷರಿಗೆ ನಾನು ಮುಕ್ತಿಯನ್ನುಂಟುಮಾಡುವೆನು. ಪ್ರದೋಷ, ಸೋಮವಾರ, ಚತುರ್ದಶೀ ಅಷ್ಟಮೀತಿಥಿಗಳು, ಪರ್ವಕಾಲಗಳು, ಇಂತಹ ಕಾಲಗಳಲ್ಲಿ ಕಾವೇರೀನದಿಯ ನೀರಿನಲ್ಲಿ ಸ್ನಾನಮಾಡಿ ನನ್ನ ಸಂದರ್ಶನ ಮಾಡುವವರಿಗೆ ಅಪರಿಮಿತವಾದ ಪುಣ್ಯವುಂಟಾಗುವುದಲ್ಲದೇ ಅವರಿಗೆ ಮೋಕ್ಷವು ಕೈಯಲ್ಲಿಯೇ ಇದ್ದಂತಾಗುವುದು, ಎಂದು ಹೇಳಿ, ಆ ಮಹೇಶ್ವರನು ದೇವಿಯೊಡನೆ ಅಲ್ಲಿಯೇ ಮರೆಯಾದನು. ॥೨೨-೨೩-೨೪॥

ಆಜ್ಞಾಗಣಪತಿಯೆಂಬ ಹೆಸರಿನಿಂದ ವಿಘ್ನೇಶ್ವರನು ಹಿಂದೆ, ಆ ಮಧ್ಯಾರ್ಜುನ ಕ್ಷೇತ್ರದಲ್ಲಿ ದೊಡ್ಡ ಶಿವಲಿಂಗರೂಪಿಯೂ, ಸುಖಪ್ರದನೂ, ಮಂಗಳಕರನೂ ಆದ ಪರಮೇಶ್ವರನನ್ನು ಪೂಜೆಮಾಡಿದನು. ಅವನು ತನ್ನ ಸೊಂಡಿಲಿನಿಂದ ತರಲ್ಪಟ್ಟ

ಧೂಪೈರ್ದೀಪೈಸ್ತಥಾ ಗಂಧೈರ್ನೈವೇದ್ಯೈರ್ವಿವಿಧೈರಪಿ ।
ನೀರಾಜನೈರ್ನತೀಭಿಶ್ಚ ಪ್ರದಕ್ಷಿಣಪುರಃ ಸರಂ ॥೨೮॥

ತುಷ್ಟಾವ ಬೃಂಹಿತರವಃ ಕರ್ಣೌ ವಿಸ್ತಾರ್ಯ ಶಂಕರಂ ॥೨೯॥

॥ ಶ್ರೀ ಗಣೇಶ ಉವಾಚ ॥

ಮಧ್ಯಾರ್ಜುನೇಶ ಹರಶಂಕರ ಸಾಮಿಸೋಮ
ಗಂಗೋತ್ತಮಾಂಗ ಧೃತಸರ್ಪಮಹೋರುಹಾರ ।
ಸಿದ್ಧಿಪ್ರದೋಽತ್ರ ವಸತಾಂ ಚ ಸುಭಕ್ತಿಭಾಜಾಂ
ಋದ್ಧಿಂ ವಿಮುಕ್ತಿಮಥ ತಾಂ ಪ್ರಥಯಾದ್ಯ ಶಂಭೋ ॥೩೦॥

ಸುರಾಸುರಾದ್ಯರ್ಚಿತಪಾದಪದ್ಮಂ
ವಂದೇ ಮುಕುಂದಾಕ್ಷಿಸರೋಜಪೂಜ್ಯಂ ।

---

ನದೀ ಮತ್ತು ಸಾಗರಗಳ ನೀರಿನಿಂದ ಈಶ್ವರನಿಗೆ ಅಭಿಷೇಕಮಾಡಿ ದಿವ್ಯವಾದ ಉದ್ಯಾನದ ಹೂಗಳಿಂದಲೂ, ಬಿಲ್ವದಳಗಳಿಂದಲೂ, ತಾನು ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಮಾಲಾಲಂಕೃತನಾಗಿ ಆ ಗಣೇಶ್ವರನು ಶಂಕರನಿಗೆ ಪೂಜೆಮಾಡಿದನು. ||೨೫-೨೬ ೨೭||

ಧೂಪ, ದೀಪ, ಗಂಧ, ನಾನಾಬಗೆಯ ನೈವೇದ್ಯ, ಆರತಿ, ಪ್ರದಕ್ಷಿಣ ಪೂರ್ವಕವಾದ ನಮಸ್ಕಾರಗಳಿಂದ ಮಹಾದೇವನನ್ನು ಸೇವಿಸಿ, ಆನೆಯ ಧ್ವನಿಯುಳ್ಳ ವಿಘ್ನೇಶನು ತನ್ನ ಎರಡು ಕಿವಿಗಳನ್ನೂ ವಿಸ್ತಾರಮಾಡಿಕೊಂಡು ಶಂಕರನನ್ನು ಸ್ತೋತ್ರಮಾಡಿದನು. ||೨೮-೨೯||

ಮಧ್ಯಾರ್ಜುನಕ್ಷೇತ್ರಾಧಿಪನಾದ ಶಂಕರನೇ, ನೀನು ಭಕ್ತರ ಪಾಪನಾಶಕನು. ಅರ್ಧಚಂದ್ರ, ಗಂಗಾನದಿ ಇವುಗಳನ್ನು ತಲೆಯಲ್ಲಿ ಧರಿಸಿದವನೇ, ಆದಿಶೇಷನೆಂಬ ದೊಡ್ಡ ಸರ್ಪಹಾರಭೂಷಣನೇ, ಸ್ಥಿರಭಕ್ತಿಯುಕ್ತರಾಗಿ, ಇಲ್ಲಿ ವಾಸಮಾಡುವವರಿಗೆ ಸಿದ್ಧಿಯನ್ನುಂಟುಮಾಡುವವನಾದ ಶಂಭುವೇ, ಇದೇ ರೀತಿ ಅಭಿವೃದ್ಧಿಯನ್ನೂ ಮೋಕ್ಷವನ್ನೂ ಸಹ ಉಂಟುಮಾಡುವಂತೆ ನೀನು ಪ್ರಖ್ಯಾತನಾಗು. ||೩೦||

ದೇವದೈತ್ಯರಿಂದ ಪೂಜಿಸಲ್ಪಟ್ಟ ಅಡಿದಾವರೆಗಳುಳ್ಳವನೂ, ವಿಷ್ಣುವಿನ ಕಮಲದಂತಿರುವ ಕಣ್ಣಿನಿಂದಲೇ ಪೂಜಿಸಲ್ಪಟ್ಟವನೂ, ತ್ರಿಪುರಾಸುರರನ್ನು ಕೊಂದ

ಪುರಾಭಿದಂ ಶಂಕರಮಂಬಿಕಾಸಖಂ
ಪಶ್ಯೇ ಮಹಾಲಿಂಗಮಿದಂ ಮನೋಜ್ಞಂ ॥೩೧॥

ಬ್ರಹ್ಮೇಂದ್ರನಾರಾಯಣವೇದಸಂಸ್ತುತಂ
ದಧೀಚಿಕಣ್ವಾತ್ರಿಜಲೋಮಶಾರ್ಚಿತಂ ।
ಅಗಸ್ತ್ಯಮುಖ್ಯೈರ್ಮುನಿಭಿಃ ಸಮರ್ಚಿತಂ
ವಂದೇ ಮಹಾಲಿಂಗಮಿದಂ ಮನೋಜ್ಞಂ ॥೩೨॥

ಸ್ಕಂದೋಽಸ್ಮ್ಯಹಂ ತತ್ರ ವಸಾಮಿ ಶಂಭೋ
ಪದ್ಮಾಕ್ಷವಿಧ್ಯಾದಿಸುರೈಃ ಸಮೇತಃ ।
ತತ್ಸ್ಥಾನದೋಽಹಂ ಪ್ರಣತಾಂಶ್ಚ ಮರ್ತ್ಯಾ
ನ್ಸ್ಥಿತಸ್ಸ್ವಶಕ್ತ್ಯಾ ಹಿ ಶಿವಸ್ಯ ಚಾಜ್ಞಯಾ ॥೩೩॥

॥ ಶ್ರೀ ಸ್ಕಂದ ಉವಾಚ ॥

ಯಸ್ತ್ವೀಶಸ್ಸ ಗಣೇಶ್ವರಃ ಸಿತರುಚಿಃ ಸ್ವಾಮ್ಯದ್ರಿನಾಥೋ ಗುಹಃ
ಚಂಡೇಶೋಽಪಿ ಚ ಶಂಗಭೂಮ್ಯಧಿಪತಿಃ ಶ್ರೀಚಿತ್ಸಭೇಶೋ ನಟಿಃ ।

---

ವನೂ, ಅಂಬಿಕಾಸಹಚಾರಿಯೂ ಆದ ಶಂಕರನ ಮನೋಹರವಾದ ಈ ಶಿವಲಿಂಗವನ್ನು ನಾನು ದರ್ಶನಮಾಡಿ ನಮಸ್ಕರಿಸುವೆನು. ॥೩೧॥

ಬ್ರಹ್ಮ, ಇಂದ್ರ, ನಾರಾಯಣ ಮತ್ತು ವೇದಗಳು ಇವುಗಳಿಂದ ಸ್ತೋತ್ರಮಾಡಲ್ಪಟ್ಟವನೂ, ದಧೀಚಿ, ಕಣ್ವ, ಅತ್ರಿ, ಲೋಮಶ ಮುಂತಾದ ಮುನಿಗಳಿಂದ ಪೂಜಿಸಲ್ಪಟ್ಟವನೂ, ಅಗಸ್ತ್ಯರೇ ಮುಂತಾದ ಮುನಿಗಳಿಂದಲೂ ಆರಾಧಿಸಲ್ಪಟ್ಟವನೂ ಆದ ಈ ಪರಮೇಶ್ವರನ ಮಹಾಲಿಂಗಕ್ಕೆ ನಾನು ನಮಸ್ಕರಿಸುವೆನು, ಎಂದು ಗಣೇಶನು ಸ್ತೋತ್ರಮಾಡಿದನು. ॥೩೨॥

ಓ ಶಂಭುವೇ, ಸ್ಕಂದನೆನಿಸಿದ ನಾನೂ, ವಿಷ್ಣು, ಬ್ರಹ್ಮ ಮುಂತಾದ ದೇವತೆಗಳೊಡನೆ ಇಲ್ಲಿ ವಾಸಮಾಡುವೆನು. ನಿನ್ನಲ್ಲಿ ವಿನಯದಿಂದ ಭಕ್ತಿಯನ್ನು ತೋರಿಸುವವರಿಗೆ ನಿನ್ನಪ್ಪಣೆಯಂತೆ ನನ್ನ ಶಕ್ತ್ಯನುಸಾರವಾಗಿ ಉತ್ತಮಸ್ಥಾನವನ್ನು ಕೊಡುತ್ತಿರುವೆನು. ॥೩೩॥

ಸಕಲ ಗಣಗಳಿಗೂ ಅಧಿಪತಿಯೆನಿಸಿ, ಶುಭ್ರವಾದ ಕಾಂತಿಯಿಂದ ವಿರಾಜಿಸುವ ಪರಶಿವನೇ, ಗುಹ ಮತ್ತು ಗಣಪತಿಗಳ ಸ್ವರೂಪನು. ಅವನೇ ಸಕಲ

ಕಾಶ್ಯಾರಣ್ಯಗತಸ್ಯ ದಕ್ಷಿಣಮಹಾಮುಕ್ತೇ ಸ್ತಥಾನಾಯಕೋ
ನಾಗೇಶೋ ವಟತೀರ್ಥಗೋ ವಿಜಯತೇ ಮಧ್ಯಾರ್ಜುನಾಧೀಶ್ವರಃ ॥೩೪॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಮಧ್ಯಾರ್ಜುನಕ್ಷೇತ್ರವೈಭವವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ

---

ದೇವತಾಸ್ವರೂಪಿಯು. ಶಿವಕ್ಷೇತ್ರಗಳಿಗೆಲ್ಲಾ ಅವನೇ ಒಡೆಯನು. ಜ್ಞಾನಸಭಾಧಿಪತಿಯಾಗಿ ಕಾಶ್ಯಾರಣ್ಯದಲ್ಲಿ ನೆಲಸಿ, ನಟರಾಜನೆಂಬ ಹೆಸರಿನಿಂದ ತನ್ನ ಭಕ್ತರಿಗೆ ದಕ್ಷಿಣ ಕೈಲಾಸಪ್ರಾಪ್ತಿರೂಪವಾದ ಮುಕ್ತಿಯನ್ನು ಕರುಣಿಸುತ್ತಾ, ವಟತೀರ್ಥದಲ್ಲಿಯೂ, ಮಧ್ಯಾರ್ಜುನಕ್ಷೇತ್ರದಲ್ಲಿಯೂ ನೆಲಸಿರುವ ಮಹೇಶ್ವರನು ಸರ್ವೋತ್ಕೃಷ್ಟನೆನಿಸಿ ವಿರಾಜಿಸಲಿ. ಎಂದು ಕುಮಾರಸ್ವಾಮಿಯು ಮಹಾದೇವನನ್ನು ಪ್ರಾರ್ಥಿಸಿದನು. ॥೩೪॥

ಇಲ್ಲಿಗೆ ಶ್ರೀಶಿವರಹಸ್ಯದಲ್ಲಿ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಚತುರ್ವಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದೀಶಾನ್ಯೇ ಮಹೇಶಸ್ಯ ಸ್ಥಾನಂ ಶ್ರೀಮಂಗಲಾಹ್ವಯಂ ।
ಪ್ರಾಣೇಶ್ವರಂ ತತ್ರ ಲಿಂಗಂ ಮಹಾದೇವ್ಯಾ ಸಮನ್ವಿತಂ ||೧||

ಪಂಚಪ್ರಾಣಾರ್ಚಿತಂ ಪುಣ್ಯಂ ದರ್ಶನಾದಿಷ್ಟಕಾಮದಂ ।
ಗುಪ್ತಗಂಗಾಹ್ವಯಂ ತೀರ್ಥಂ ಪಾಪನಾಶಸಮಾಹ್ವಯಂ ||೨||

ಶಿವಾಲಯೇ ಸ್ಥಿತಂ ಪುಣ್ಯಂ ಮಹಾಪಾಪವಿಶೋಧಕಂ ।
ಶ್ರೀಮತ್ಪ್ರಾಣೇಶ್ವರಂ ತತ್ರ ಪಂಚಪ್ರಾಣಾಶ್ಚ ತುಷ್ಟುವುಃ ||೩||

---

## ಇಪ್ಪತ್ತನಾಲ್ಕನೆಯ ಅಧ್ಯಾಯ

ಕುಮಾರಸ್ವಾಮಿಯು ಶಿವಕ್ಷೇತ್ರಗಳನ್ನು ವಿವರಿಸುತ್ತಾ ಹೀಗೆಂದನು :— ಮಧ್ಯಾರ್ಜುನಕ್ಷೇತ್ರಕ್ಕೆ ಈಶಾನ್ಯದಿಕ್ಕಿನಲ್ಲಿ ಶ್ರೀಮಂಗಳಸಂಜ್ಞಕವಾದ ಮಹೇಶ್ವರನ ಮತ್ತೊಂದು ಸ್ಥಾನವಿರುವುದು. ಅಲ್ಲಿ ಪ್ರಾಣೇಶ್ವರಲಿಂಗವಿರುವುದು. ಮಹಾದೇವಿಯೂ ಅಲ್ಲಿ ನೆಲಸಿರುವಳು. ಪಂಚಪ್ರಾಣಗಳು, ಪುಣ್ಯಕರವೂ, ದರ್ಶನಮಾತ್ರದಿಂದ ಇಷ್ಟಾರ್ಥಗಳನ್ನು ಕೊಡುವುದೂ ಆದ ಈ ಶಿವಲಿಂಗವನ್ನು ಹಿಂದೆ ಪೂಜೆಮಾಡಿದ್ದುವು. 'ಗುಪ್ತಗಂಗಾ' ಎಂಬ ಹೆಸರಿನಿಂದ ಪಾಪನಾಶಕಸಂಜ್ಞಕವಾದ ತೀರ್ಥವೊಂದು ಅಲ್ಲಿರುವುದು. ಅಲ್ಲಿನ ಶಿವದೇವಾಲಯದಲ್ಲಿರುವ ಪುಣ್ಯಕರವೂ, ಮಹಾಪಾಪಗಳನ್ನು ತೊಲಗಿಸುವುದೂ ಆದ ಶ್ರೀಮತ್ಪ್ರಾಣೇಶ್ವರಲಿಂಗವನ್ನು ಅಲ್ಲಿ ಪಂಚಪ್ರಾಣಗಳೂ ಹೀಗೆ ಸ್ತೋತ್ರಮಾಡಿದವು. ||೧-೨-೩||

ಮಾತಂಗಕೃತ್ತಿವಸನಾನಲಸೋಮಸೂರ್ಯ
ಫಾಲಾನಲಾಕಲಿತ ಮನ್ಮಥ ಭಸ್ಮಭೂಷ ।
ಯೋಷಾರ್ಧಕಾಯ ಭವಭೂಷ ನಮೋ ನಮಸ್ತೇ
ಸೋಮೋತ್ತಮಾಂಗ ಗದಹೃದ್ಭಿಷಜಾಂ ವರೇಣ್ಯ ॥೪॥

ಇತ್ಥಂ ಪ್ರಾಣಾಸ್ಸಂಸ್ತುವಂತಿ ಪ್ರಾಣೇಶಂ ಚಾಂಬಯಾ ಸಹ ।
ಸೂರ್ಯೋಽಪಿ ನಿವಸಂಸ್ತತ್ರ ಸ್ತೌತಿ ದೇವಂ ಮಹೇಶ್ವರಂ ॥೫॥

ಸಂಪೂಜ್ಯಾದಿತ್ಯದೇವೋ ವೈ ಸ್ನಾತ್ವಾ ಸಹ್ಯೋದ್ಭವಾಜಲೇ ॥೬॥

॥ ಸೂರ್ಯ ಉವಾಚ ॥

ಹೇ ಕಾಲಕಾಲಾನಲಫಾಲಮೂಲ ಹಸ್ತ
ತ್ರಿಶೂಲಕಲಿತಾಜಕಪಾಲಮಾಲ ।
ಹಾಲಾಹಲಾಲಂಕೃತ ಕಂಠಭಾಗ
ವ್ಯಾಲಾಂಗಭೂಷ ಶಿವ ಪಾಹಿ ವಿಭೋ ಮಹೇಶ ॥೭॥

---

ಆನೆಯ ಚರ್ಮವನ್ನು ಹೊದ್ದಿರುವವನೂ, ಅಗ್ನಿ, ಚಂದ್ರ ಮತ್ತು ಸೂರ್ಯರನ್ನೇ ನೇತ್ರಗಳಾಗುಳ್ಳವನೂ, ಹಣೆಗಣ್ಣಿನ ಬೆಂಕಿಯಿಂದ ಮನ್ಮಥನನ್ನು ಬೂದಿ ಮಾಡಿದವನೂ, ವಿಭೂತ್ಯಾಭರಣನೂ, ಅರ್ಧನಾರೀಶ್ವರದೇಹನೂ, ಸರ್ಪಾಭರಣನೂ ಆದ ಮಹಾದೇವನೇ, ನಿನಗೆ ನಮಸ್ಕಾರ ಮಾಡುತ್ತೇನೆ. ಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ರೋಗಗಳನ್ನು ನಿವಾರಣೆ ಮಾಡುವ ವೈದ್ಯರಲ್ಲಿ ಶ್ರೇಷ್ಠನೂ ಆದ ಸ್ವಾಮಿಯೇ, ನಿನಗೆ ಪ್ರಣಾಮವು. ಎಂದು ಪಂಚಪ್ರಾಣಗಳೂ ಸ್ತೋತ್ರಮಾಡಿದವು. ॥೪॥

ಮತ್ತು ನಿತ್ಯವೂ ಅಂಬಿಕೆಯೊಡನೆ ಆ ಪ್ರಾಣೇಶ್ವರನನ್ನು ಪೂಜಿಸಿ, ಸ್ತುತಿಸುತ್ತಿದ್ದವು. ಸೂರ್ಯನೂ ಸಹ ಅಲ್ಲಿ ವಾಸಮಾಡುತ್ತಾ ಅಲ್ಲಿಯೇ ಹರಿಯುವ ಕಾವೇರಿಯ ನೀರಿನಲ್ಲಿ ಸ್ನಾನಮಾಡಿ, ಕ್ರೀಡಾದಿಗುಣಸಂಪನ್ನನಾದ ಮಹೇಶ್ವರನನ್ನು ಭಕ್ತಿಯಿಂದ ಪೂಜೆಮಾಡಿದ ನಂತರ ಇಂತು ಸ್ತೋತ್ರಮಾಡಿದನು. ॥೫-೬॥

ಯಮಾಂತಕನೂ, ಹಣೆಯಲ್ಲಿ ಅಗ್ನಿಗೆ ಆಶ್ರಯನಾಗಿರುವವನೂ, ಕೈಯ್ಯಲ್ಲಿ ಹಿಡಿದಿರುವ ತ್ರಿಶೂಲದಿಂದ ಶೋಭಿಸುವವನೂ, ಕಪಾಲಮಾಲೆಯನ್ನು ಧರಿಸಿರು

ಇತ್ಥಂ ಸೂರ್ಯಃ ಶಿವಂ ಸ್ತೌತಿ ಮಂದೇಹಾಸುರಭೀತಿತಃ ।
ತತ್ಪ್ರಾಚ್ಯಾಂ ಸ್ಥಾನಮಸ್ತ್ಯೇಕಂ ತ್ರಿಕೋಟೀಶ್ವರಸಂಜ್ಞಿತಂ ॥೮॥

ತ್ರಿಕೋಟಿಮುನಿಭಿಸ್ತತ್ರ ಭಸ್ಮರುದ್ರಾಕ್ಷಧಾರಿಭಿಃ ।
ಸಂಸ್ತುತಃ ಪೂಜಿತಃ ಶಂಭುಸ್ತ್ರಿಕೋಟೀಶೋಽಂಬಿಕಾಯುತಃ ॥೯॥

ತಪಸಾ ರುದ್ರಜಾಪ್ಯೇನ ಪಂಚಾಕ್ಷರಜಪೇನ ಚ ॥೧೦॥

॥ ಮುನಯ ಊಚುಃ ॥

ನಮಸ್ತೇ ತ್ರಿಕೂಟೀಶ ಶಾಟೀಕೃತಾಶ
ಲಸಚ್ಚಂದ್ರಮೌಲೇ ಪ್ರಭೋ ಸರ್ಪಹಾರ ।
ನಿಮಗ್ನಾನ್ಭವಾಬ್ಧೌ ಸಮುತ್ತಾರಕಸ್ತ್ವಂ
ಶರಣ್ಯಂ ತ್ವದನ್ಯಂ ನ ಮನ್ಯಾಮಹೇಽದ್ಯ ॥೧೧॥

---

ವವನೂ, ಕಾಲಕೂಟವಿಷವನ್ನು ಕೊರಳಲ್ಲಿ ಧರಿಸಿರುವವನೂ, ಸರ್ಪವನ್ನು ದೇಹದಲ್ಲಿ ಅಲಂಕರಿಸಿಕೊಂಡಿರುವವನೂ, ವ್ಯಾಪಕನೂ, ಯೋಗಿಹೃದಯವಾಸಿಯೂ ಆದ ಮಹೇಶನೇ, ನನ್ನನ್ನು ಕಾಪಾಡೆಂದು ಸೂರ್ಯನು ಪ್ರಾರ್ಥಿಸಿದನು. ॥೭॥

ಹೀಗೆ ಸೂರ್ಯನು ಮಂದೇಹನೆಂಬ ರಾಕ್ಷಸನ ಭಯದಿಂದ ಶಿವನನ್ನು ಸ್ತೋತ್ರಮಾಡುತ್ತಿದ್ದನು. ಆ ಪ್ರಾಣೇಶ್ವರಕ್ಷೇತ್ರಕ್ಕೆ ಪೂರ್ವದಲ್ಲಿ ತ್ರಿಕೋಟೀಶ್ವರನೆಂಬ ಹೆಸರಿನ ಒಂದು ಶಿವಸ್ಥಾನವಿರುವುದು. ಅಲ್ಲಿ ಭಸ್ಮರುದ್ರಾಕ್ಷಗಳನ್ನು ಧರಿಸಿದ ಮೂರುಕೋಟಿ ಮುನಿಗಳು ಅಂಬಿಕಾಸಮೇತನಾದ ಶಂಭುವನ್ನು ಪೂಜೆಮಾಡಿ, ಶ್ರೀ ರುದ್ರಸೂಕ್ತ ಮತ್ತು ಶಿವಪಂಚಾಕ್ಷರಮಂತ್ರಗಳನ್ನು ಜಪಿಸಿ ಹೀಗೆ ಸೋತ್ರ ಮಾಡಿರುವರು. ॥೮-೯-೧೦॥

ದಿಗಂಬರನೂ, ಚಂದ್ರನಿಂದ ಶೋಭಿಸುವ ಕಿರೀಟವುಳ್ಳವನೂ, ಸರ್ಪಹಾರವುಳ್ಳವನೂ ಆದ ಪ್ರಭುವೇ, ತ್ರಿಕೂಟೇಶ್ವರನಾದ ನಿನಗೆ ನಮಸ್ಕಾರಮಾಡುವೆವು. ಸಂಸಾರವೆಂಬ ಸಾಗರದಲ್ಲಿ ಮುಳುಗಿರುವವರನ್ನು ನೀನು ಉದ್ಧಾರಮಾಡುತ್ತಿರುವೆ. ದೇವ, ನಿನ್ನನ್ನು ಹೊರತು ಮತ್ತಾರನ್ನೂ ನಾವು ಶರಣಾಗತರಕ್ಷಕನೆಂದು ಮರೆ ಹೊಗುವುದಿಲ್ಲ, ಎಂದು ಮುನಿಗಳು ಸ್ತೋತ್ರಮಾಡಿದರು. ॥೧೧॥

ಭವದ್ಭಕ್ತಿಮೇಕಾಂ ಭವಾಂಭೋಧಿನೌಕಾಂ
ಸಮಾರುಹ್ಯ ಯಾಮೋ ಯಮಂ ತರ್ಜಯಾಮಃ ।
ತವೇಶಾನಲೋಕಂ ಸದಾ ವೈ ವಿಶೋಕಂ
ವಿಮುಕ್ತಾ ವಿರಕ್ತಾಸ್ತವೇಕ್ಷ್ಯಾ ಸುಮುಕ್ತಾಃ ॥೧೨॥

ತ್ರಿಕೋಟಿಸ್ಥಾನವಾಸೇನ ಕಾವೇರ್ಯಾಂ ಸ್ನಾನಮಾತ್ರತಃ ।
ತ್ರಿಕೋಟೀಶನತಿಸ್ತುತ್ಯಾ ಮುನಯಃ ಪ್ರಾಪುರೀಶ್ವರಂ ॥೧೩॥

ಆಮ್ರತೀರ್ಥಾಭಿದಂ ಸ್ಥಾನಂ ಶಂಕರಸ್ಯ ಚಿರಂತನಂ ।
ತತ್ರಾರಾಧ್ಯ ಮಹೇಶಾನಮಾಮ್ರೇಶಂ ಪಾರ್ವತೀಯುತಂ ॥೧೪॥

ತೀರ್ಥೇ ಸ್ನಾತ್ವಾಥ ಕಾವೇರ್ಯಾಂ ಮೂಕೋ ವಾಕ್ಪಟುತಾಮಗಾತ್ ।
ವಿಜಹೌ ಸ ತು ಮೂಕತ್ವಾದ್ಬಂಧುಮೂಕೋಽರ್ಚ್ಯ ಸಂಸ್ತುವೀತ್ ॥೧೫॥

ಆಮ್ರೇಶಾನಂ ಭಕ್ತಿಯುಕ್ತಃ ನಿತ್ಯಂ ಪಂಚಾಕ್ಷರಂ ಜಪನ್ ।
ತ್ರಿಕಾಲಮರ್ಚಯನ್ದೇವಮಾಮ್ರೇಶಂ ತತ್ರ ಶಂಕರಂ ॥೧೬॥

---

ದೇವ, ನಿನ್ನಲ್ಲಿಟ್ಟ ಭಕ್ತಿಯೊಂದೇ ಸಂಸಾರವೆಂಬ ಸಾಗರವನ್ನು ದಾಟಿಸುವ ನೌಕೆಯೆಂದು ನಂಬಿ, ಅದನ್ನೇರಿ, ನಾವು ಯಮನನ್ನೂ ಹೆದರಿಸುತ್ತಿರುವೆವು. ಎಲೈ ಈಶಾನನೇ, ನಿನ್ನ ಲೋಕವಾದ ಕೈಲಾಸವು ಯಾವಾಗಲೂ ಶೋಕರಹಿತವಾದುದು. ವಿರಕ್ತರಾದವರು ಮುಕ್ತಿಸಿದ್ಧಿಗೋಸ್ಕರ ಅಲ್ಲಿ ನೆಲಸಿ, ನಿನ್ನ ದರ್ಶನಮಾತ್ರದಿಂದಲೇ ಮೋಕ್ಷವನ್ನು ಪಡೆಯುತ್ತಿರುವರು. ॥೧೨॥

ತ್ರಿಕೋಟಿಕ್ಷೇತ್ರದಲ್ಲಿ ವಾಸಮಾಡಿಕೊಂಡಿದ್ದು, ಕಾವೇರಿಯಲ್ಲಿ ಸ್ನಾನ ಮಾಡುತ್ತಾ ಆ ತ್ರಿಕೋಟೀಶ್ವರನ ಪೂಜಾ, ನಮಸ್ಕಾರ ಮತ್ತು ಸ್ತೋತ್ರಗಳನ್ನು ಮಾಡಿ, ಆ ಮುನಿಗಳೆಲ್ಲರೂ ಪರಮೇಶ್ವರನಲ್ಲಿ ಐಕ್ಯರಾದರು. ॥೧೩॥

ಪುರಾತನವಾದ ಶಂಕರನ ಆಮ್ರತೀರ್ಥಸಂಜ್ಞಕವಾದ ಒಂದು ಸ್ಥಾನವಿರುವುದು. ಹಿಂದೆ ಇಲ್ಲಿರುವ ಕಾವೇರೀನದಿಯ ನೀರಿನಲ್ಲಿ ಸ್ನಾನಮಾಡಿ, ಪಾರ್ವತೀಯುಕ್ತನಾದ ಆಮ್ರೇಶಸಂಜ್ಞಕನಾದ ಮಹೇಶ್ವರನನ್ನು ಪೂಜಿಸಿ, ಮೂಗನಾದವನು ವಾಕ್ಪಾಟವಶಕ್ತಿಯನ್ನು ಪಡೆದನು. ಅವನು ತನ್ನ ಮೂಕತ್ವವನ್ನು ಬಿಟ್ಟಮೇಲೆ ಆಮ್ರೇಶ್ವರನನ್ನು ಭಕ್ತಿಯುಕ್ತನಾಗಿ ಮೂರುಕಾಲದಲ್ಲಿಯೂ ಪೂಜೆಮಾಡುತ್ತಾ

ಆಮ್ರೇಶಮಂಬಾಯುತದೇವವರ್ಗ
ನಿಸರ್ಗಸಂರಕ್ಷಣದೀಕ್ಷಣೇಕ್ಷಣಂ ।
ನಮಾಮಿ ತೇ ಪಾದಯುಗಾಬ್ಜಮಾದರಾತ್
ಶಂಭೋ ವರೇಣ್ಯಂ ಮಮ ತಚ್ಛರಣ್ಯಂ ॥೧೭॥

ಏವಮಾಮ್ರವನೇಶಾನಂ ದುಂಧುಮೂಕೋ ಮುನಿಃ ಸ್ತುವೀತ್ ।
ತದೀಶಾನ್ಯಾಂ ಕಂಸಪುರಂ ಸ್ಥಾನಂ ಶಂಭೋರ್ವಿಮುಕ್ತಿದಂ ॥೧೮॥

ದರ್ಶನಾತ್ಸ್ಮರಣಾದ್ವಾಸಾತ್ಕಾವೇರ್ಯಾ ಉತ್ತರೇ ತಟೇ ।
ಅಗ್ನೀಶ್ವರಂ ತತ್ರ ಲಿಂಗಂ ಪಾಪೇಂಧನದವಾನಲಂ ॥೧೯॥

ತತ್ರಾಗ್ನಿಃ ಪೂಜಯಾಮಾಸ ಸ್ವನಾಮ್ನಾ ಲಿಂಗಮೈಶ್ವರಂ ।
ಸಂಪೂಜ್ಯಾಪರ್ಣಯಾ ಯುಕ್ತಂ ಮುಕ್ತಿಸಕ್ತೇನ ಚೇತಸಾ ॥೨೦॥

ಸಂಸ್ತುವೀತ ಪ್ರಹೃಷ್ಟಾತ್ಮಾ ಹವ್ಯವಾಹೋ ಮಹೋಕ್ಷಗಂ ॥೨೧॥

---

ನಿತ್ಯವೂ ಶಿವಪಂಚಾಕ್ಷರಮಂತ್ರವನ್ನು ಜಪಿಸುತ್ತಾ ಜಗನ್ಮಂಗಳಕರನಾದ ಆಮ್ರೇಶ ದೇವನನ್ನು ಇಂತು ಸ್ತೋತ್ರಮಾಡಿದನು. ॥೧೪-೧೫-೧೬॥

ಅಂಬಿಕಾಸಮೇತನೂ, ದೇವತೆಗಳ ಸಮೂಹವನ್ನು ಸ್ವಭಾವವಾಗಿಯೇ ಕಾಪಾಡುವುದರಲ್ಲಿ ನಿರತವಾದ ದೃಷ್ಟಿಯುಳ್ಳವನೂ ಆದ ಆಮ್ರೇಶ್ವರನಿಗೆ ನಮಸ್ಕರಿಸುತ್ತೇನೆ. ಎಲೈ ಶಂಭುವೇ, ಶ್ರೇಷ್ಠವಾದ ನಿನ್ನ ಪಾದಕಮಲಯುಗ್ಮವನ್ನೇ ನಾನು ಸದಾ ವಂದಿಸುತ್ತೇನೆ. ದೇವ, ನನಗೆ ಅದೇ ಆಶ್ರಯಸ್ಥಾನವಾಗಿರುವುದು ಎಂದು ದುಂಧುಮೂಕನು ಆಮ್ರೇಶ್ವರನನ್ನು ಸ್ತೋತ್ರಮಾಡಿದನು. ॥೧೭॥

ಹೀಗೆ ಆಮ್ರವನೇಶ್ವರನನ್ನು ದುಂಧುಮೂಕಮುನಿಯು ಪ್ರಾರ್ಥಿಸಿದನು. ಆಮ್ರವನೇಶ್ವರಕ್ಷೇತ್ರಕ್ಕೆ ಈಶಾನ್ಯದಲ್ಲಿ ಮೋಕ್ಷಪ್ರದವಾದ ಶಂಭುವಿನ ಕಂಸಪುರವೆಂಬ ಸ್ಥಾನವಿರುವುದು. ಅಲ್ಲಿ ಹರಿಯುವ ಕಾವೇರೀನದಿಯ ಉತ್ತರ ದಡದಲ್ಲಿ ದರ್ಶನ, ಸ್ಮರಣ ಮತ್ತು ವಾಸಗಳಿಂದ (ಸಕಲ ಪಾಪಗಳನ್ನೂ ನಾಶಮಾಡುವ) ಪಾಪಗಳೆಂಬ ಕಟ್ಟಿಗೆಗೆ ಬೆಂಕಿಯಂತಿರುವ ಅಗ್ನೀಶ್ವರನ ಶಿವಲಿಂಗವಿರುವುದು. ಹಿಂದೆ ಅಗ್ನಿಯು ಅಲ್ಲಿ ತನ್ನ ಹೆಸರಿನಿಂದ ಶಿವಲಿಂಗವನ್ನು ಸ್ಥಾಪಿಸಿ ಪೂಜೆಮಾಡಿದನು. ಮೋಕ್ಷವನ್ನು ಪಡೆಯಬೇಕೆಂಬ ಮನಸ್ಸಿನಿಂದ ಅಪರ್ಣಾದೇವಿಯೊಡಗೂಡಿದ, ದೊಡ್ಡ ವೃಷಭವ

॥ ಅಗ್ನಿರುವಾಚ ॥

ನಮಸ್ತೇ ದೇವಾಯ ತ್ರಿಪುರವರನಾಶಾಯ ಭವತೇ
ಭವನ್ನಾತ್ಮಾಲೋಕೋಽನಘಕುಲಭಯಾನಾಂ ಪವಯತೇ ।
ಮುನೀಂದ್ರಾದೀನ್ಮಶ್ಚದ್ದಿತಿಜವರದುಃಖಾಚ್ಚ ಅವತೇ
ನಿಮಗ್ನಂ ಮಾಮಗ್ನಿಂ ಭವಜಲಧಿಮಗ್ನಂ ಹ್ಯವ ವಿಭೋ ॥೨೨॥

ಅಗ್ನಿಂ ಚ ಸರ್ವಭಕ್ಷತ್ವಪಾಪಾತ್ಪ್ರ್ಯಕ್ಷೋಽತ್ರ ಮೋಚಯತ್ ।
ಪ್ರಾಗ್ಭಾಗೇಽರ್ಜುನನಾಥಸ್ಯ ಬಾಣಾರಾಧಿತಮುತ್ತಮಂ ॥೨೩॥

ಸ್ಥಾನಂ ಬಾಣೇಶ್ವರಾಖ್ಯಂ ತತ್ಸರ್ವೇಷಾಂ ಭೋಗಮೋಕ್ಷದಂ ।
ಬಲಿಪುತ್ರೋ ಬಾಣನಾಮಾ ತತ್ರಾಭ್ಯರ್ಚ್ಯಸ್ತುವೀದ್ಧರಂ ॥೨೪॥

ಬಾಣೇಶ್ವರಂ ಮಹಾದೇವಂ ಸಂಪೂಜ್ಯ ಪರಯಾ ಮುದಾ ॥೨೫॥

---

ನ್ನೇರಿ ಸಂಚರಿಸುವ ಮಹೇಶ್ವರನನ್ನು ಅಗ್ನಿಪುರುಷನು ಸಂತುಷ್ಟಾಂತರಂಗನಾಗಿ ಸ್ತೋತ್ರಮಾಡಿದನು. ॥೧೮-೧೯-೨೦-೨೧॥

ಕ್ರೀಡಾದಿಗುಣಭರಿತನೂ, ತ್ರಿಪುರಾಸುರರೆಂಬ ಶ್ರೇಷ್ಠರಾಕ್ಷಸರನ್ನು ನಾಶ ಮಾಡಿದವನೂ, ಪೂಜ್ಯನೂ, ಆತ್ಮಸ್ವರೂಪಜ್ಯೋತಿಯಾಗಿ ಪ್ರಕಾಶಿಸುತ್ತಾ ಅಪರಿಮಿತವಾದ ಪಾಪಸಮೂಹಗಳನ್ನು ಹೋಗಲಾಡಿಸುವವನೂ, ಮುನಿಗಳನ್ನೂ ಇಂದ್ರಾದಿ ದೇವತೆಗಳನ್ನೂ ರಾಕ್ಷಸೋತ್ತಮರಿಂದುಂಟಾಗುವ ಉಪಟಳದಿಂದ ಕಾಪಾಡುವವನೂ ಆದ ಅಗ್ನೀಶ್ವರನೇ, ನಿನಗೆ ನಮಸ್ಕಾರಮಾಡುತ್ತೇನೆ. ಎಲೈ ವಿಭುವೇ, ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ಕಾಪಾಡೆಂದು ಅಗ್ನಿಯು ಸ್ತೋತ್ರಮಾಡಿದನು. ॥೨೨॥

ಅಗ್ನಿಯು ಪ್ರಾರ್ಥನೆಯಂತೆ ಸರ್ವಭಕ್ಷಕನೆನಿಸಿದ್ದ (ನಿರ್ಜೀವ ಮತ್ತು ಸಜೀವ ಪದಾರ್ಥಗಳನ್ನು ತಿನ್ನುತ್ತಿದ್ದುದರಿಂದುಂಟಾಗುವ ದೋಷವನ್ನು) ಆ ಅಗ್ನಿಯನ್ನು ಪಾಪದಿಂದ ಬಿಡುಗಡೆಮಾಡಿದನು. ಈ ಅಗ್ನೀಶ್ವರಕ್ಷೇತ್ರಕ್ಕೆ ಪೂರ್ವದಲ್ಲಿ ಬಾಣನಿಂದ ಪೂಜಿಸಲ್ಪಟ್ಟ ಉತ್ತಮವಾದ ಅರ್ಜುನನಾಥಕ್ಷೇತ್ರವಿರುವುದು. ಭಕ್ತರಿಗೆ ಐಹಿಕಭೋಗಗಳನ್ನೂ ಆಮುಷ್ಮಿಕ ಸುಖವನ್ನೂ ಕೊಡುವ ಈ ಸ್ಥಾನಕ್ಕೆ ಬಾಣೇಶ್ವರಸ್ಥಾನವೆಂದು ಹೆಸರು. ಬಲಿಚಕ್ರವರ್ತಿಯ ಮಗನಾದ ಬಾಣನೆಂಬುವನು

॥ ಬಾಣ ಉವಾಚ ॥

ಹರಿಬಾಣ ಮಹೇಶ ದೇವ ಶಂಭೋ
ಭಗಣಾಧೀಶ ಮಹೋತ್ತಮಾಂಗಬಂಧ ।
ಸಗಣಂ ಪರಿಪೂಜ್ಯ ಬಾಣಶಂಭುಂ
ಗಣಯೇ ನಾಹಮಿಹಾದ್ಯ ತಾನ್ಸುರೌಘಾನ್ ॥೨೬॥

ಬಾಣಾಯ ಪ್ರದದೌ ಸ್ತುತ್ಯಾ ತುಷ್ಟೋ ಬಾಹೋರ್ಬಲಂ ಶಿವಃ ।
ಮಧ್ಯಾರ್ಜುನಾದ್ದಕ್ಷಿಣೇ ಚ ಸ್ಥಾನಂ ತಿಲಪುರೀತಿ ಚ ॥೨೭॥

ಮರುದ್ಭಿಃ ಪೂಜಿತಂ ಲಿಂಗಂ ದೃಷ್ಟಂ ಪಾಪಭಯಾಪಹಂ ।
ಪ್ರಚ್ಛತೈಲೇನ ತಲ್ಲಿಂಗಮಭ್ಯಂಗಂ ಕಾರಯೇತ್ತು ಯಃ ॥೨೮॥

ಶಿವಲೋಕಮವಾಪ್ನೋತಿ ಸ್ವವಂಶ್ಯೈಸ್ಸಹ ಶಂಕರೇ ॥೨೯॥

---

ಅಲ್ಲಿ ಬಾಣೇಶ್ವರಸಂಜ್ಞಕನಾದ ಪರಮೇಶ್ವರನನ್ನು ವಿಶೇಷ ಭಕ್ತಿಯಿಂದ ಪೂಜೆಮಾಡಿ ಸ್ತೋತ್ರಮಾಡಿದನು. ||೨೩-೨೪-೨೫||

ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡವನೂ, ತುಂಬಾ ಐಶ್ವರ್ಯಶಾಲಿಯೂ, ಕ್ರೀಡಾದಿ ಗುಣವಿಶಿಷ್ಟನೂ, ನಕ್ಷತ್ರಗಳಿಗೆ ಅಧಿಪತಿಯಾದ ಚಂದ್ರನನ್ನೇ ತಲೆಯಲ್ಲಿ ಧರಿಸಿರುವವನೂ ಆದ ಶಂಭುವೇ, ಗಣಪರಿವೃತನಾದ ಬಾಣೇಶ್ವರನೆಂಬ ಹೆಸರಿನಿಂದ ಪ್ರಖ್ಯಾತನಾಗಿರುವ ನಿನ್ನನ್ನು ಪೂಜೆಮಾಡಿದಮೇಲೆ ನಾನು ಇತರ ದೇವತಾಸಮೂಹವನ್ನೆಲ್ಲಾ ಗಣನೆಮಾಡುವುದೇಇಲ್ಲವೆಂದು ಬಾಣನು ಸ್ತೋತ್ರ ಮಾಡಿದನು. ||೨೬||

ಈ ಸ್ತೋತ್ರದಿಂದ ಪ್ರಸನ್ನನಾದ ಪರಶಿವನು ಬಾಣನೆಂಬ ರಾಕ್ಷಸನಿಗೆ ಹೆಚ್ಚಾದ ಬಾಹುಬಲವನ್ನು ಅನುಗ್ರಹಿಸಿದನು. ಮಧ್ಯಾರ್ಜುನಕ್ಷೇತ್ರಕ್ಕೆ ದಕ್ಷಿಣ ದಿಕ್ಕಿನಲ್ಲಿ ತಿಲಪುರೀ ಎಂಬ ಸ್ಥಾನವಿರುವುದು. ಅಲ್ಲಿರುವ ಲಿಂಗವನ್ನು ಮರುತ್ತುಗಳು (ವಾಯುಗಳು) ಸ್ಥಾಪಿಸಿದರು. ಶಿವಲಿಂಗವು ದರ್ಶನ ಮಾಡುವುದರಿಂದಲೇ ಭಕ್ತರ ಪಾಪಗಳನ್ನು ಹೋಗಲಾಡಿಸುತ್ತಿರುವುದು. ಅಲ್ಲಿರುವ ಶಿವಲಿಂಗವನ್ನು ಸ್ವಚ್ಛವಾದ ಎಣ್ಣೆಯಿಂದ (ಅಭ್ಯಂಗಮಾಡಿಸುವವನು) ಅಭಿಷೇಕಮಾಡುವವನು, ತನ್ನ ವಂಶದ ಜನಗಳೊಡನೆ ಶಿವನ ಕೈಲಾಸಲೋಕವನ್ನು ಪಡೆದು ಶಂಕರನಲ್ಲಿ ಐಕ್ಯವಾಗುವನು ||೨೭-೨೮-೨೯||

॥ ಶ್ರೀ ಸ್ಕಂದ ಉವಾಚ ॥

ಸ್ತುವಂತಿ ಮರುತಸ್ತತ್ರ ಪೂಜಯಿತ್ವಾ ಮಹೇಶ್ವರಂ ।
ದೇವಂ ಶಿಲಪುರೀಶಾನಂ ಭಕ್ತಿನಮ್ರಾತ್ಮಕಂಧರಾಃ ॥೩೦॥

॥ ಮರುತ ಊಚುಃ ॥

ಹೇ ದೇವದೇವ ಗರಕಂಧರ ಪಾಪನಾಶ
ಪಾಹೀಶ ದೇವ ದಯಯಾ ಶಿವ ವ್ಯೋಮಕೇಶ ।
ವಾಗೀಶಮಾಧವವಿಮೃಗ್ಯಪದಾಬ್ಜಮೌಳೇ
ಕಾಕೋದರಾಭರಣಚರಣೌ ಶರಣಂ ಪ್ರಪನ್ನಾಃ ॥೩೧॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಶಿವಸ್ಥಾನವೈಭವವರ್ಣನಂ ನಾಮ ಚತುರ್ವಿಂಶೋಽಧ್ಯಾಯಃ

---

ವಾಯುಗಳು (ಸಪ್ತಮರುತ್ತುಗಳು) ಆ ಶಿಲಪುರಕ್ಕೆ ಅಧಿಪತಿಯಾದ ಮಹೇಶ್ವರನನ್ನು ಪೂಜಿಸಿ, ಭಕ್ತಿಯಿಂದ ಬಾಗಿದ ತಲೆಗಳುಳ್ಳವರಾಗಿ ಹೀಗೆ ಸ್ತೋತ್ರ ಮಾಡಿದರು. ॥೩೦॥

ಸಕಲ ವಿಷ್ಣುಬ್ರಹ್ಮಾದಿದೇವತೆಗಳಿಗೂ ದೇವನೂ, (ಸ್ವಾಮಿಯೂ) ವಿಷ ಕಂಠನೂ, ಪಾಪಗಳನ್ನು ನಾಶಮಾಡುವವನೂ, ಅಂತರಿಕ್ಷವನ್ನೇ ಕೂದಲನ್ನಾಗಿ ಧರಿಸಿರುವವನೂ, ಬ್ರಹ್ಮ ಮತ್ತು ವಿಷ್ಣುಗಳಿಂದ ಹುಡುಕಲ್ಪಟ್ಟು ಪೂಜಿತವಾದ ಪಾದ ಕಮಲಗಳು ಮತ್ತು ಶಿರಸ್ಸುಳ್ಳವನೂ, ಸರ್ಪಾಭರಣನೂ ಆದ ಸ್ವಾಮಿಯೇ, ನಿನ್ನನ್ನು ಮೊರೆಹೊಕ್ಕಿರುವೆವು. ಸರ್ವೇಶ್ವರನಾದ ನೀನು ದಯವಿಟ್ಟು ನಮ್ಮನ್ನು ಕಾಪಾಡು, ಎಂದು ಮರುತ್ತುಗಳೂ ಸ್ತೋತ್ರವಮಾಡಿದರು, ಎಂಬುದಾಗಿ ಕುಮಾರ ಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೩೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶಿವಸ್ಥಾನಗಳ ವೈಭವವರ್ಣನೆಯೆಂಬ ಇಪ್ಪತ್ತುನಾಲ್ಕನೆಯ
ಅಧ್ಯಾಯವು ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಪಂಚವಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದ್ದಕ್ಷಿಣೇ ತು ದುರ್ಗೋಽಯಂ ದುರ್ಗಯಾ ಪರಿಪೂಜಿತಂ ।
ಸ್ಥಾನಂ ಶಂಭೋಃ ಪ್ರಿಯಕರಂ ಪಾಪಸಂಘವಿಭೇದನಂ ||೧||

ತತ್ರ ದುರ್ಗಾ ಭಗವತೀ ಪೂಜಯಾಮಾಸ ಶಂಕರಂ ।
ಹರಿಶ್ರುತಾನದೀತೀರೇ ಸ್ಥಾನೇ ತತ್ರ ಸುಧಾವನೇ ||೨||

ಸಂಪೂಜ್ಯ ದುರ್ಗಾ ತುಷ್ಟಾವ ದುರ್ಗಾ ದುರ್ಗಾರ್ತಿಹಾರಿಣಂ ||೩||

---

## ಇಪ್ಪತ್ತೈದನೆಯ ಅಧ್ಯಾಯ

ಪುನಃ ಶ್ರೀ ಕುಮಾರಸ್ವಾಮಿಯು ಶಿವಕ್ಷೇತ್ರವರ್ಣನೆಯನ್ನು ಮುಂದುವರಿಸುತ್ತಾ ಹೀಗೆಂದನು. ಆ ತಿಲಪುರೀಕ್ಷೇತ್ರಕ್ಕೆ ದಕ್ಷಿಣದಡದಲ್ಲಿ ದುರ್ಗಾದೇವಿಯಿಂದ ಪೂಜಿಸಲ್ಪಟ್ಟು ಪಾಪಸಮೂಹಗಳನ್ನು ನಾಶಮಾಡುವುದೂ, ಶಂಭುವಿಗೆ ಪ್ರೀತಿಕರವೂ ಆದ ದುರ್ಗಸಂಜ್ಞಕವಾದ ಸ್ಥಾನವೊಂದಿರುವುದು. ಅಲ್ಲಿ ಪೂಜ್ಯಳಾದ ದುರ್ಗಾದೇವಿಯು ಶಂಕರನನ್ನು ಪೂಜೆಮಾಡಿದಳು. 'ಹರಿಶ್ರುತಾ' ಎಂಬ ನದಿಯ ದಡದಲ್ಲಿರುವ ಸುಧಾವನಸ್ಥಾನದಲ್ಲಿ ದುರ್ಗಾದೇವಿಯು, ದುರ್ಗಮವಾದ ದುಃಖವನ್ನು ನಾಶಮಾಡುವ ಆ ದೇವನನ್ನು ಪೂಜಿಸಿ ಸ್ತೋತ್ರಮಾಡಿದಳು. ||೧-೨-೩||

॥ ದುರ್ಗೋವಾಚ ॥

ನಮೋ ಭರ್ಗಾಯ ಸರ್ಗಸ್ಥಿತಿಗತಿನಿಸರ್ಗಾಂತಕರಣ
ನಮೋ ದುರ್ಗೇಶಾಯ ಪ್ರಥಿತಯಶಸೇ ಪನ್ನಗಭೃತೇ ।
ನಮೋ ಭಕ್ತಾಜ್ಞಾನಪ್ರಹರಣಚಣಾಯಾದ್ಯ ಸಹಸೇ
ನಮೋ ವೇದೈರ್ವೇದ್ಯಪ್ರಕಟತರರೂಪಾಯ ನಿಧಯೇ ॥೪॥

ಇತ್ಥಂ ಸ್ತುತ್ವಾ ತದಾ ದುರ್ಗಾ ವಿಜಿಗ್ಯೇ ಸಾ ತದಾಸುರಾನ್ ।
ಕುಂಭದ್ವಾರಾತ್ಪ್ರತೀಚ್ಯಾಂ ತು ಸ್ಥಾನಂ ಪಾಪವಿವರ್ಜಿತಂ ॥೫॥

ತತ್ರ ವಿಷ್ಣುಃ ಸಮಾರಾಧ್ಯ ದೇವದೇವಂ ಮಹೇಶ್ವರಂ ।
ಸಮಾರಣ್ಯೇ ಸ್ಥಿತೋ ವಿಷ್ಣುಸ್ತತ್ರ ತುಷ್ಟಾವ ಶಂಕರಂ ॥೬॥

॥ ಶ್ರೀ ವಿಷ್ಣುರುವಾಚ ॥

ಹೇ ದೇವದೇವ ಕರುಣಾಕರ ದೇವ ಶಂಭೋ
ಬಂಧೋ ವಿಭೋ ಕರುಣಯಾ ಪರಿಪಾಹಿ ದೇವ ।

---

ಸೃಷ್ಟಿ, ಸ್ಥಿತಿ, ಸಂಹಾರರೂಪವಾದ ಪ್ರಪಂಚಕಾರ್ಯಗಳನ್ನು ಸಹಜವಾಗಿ ನಡೆಸುವವನೂ, ಸಂಸಾರದುಃಖ ನಾಶಕನೂ, ಮನ್ಮಥ ಮತ್ತು ಯಮ ಮುಂತಾದವರನ್ನು ಶಿಕ್ಷಿಸಿದವನೂ, ದುರ್ಗೇಶ್ವರನೂ, (ದುರ್ಗಾದೇವಿಯ ರಮಣನೂ) ಪ್ರಖ್ಯಾತವಾದ ಕೀರ್ತಿಯುಳ್ಳವನೂ, ಸರ್ಪಗಳನ್ನು ಧರಿಸಿರುವವನೂ ಆದ ನಿನಗೆ ನಮಸ್ಕಾರಮಾಡುವೆನು. ತನ್ನ ಭಕ್ತರ ಅಜ್ಞಾನವನ್ನು ಹೋಗಲಾಡಿಸುವುದರಲ್ಲಿ ಸಮರ್ಥನೂ, ವೇದಗಳಿಂದ ತಿಳಿಯಲ್ಪಡುವವನೂ, ಪ್ರಕಟವಾದ ರೂಪವುಳ್ಳವನೂ, ನಿಧಿಸ್ವರೂಪನೂ ಆದ ನಿನಗೆ ನಮಸ್ಕಾರ ಮಾಡುವೆನೆಂದು ದುರ್ಗಾದೇವಿಯು ಭಕ್ತಿಯಿಂದ ಸ್ತೋತ್ರಮಾಡಿದಳು. ॥೪॥

ದುರ್ಗಾದೇವಿಯು ಹೀಗೆ ಮಹಾದೇವನನ್ನು ಸ್ತೋತ್ರಮಾಡಿ, ದೇವಾನುಗ್ರಹದಿಂದ ದೈತ್ಯರನ್ನು ಜಯಿಸಿದಳು. ಕುಂಭದ್ವಾರದಿಂದ ಪಶ್ಚಿಮದಿಕ್ಕಿನಲ್ಲಿ ಪಾಪರಹಿತವಾದ ಒಂದು ಶಿವಸ್ಥಾನವಿರುವುದು. ಅಲ್ಲಿ ವಿಷ್ಣುವು ದೇವದೇವನಾದ ಮಹೇಶ್ವರನನ್ನು ಪೂಜಿಸಿ, ಆ ಸಮಾರಣ್ಯದಲ್ಲಿಯೇ ಇದ್ದು ಪರಮೇಶ್ವರನನ್ನು ನಾನಾರೀತಿ ಸ್ತೋತ್ರಮಾಡಿದನು. ॥೫-೬॥

ದೇವಾದಿದೇವನೂ, ದಯಾಸಮುದ್ರನೂ ಆದ ಶಂಕರನೇ, ಜಗದ್ಬಂಧುವೂ,

ವಿಶ್ವಾಧಿಕ ಪ್ರಮಥಿತಾಂತಕ ವಿಶ್ವನಾಥ
ವೇದಾಂತವೇದ್ಯ ಭಗವನ್ಹರ ಶಂಕರಾದ್ಯ ॥೭॥

ತದುತ್ತರೇ ಶ್ರೀನಿವಾಸಃ ಕೃತ್ತಿವಾಸಾರ್ಚನೇ ರತಃ ।
ಉಪಾಸ್ಯ ತತ್ರ ವೈ ಲಿಂಗಮಾರಾಧ್ಯ ಹರಿರೀಶ್ವರಂ ॥೮॥

॥ ಹರಿರುವಾಚ ॥

ಪಂಚಾಸ್ಯ ಪನ್ನಗಧರಾವ್ಯಯ ದೇವ ಶಂಭೋ
ಹೇಮಾಂಗಕಾರ್ಮುಕ ವಿಭೋ ದಯಯಾದ್ಯ ಪಾಹಿ ।
ವಿಶ್ವಂಭರಾಧರಣಹಾರ ಮಮ ಪ್ರಸೀದ
ಸೀದಜ್ಜನೋಗ್ರಪರಿಪಾಲನ ತೇ ನಮಸ್ತೇ ॥೯॥

---

ಸರ್ವವ್ಯಾಪಕನೂ ಆದ ನೀನು ನನ್ನನ್ನು ದಯೆಯಿಂದ ರಕ್ಷಿಸು. ಜಗಚ್ಛ್ರೇಷ್ಠನೂ, ಯಮನನ್ನು ನಿಗ್ರಹಿಸಿದವನೂ, ಜಗದೊಡೆಯನೂ, ವೇದಾಂತಗೋಚರನೂ, ಭಗವಂತನೂ, ಪಾಪನಾಶಕನೂ, ಜಗನ್ಮಂಗಳಕರನೂ ಆದ ನೀನು ನನ್ನನ್ನು ಕಾಪಾಡೆಂದು, ವಿಷ್ಣುವು ಪ್ರಾರ್ಥಿಸಿದನು. ॥೭॥

ಅಲ್ಲಿಂದ ಉತ್ತರದಿಕ್ಕಿನಲ್ಲಿ ಶ್ರೀನಿವಾಸನೆನಿಸಿದ ಮಹಾವಿಷ್ಣುವು ಗಜಚರ್ಮಧಾರಿಯಾದ ಈಶ್ವರನ ಪೂಜೆಯಲ್ಲಿ ನಿರತನಾಗಿ, ಅಲ್ಲಿಯೇ ಶಿವಲಿಂಗರೂಪಿಯಾದ ಈಶ್ವರನನ್ನು ಪೂಜಿಸಿ, ಬಹುಕಾಲ ಉಪಾಸನೆಮಾಡಿದನು. ॥೮॥

ಐದು ಮುಖಗಳಿಂದಲೂ, ಸರ್ಪಧಾರಣೆಯಿಂದಲೂ ಶೋಭಿಸುತ್ತಾ, ನಾಶರಹಿತನೂ, ಕ್ರೀಡಾದಿಗುಣಸಂಪನ್ನನೂ ಆದ ಶಂಭುವೇ, ನೀನು ಸುವರ್ಣಮಯವಾದ ಮೇರುಪರ್ವತವನ್ನೇ ಬಿಲ್ಲಾಗಿ ಧರಿಸಿರುವೆ. ಸರ್ವವ್ಯಾಪಕನಾದ ನೀನು ದಯೆಯಿಂದ ಇಂದು ನಮ್ಮನ್ನು ಕಾಪಾಡು. ಪ್ರಪಂಚವನ್ನು ಹೊತ್ತಿರುವ ಆದಿಶೇಷನನ್ನೇ ನೀನು ಹಾರವಾಗಿ ಧರಿಸಿರುವೆ. ದುಃಖದಿಂದ ಬಳಲುತ್ತಿರುವ ಜನಗಳನ್ನು ಪಾಲನೆ ಮಾಡುವ ನೀನು ನನ್ನಲ್ಲಿ ಪ್ರಸನ್ನನಾಗು. ನಿನಗೆ ನಮಸ್ಕಾರ ಮಾಡುತ್ತೇನೆ. ಎಂದು ಹರಿಯು ಪ್ರಾರ್ಥನೆಮಾಡಿದನು. ॥೯॥

ತತ್ಪ್ರಾಚ್ಯಾಂ ಗೋಪದಂ ಸ್ಥಾನಂ ಕಾವೇರ್ಯಾ ಉತ್ತರೇ ತಟೇ ।
ವೃಷಭೇಣಾರ್ಚಿತಸ್ತತ್ರ ಸಂಸ್ತುತಃ ಪರಮೇಶ್ವರಃ ॥೧೦॥

॥ ವೃಷಭ ಉವಾಚ ॥

ಮಹೇಶ ವಿಶ್ವೇಶ ದಯಾನಿಧಾನ
ಪ್ರಸೀದ ಗಂಗಾಧರ ದೇವ ಶಂಕರ ।
ತ್ವತ್ಸನ್ನಿಧೌ ತವ ಸದಾ ಶಿವಲಿಂಗದೃಷ್ಟಿಃ
ಸಮ್ಯಕ್ಫಲದ್ರುಮತಲೇ ಮನುಜೋ ನಿಷಣ್ಣಃ ॥೧೧॥

ತದೀಶಾನ್ಯಾಂ ವಟಸ್ಥಾನಂ ವಾಸಿನಾಂ ಶಿವಭಕ್ತಿದಂ ।
ಕಾವೇರ್ಯಾ ಉತ್ತರೇ ತೀರೇ ವಟೇಶಾನ್ಯಾಂ ಮಹತ್ಸ್ಥಲಂ ॥೧೨॥

ತತ್ರ ಸಂಪೂಜ್ಯ ದೇವೇಶಂ ಮುನಯೋ ಭಕ್ತಿಭಾವಿತಾಃ ।
ಭಸ್ಮತ್ರಿಪುಂಡ್ರರುದ್ರಾಕ್ಷಾಃ ರುದ್ರಪಂಚಾಕ್ಷರಾದರಾಃ ॥೧೩॥

ತುಷ್ಟುವುರ್ಮುನಯಸ್ತತ್ರ ವಟಾರಣ್ಯೇಶ್ವರಂ ಶಿವಂ ॥೧೪॥

---

ಅಲ್ಲಿಂದ ಪೂರ್ವಕ್ಕೆ ಕಾವೇರೀನದಿಯ ಉತ್ತರದಡದಲ್ಲಿ ಗೋಪದವೆಂಬ ಒಂದು ಶಿವಸ್ಥಾನವಿರುವುದು. ಅಲ್ಲಿ ವೃಷಭರಾಜನಿಂದ ಮಹೇಶ್ವರನು ಪೂಜಿಸಲ್ಪಟ್ಟು ಹೀಗೆ ಸ್ತುತಿಸಲ್ಪಟ್ಟಿರುವನು. ॥೧೦॥

ಸಕಲ ಜಗತ್ತಿಗೊಡೆಯನೂ, ದಯಾನಿಧಿಯೂ, ಗಂಗೆಯನ್ನು ಜಟೆಯಲ್ಲಿ ಧರಿಸಿರುವವನೂ, ಶಂಕರನೂ ಆದ ಮಹೇಶದೇವನೇ, ನನ್ನಮೇಲೆ ಅನುಗ್ರಹ ಮಾಡು. ನಿನ್ನ ಸನ್ನಿಧಾನದಲ್ಲಿಯೇ ವಾಸಮಾಡುತ್ತಾ ನಿನ್ನ ಲಿಂಗವನ್ನು ಯಾವಾಗಲೂ ದರ್ಶನ ಮಾಡುವ ಮಾನವನು ಉತ್ತಮವಾದ ಫಲವನ್ನು ಕೊಡುವ ಕಲ್ಪವೃಕ್ಷದ ಬುಡದಲ್ಲಿ ಕುಳಿತಂತೆ ಆಗುವನು, ಎಂಬುದಾಗಿ ವೃಷಭನು ಸ್ತೋತ್ರ ಮಾಡಿದನು. ॥೧೧॥

ಅಲ್ಲಿಂದ ಈಶಾನ್ಯದಿಕ್ಕಿನಲ್ಲಿ ವಾಸಮಾಡುವವರಿಗೆ ಶಿವಭಕ್ತಿಯನ್ನುಂಟುಮಾಡುವ ವಟಸ್ಥಾನವಿರುವುದು. ಈ ಮಹಾಸ್ಥಳವು ಕಾವೇರಿಯ ಉತ್ತರದಡದಲ್ಲಿರುವುದು. ಅಲ್ಲಿ ಭಸ್ಮತ್ರಿಪುಂಡ್ರ ಮತ್ತು ರುದ್ರಾಕ್ಷಗಳನ್ನು ಧರಿಸಿ, ರುದ್ರ ಮತ್ತು ಶಿವಪಂಚಾಕ್ಷರ ಮಂತ್ರಗಳನ್ನು ಜಪಿಸುವುದರಲ್ಲಿ ಆದರವುಳ್ಳ ಮುನಿಗಳು ಭಕ್ತಿ

|| ಮುನಯ ಊಚುಃ ||

ಸ್ತುಮೋ ವೇದಾಂತವೇದ್ಯಂ ಸಕಲಜಗದಾದ್ಯಂ ಶಿವಕರಂ
ಹರಂ ವೀರೋದಾರಂ ಪ್ರಮಥಪತಿಗಂಗಾಧರವಿಭುಂ ।
ಹರಂ ವಾರಂವಾರಂ ನಿಖಿಲಶ್ರುತಿಸಾರಂ ಭಯಹರಂ
ಮಹೋದಾರಂ ಧೀರಂ ಭವಜಲಧಿಪಾರಂ ಪರತರಂ ||೧೫||

ಇತ್ಥಂ ಸ್ತುತ್ವಾ ವಟಾಧೀಶಂ ಮುಕ್ತಿಮಾಪುರ್ಮುನೀಶ್ವರಾಃ ।
ತತ್ಪ್ರಾಚ್ಯಾಂ ದ್ರುಹಿಣಸ್ಥಾನಂ ಪಶ್ಚಿಮಾಭಿಮುಖಂ ಮಹತ್ ||೧೬||

ತತ್ಸನ್ನಿಧೌ ಮಹೇಶಸ್ಯ ಕಾವೇರ್ಯುತ್ತರವಾಹಿನೀ ।
ವೇದೀಶ್ವರೋ ಮಹಾದೇವಃ ಪೂಜಿತೋ ದ್ರುಹಿಣಸ್ತುತಃ ||೧೭||

ತತ್ರವಾಸಂ ದ್ಯುತಿಸ್ಥಾನೇ ರೋಚಯಂತಿ ಮುನೀಶ್ವರಾಃ ||೧೮||

---

ಯುಕ್ತರಾಗಿ ದೇವತೋತ್ತಮನಾದ ವಟಾರಣ್ಯೇಶ್ವರನೆಂದು ಪ್ರಖ್ಯಾತನಾಗಿರುವ ಶಿವನನ್ನು ಪೂಜೆಮಾಡಿ, ಹೀಗೆ ಸ್ತುತಿಸಿದರು. ||೧೨-೧೩-೧೪||

ವೇದಾಂತಗಳಿಂದ ತಿಳಿಯಲ್ಪಡುವವನೂ, ಸಕಲ ಪ್ರಪಂಚಕ್ಕೂ ಆದಿ ಭೂತನೂ, ಭಕ್ತರಿಗೆ ಸನ್ಮಂಗಳವನ್ನುಂಟುಮಾಡುವವನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ವೀರನೂ, ಉದಾರನೂ, ಪ್ರಮಥಗಣಗಳಿಗೆ ಒಡೆಯನೂ, ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿರುವವನೂ, ವಿಭುವೂ ಆದ ಮಹಾದೇವನೇ, ನೀನು ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವೆ. ಆಸನ್ನವರ್ತಿಗಳಾದ ಭಕ್ತರ ಪಾಪಗಳನ್ನು ಹೋಗಲಾಡಿಸುವೆ. ಸಕಲ ವೇದಗಳ ಸಾರಭೂತನಾಗಿರುವೆ. ಭಕ್ತರ ಭಯವನ್ನು ಹೋಗಲಾಡಿಸುವೆ. ನೀನು ಉದಾರಸ್ವಭಾವವುಳ್ಳವನು, ಶೂರನು, ಸಂಸಾರವೆಂಬ ಸಮುದ್ರದ ದಡವನ್ನು ನೋಡಿರುವವನು. ಪರಮಶ್ರೇಷ್ಠನು. ಇಂತಹ ನಿನಗೆ ಸದಾ ನಮಸ್ಕಾರಮಾಡುವೆನು, ಎಂದು ಮುನಿಗಳು ಸ್ತೋತ್ರ ಮಾಡಿದರು. ||೧೫||

ಹೀಗೆ ಮುನಿಪುಂಗವರು ಆ ವಟಾಧೀಶ್ವರನನ್ನು ಸ್ತೋತ್ರಮಾಡಿ ಕೊನೆಗೆ ಮೋಕ್ಷವನ್ನು ಪಡೆದರು. ಆ ವಟಾಧೀಶಸ್ಥಾನಕ್ಕಿಂತಲೂ ಪೂರ್ವದಿಕ್ಕಿನಲ್ಲಿ ಪಶ್ಚಿಮ ದಿಕ್ಕಿಗೆ ಅಭಿಮುಖವಾಗಿರುವ ಒಂದು ದೊಡ್ಡ ದ್ರುಹಿಣಸ್ಥಾನವಿರುವುದು. ಆ ದ್ರುಹಿಣಸ್ಥಾನದಲ್ಲಿರುವ ಮಹೇಶ್ವರನ ಸಮೀಪದಲ್ಲಿ ಕಾವೇರೀನದಿಯು ಉತ್ತರಾಭಿ

॥ ಬ್ರಹ್ಮೋವಾಚ ॥

**ನಮಸ್ತೇ ವೇದಾಂತಸ್ತುತಿನುಹಿತಪಾದಾಂಬುಜ ವಿಭೋ**
**ಯತೋ ಮಹ್ಯಂ ವೇದಾನಾದಿಶಸಿ ಹರ ಗಂಗಾಧರ ವಿಭೋ ।**
**ಅಹೋ ವೇದೀಶ್ವರ ಮೃದುದುಕುಲಕುಂಚಾಂಬಾಧಿಪಹರ**
**ಪ್ರಸೀದ ಹ್ಯಾಗೋ ಮೇ ಹರಹರ ಪುರಾರೇಽದ್ಯ ಭಗವನ್ ॥೧೯॥**

**ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶಿವಸ್ಥಾನವೈಭವೇ ಪಂಚವಿಂಶೋಽಧ್ಯಾಯಃ**

---

ಮುಖವಾಗಿ ಹರಿಯುತ್ತಿರುವುದು. ಅಲ್ಲಿ ನೆಲಸಿರುವ ವೇದೀಶ್ವರಸಂಜ್ಞಕನಾದ ಮಹಾದೇವನು ಹಿಂದೆ ಬ್ರಹ್ಮನಿಂದ ಪೂಜಿಸಲ್ಪಟ್ಟು, ಸ್ತೋತ್ರಮಾಡಲ್ಪಟ್ಟಿರುವನು. ಅಲ್ಲಿರುವ 'ದ್ಯುತಿ' ಎಂಬ ಸ್ಥಾನದಲ್ಲಿ ಮುನಿಪುಂಗವರು ಯಾವಾಗಲೂ ವಿಶೇಷವಾಗಿ ವಾಸಮಾಡಲು ಅಪೇಕ್ಷಿಸುತ್ತಾರೆ. ॥೧೬-೧೭-೧೮॥

ಉಪನಿಷತ್ತುಗಳಿಂದ ಸ್ತೋತ್ರಮಾಡಲ್ಪಟ್ಟ ಪೂಜ್ಯಪಾದಕಮಲಗಳುಳ್ಳ ಸ್ವಾಮಿಯೇ, ನನಗೆ ನೀನು ವೇದಗಳನ್ನು ಉಪದೇಶಮಾಡುತ್ತಿರುವೆ. ಪಾಪಹಾರಕನಾದವನೂ, ಗಂಗೆಯನ್ನು ತಲೆಯಲ್ಲಿ ಧರಿಸಿರುವವನೂ, ವಿಭುವೂ ಆದ ಸ್ವಾಮಿಯೇ, ವೇದವೇದೀಶ್ವರಸಂಜ್ಞಕನೆನಿಸಿರುವ ಮೃದುವಾದ ರೇಷ್ಮೆಯ ವಸ್ತ್ರವನ್ನು ಧರಿಸಿರುವ ಕುಂಚಾಂಬಾದೇವಿಯ ಪತಿಯಾದ ಪರಮೇಶ್ವರನೇ, ತ್ರಿಪುರಾಸುರ ಶತ್ರುವೂ ಭಗವಂತನೂ ಆದ ನೀನು, ನನ್ನಲ್ಲಿ ಅನುಗ್ರಹಮಾಡಿ ಕಾಪಾಡು ಎಂದು ಬ್ರಹ್ಮನು ಸ್ತೋತ್ರಮಾಡಿದನು. ॥೧೯॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶಿವಸ್ಥಾನವೈಭವವರ್ಣನೆಯೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಷಡ್ವಿಂಶೋಽಧ್ಯಾಯಃ

॥ಸ್ಕಂದ ಉವಾಚ ॥

ಹರಿಶ್ರುತಾನದೀತೀರ್ಥೇ ನಾನಾಗುಣಸಮನ್ವಿತಂ ।
ಸ್ಥಾಣುಪ್ರಿಯಕರಂ ಸಾಕ್ಷಾದ್ವಸತಾಂ ಭುಕ್ತಿಮುಕ್ತಿದಂ ॥೧॥

ಶ್ರೀವಾಂಛಿತಪ್ರದಂ ಜನಸ್ಥಾನಮಗ್ನೀಶಂ ಪುತ್ರಶಾಕದಂ ।
ತ್ರಿಮಾಧುರಂ ಮಹೇಶಸ್ಯ ಪ್ರೀತಿದಂ ಪರಮೇಶಿತುಃ ॥೨॥

ಕಾವೇರ್ಯಾ ದಕ್ಷಿಣೇ ತೀರೇ ಸ್ಥಾನಪಂಚಕಮುತ್ತಮಂ ।
ಮುಕ್ತದ್ವಾರಂ ಫುಲ್ಲವನಂ ಕಾಲೇಶಂ ಕಂಚುಕೇಶ್ವರಂ ॥೩॥

ಅಧೀಶಸ್ಥಾನಮತುಲಂ ವಸತಾಂ ಭುಕ್ತಿಮುಕ್ತಿದಂ ।
ತತ್ರಾಗ್ನೀಶಂ ತು ಬಾಣೇನ ಸಮರ್ಚಿತಮನುತ್ತಮಂ ॥೪॥

---

## ಇಪ್ಪತ್ತಾರನೆಯ ಅಧ್ಯಾಯ

ಪುನಃ ಶ್ರೀಸ್ಕಂದಸ್ವಾಮಿಯು ಶಿವಕ್ಷೇತ್ರಮಹಿಮೆಗಳನ್ನು ಮುಂದುವರಿದು ತಿಳಿಸಿದನು. ಹರಿಶ್ರುತಾನದಿಯ ದಡದಲ್ಲಿ ಅನೇಕ ಮಹಿಮಾಗುಣಗಳಿಂದ ಯುಕ್ತನಾಗಿ, ಸ್ಥಾಣುವೆನಿಸಿದ ಶಿವನಿಗೆ ಪ್ರೀತಿಕರವೂ, ಅಲ್ಲಿಯೇ ವಾಸಮಾಡುವವರಿಗೆ ಭೋಗಗಳನ್ನೂ, ಮೋಕ್ಷವನ್ನೂ ಕೊಡುವುದೂ, ಭಕ್ತರಿಗೆ ಬೇಕಾದ ಐಶ್ವರ್ಯವೇ ಮುಂತಾದವುಗಳನ್ನೂ ಕರುಣಿಸುವುದೂ, ಮಹೇಶ್ವರನಿಗೆ ತುಂಬಾ ಪ್ರೀತಿಪ್ರದವೂ ಆದ ಅಗ್ನೀಶ, ಪುತ್ರಶಾಕ, ತ್ರಿಮಾಧುರ ಎಂಬ ಸ್ಥಾನಗಳಿರುವುವು. ಕಾವೇರೀನದಿಯ ದಕ್ಷಿಣ

ಪಂಚಲಿಂಗೈಃ ಪರಿವೃತಂ ನೇತುಂ ಚ ಸ್ವಪುರಂ ತತಃ ।
ಸೋಽನ್ಯಾಲಯಿತುಮುದ್ಯುಕ್ತೋ ಬಾಣೋಽಗ್ನೀಶಾಲಯಂ ಮಹತ್ ॥೫॥
ಅಶಕ್ಯಂ ಬಾಹುಸಾಹಸ್ರೈರ್ಬಾಣೋಽಗ್ನೀಶಮಥಾಸ್ತುವತ್ ॥೬॥

॥ ಬಾಣ ಉವಾಚ ॥

ಸದ್ಯೋಜಾತ ಮಹೇಶಶಂಕರ ವಿಭೋ ಶ್ರೀವಾಮದೇವಾವ ಮಾಂ ।
ಸ್ವಾಮಿ ತ್ವಾಮಹಮೀಶ ಶಾಶ್ವತಪರಾ ಘೋರೇಶ ಈಶಾನ ಮಾಂ ॥೭॥

ತತ್ರಾಗ್ನೀಶಂ ಚ ಸಂಸ್ತುತ್ಯ ಜಗಾಮ ಸ್ವಪುರಂ ತತಃ ।
ಪುತ್ರಶಾಕಪ್ರದೇಶಾನಂ ತತ್ರ ಕಂಕಾಲರೂಪಿಣಂ ॥೮॥
ಪುತ್ರಶಾಕಂ ಮಹಯಾಚೇಶಂ ತತ್ರ ತುಷ್ಟ್ಯೋಽಪ್ಯಥಾಸ್ತುವತ್ ॥೯॥

---

ದಡದಲ್ಲಿ ಉತ್ತಮವಾದ ಐದು ಸ್ಥಾನಗಳಿರುವುವು. ಮುಕ್ತಿದ್ವಾರ, ಫುಲ್ಲವನ, ತಾಲೇಶ, ಕಂಚುಕೇಶ್ವರ ಮತ್ತು ಆದೀಶಗಳೆಂಬ ಈ ಐದು ಸ್ಥಾನಗಳೂ ಅಲ್ಲಿಯೇ ವಾಸಮಾಡುವವರಿಗೆ ಸಕಲ ಭೋಗಗಳನ್ನೂ ಮೋಕ್ಷವನ್ನೂ ಉಂಟುಮಾಡುತ್ತಿರುವುವು. ಇವುಗಳಲ್ಲಿ ಅಗ್ನೀಶಸ್ಥಾನದಲ್ಲಿರುವ ಅತ್ಯುತ್ತಮವಾದ ಅಗ್ನೀಶ್ವರನನ್ನು ಬಾಣನು ಪೂಜಿಸಿರುವನು. ॥೧-೨-೩-೪॥

ಬಾಣನು ಐದು ಲಿಂಗಗಳಿಂದ ಸುತ್ತುವರಿಯಲ್ಪಟ್ಟಿರುವ ಆ ಶಿವಲಿಂಗವನ್ನು ತನ್ನ ಊರಿಗೆ ತೆಗೆದುಕೊಂಡು ಹೋಗಲು ಪ್ರಯತ್ನಿಸಿ, ತನ್ನ ಸಾವಿರ ತೋಳುಗಳಿಂದಲೂ ಅದನ್ನು ಬುಡ ಸಹಿತವಾಗಿ ಕೀಳಲು ಪ್ರಯತ್ನಿಸಿದನು. ಅದು ಸಾಧ್ಯವಾಗದಿರಲು ಬಾಣನು ಅಗ್ನೀಶ್ವರನನ್ನು ಹೀಗೆ ಸ್ತೋತ್ರಮಾಡಿದನು. ॥೫-೬॥

ಸದ್ಯೋಜಾತಮೂರ್ತಿಯೇ, ನೀನು ಇಚ್ಛಾಮಾತ್ರಪುರುಷನು. ಸಕಲೈಶ್ವರ್ಯಸಂಪನ್ನನು. ಜಗನ್ಮಂಗಳಕರನೂ, ವ್ಯಾಪಕನೂ, ಶ್ರೀವಾಮದೇವನೂ ಆದ ನೀನು ನನ್ನನ್ನು ಕಾಪಾಡು; ಈಶ್ವರನೂ, ಶಾಶ್ವತನೂ, ಪಾಪನಾಶಕನೂ ಭಕ್ತರಿಗೆ ಸೌಮ್ಯರೂಪದಿಂದ ತೋರುವವನೂ, ಈಶನೂ, ಈಶಾನನೂ ಆದ ನಿನ್ನನ್ನು ಸದಾ ಸ್ತೋತ್ರಮಾಡುವೆನು. ನನ್ನನ್ನು ಕಾಪಾಡು, ಎಂದು ಬಾಣನು ಸ್ತೋತ್ರಮಾಡಿದನು. ॥೭॥

ಬಾಣನು ಅಗ್ನೀಶ್ವರನನ್ನು ಸ್ತೋತ್ರಮಾಡಿದ ಮೇಲೆ, ತನ್ನ ಪಟ್ಟಣಕ್ಕೆ ಹೊರಟುಹೋದನು. ತಲೆಬುರುಡೆಯ ಆಕಾರದಲ್ಲಿ ಶೋಭಿಸುವ ಪುತ್ರಶಾಕಸ್ಥಾನ

॥ ಭಕ್ತ ಉವಾಚ ॥

ನಮಸ್ತೇ ಕಂಕಾಲ ತ್ರಿಪುರದಲನಾವ ತ್ರಿನಯನ
ಪ್ರಸೀದೇಶಃ ಶಂಭೋ ಸ್ಮರಹರ ಪ್ರಭೋ ಮಾಮವ ಸದಾ ।
ಪ್ರಸನ್ನಃ ಪುತ್ರಂ ಮೇ ಪ್ರದಿಶ ಭಗವನ್ನಂತಕರಿಪೋ
ಭವದ್ಭಕ್ತ್ಯಾ ಮುಕ್ತಿಂ ಶಿವದ ಶಿವಲೋಕಂ ಗಮಯ ಮಾಂ ॥೧೦॥

ತತ್ಸ್ತುತ್ಯಾ ತುಷ್ಟಹೃದಯಸ್ತಸ್ಮೈ ಪುತ್ರಂ ವರಂ ದದೌ ।
ತ್ರಿಮಾಧುರೇಶಂ ದೇವೇಶಮತ್ರ ಶಂಕರಮರ್ಚಯತ್ ॥೧೧॥

ಕಾಲಕಾಲಂ ಕಾಲಕಂಠಂ ಕಲೇಂದುಮೌಳಿಭಾಸ್ವರಂ ।
ಪ್ರಸ್ತೌತಿ ತತ್ರ ದೇವೇಶಂ ಭಕ್ತಿಸ್ತತ್ರ ಕಲಾಕಲಃ ॥೧೨॥

---

ನಾದ ಪುತ್ರಶಾಕೇಶ್ವರನನ್ನು ಭಕ್ತನೊಬ್ಬನು ಪುತ್ರಾರ್ಥಿಯಾಗಿ ಪ್ರಾರ್ಥಿಸಿ, ಅದೇ ಕ್ಷೇತ್ರದಲ್ಲಿ ವಾಸಮಾಡಿ, ಪೂಜಾದಿಗಳಿಂದ ತೃಪ್ತಿಗೊಳಿಸಿ ಆ ಈಶ್ವರನನ್ನು ಹೀಗೆ ಸ್ತೋತ್ರಮಾಡಿದನು. ॥೮-೯॥

ಕಂಕಾಲ (ತಲೆಬುರುಡೆ) ಸ್ವರೂಪನೂ, ತ್ರಿಪುರಾಸುರರನ್ನು ನಾಶಮಾಡಿದವನೂ ಆದ ತ್ರಿಲೋಚನನೇ, ನಿನಗೆ ನಮಸ್ಕಾರಮಾಡುವೆನು, ನನ್ನನ್ನು ಕಾಪಾಡು ; ಈಶ್ವರನೂ, ಶಂಭುವೂ, ಮನ್ಮಥಾಂತಕನೂ, ಪ್ರಭುವೂ ಆದ ಶಂಭುವೇ, ನೀನು ಪ್ರಸನ್ನನಾಗಿ ಯಾವಾಗಲೂ ನನ್ನನ್ನು ರಕ್ಷಿಸು ; ಭಗವಂತನೇ, ಯಮನನ್ನು ನಿಗ್ರಹಿಸಿದವನೇ, ನೀನು ಪ್ರಸನ್ನನಾಗಿ ನನಗೆ ಪುತ್ರಸಂಪತ್ತನ್ನು ಕರುಣಿಸು ; ಅಲ್ಲದೇ ನಿನ್ನಲ್ಲಿಟ್ಟಿರುವ ಭಕ್ತಿಯಿಂದ ನನಗೆ ಮೋಕ್ಷವನ್ನು ಕೊಡು ; ಎಲೈ ಮಂಗಳಪ್ರದನೆ, ನನ್ನನ್ನು ಶಿವಲೋಕಕ್ಕೆ ಹೊಂದಿಸೆಂದು ಆ ಭಕ್ತನು ಸ್ತೋತ್ರಮಾಡಿದನು. ॥೧೦॥

ಅವನ ಸ್ತೋತ್ರದಿಂದ ಸಂತುಷ್ಟಮನಸ್ಕನಾದ ಮಹೇಶನು, ಭಕ್ತನಿಗೆ ಶ್ರೇಷ್ಠನಾದ ಪುತ್ರನನ್ನು ಪುನಃ ಕರುಣಿಸಿದನು. ಹಾಗೆಯೇ ತ್ರಿಮಾಧುರೇಶ್ವರಸಂಜ್ಞಕನಾದ ದೇವೇಶ್ವರನೆನಿಸಿದ ಶಂಕರನನ್ನು ಈ ಕ್ಷೇತ್ರದಲ್ಲಿ ಭಕ್ತನೊಬ್ಬನು ಪೂಜೆಮಾಡಿದನು. ಯಮಾಂತಕನೂ, ವಿಷಕಂಠನೂ, ತಲೆಯಲ್ಲಿ ಚಂದ್ರಕಲೆಯನ್ನು ಧರಿಸಿ ಶೋಭಿಸುತ್ತಿರುವವನೂ ಆದ ದೇವತಾಧಿಪತಿಯನ್ನು ಭಕ್ತನಾದ ಕಲಾಕಲನೆಂಬುವನು ಇಂತು ಸ್ತೋತ್ರಮಾಡಿದನು. ॥೧೧-೧೨॥

॥ ಕಲಾಕಲ ಉವಾಚ ॥

ಕಾಲಕಾಲ ಗರಲಾಶನ ಶಂಭೋ
ಚಂದ್ರಶೇಖರ ಹರಾವ್ಯಯ ಪಾಹಿ ।
ವಿಶ್ವನಾಥ ಮಮ ನಾಥ ನಮಸ್ತೇ
ಮನ್ಮಥಾಂತಕವಿಭೋ ಪರಿಪಾಹಿ ॥೧೩॥

ದೇವಃ ಕಲಾಕಲಸ್ತುತ್ಯಾ ತುಷ್ಟೋಽಷ್ಟತನುರೀಶ್ವರಃ ।
ತಸ್ಮೈ ದಕ್ಷಿಣಕೈಲಾಸವಾಸಂ ಪ್ರಾದಾನ್ಮಹೇಶ್ವರಃ ॥೧೪॥

ಮುಕ್ತದ್ವಾರೇ ಪುರಹರಂ ಸಮಭ್ಯರ್ಚ್ಯಾರ್ಸ್ತುವಚ್ಛಿವಂ ।
ಮುಲ್ಲೋ ನಾಮ ಮುನಿರ್ಭಕ್ತಸ್ತತ್ರ ಶಂಕರಮೀಶ್ವರಂ ॥೧೫॥

॥ ಮುಲ್ಲ ಉವಾಚ ॥

ನಮಃ ಪ್ರಫುಲ್ಲೋತ್ಪಲಪದ್ಮಮಾಲಾ
ಧರಾಯ ಭೂಭೃದ್ವಟವಾಸಿನೇ ತೇ ।

---

ಯಮನಿಗೂ ಯಮಸ್ವರೂಪನೂ, ವಿಷವನ್ನು ತಿಂದವನೂ, ಶಂಭುವೂ, ಚಂದ್ರಮೌಳಿಯೂ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಲಯಮಾಡುವವನೂ, ನಾಶವಿಲ್ಲದವನೂ ಆದ ದೇವನೇ, ನನ್ನನ್ನು ಕಾಪಾಡು; ಜಗದೊಡೆಯನೂ, ನನ್ನ ಸ್ವಾಮಿಯೂ, ಮನ್ಮಥಶತ್ರುವೂ ಆದ ವಿಭುವೇ, ನಿನಗೆ ನಮಸ್ಕಾರಮಾಡುತ್ತೇನೆ. ನಮ್ಮನ್ನು ರಕ್ಷಿಸು ಎಂದು ಕಲಾಕಲನು ಸ್ತೋತ್ರಮಾಡಿದನು. ॥೧೩॥

ಆ ಕಲಾಕಲನು ಮಾಡಿದ ಸ್ತೋತ್ರದಿಂದ ಸಂತುಷ್ಟನಾದ ಅಷ್ಟಮೂರ್ತಿಯೂ ಐಶ್ವರ್ಯಭರಿತನೂ ಆದ ಮಹಾದೇವನು ಅವನಿಗೆ ದಕ್ಷಿಣಕೈಲಾಸಪರ್ವತವಾಸವನ್ನು ಅನುಗ್ರಹಿಸಿದನು. ಶೈವಶ್ರೇಷ್ಠನಾದ ಮುಲ್ಲನೆಂಬ ಮುನಿಯು ಮುಕ್ತದ್ವಾರ ಕ್ಷೇತ್ರದಲ್ಲಿ ತ್ರಿಪುರಸೂದನನೂ, ಯೋಗಿಹೃದಯವಾಸನೂ, ಈಶ್ವರನೂ ಆದ ಶಿವನನ್ನು ಇತರ ಮುನಿಗಳೊಡನೆ ಪೂಜೆಮಾಡಿ ಇಂತು ಸ್ತೋತ್ರಮಾಡಿದನು. ॥೧೪-೧೫॥

ಅರಳಿದ ಕನ್ನೈದಿಲೆಗಳ, ತಾವರೆಹೂಗಳ ಮಾಲೆಯನ್ನು ಧರಿಸಿರುವವನೂ, ಆಲದಮರದ ಕೆಳಗೆ ಕುಳಿತು ಮುನಿಗಳಿಗೆ ಜ್ಞಾನೋಪದೇಶಮಾಡುವ ದಕ್ಷಿಣಾ

ಪಾದಾಂಬುಜಂ ನೌಮಿ ಸಮರ್ಚಯಾಮಿ
ತ್ವದ್ಭಕ್ತಿಯುಕ್ತೋ ನಿವಸಾಮ್ಯಹಂ ಸ್ಥಳೇ ॥೧೬॥

ತತ್ಸ್ತುತ್ಯಾ ತುಷ್ಟಹೃದಯೋ ಮುಕ್ತಿಂ ಮುಲ್ಲಾಯ ಸಂದದೌ ।
ತತ್ಪ್ರಾಚ್ಯಾಂ ಫುಲ್ಲವಿಪಿನಂ ಶಂಭೋಃ ಪಾಪಾಪಹಂ ಮಹತ್ ॥೧೭॥

ಫುಲ್ಲೋ ನಾಮ ಮುನಿಸ್ತತ್ರ ಪೂಜಯಾಮಾಸ ಶಂಕರಂ ॥೧೮॥

ಸರ್ವದಾ ಸರ್ವದೋಽಸೀತಿ ಶರ್ವ ಸಂಸ್ತೂಯಸೇ ಜನೈಃ ।
ಭಕ್ತಂ ತೇ ಮುಕ್ತಿಸಂಗೇನ ಯೋಜಯ ತ್ವಂ ಪ್ರಭೋ ಭವ ॥೧೯॥

ತತ್ಸ್ತುತ್ಯಾ ತೋಷಿತಸ್ತತ್ರ ಮುಕ್ತಿಂ ಫುಲ್ಲಾಯ ದತ್ತವಾನ್ ॥೨೦॥

ಅಧಿಸ್ಥಾನಂ ತಥಾ ಪ್ರಾಚ್ಯಾಂ ಅಧಿನಾ ಪೂಜಿತೋ ಹರಃ ।
ಮುನಿನಾ ರುದ್ರಜಾಪ್ಯೇನ ಸ ತು ದೇವೋ ಮಹೇಶ್ವರಃ ॥೨೧॥

---

ಮೂರ್ತಿಸ್ವಾಮಿಯೇ ನಿನಗೆ ನಮಸ್ಕಾರಮಾಡುತ್ತೇನೆ. ದೇವ, ನಿನ್ನ ಪಾದಕಮಲಗಳಿಗೆ ವಂದಿಸುತ್ತೇನೆ, ನಿನ್ನ ಈ ಸ್ಥಳದಲ್ಲಿಯೇ ನೆಲಸಿ, ನಿನ್ನ ಭಕ್ತಿಯಿಂದ ಕೂಡಿದವನಾಗಿ, ಯಾವಾಗಲೂ ನಿನ್ನನ್ನು ಪೂಜಿಸುವೆನು, ಎಂದು ಮುಲ್ಲನು ಸ್ತೋತ್ರಮಾಡಿದನು. ॥೧೬॥

ಆ ಮುನಿಯ ಸ್ತುತಿಯಿಂದ ಸಂತುಷ್ಟನಾದ ಮಹಾದೇವನು ಮುಲ್ಲನಿಗೆ ಮೋಕ್ಷವನ್ನು ಅನುಗ್ರಹಿಸಿದನು. ಅಲ್ಲಿಂದ ಪೂರ್ವದಿಕ್ಕಿನಲ್ಲಿ ಪಾಪನಾಶಕವೂ ದೊಡ್ಡದೂ ಆದ ಶಂಭುವಿನ ಫುಲ್ಲಾರಣ್ಯವೆಂಬ ಮತ್ತೊಂದು ಕ್ಷೇತ್ರವಿದೆ. ಅಲ್ಲಿ ಫುಲ್ಲನೆಂಬ ಮುನಿಯು ಶಂಕರನನ್ನು ಭಕ್ತಿಯಿಂದ ಪೂಜೆಮಾಡಿದನು. ॥೧೭-೧೮॥

ದೇವ, ಶರ್ವನೆನಿಸಿದ (ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ಸಂಹಾರ ಮಾಡುವ ನೀನು) ಯಾವಾಗಲೂ ಭಕ್ತರಿಗೆ ಇಷ್ಟವಾದ ವರಗಳನ್ನೆಲ್ಲಾ ಸಲ್ಲಿಸುವೆಯೆಂದು ಜನಗಳಿಂದ ಸ್ತೋತ್ರಮಾಡಲ್ಪಡುತ್ತಿರುವೆ. ದೇವ, ಸರ್ವಸಮರ್ಥನೂ, ಜಗದುತ್ಪತ್ತಿ, ಸ್ಥಿತಿ, ಕಾರಣಭೂತನೂ ಆದ ನೀನು ನಿನ್ನ ಭಕ್ತನಾದ ನನ್ನನ್ನು ಮೋಕ್ಷಪ್ರಾಪ್ತಿಯಿಂದ ಅನುಗ್ರಹಿಸೆಂದು ಫುಲ್ಲನು ಸ್ತೋತ್ರಮಾಡಲು, ಅದರಿಂದ ಸಂತುಷ್ಟನಾದ ಮಹಾದೇವನು ಆ ಫುಲ್ಲನಿಗೆ ಮೋಕ್ಷವನ್ನಿತ್ತನು. ॥೧೯-೨೦॥

ಅಲ್ಲಿಂದ ಪೂರ್ವಕ್ಕೆ ಅಧಿಸ್ಥಾನವಿರುವುದು. ಅಲ್ಲಿ ರುದ್ರಜಪನಿರತನಾದ

|| ಆಧಿರುವಾಚ ||

ನಮಸ್తೇ ಹೇ ರುದ್ರ ಧೃತಶರ ಸುಬಾಹೋ ಪರತರ
ಪ್ರಸೀದಸ್ವಾಗೋ ಮೇ ಹರಹರ ಪುರಾಂ ನಾಶಕ ವಿಭೋ ।
ಗರಂ ಕಂಠೇ ಧತ್ಸೇ ಗದಯುತಚಿಕಿತ್ಸೇಶ ಜನತಾ
ಭಿಷಗ್ವರ್ಯಾಧುರ್ಯೇ ತ್ರಿದಶಮುಕುಟೇರಂಜಿತಪದಃ ॥೨೨॥

ತಸ್ಮೈ ಮುಕ್ತಿಂ ದದೌ ತತ್ರ ಆಧಯೇ ಚಾಧಿರೀಶ್ವರಃ ।
ಆದಿಮಾಯೂರಸಂಜ್ಞಂ ತು ತತ್ಪ್ರಾಚ್ಯಾಂ ವಿಷ್ಣುನಾರ್ಚಿತಂ ॥೨೩॥

ಸ್ಥಾನಂ ತದ್ವೃಷವಾಹಸ್ಯ ವೃಷದಂ ಪಾಪನಾಶನಂ ।
ತತ್ರ ಸಹ್ಯಾಪಗಾತೀರೇ ಚೋತ್ತರೇ ಪೂಜ್ಯ ಶಂಕರಂ ॥೨೪॥

ವಿಷ್ಣುಸ್ತುಷ್ಟಾವ ಭಕ್ತ್ಯೈಶಂ ತತ್ರ ಸಕ್ತೋಽವಸದ್ಧರಿಃ ॥೨೫॥

---

ಆಧಿಯೆಂಬ ಮುನಿಯಿಂದ ಆ ಮಹೇಶ್ವರದೇವನು ಅಲ್ಲಿ ಪೂಜಿಸಲ್ಪಟ್ಟು ಸ್ತುತಿಸಲ್ಪಟ್ಟಿರುವನು. ||೨೧||

ಎಲೈ ರುದ್ರದೇವನೇ ! ನಿನಗೆ ನಮಸ್ಕಾರಮಾಡುತ್ತೇನೆ. ಬಾಣವನ್ನು ಧರಿಸಿರುವ ಉತ್ತಮವಾದ ಬಾಹುವಿನಿಂದ ನೀನು ಶೋಭಿಸುತ್ತಿರುವೆ. ಪರಾತ್ಪರನೆನಿಸಿದ ನೀನು ನನ್ನಲ್ಲಿ ಪ್ರಸನ್ನನಾಗಿ ನನ್ನ ಅಪರಾಧವನ್ನೆಲ್ಲಾ ಕ್ಷಮಿಸಿಬಿಡು. ಎಲೈ ವಿಭುವೇ ! ಪಾಪನಾಶಕನೆನಿಸಿದ ನೀನೂ ಕೊರಳಲ್ಲಿ ವಿಷವನ್ನು ಧರಿಸಿ, ರೋಗಿಗಳಾದ ಜನಗಳ ಗುಂಪಿಗೆ ಚಿಕಿತ್ಸೆಮಾಡುವುದರಲ್ಲಿ ವೈದ್ಯಶ್ರೇಷ್ಠನೆನಿಸಿರುವೆ. ದೇವತೆಗಳೆಲ್ಲರೂ ನಿನ್ನ ಪಾದಗಳಿಗೆ ಕಿರೀಟಧಾರಿಗಳಾಗಿ ಬಂದು ನಮಸ್ಕಾರಮಾಡಿರುವುದರಿಂದ, ಆ ಕಿರೀಟಗಳ ರತ್ನಕಾಂತಿಗಳಿಂದ ನಿನ್ನ ಪಾದಗಳು ಶೋಭಿಸುತ್ತಿರುವುವು, ಎಂದು ಆಧಿಯು ಸ್ತೋತ್ರಮಾಡಿದನು. ||೨೨||

ಆಧೀಶ್ವರನು, ಭಕ್ತನಾದ ಆಧಿಯಿಂದ ಸ್ತುತನಾಗಿ, ಅವನಿಗೆ ಮೋಕ್ಷವನ್ನು ಕರುಣಿಸಿದನು. ಅಲ್ಲಿಂದ ಪೂರ್ವದಿಕ್ಕಿಗೆ ವಿಷ್ಣುವಿನಿಂದ ಪೂಜಿಸಲ್ಪಟ್ಟ ಆದಿ ಮಾಯೂರವೆಂಬ ಸ್ಥಾನವಿರುವುದು. ವೃಷಭವಾಹನಸ್ಥಾನವಾದ ಅದು, ಪುಣ್ಯಪ್ರದವೂ ಪಾಪನಾಶಕವೂ ಆಗಿರುವುದು. ಅಲ್ಲಿಯೇ ಕಾವೇರೀನದಿಯ ದಡದಲ್ಲಿ ಉತ್ತರಭಾಗದಲ್ಲಿ ವಿಷ್ಣುವು ಶಂಕರನನ್ನು ಭಕ್ತಿಯಿಂದ ಪೂಜಿಸಿ, ಮಹಾದೇವನಲ್ಲಿಯೇ ನೆಟ್ಟಮನಸ್ಸುಳ್ಳವನಾಗಿ ಸ್ತೋತ್ರಮಾಡಿರುವನು. ||೨೩-೨೪-೨೫||

|| ಹರಿರುವಾಚ ||

ನಮೋ ದೇವವೇದಾಶ್ವಹೇಷೈಕವೇದ್ಯ
ಮಹಾಶೇಷಭೂಷೋ ವಿಷಾದಸ್ತ್ವಮೇವ ।
ಅಣೀಯಾಂಸ್ತ್ವನಂತಸ್ತವಾತ್ರೈವ ಸ್ಥಾನೇ
ವಸಾಮೀಶಶಂಭೋ ಭಜನ್ಕೃತ್ತಿವಾಸಂ ||೨೬||

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶಿವಸ್ಥಾನವೈಭವೇ ಷಡ್ವಿಂಶೋಽಧ್ಯಾಯಃ

---

ದೇವ! ನಾಲ್ಕುವೇದಗಳೆಂಬ ಕುದುರೆಗಳ ಹೇಷಾಧ್ವನಿಯಿಂದ ಗೋಚರನಾಗುವವನೂ, ಆದಿಶೇಷನೆಂಬ ಮಹಾಸರ್ಪವನ್ನೇ ಹಾರವನ್ನಾಗಿ ಅಲಂಕರಿಸಿಕೊಂಡಿರುವವನೂ, ಕಾಲಕೂಟವಿಷವನ್ನು ತಿಂದವನೂ, ನೀನೇ ಆಗಿರುವೆ, ನೀನು ಸಣ್ಣಪದಾರ್ಥಗಳಿಗಿಂತಲೂ ಸೂಕ್ಷ್ಮನಾಗಿರುವವನು ಮತ್ತು ಆದ್ಯಂತವಿಲ್ಲದವನು. ಓ ಶಂಭುದೇವ! ನಿನ್ನ ಈ ಸ್ಥಾನದಲ್ಲಿ ಗಜಚರ್ಮವನ್ನು ಹೊದ್ದಿರುವ ನಿನ್ನನ್ನು ಸದಾ ಭಜನೆಮಾಡುತ್ತಾ, ನಾನು ವಾಸಮಾಡುವೆನು. ದೇವ! ನಿನಗೆ ಪ್ರಣಾಮ ಮಾಡುವೆನು, ಎಂದು ವಿಷ್ಣುವು ಸ್ತೋತ್ರಮಾಡಿದನು. ||೨೬-೨೭||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶಿವಸ್ಥಾನವೈಭವವರ್ಣನೆಯೆಂಬ ಇಪ್ಪತ್ತಾರನೆಯ ಅಧ್ಯಾಯವು
ಮುಗಿಯಿತು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಸಪ್ತವಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ಕಾವೇರ್ಯಾ ದಕ್ಷಿಣೇ ತೀರೇ ಸ್ಥಾನಂ ಬ್ರಹ್ಮವನಾಭಿಧಂ ।
ಪಾವನಂ ವಸತಾಂ ತತ್ರ ಪಾಪಾನಾಂ ಪರಿಶೋಧಕಂ ॥೧॥

ಪುರಾ ಕೈಲಾಸಶಿಖರಾದಾಗತೇನ ಶಿವೇನ ಹಿ ।
ಲಿಂಗಂ ಮಹತ್ತರಂ ತತ್ರ ದರ್ಶನಾನ್ಮೋಕ್ಷದಂ ನೃಣಾಂ ॥೨॥

ಮಧ್ಯೇ ಕಾವೇರಜಾತೋಯೇ ನ್ಯಸ್ತಂ ಧರ್ಮಾಕೃತಿಂ ಹರಃ ।
ಪ್ರಾಚ್ಯಾಂ ಪಶ್ಚಾಚ್ಚ ಕಾವೇರ್ಯಾಂ ಸ್ನಾತಾನಾಂ ಸರ್ವಕಾಮದಂ ॥೩॥

---

## ಇಪ್ಪತ್ತೇಳನೆಯ ಅಧ್ಯಾಯ

ಪುನಃ ಕುಮಾರಸ್ವಾಮಿಯು ಶಿವಕ್ಷೇತ್ರವರ್ಣನೆಯನ್ನು ಮುಂದುವರಿಸುತ್ತಾ ಹೀಗೆಂದನು.—ಓ ಜೈಗೀಷವ್ಯಮುನಿಯೇ, ಕಾವೇರಿನದಿಯ ದಕ್ಷಿಣದಡದಲ್ಲಿ ಬ್ರಹ್ಮವನವೆಂಬ ಹೆಸರಿನಿಂದ ಪ್ರಖ್ಯಾತವಾದ ಒಂದು ಸ್ಥಾನವಿರುವುದು. ಅದು ಪಾವನವೂ, ತನ್ನಲ್ಲಿ ವಾಸಮಾಡುವವರ ಪಾಪಗಳನ್ನು ನಾಶಮಾಡುವುದೂ, ಆಗಿರುವುದು. ಹಿಂದೆ ಕೈಲಾಸಶಿಖರದಿಂದ ಬಂದ ಶಿವನೇ ಕಾವೇರೀನದಿಯ ನೀರಿನ ಮಧ್ಯಭಾಗದಲ್ಲಿ ದರ್ಶನಮಾತ್ರದಿಂದ ಮಾನವರಿಗೆ ಮೋಕ್ಷವನ್ನುಂಟುಮಾಡುವುದಾದ ಒಂದು ದೊಡ್ಡ ಶಿವಲಿಂಗವನ್ನು ಸ್ಥಾಪಿಸಿದನು. ಪುಣ್ಯಕರವೂ, ಧರ್ಮಾಕೃತಿಯುಳ್ಳದ್ದೂ ತನ್ನ ಪೂರ್ವಪಶ್ಚಿಮ ದಿಕ್ಕಿನಲ್ಲಿ ಹರಿಯುವ ಕಾವೇರೀನೀರಿನಲ್ಲಿ ಸ್ನಾನಮಾಡುವವರಿಗೆ ಸಕಲ ಇಷ್ಟಾರ್ಥಗಳನ್ನೂ ಕೊಡುವುದೂ ಆದ ಆ ಲಿಂಗವು

ದೇವ ಆಕಲ್ಪಯಾಮಾಸ ಸ್ನಾತಾನಾಮಘನಾಶನಂ ।
ಗ್ರಹಣೇ ಸೋಮಸೂರ್ಯಾರ್ಘ್ಯೇ ಪರ್ವಕಾಲೇಷು ನಿತ್ಯಕೇ ॥೪॥

ಸ್ನಾತ್ವಾ ಕವೇರಜಾತೋಯೇ ವೃಷತೀರ್ಥೇ ಮಹೇಶ್ವರಂ ।
ದೃಷ್ಟ್ವಾ ಬ್ರಹ್ಮವನಾಧೀಶಂ ಮುಚ್ಯತೇ ಮಹಸೋಽಂಹಸಾತ್ ॥೫॥

ಪ್ರಜಾಪತಿಶ್ಚ ಸೃಷ್ಟ್ಯಾದೌ ಸೃಷ್ಟೇಃ ಪ್ರೀತ್ಯರ್ಥಮೀಶ್ವರಂ ।
ಸ್ಥಾಪ್ಯ ಬ್ರಹ್ಮವನೀನಾಥಂ ಸಂಪೂಜ್ಯ ಸ್ತೌತಿ ಭಕ್ತಿತಃ ॥೬॥

॥ ಬ್ರಹ್ಮೋವಾಚ ॥

ಮಯಸ್ಕರಂ ಮಹೇಶ್ವರಂ ಪರಾಭಿಧಂ ಚ ಶಂಕರಂ
ಭಜಾಮಿ ಸೋಮಶೇಖರಂ ಪ್ರಪಂಚಸಿದ್ಧಯೇ ಹರಂ ।
ನಮಾಮಿ ಪಾರ್ವತೀಪತಿಂ ಸುರಾಸುರೌಘಸಂಸ್ತುತಂ
ಭವೋದ್ಭವಂ ಶಿವಾಧವಂ ರಮಾಧವಾರ್ಚಿತಾಂಘ್ರಿಕಂ ॥೭॥

---

ಭಕ್ತರಿಗೆ ಪುಣ್ಯಪ್ರದವಾಗಿರುವುದು. ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿ ಅರ್ಧೋದಯಪುಣ್ಯಕಾಲ ಮತ್ತು ಪರ್ವಕಾಲಗಳಲ್ಲಿ ಅಲ್ಲಿ ನಿತ್ಯವೂ ಸ್ನಾನಮಾಡುವುದರಿಂದ ಅವರಿಗೆ ಸಲಕ ಇಷ್ಟಾರ್ಥಗಳೂ ಸಿದ್ಧಿಸುವುವು. ॥೧-೨-೩-೪॥

ಆ ಕಾವೇರೀನದಿಯ ವೃಷತೀರ್ಥದಲ್ಲಿ ಸ್ನಾನಮಾಡಿ, ಬ್ರಹ್ಮವನಾಧಿಪತಿಯಾದ ಮಹೇಶ್ವರನನ್ನು ದರ್ಶನಮಾಡಿದವರು ಮಹಾಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ. ಹಿಂದೆ ಬ್ರಹ್ಮನು ಪ್ರಪಂಚವನ್ನು ಸೃಷ್ಟಿಮಾಡುವುದಕ್ಕೆ ಮೊದಲು ತಾನು ಮುಂದೆ ಮಾಡುವ ಸೃಷ್ಟಿಕಾರ್ಯದಿಂದ ಈಶ್ವರನಿಗೆ ಪ್ರೀತಿಯನ್ನುಂಟು ಮಾಡುವುದಕ್ಕೋಸ್ಕರ ಆ ಬ್ರಹ್ಮವನಾಧಿಪಸಂಜ್ಞಕವಾದ ಒಂದು ಶಿವಲಿಂಗವನ್ನು ಸ್ಥಾಪಿಸಿ ಪೂಜೆಮಾಡಿ, ಭಕ್ತಿಯಿಂದ ಸ್ತೋತ್ರಮಾಡಿದನು. ॥೫-೬॥

ತೇಜಸ್ಸನ್ನು ಸರ್ವತ್ರ ಪ್ರಸರಿಸುವವನೂ, ಪೂರ್ಣೈಶ್ವರ್ಯಸಂಪನ್ನನೂ, ಪರಮಪುರುಷಸಂಜ್ಞೆಯುಳ್ಳವನೂ, ಜಗನ್ಮಂಗಳಕರನೂ, ಚಂದ್ರಶೇಖರನೂ, ಆದ ಪರಮೇಶ್ವರನನ್ನು ಈ ಪ್ರಪಂಚ ಸೃಷ್ಟಿಕಾರ್ಯವು ನನ್ನಿಂದ ಸುಲಭವಾಗಿ ನಡೆಯುವುದಕ್ಕೋಸ್ಕರ ಭಜಿಸುವೆನು. ಪಾರ್ವತೀರಮಣನೂ, ಜಗನ್ಮಂಗಳಾದೇವಿಯ ಪತಿಯೂ, ಲಕ್ಷ್ಮೀಕಾಂತನಾದ ನಾರಾಯಣನಿಂದ ಪೂಜಿಸಲ್ಪಟ್ಟ ಪಾದಪದ್ಮವುಳ್ಳವನೂ ಆದ ಮಹಾದೇವನಿಗೆ ನಮಸ್ಕಾರಮಾಡುತ್ತೇನೆ. ॥೭॥

ಅಹಸ್ಕರಾಕ್ಷಂ ಶಿವದಂ ಮಹೋಕ್ಷಗಂ
ದಕ್ಷಾಘಶಿಕ್ಷಾಪರತಂತ್ರಮೋಕ್ಷದಂ ।
ನಮಾಮಿ ದೇವಂ ಭಜತಾಂ ವಿಮುಕ್ತಿದಂ
ಸ್ಥಾನೇಽತ್ರಸಂವಾಸಿಜನೈಕಪಾವನಂ ॥೮॥

ಇತ್ಥಂ ಬ್ರಹ್ಮವನಾಧೀಶೋ ಸೃಷ್ಟಿಕೃತ್ತ್ವಂ ದದೌ ವಿಧೇಃ ।
ಸಸರ್ಜ ಸವಿಧಿಸ್ತತ್ರ ಜಗದೇತದ್ಯಥಾ ಪುರಾ ।೯॥

ದೇವಾಸುರಾಪ್ಸರೋಯಕ್ಷಾಂಸ್ತಿರ್ಯಗ್ರಾಮಂ ಚ ಶಂಕರಾತ್ ।
ಲಬ್ಧ್ವಾ ಪ್ರಸಾದಂ ತದ್ಧ್ಯಾನೈಃ ಪ್ರಾಕಾರಂ ಗೋಪುರಂ ವ್ಯಧಾತ್ ॥೧೦॥

ತತಃ ಕಾಲೇನ ಮಹತಾ ಕೈಲಾಸೇಽಪೂಜಯದ್ಧರಂ ।
ಗೌರೀ ಮಯೂರೀ ಭೂತ್ವಾ ತು ಲಾಸ್ಯಂ ಚಕ್ರೇ ಶಿವಾಗ್ರಗಾ ॥೧೧॥

---

ಸೂರ್ಯನೇತ್ರನೂ, ಮಂಗಳಪ್ರದನೂ ದೊಡ್ಡ ವೃಷಭದಮೇಲೆ ಸಂಚರಿಸುವವನೂ, ಅತಿಘೋರವಾದ ದಕ್ಷಬ್ರಹ್ಮನ ಮಹಾಪಾಪಗಳನ್ನೂ ಹೋಗಲಾಡಿಸಿ ಕೊನೆಗೆ ಅವನಿಗೆ ಮೋಕ್ಷವನ್ನಿತ್ತವನೂ ತನ್ನನ್ನು ಭಜಿಸುವವರಿಗೆ ಮೋಕ್ಷವನ್ನು ಕರುಣಿಸುವವನೂ, ಆದ ದೇವದೇವನಿಗೆ ನಮಸ್ಕರಿಸುವೆನು. ಈ ಸ್ಥಾನದಲ್ಲಿ (ಬ್ರಹ್ಮವನದಲ್ಲಿ) ವಾಸಮಾಡುವ ಜನಗಳಿಗೆ ಪಾವಿತ್ರ್ಯವನ್ನುಂಟುಮಾಡುವವನಾದ ಮಹಾದೇವನಿಗೆ ಪ್ರಣಾಮಮಾಡುವೆನು ಎಂದು ಬ್ರಹ್ಮನು ಸ್ತೋತ್ರಮಾಡಿದನು. ॥೮॥

ಹೀಗೆ ಬ್ರಹ್ಮನಿಂದ ಸ್ತುತಿಸಲ್ಪಟ್ಟ ಬ್ರಹ್ಮವನಾಧೀಶ್ವರನು, ಬ್ರಹ್ಮನಿಗೆ ಪ್ರಪಂಚಸೃಷ್ಟಿಕರ್ತೃತ್ವವನ್ನು ಕರುಣಿಸಿಕೊಟ್ಟನು. ಅನಂತರ ಬ್ರಹ್ಮನು ಹಿಂದಿನ ಕಲ್ಪಗಳಲ್ಲಿದ್ದಂತೆಯೇ ಪ್ರಪಂಚವನ್ನೆಲ್ಲಾ ಸೃಷ್ಟಿಮಾಡತೊಡಗಿದನು. ಮೊದಲು ದೇವತೆಗಳು, ರಾಕ್ಷಸರು, ಅಪ್ಸರೆಯರು, ಯಕ್ಷರು, ತಿರ್ಯಕ್ಪ್ರಾಣಿಗಳು ಮುಂತಾದವುಗಳಿಂದ ಭರಿತವಾದ ಗ್ರಾಮಗಳನ್ನೂ ಶಂಕರನ ವರಬಲದಿಂದ ಸೃಷ್ಟಿಮಾಡಿ, ಅನಂತರ ಬ್ರಹ್ಮನು ಆ ಮಹಾದೇವನನ್ನೇ ಧ್ಯಾನಿಸುತ್ತಾ ಆ ದೇವನಿಗೆ ಪ್ರಾಕಾರವನ್ನೂ ಮತ್ತು ಗೋಪುರವನ್ನೂ ಮನಸಾ ನಿರ್ಮಿಸಿದನು. ॥೯-೧೦॥

ಹೀಗೆಯೇ ಕೆಲವು ಕಾಲವು ಕಳೆಯಲು ಒಂದುಸಾರಿ ದೇವಿಯು ಕೈಲಾಸಪರ್ವತದಲ್ಲಿ ಪರಮೇಶ್ವರನನ್ನು ಪೂಜೆಮಾಡಿದಳು. ಆಗ ಗೌರೀದೇವಿಯು ಪೂಜಾನಂತರದಲ್ಲಿ ಹೆಣ್ಣುನವಿಲಾಗಿ ಪರಶಿವನಮುಂದೆ ನಿಂತು ನಾಟ್ಯವಾಡಿದಳು.

ಸ್ವಪಿಂಛಭಾರೈರ್ದೇವೇಶಂ ವೀಜಯಂತೀ ಪುರಃಸ್ಥಿತಾ ।
ಹರ್ಷೇಣ ಭೂತಲೇ ಪ್ರಾಪ್ಯ ಸ್ನಾತ್ವಾತೀರ್ಥೇ ವೃಷಾಹ್ವಯೇ ॥೧೨॥

ಮರುದ್ವೃಧಾ ಮಧ್ಯತೋಯೇ ಸರ್ವೇಷಾಂ ಪಾವನೀ ಸದಾ ।
ಧೃತತ್ರಿಪುಂಡ್ರರುದ್ರಾಕ್ಷಾ ದೃಷ್ಟ್ವಾ ಬ್ರಹ್ಮವನೇಶ್ವರಂ ॥೧೩॥

ವೃತ್ವಾ ತದಗ್ರತೀರ್ಥೇ ವೈ ಬ್ರಹ್ಮಣಾ ಚ ಕೃತೇ ಪುರಾ ।
ಸರ್ವಪಾಪಹರಂ ತತ್ರ ಗೃಹೀತ್ವಾಂಭೋಽರ್ಚಯದ್ಧರಂ ॥೧೪॥

ಬಿಲ್ವಪತ್ರೈಃ ಪಂಕಜೈಶ್ಚ ಧೂಪದೀಪನಿವೇದನೈಃ ।
ನೀರಾಜನೈರ್ನಮಸ್ಕಾರೈಃ ಪ್ರದಕ್ಷಿಣಪುರಸ್ಸರಂ ॥೧೫॥

ಮಾಯೂರೀ ನೃತ್ಯತೀ ಗೌರೀ ಬ್ರಹ್ಮೇಶಾನಂ ಪ್ರತುಷ್ಟುವೇ ॥೧೬॥

॥ ಶ್ರೀ ಗೌರ್ಯುವಾಚ ॥

ಹರಹರ ದೇವದಯಾಕರ ಕುರುಕುರು ವರಕರುಣಾಂ ಶಶಿಮೌಳೇ ।
ಭವಭಯಹರ ಶಿವತರ ಭರಗರಕಂಠ ವಿಭೋ ॥೧೭॥

---

ತನ್ನ ಗರಿಗಳ ಸಮೂಹದಿಂದ ದೇವತಾಧಿಪತಿಯನ್ನು ಬೀಸುತ್ತಾ ಮುಂದೆಯೇ ನಿಂತುಕೊಂಡು ನರ್ತನಮಾಡಿದಳು. ಆಮೇಲೆ ಅದೇ ಸಂತೋಷದಿಂದ ಭೂಮಿಗೆ ಬಂದು, ವೃಷತೀರ್ಥದಲ್ಲಿ ಸ್ನಾನಮಾಡಿದಳು. ||೧೧-೧೨||

ಎಲ್ಲರನ್ನೂ ಪವಿತ್ರಗೊಳಿಸುವ ಗೌರೀದೇವಿಯು ಕಾವೇರೀನದಿಯ ಮಧ್ಯ ನೀರಿನಲ್ಲಿ ಸ್ನಾನಮಾಡಿ, ಭಸ್ಮತ್ರಿಪುಂಡ್ರ, ಮತ್ತು ರುದ್ರಾಕ್ಷಗಳನ್ನಲಂಕರಿಸಿ ಕೊಂಡು, ಬ್ರಹ್ಮವನೇಶ್ವರನನ್ನು ದರ್ಶನಮಾಡಿ, ಶಿವಲಿಂಗದ ಮುಂದೆ ಬ್ರಹ್ಮನಿಂದ ನಿರ್ಮಿಸಲ್ಪಟ್ಟಿದ್ದ ಸಕಲ ಪಾಪನಾಶಕವಾದ ತೀರ್ಥದಲ್ಲಿ ನೀರನ್ನು ತೆಗೆದುಕೊಂಡು ಪರಮೇಶ್ವರನಿಗೆ ಅಭಿಷೇಕಮಾಡಿದಳು. ಅನಂತರ ಬಿಲ್ವಪತ್ರೆ, ತಾವರೇಹೂ, ಧೂಪ, ದೀಪ, ನಿವೇದನ, ಆರತಿ, ಪ್ರದಕ್ಷಿಣಪೂರ್ವಕವಾದ ನಮಸ್ಕಾರಗಳಿಂದ ಬ್ರಹ್ಮವನೇಶ್ವರನನ್ನು ಪೂಜೆಮಾಡಿ, ನವಿಲುರೂಪವನ್ನು ಧರಿಸಿರುವ ಗೌರಿಯು ಬ್ರಹ್ಮೇಶ್ವರನಮುಂದೆ ನರ್ತನಮಾಡುತ್ತಾ ಹೀಗೆ ಸ್ತೋತ್ರಮಾಡಿದಳು. ||೧೩-೧೪-೧೫-೧೬||

ಭಕ್ತರ ಪಾಪನಾಶಕನೂ, ದಯಾಸಮುದ್ರನಾದ ದೇವನೂ ಆದ ಚಂದ್ರ ಶೇಖರನೇ! ನನ್ನಲ್ಲಿ ಕರುಣೆದೋರು. ಸಂಸಾರಭೀತಿಯನ್ನು ನಾಶಮಾಡುವವನೂ,

ಪ್ರಣತಜನಾವನ ದೇವ ಸುಪಾವನ
ನಾಮ ಪರಾತ್ಪರ ದೇವ ವಿಭೋ ।
ಪದ್ಮಜಪದ್ಮವಿಲೋಚನ ಪೂಜಿತ
ವೇದದ ಚಕ್ರದ ಪಾಹಿ ಸದಾ ॥೧೮॥

ಭಕ್ತವಿಮುಕ್ತಿದ ಭಕ್ತವಿರಕ್ತಜನಾಂತರಸಕ್ತ
ಸದಾವರದವಿಭೋ ಹರಗರಲಾಶನ ।
ವಹ್ನಿವಿಲೋಚನ ದಯುಗ ಮನೋಭವ
ಭಸ್ಮವಿದಗ್ಧಶರೀರ ವಿಭೋ ॥೧೯॥

ಪರಿಪಾಲಯ ಶೂಲವರಾಯುಧ ನಾಗವಿಭೂಷಣ
ಸೋಮವಿಧಾರಕ ದೇವ ವಿಭೋ ।

---

ಮಂಗಳತರಸ್ವರೂಪನೂ, ವಿಷಕಂಠನೂ, ಆದ ವಿಭುವೇ! ನನ್ನನ್ನು ಕಾಪಾಡು. ॥೧೭॥

ಭಕ್ತಿಯಿಂದ ನಮಸ್ಕಾರಮಾಡಿದ ಜನಗಳನ್ನು ಕಾಪಾಡುವವನೂ, ಪರಮ ಪಾವನನೂ ಆದ ದೇವನೇ! ಪರಾತ್ಪರನೆಂಬ ಹೆಸರಿನಿಂದ (ಸರ್ವೋತ್ಕೃಷ್ಟನಾದುದರಿಂದ) ಬೆಳಗುತ್ತಿರುವೆ. ಎಲೈ ವಿಭುವೇ! ಬ್ರಹ್ಮ, ವಿಷ್ಣುಗಳಿಂದ ಪೂಜಿಸಲ್ಪಟ್ಟು ಅವರಿಗೆ ಕ್ರಮವಾಗಿ ವೇದಗಳನ್ನೂ, ಚಕ್ರವನ್ನೂ, ಇತ್ತ ಸ್ವಾಮಿಯೇ! ನನ್ನನ್ನು ಯಾವಾಗಲೂ ಕಾಪಾಡು. ॥೧೮॥

ಭಕ್ತರಿಗೆ ಮೋಕ್ಷವನ್ನು ಕೊಡುವವನೂ, ಭಕ್ತರಿಗೂ, ವಿರಾಗದಿಂದ ಯುಕ್ತರಾದವರಿಗೂ ಆಸಕ್ತಿಯುಳ್ಳವನಾಗಿ ಬೇಕಾದ ವರಗಳನ್ನು ಕೊಡುವವನೂ, ವಿಭುವೂ, (ಬೇಕಾದ ವೈಭವವನ್ನು ಇಚ್ಛಾಮಾತ್ರದಿಂದ ಹೊಂದುವವನೂ) ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನಾಶಮಾಡುವವನೂ, ಕಾಲಕೂಟವಿಷವನ್ನು ಪಾನಮಾಡಿದವನೂ, ಅಗ್ನಿನೇತ್ರನೂ, ದಯೆಯನ್ನು ತನ್ನ ಭಕ್ತರಮೇಲೆ ಬೀರುವವನೂ, ಮನ್ಮಥನ ಶರೀರವನ್ನು ಭಸ್ಮ ಮಾಡಿದವನೂ ಆದ ವಿಭುವೇ! ನನ್ನನ್ನು ಕಾಪಾಡು. ॥೧೯॥

ಉತ್ತಮವಾದ ಶೂಲಾಯುಧವನ್ನುಳ್ಳವನೂ, ಸರ್ಪಭೂಷಣನೂ, ಚಂದ್ರನನ್ನು ಧರಿಸಿರುವವನೂ, ಆದ ವಿಭುವೆನಿಸಿದ ದೇವದೇವನೇ! ನನ್ನನ್ನು ಕಾಪಾಡು.

ಮಯಿ ಕುರು ದೇವ ದಯಾಂ ಕುರುಪಾಪ
ಭಯಾಪಹ ವಿಶ್ವವಿನೋದ ವಿಧಾನಕರಾಂತ ಮಹೇಶ ॥೨೦॥

ಇತ್ಥಂ ಬ್ರಹ್ಮವನೇ ದೇವ್ಯಾ ಸಂಸ್ತುತಃ ಪ್ರಾಹ ತಾಮುಮಾಂ ।
ಪ್ರಸಾದಸುಮುಖೋ ಭೂತ್ವಾ ದೇವಃ ಪಂಚಮುಖಸ್ತದಾ ॥೨೧॥

ಯಸ್ಮಾನ್ಮತ್ತೋಽಭಯಂ ದೇವಿ ಪ್ರಾಪ್ತೇಽಸ್ಯಭಯಾಂಬಿಕಾ ।
ನಾಮ್ನಾ ಚೈವೋತ್ತರೇ ಭಾಗೇ ಮೇ ವಸನ್ನಭಯಾದೃಶಾ ॥೨೨॥

॥ ಶ್ರೀ ಈಶ್ವರ ಉವಾಚ ॥

ಜನಾನಾಮತ್ರ ವಸತಾಂ ಕಾವೇರ್ಯಾಂ ಸುಶ್ರುತಂ ಮಮ ।
ಲಿಂಗೇ ಭಾವಿತಭಕ್ತಾನಾಮಭಯಂ ಪ್ರದಿಶಾದ್ಯ ವಃ ॥೨೩॥

ಗೌರೀ ಮಾಯೂರಿಕಾ ಭೂತ್ವಾ ಯಸ್ಮಾದೂರ್ಜಿತವತ್ಯಸಿ ।
ಗೌರೀಮಯೂರಸಂಜ್ಞಂ ತು ಕ್ಷೇತ್ರಂ ಭೂಯಾದಿದಂ ಮಮ ॥೨೪॥

---

ಮಹಾದೇವ! ಪ್ರೀತಿಯಿಂದ ಭಕ್ತರಪಾಪಭಯವನ್ನು ಹೋಗಲಾಡಿಸುವವನೂ, ಪ್ರಪಂಚವ್ಯಾಪಾರದಿಂದ ವಿನೋದಪಡುತ್ತಿರುವವನೂ, ಪ್ರಳಯಕಾಲದಲ್ಲಿ ಬ್ರಹ್ಮ ನಿರ್ಮಿತ ಭುವನವನ್ನೆಲ್ಲಾ ನಾಶಮಾಡುವವನೂ, ಆದ ಮಹೇಶ್ವರನೇ! ನನ್ನಲ್ಲಿ ದಯೆಯನ್ನು ತೋರಿಸೆಂದು, ನವಿಲು ರೂಪಿನಿಂದಿದ್ದ ಪಾರ್ವತೀದೇವಿಯು ಸ್ತೋತ್ರ ಮಾಡಿದಳು. ॥೨೦॥

ಈರೀತಿಯಾಗಿ, ಬ್ರಹ್ಮವನದಲ್ಲಿ ದೇವಿಯಿಂದ ಸ್ತೋತ್ರಮಾಡಲ್ಪಟ್ಟು ಅನುಗ್ರಹಮುಖನಾದ ಐದುಮುಖವುಳ್ಳ ಮಹಾದೇವನು, ಉಮಾದೇವಿಯನ್ನು ಕುರಿತು, ಹೀಗೆ ನುಡಿದನು. ॥೨೧॥

ದೇವಿ, ನನ್ನಿಂದ ಅಭಯಪಡೆದ ನೀನು 'ಅಭಯಾಂಬಿಕಾ' ಎಂಬ ಹೆಸರಿನಿಂದ ನನ್ನ ಉತ್ತರಭಾಗದಲ್ಲಿ ಅಭಯವನ್ನು ಬೀರುವ ದೃಷ್ಟಿಯುಳ್ಳವಳಾಗಿ ನೆಲಸಿ ಇಲ್ಲಿ ವಾಸಮಾಡುತ್ತಾ ಕಾವೇರೀನದಿಯಲ್ಲಿ ತುಂಬಾ ಪ್ರಖ್ಯಾತವಾದ ನನ್ನ ಲಿಂಗದಲ್ಲಿ ಭಕ್ತಿಯುಳ್ಳ ಮಾನವರಿಗೆ ಯಾವಾಗಲೂ ಅಭಯಪ್ರದಾನ ಮಾಡುತ್ತಿರು. ॥೨೨-೨೩॥

ಗೌರಿಯೆನಿಸಿದ ನೀನು ನವಿಲಾಗಿ ನರ್ತನ ಮಾಡಿದುದರಿಂದ ಈ ನನ್ನ ಕ್ಷೇತ್ರವು ಗೌರೀಮಾಯೂರವೆಂಬ ಸಂಜ್ಞೆಯಿಂದ ಪ್ರಖ್ಯಾತವಾಗಲಿ. ಈ ಕ್ಷೇತ್ರದ

ದರ್ಶನಾಚ್ಚ ನಿವಾಸಾಚ್ಚ ಕ್ಷೇತ್ರಂ ಶಂಭೋಃ ಪ್ರಸಾದಕೃತ್ ।
ಪ್ರಾಕ್ಪಶ್ಚಾತ್ಷಣ್ಮುಖೇಭಾಸ್ಯೌ ಕ್ಷೇತ್ರರಕ್ಷಾಕರೌ ಮಮ ॥೧೫॥

ವಸತಾಮತ್ರ ಮಾಯೂರೇ ಭಕ್ತಾನಾಂ ಮುಕ್ತಿರೇವ ಹಿ ।
ಇತ್ಯುಕ್ತ್ವಾ ಬ್ರಹ್ಮವಿಪಿನಾಧೀಶೋ ಮಾಯೂರನಾಯಕಃ ॥೧೬॥

ಅಭವೋ ಭವಸೇವಾತ್ರ ದೇವೀ ತತ್ರಾಭಯಾಂಬಿಕಾ ।
ಜನಾನಾಂ ವಸತಾಮತ್ರ ಪಾಪೇಭ್ಯೋಽಪ್ಯಭಯಂ ಶಿವಾ ॥೧೭॥

ವಿಮುಕ್ತಿಂ ಚ ಪ್ರದಿಶತಿ ಮಾಯೂರೇಶ ಪ್ರಸಾದತಃ ।
ನಾಥಶರ್ಮಾನವದ್ಯಾಖ್ಯೌ ಲಿಂಗೇ ತತ್ರ ಸಮರ್ಚಯನ್ ? ॥೧೮॥

ತೌ ಚ ತುಷ್ಟುವತುಸ್ತತ್ರ ಸ್ಥಾನೇ ತಸ್ಮಿನ್ ಶಿವದ್ವಯಂ ॥೧೯॥

॥ ನಾಥಾನವದ್ಯಾವೂಚತುಃ ॥

ನಮಸ್ತೇ ದೇವಾಯ ಪ್ರಮಥಪತಯೇಽನಂತವಿಭವೇ
ಮಹೇಶಾಯಾದ್ಯಾಯ ಪ್ರಥಿತಯಶಸೇ ದೇವ ಭವತೇ ।

---

ದರ್ಶನದಿಂದಲೂ, ವಾಸದಿಂದಲೂ ಸಹ ಶಂಭುವಿನ ಅನುಗ್ರಹವುಂಟಾಗುವುದು. ಪೂರ್ವ, ಪಶ್ಚಿಮದಿಕ್ಕುಗಳಲ್ಲಿ ಷಣ್ಮುಖನೂ, ಗಜಮುಖನೂ ಈ ನನ್ನ ಕ್ಷೇತ್ರವನ್ನು ರಕ್ಷಣೆಮಾಡುತ್ತಾ ನೆಲಸಿರುವರು. ಈ ಮಾಯೂರಕ್ಷೇತ್ರದಲ್ಲಿ ವಾಸಮಾಡುವ ಭಕ್ತರಿಗೆ ಸಂದೇಹವಿಲ್ಲದೇ ಮುಕ್ತಿಯು ದೊರೆಯುವುದು, ಎಂಬುದಾಗಿ ಬ್ರಹ್ಮವನಾಧೀಶ್ವರನಾದ ಮಾಯೂರನಾಯಕನು ದೇವಿಗೆ ಹೇಳಿದನು. ॥೧೪-೧೫-೧೬॥

ಈ ಕ್ಷೇತ್ರದಲ್ಲಿನ ಭವನ ಸೇವೆಯು ಪುನರ್ಜನ್ಮವಿಲ್ಲದಂತೆ ಮಾಡುವುದು. ಇಲ್ಲಿ ವಾಸಮಾಡುವ ಜನಗಳ ಪಾಪಗಳಿಗೆಲ್ಲಾ ಭಯಪಡಬೇಡಿರೆಂದು ದೇವಿಯು ಅಭಯಕೊಡುತ್ತಿರುವಳು. ಅಲ್ಲದೇ ಆ ಮಾಯೂರೇಶ್ವರನ ಅನುಗ್ರಹದಿಂದ ಮೋಕ್ಷವನ್ನೂ ಕರುಣಿಸುತ್ತಿರುವಳು. ॥೧೭॥

ನಾಥಶರ್ಮ ಮತ್ತು ಅನವದ್ಯಶರ್ಮರೆಂಬ ಹೆಸರುಳ್ಳ ಇಬ್ಬರು ಅಲ್ಲಿ ಎರಡು ಶಿವಲಿಂಗಗಳನ್ನು ಪೂಜಿಸಿ, ಆ ಸ್ಥಾನದಲ್ಲಿಯೇ ಎರಡು ಶಿವಲಿಂಗಗಳನ್ನೂ ಸ್ತೋತ್ರ ಮಾಡಿದರು. ॥೧೮-೧೯॥

ಪ್ರಮಥಗಣಗಳಿಗೆ ಒಡೆಯನೂ, ಅಪಾರ ವೈಭವವುಳ್ಳವನೂ, ಪೂರ್ಣ

ಸದಾ ತ್ರ್ಯಕ್ಷ್ಣಾ ವೀಕ್ಷಾಪ್ರವಿಚಲಿತ ಪಾಪಾಚಲಗಣ ವಿಭೋ
ಗುಣೈಸ್ತ್ವನ್ಯೇನೇಶ ತವ ನ ಗಣಯಾವಃ ಸುರವರಾನ್ ॥೩೦॥

ಇತ್ಥಂ ತತ್ರಾನವದ್ಯೋ ಮುನಿಗಣವಿನುತೋ ನಾಥಶರ್ಮಸ್ತುತೋಽಸೌ
ದೇವೋ ಭಕ್ತವರಾರ್ಥಮುಕ್ತಿಮತುಲಾ ಪ್ರಾದಾದ್ಧೃಣಾಂಭೋನಿಧಿಃ ।
ಮಾಯೂರೇಽತ್ರ ನಿಮಜ್ಜತಾಂ ಜನಿಮತಾಂ ಲಿಂಗಂ ಚ ಸಂವೀಕ್ಷತಾಂ
ಪುಣ್ಯೇಷು ಪ್ರಥಿತೇಷು ಪರ್ವಸು ತುಲಾಸಂಸ್ಥೇರವೌ ವಾ ನಿಶಾಂ ॥೩೧॥

ಕಾವೇರೀಪ್ರಥಿತೋರುಪಾಥಸಿ ವೃಷೇ ತೀರ್ಥೇಽತ್ರ ಸಂಸ್ನಾಸ್ಯತಾಂ
ದೃಕ್ಪೂತೇ ವಿತತೇ ಮಹಾಘಜನತಾಹೃತ್ತಾಪನಾಶಂಕರಃ ।

---

ಐಶ್ವರ್ಯವುಳ್ಳವನೂ, ಆದಿಪುರುಷನೂ; ಪ್ರಖ್ಯಾತವಾದ ಕೀರ್ತಿಯುಳ್ಳವನೂ ಆದ ದೇವನೇ, ನಿನಗೆ ನಮಸ್ಕಾರಮಾಡುತ್ತೇನೆ. ಯಾವಾಗಲೂ ಮೂರುಕಣ್ಣುಗಳ ನೋಟದಿಂದಲೇ ಓಡಿಸಲ್ಪಟ್ಟ ಪಾಪಗಳೆಂಬ ಪರ್ವತಗಳ ಸಮೂಹವುಳ್ಳ ವಿಭುವೇ, ನಿನ್ನಲ್ಲಿರುವ ಸದ್ಗುಣಗಳನ್ನು ನೋಡಿ, ಇತರ ದೇವತೆಗಳಲ್ಲಿ ಶ್ರೇಷ್ಠರಾದರೂ ಆ ವಿಷ್ಣ್ವಾದಿಗಳನ್ನು ನಿನಗೆ ಸಮರೆಂದು ನಾವು ಗಣನೆಮಾಡುವುದಿಲ್ಲ, ಎಂದು ನಾಥಶರ್ಮ, ಅನವದ್ಯಶರ್ಮರು ಸ್ತುತಿಸಿದರು. ॥೩೦॥

ಹೀಗೆ ಮುನಿಗಣಗಳಿಂದ ಸ್ತುತಿಸಲ್ಪಟ್ಟವನೂ, ಅನವದ್ಯ ಮತ್ತು ನಾಥಶರ್ಮ ಇವರಿಂದ ಪ್ರಾರ್ಥಿಸಲ್ಪಟ್ಟವನೂ ಆ ದಯಾನಿಧಿಯೂ ಆದ ಮಹಾದೇವನು, ತನ್ನ ಭಕ್ತಶ್ರೇಷ್ಠರಿಗೆ, ಸಾಮ್ಯವಿಲ್ಲದ ಮೋಕ್ಷವನ್ನು ಕರುಣಿಸಿದನು. ಈ ಮಾಯೂರ ಕ್ಷೇತ್ರದಲ್ಲಿ ಸ್ನಾನಮಾಡಿ, ಶಿವಲಿಂಗವನ್ನು ದರ್ಶನಮಾಡುವ ಮಾನವರಿಗೆ (ಪ್ರಾಣಿಗಳಿಗೆ)ಮಹಾದೇವನು ಮೋಕ್ಷವನ್ನು ಕೊಡುವನು. ವಿಶೇಷವಾಗಿ, ಪುಣ್ಯಕಾಲಗಳೆಂದು ಪ್ರಖ್ಯಾತವಾದ ಎಲ್ಲಾ ಕಾಲಗಳಲ್ಲಿಯೂ, ಸೂರ್ಯನು ತುಲಾರಾಶಿಯಲ್ಲಿರುವಾಗಲೂ (ಹಗಲಾಗಲಿ, ರಾತ್ರಿಯಾಗಲೀ) ಆ ತೀರ್ಥದಲ್ಲಿ ಸ್ನಾನಮಾಡಿ, ಮಾಯೂರಕೇಶನ ಲಿಂಗವನ್ನು ದರ್ಶನಮಾಡುವವರಿಗೆ ಮೋಕ್ಷವು ದೊರೆಯುವುದು. ॥೩೧॥

ಪರಶಿವನ ಆದರಪೂರ್ವಕವಾದ ದೃಷ್ಟಿಯಿಂದ ಪವಿತ್ರವಾಗಿರುವ, ವಿಸ್ತಾರವಾದ ಕಾವೇರಿಯ ನೀರಿನಲ್ಲಿ ಹೆಚ್ಚು ಪ್ರಖ್ಯಾತವಾದ ವೃಷತೀರ್ಥದಲ್ಲಿ ಸ್ನಾನಮಾಡುವ ಮಾನವರ ಮಹಾಪಾಪಗಳ ಸಮೂಹರೂಪವಾದ ಮನಸ್ಸಿನ ತಾಪವನ್ನು

ದೇವಃ ಶಂಕರಏವ ತತ್ರ ವಸತಾಂ ಮುಕ್ತಿಂ ದದಾತ್ಯಾದರಾತ್
ಆರಾದೇವ ಶಿವಸ್ಯ ಲೋಕಮುಥವ್ಯೈಸ್ಥಾನಂ ಚ ಸೇವ್ಯಂ ಚ ತೈಃ ॥೩೨॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಗೌರೀಮಾಯೂರ
ಕ್ಷೇತ್ರವರ್ಣನಂ ನಾಮ ಸಪ್ತವಿಂಶೋಽಧ್ಯಾಯಃ

---

ಆ ಶಂಕರನು ಪರಿಹಾರಮಾಡುತ್ತಿರುವನು. ಅಲ್ಲದೇ ಶಂಕರನೇ ತನ್ನ ಆ ಕ್ಷೇತ್ರದಲ್ಲಿ ವಾಸಮಾಡುವವರಿಗೆ ಆದರದಿಂದ ಜಾಗ್ರತೆಯಾಗಿ ಮೋಕ್ಷವನ್ನು ಕೊಡುತ್ತಾನೆ. ಆದ್ದರಿಂದ ಉತ್ತಮವಾದ ಶಿವಲೋಕವನ್ನಪೇಕ್ಷಿಸುವವರು, ಶಿವಸ್ಥಾನವನ್ನು ತಪ್ಪದೇ ಸೇವಿಸಬೇಕು. ॥೩೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಗೌರೀಮಾಯೂರಕ್ಷೇತ್ರವೈಭವವರ್ಣನೆಯೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಅಷ್ಟವಿಂಶೋಽಧ್ಯಾಯಃ

|| ಸ್ಕಂದ ಉವಾಚ ||

ಜಿತಮುಕ್ತಿಪ್ರದಸ್ಥಾನಂ ಶ್ರೀವಾಂಛಾ ಪುಣ್ಯವರ್ಧನಂ ।
ಪಾಪಂ ಚ ನಾಶಮಾಪ್ನೋತಿ ಕೃತಪುಣ್ಯಂ ವಿವರ್ಧತೇ ॥೧॥

ತತ್ರ ಪಂಚಾಕ್ಷರಂ ಕರ್ಣೇ ಸತಾರಂ ಪ್ರದಿಶೇದ್ಧರಃ ।
ವಸತಾಂ ತತ್ಸ್ಥಲೇ ದೇವೋ ಮರಣಾವಸರೇ ಮುನೇ ॥೨॥

ಭೈರವೋಽಪಿ ಚ ತತ್ರಾಸ್ತೇ ನಿರ್ವ್ಯಾಪಾರೋಽಥ ಶಿಕ್ಷಿತುಂ ।
ದಂಡಂ ಪುರೋ ನಿಧಾಯೈವ ಧ್ಯಾಯನ್ನಾಸ್ತೇ ಮಹೇಶ್ವರಂ ॥೩॥

---

## ಇಪ್ಪತ್ತೆಂಟನೆಯ ಅಧ್ಯಾಯ

ಸ್ಕಂದಸ್ವಾಮಿಯು ಶಿವಕ್ಷೇತ್ರವೈಭವವನ್ನು ಮುಂದುವರಿಸುತ್ತಾ ಹೀಗೆಂದನು. ಓ ಜೈಗೀಷವ್ಯಮುನಿಯೇ, ಐಶ್ವರ್ಯ, ಇಷ್ಟಾರ್ಥ ಮತ್ತು ಪುಣ್ಯ ಇವುಗಳನ್ನು ಹೆಚ್ಚಿಸುವುದೂ, ಭಕ್ತಿಯಿಂದ ತನ್ನನ್ನು ಭಜಿಸುವವರಿಗೆ ಮುಕ್ತಿಪ್ರದವೂ ಆಗಿರುವ ಶ್ರೀ ವಾಂಛೇಶ್ವರಸ್ಥಾನವಿರುವುದು. ಆ ಕ್ಷೇತ್ರಮಹಿಮೆಯಿಂದ ಪಾಪವೆಲ್ಲವೂ ನಾಶವಾಗುವುದಲ್ಲದೇ ಮಾಡಿದ ಪುಣ್ಯವು ಹೆಚ್ಚುವುದು. ಆ ಕ್ಷೇತ್ರದಲ್ಲಿ ಪ್ರಣವಸಮೇತವಾದ ಪಂಚಾಕ್ಷರಮಂತ್ರವನ್ನು, ತನ್ನ ಸ್ಥಳದಲ್ಲಿ ವಾಸಮಾಡುವವರಿಗೆ ಮರಣಸಮಯದಲ್ಲಿ ಪರಶಿವನು ಕಿವಿಯಲ್ಲಿ ಉಪದೇಶಮಾಡುತ್ತಾನೆ. ||೧-೨||

ಆ ಕ್ಷೇತ್ರದಲ್ಲಿ ಭೈರವನು ಶಿಕ್ಷೆಮಾಡಲು ಯಾರೂ ಇಲ್ಲದಿರುವುದರಿಂದ ಏನೂ ಕೆಲಸವಿಲ್ಲದೇ ದೊಣ್ಣೆಯನ್ನು ತನ್ನ ಮುಂದೆ ಇಟ್ಟುಕೊಂಡು, ಆ ಮಹೇಶ್ವರ

ಆನಂದಭೈರವೋ ನಾಮ್ನಾ ಶ್ರೀವಾಂಛಾಕ್ಷೇತ್ರರಕ್ಷಕಃ ।
ಶಿವಕ್ಷೇತ್ರಮೃತಾನಾಂ ತು ನ ಯಮೋ ಯಮಕಿಂಕರಾಃ ॥೪॥

ಪ್ರಪೀಡಯಂತಿ ಚ ನರಾನ್ಪಾಪಾನಪಿ ದಿಶೋಽಭಿತಃ ।
ತೇಷು ಪಾಪಿಷು ಶಿಕ್ಷಾಯೈ ಭೈರವಃ ಸ ನಿಯೋಜಿತಃ ॥೫॥

ಶಿವೇನ ಸರ್ವಕ್ಷೇತ್ರೇಷು ಕಾಶ್ಯಾಂ ಶ್ರೀಕಾಲಭೈರವಃ ।
ತಸ್ಮಾತ್ಕಾಶ್ಯಧಿಕಂ ಕ್ಷೇತ್ರಂ ನಾತ್ರ ಭೈರವಯಾತನಾ ॥೬॥

ಶ್ರೀವಾಂಛೇಶಪ್ರಸಾದೇನ ಪಾಪನಾಶೋ ನೃಣಾಮಿಹ ।
ಕುರ್ವತಾಂ ಪುಣ್ಯಜಾಲಂ ಹಿ ವರ್ಧತೇಽತ್ರ ಪದೇಪದೇ ॥೭॥

ತಸ್ಮಾದ್ವ್ಯಾಪಾರರಹಿತಃ ಸಮಾಸೀನೋಽತ್ರ ಭೈರವಃ ॥೮॥

ಶ್ರೀವಾಂಛೇಶೋತ್ತರೇ ತೀರ್ಥಂ ಗುಪ್ತಗಂಗಾಖ್ಯಮುತ್ತಮಂ ।
ಗಂಗಾದ್ಯಾಃ ಸಕಲಾನದ್ಯಃ ತೀರ್ಥೇ ಸನ್ನಿಹಿತಾಃ ಸದಾ ॥೯॥

---

ನನ್ನು ಧ್ಯಾನಿಸುತ್ತಿರುವನು. ಶ್ರೀವಾಂಛಾಕ್ಷೇತ್ರರಕ್ಷಕನು ಆನಂದಭೈರವನೆಂಬ ಹೆಸರಿನಿಂದ ನೆಲಸಿರುವನು. ಶಿವಕ್ಷೇತ್ರಗಳಲ್ಲಿ ಮರಣಹೊಂದಿದವರಿಗೆ ಯಮಭಯ ವಿಲ್ಲ. ಒಂದುವೇಳೆ ಅವರು ಪಾಪಿಗಳೇ ಆಗಿದ್ದರೂ ಅವರನ್ನು ಯಮನಾಗಲೀ, ಯಮಭಟರಾಗಲೀ ಪೀಡಿಸುವುದಿಲ್ಲ. ಆ ಪಾಪಿಗಳಿಗೆ ಶಿಕ್ಷೆ ಮಾಡುವುದ ಕ್ಕೋಸ್ಕರವೇ ಭೈರವನು ಮಹೇಶನಿಂದ ನಿಯಮಿಸಲ್ಪಟ್ಟಿರುವನು. ॥೩-೪-೫॥

ಪರಶಿವನಿಂದ ಎಲ್ಲಾ ಕ್ಷೇತ್ರಗಳಲ್ಲಿಯೂ ಶಿಷ್ಟ ರಕ್ಷಣೆಗೋಸ್ಕರ ಭೈರವನು ನಿಯಮಿಸಲ್ಪಟ್ಟಿರುವನು. ಕಾಶಿಯಲ್ಲಿ ಕಾಲಭೈರವನು ಕಾಶೀಕ್ಷೇತ್ರರಕ್ಷಣೆಗೆ ನಿಯಮಿತನಾಗಿರುವನು. ಆದ್ದರಿಂದಲೇ ಕಾಶಿಯು ಶ್ರೇಷ್ಠವಾದ ಕ್ಷೇತ್ರವೆನಿಸಿರು ವುದು. ಆ ಕಾಶಿಯಲ್ಲಿ ವಾಸಿಸುವವರಿಗೆ ಭಯಂಕರವಾದ ಯಮಯಾತನೆಗಳಿಲ್ಲ. ಇಲ್ಲಿಯಾದರೋ ಶ್ರೀವಾಂಛೇಶ್ವರನ ಅನುಗ್ರಹದಿಂದ ಪಾಪವು ನಾಶವಾಗುತ್ತಿರು ವುದು. ಹೆಜ್ಜೆಹೆಜ್ಜೆಗೂ ಶಿವನ ಸೇವೆಗಳನ್ನು ಮಾಡುವವರಿಗೆ ಪುಣ್ಯರಾಶಿಯು ಹೆಚ್ಚುತ್ತಿರುವುದು. ॥೬-೭॥

ಆದ್ದರಿಂದಲೇ ಭೈರವನು ಇಲ್ಲಿ ಏನೂ ಕೆಲಸವಿಲ್ಲದೇ ಸುಮ್ಮನೆ ನಿಂತಿರು ವನು. ಶ್ರೀವಾಂಛೇಶ್ವರಕ್ಷೇತ್ರಕ್ಕೆ ಉತ್ತರದಲ್ಲಿ ಗುಪ್ತಗಂಗಾಸಂಜ್ಞಕವಾದ ಒಂದು

ತತ್ರ ಸ್ನಾತ್ವಾ ನಗೇ ದೃಷ್ಟ್ವಾ ಶ್ರೀವಾಂಛೀಶಂ ವಿಮುಕ್ತಿಭಾಕ್ ।
ಶ್ರಿಯಂ ವಾಂಛನ್ಹರಿಃ ಪೂರ್ವಂ ತಪಸಾತೋಷ್ಯ ಶಂಕರಂ ॥೧೦॥

ಶ್ರಿಯಂ ಲೇಭೇ ವರಾನ್ವಿಷ್ಣುರ್ದೈತ್ಯಾನಾಂ ಚ ವಶಂಗತಾಂ ।
ತಥಾ ಶ್ರೀವಾಂಛನಾಥಂ ವೈ ಸಮಭ್ಯರ್ಚ್ಯಾಸ್ತುವದ್ಧರಿಃ ॥೧೧॥

॥ ವಿಷ್ಣುರುವಾಚ ॥

ಜಯದೇವ ಮಹೇಶ ಶಂಕರ
ತ್ರಿದಶಾನಾಮಧಿಪಾತ್ರ ಮೇ ಶರಣ್ಯ ।
ಗರಧಾರಿನ್ಸ್ವಗಣಾಧಿಪ ಮೌಳೇ
ಸತತಂ ಮಮ ಮಂಗಳಂ ಕುರು ಅಂಬಿಕಾಪತೇ ॥೧೨॥

ಇತ್ಥಂ ಸ್ತುವನ್ಮಹೇಶಾನಂ ಶ್ರೀವಾಂಛೀಶಂ ಶ್ರಿಯಃಪತಿಃ ।
ಶ್ರೀವಾಂಛಿತೇ ಶ್ರಿಯಃ ಪಾಣಿಮಗ್ರಹೀಚ್ಛಂಕರೇರಿತಃ ॥೧೩॥

---

ಉತ್ತಮ ತೀರ್ಥವಿರುವುದು. ಗಂಗೆಯೇ ಮೊದಲಾದ ಎಲ್ಲಾ ನದಿಗಳೂ ಇದರಲ್ಲಿ ಯಾವಾಗಲೂ ಅಡಗಿರುವುವು. ಈ ತೀರ್ಥದಲ್ಲಿ ಸ್ನಾನಮಾಡಿ, ಪರ್ವತದಲ್ಲಿರುವ ಶ್ರೀ ವಾಂಛೀಶ್ವರನನ್ನು ದರ್ಶನಮಾಡುವವನು ಮೋಕ್ಷವನ್ನೈದುವನು. ॥೮-೯॥

ಹಿಂದೆ ವಿಷ್ಣುವು ಲಕ್ಷ್ಮಿಯನ್ನಪೇಕ್ಷಿಸಿ ಈ ಕ್ಷೇತ್ರದಲ್ಲಿ ಶಂಕರನನ್ನುದ್ದೇಶಿಸಿ ತಪಸ್ಸುಮಾಡಿ, ಅದರಿಂದ ಶಂಕರನನ್ನು ಸಂತೋಷಪಡಿಸಿ, ರಾಕ್ಷಸರ ಅಧೀನವಾಗಿದ್ದ ಲಕ್ಷ್ಮಿಯನ್ನು ಪಡೆದನು. ಹಾಗೆಯೇ ಶ್ರೀವಾಂಛನಾಥನನ್ನೂ ಪೂಜಿಸಿ ಇಂತು ಸ್ತೋತ್ರಮಾಡಿದನು. ॥೧೦-೧೧॥

ಸಂಪೂರ್ಣವಾದ ಐಶ್ವರ್ಯಶಾಲಿಯೂ, ಜಗನ್ಮಂಗಳಕರನೂ, ದೇವತೆಗಳನ್ನು ಕಾಪಾಡುವವನೂ, ಶಿವಕ್ಷೇತ್ರವಾಸಿಗಳಿಗೆ ರಕ್ಷಣೆಯನ್ನಿತ್ತು ಪಾಲಿಸುವವನೂ, ಆದ ದೇವನೇ! ನಿನಗೆ ಜಯವಾಗಲಿ; ವಿಷಕಂಠನೂ, ಚಂದ್ರಮೌಳಿಯೂ ಆದ ಅಂಬಿಕಾರಮಣನೇ! ನನಗೆ ಯಾವಾಗಲೂ ಮಂಗಳವನ್ನುಂಟುಮಾಡು, ಎಂದು ವಿಷ್ಣುವು ಸ್ತೋತ್ರಮಾಡಿದನು. ॥೧೨॥

ಆ ಲಕ್ಷ್ಮೀಕಾಂತನಾದ ವಿಷ್ಣುವು ಶ್ರೀವಾಂಛೀಶ್ವರನನ್ನು ಇಂತು ಸ್ತೋತ್ರಮಾಡಿ ಶ್ರೀವಾಂಛಿಶಕ್ಷೇತ್ರದಲ್ಲಿ ಶಂಕರನಿಂದ ಪ್ರೇರಿತನಾಗಿ ಪುನಃ ಲಕ್ಷ್ಮಿಯ

ತತ್ರೈವ ಸನ್ನಿಧೌ ಶಂಭೋಃ ಶ್ಮಶಾನಂ ನಿತ್ಯದೀಪಿತಂ ।
ತಜ್ಜ್ವಾಲಪ್ರಭಯಾ ಶಂಭೋರ್ನೀರಾಜನವಿಧಿರ್ಭವೇತ್ ॥೧೪॥

ತತ್ರ ಸಂವಸತಾಂ ಪುಂಸಾಂ ದೇಹಾಂತೇ ಪರಮೇಶ್ವರಃ ।
ಸವ್ಯೇತರೇಽಂತಃ ಶ್ರವಣೇ ದದ್ಯಾತ್ಪಂಚಾಕ್ಷರಂ ಮನುಂ ॥೧೫॥

ತೇನ ಮುಕ್ತೋ ಭವೇದೇವ ನ ಸ ಭೂಯೋ ಭವೇಭವೇತ್ ।
ತದೀಶಾನ್ಯಾಂ ತೇಜನೀಶಂ ವಿಷ್ಣುನಾ ಪರಿಪೂಜಿತಂ ॥೧೬॥

ಸ್ಥಾಣುಂ ನತ್ವಾ ವರಂ ಶಂಭೋರ್ಭುಕ್ತಿಮುಕ್ತಿಪ್ರದಾಯಕಂ ।
ವಿಷ್ಣುರಾರಾಧ್ಯ ತತ್ರೈವ ಚಕ್ರಂ ಲೇಭೇ ಸುದರ್ಶನಂ ॥೧೭॥

ತೇಜನೀಶಪ್ರಸಾದೇನ ದೈತ್ಯದಾನವದರ್ಪಹಂ ।
ಧ್ವಸ್ತಾಕರಂ ಸರಃ ಕೃತ್ವಾ ತ್ರಿವೇಣೀಸಂಗಮೇ ಹರಿಃ ॥೧೮॥

---

ಪಾಣಿಗ್ರಹಣಮಾಡಿಕೊಂಡನು. ಶಂಭುವಿನ ಸನ್ನಿಧಿಯಲ್ಲಿಯೇ ನಿತ್ಯವೂ ಉರಿಯುತ್ತಿರುವ ಸ್ಮಶಾನವಿರುವುದು. ಆ ಸ್ಮಶಾನದಲ್ಲಿ ಉರಿಯುವ ಬೆಂಕಿಯ ಜ್ವಾಲೆಯ ಕಾಂತಿಯಿಂದಲೇ ಶಂಭುವಿಗೆ ನೀರಾಜನವಿಧಿಯು ನಡೆಯುತ್ತಿರುವುದು. ॥೧೩-೧೪॥

ಆ ಸ್ಥಾನದಲ್ಲಿ ವಾಸಮಾಡುವ ಪುರುಷರಿಗೆ ಶ್ರೀ ಪರಮೇಶ್ವರನು ಶರೀರಾವಸಾನಸಮಯದಲ್ಲಿ ಎಡಗಿವಿಯ ಮಧ್ಯದಲ್ಲಿ ಪಂಚಾಕ್ಷರಮಂತ್ರವನ್ನು ಉಪದೇಶಿಸುತ್ತಾನೆ. ಈ ಮಂತ್ರಪ್ರಭಾವದಿಂದ ಅವನು ಮುಕ್ತನಾಗುವುದಲ್ಲದೇ ಅವನಿಗೆ ಪುನರ್ಜನ್ಮವೇ ಉಂಟಾಗುವುದಿಲ್ಲ. ಅಲ್ಲಿಂದ ಈಶಾನ್ಯದಿಕ್ಕಿನಲ್ಲಿ ವಿಷ್ಣುವಿನಿಂದ ಪೂಜಿಸಲ್ಪಟ್ಟ ತೇಜನೀಶ್ವರ ಕ್ಷೇತ್ರವಿರುವುದು. ॥೧೫-೧೬॥

ಆ ಸ್ಥಾಣುವಿಗೆ ನಮಸ್ಕಾರಮಾಡಿ, ಇಹಪರಭೋಗದಲ್ಲಿ ಮುಕ್ತಿರೂಪವಾದ ಫಲವನ್ನು ಕೊಡುವ ಶಂಕರನನ್ನು ಪೂಜಿಸಿ, ಆ ವಿಷ್ಣುವು ದೈತ್ಯ ಮತ್ತು ದಾನವರೆಂಬ ರಾಕ್ಷಸರ ಅಹಂಕಾರವನ್ನಡಗಿಸುವ ಸುದರ್ಶನವೆಂಬ ಚಕ್ರವನ್ನು ತೇಜನೀಶನ ಅನುಗ್ರಹದಿಂದ ಪಡೆದನು. ವಿಷ್ಣುವು ತ್ರಿವೇಣಿಸಂಗಮಸ್ಥಳದಲ್ಲಿ ಧ್ವಸ್ತಾಕರವೆಂಬ ಸರೋವರವನ್ನು ರಚಿಸಿದನು. ॥೧೭-೧೮॥

ಆಹೂತವಾನ್ ಸುಕಾವೇರೀಂ ಹರಿಃ ಶಂಭ್ವಭಿಷೇಚನೇ ।
ಹರಿಶ್ವಸೇತಿ ತತ್ರಾಗಾತ್ಸಮ್ಮುಖೇನೈಕೇನ ಸಹ್ಯಜಾ ॥೧೯॥

ತಸ್ಯಾಂ ಕೃತ್ವಾ ಚ ತಚ್ಛಂಭೋಸ್ತೇಜನೀಶಾಭಿಷೇಚನಂ ।
ಚಕಾರ ಪಂಚಗವ್ಯೇನ ಹರಿಃ ಪಂಚಫಲೀರಸೈಃ ॥೨೦॥

ಗಂಧೈಃ ಪುಷ್ಪೈಶ್ಚ ವಾಸೋಭಿರ್ಬಿಲ್ವಮಂದಾರಕಾಂಬುಜೈಃ ।
ಧೂಪೈರ್ದೀಪೈಶ್ಚ ನೈವೇದ್ಯೈಃ ಪ್ರದಕ್ಷಿಣನತಿಸ್ತವೈಃ ॥೨೧॥

ತುಷ್ಟಾವ ತೇಜನೀನಾಥಂ ಹರಿಸ್ತು ಪುಷ್ಪಸೌರಭೈಃ ॥೨೨॥

॥ ವಿಷ್ಣುರುವಾಚ ॥

ಜಯ ಜಯ ದೇವ ವಿಭೋಽವ ಕಪರ್ದಿನ್
ರಾಜದ್ದ್ವಿಜರಾಜಸುಗಂಗೋತ್ತುಂಗಮೌಳೇ ।
ಧೃತಶರ ಕುರಂಗ ತುರಂಗ ವೇದವನ
ಸಾರಣ್ಯವಕೇ ನಮೋಽಸ್ತು ತೇಜನೀಶ ॥೨೩॥

---

ಅನಂತರ ಆ ಸರೋವರಕ್ಕೆ ಕಾವೇರೀನದಿಯನ್ನು ಬಂದು ಸೇರುವಂತೆ ಕರೆದನು. ಶಂಭುವಿನ ಅಭಿಷೇಕಕ್ಕೋಸ್ಕರ ನೀರನ್ನಪೇಕ್ಷಿಸಿ ಕರೆಯಲ್ಪಟ್ಟ ಕಾವೇರಿಯು ಆ ವಿಷ್ಣುವಿನ ಮಾತಿನಂತೆ, ಹರಿಶ್ವಸಾ ಎಂಬ ನಾಮದಿಂದ ಒಮ್ಮುಖವಾಗಿ ಬಂದಳು. ಆಮೇಲೆ ವಿಷ್ಣುವು ಆ ನೀರಿನಿಂದ ತೇಜನೀಶನಿಗೆ ಅಭಿಷೇಕ ಮಾಡಿದನು. ಅನಂತರ ಪಂಚಗವ್ಯಗಳಿಂದಲೂ (ಹಾಲು, ಮೊಸರು, ತುಪ್ಪ ಮುಂತಾದವುಗಳಿಂದ) ಐದು ಹಣ್ಣಿನ ರಸಗಳಿಂದಲೂ ಅಭಿಷೇಕಮಾಡಿದನು. ಹಾಗೆಯೇ ಗಂಧ, ಹೂ, ಬಟ್ಟೆ, ಬಿಲ್ವ, ಪಾರಿಜಾತ ಹೂ, ತಾವರೆ ಹೂ, ಮುಂತಾದವುಗಳಿಂದ ಸೇವಿಸಿ, ಧೂಪ, ದೀಪ, ನೈವೇದ್ಯಗಳನ್ನು ಸಮರ್ಪಣೆಮಾಡಿ, ಪ್ರದಕ್ಷಿಣೆ ನಮಸ್ಕಾರ, ಸ್ತೋತ್ರಗಳಿಂದ ಆ ಮಹಾದೇವನನ್ನು ಸಂತೋಷಪಡಿಸಿದನು. ಆಮೇಲೆ ಹೂವಿನಂತೆ ಸಾರಭೂತವೂ, ಮೃದುವೂ ಆದ ವಚನಗಳಿಂದ ಆ ತೇಜನೀನಾಥನನ್ನು ಸ್ತೋತ್ರಮಾಡಿದನು. ॥೧೯-೨೦-೨೧-೨೨॥

ಜಟಾಧಾರಿಯಾದ ದೇವನೇ, ನಿನಗೆ ಜಯವಾಗಲಿ, ಶೋಭಿಸುತ್ತಿರುವ ಚಂದ್ರ ಮತ್ತು ದೇವಗಂಗಾನದಿಗಳನ್ನು ಎತ್ತರವಾದ ತಲೆಯಲ್ಲಿ ಧರಿಸಿರುವವನೇ,

ಇತ್ಥಂ ತತ್ಸ್ತುತಿಸ್ತುಷ್ಟಾತ್ಮಾ ತಸ್ಮೈ ಚಕ್ರಂ ಸುದರ್ಶನಂ ।
ದದೌ ಸ ಹರಯೇ ತತ್ರ ಸ್ವನೇತ್ರಾಂಬುಜಪೂಜನಾತ್ ॥೨೪॥

ತೇನ ದೈತ್ಯಾ ಹತಾಶ್ಚಾಜೌ ಲಿಂಗೇ ವಿಷ್ಣುಃ ಶಿವಾರ್ಚನಾತ್ ।
ಕಾತ್ಯಾಯನೀಪರಿಣಯಂ ತತ್ರ ಚಕ್ರೇ ಮಹೇಶ್ವರಃ ॥೨೫॥

ಪುರೂರವಾ ಮಹೇಶಸ್ಯ ಚಕ್ರೇ ಕೈಂಕರ್ಯಮದ್ಭುತಂ ।
ಪ್ರಾಕಾರಂ ಗೋಪುರಂ ಶಂಭೋಸ್ತಸ್ಮೈ ಮುಕ್ತಿಮದಾಚ್ಛಿವಃ ॥೨೬॥

ಪುರೂರವಾಃ ಪ್ರತುಷ್ಟಾವ ದೇವಂ ಶ್ರೀ ತೇಜನೀಶ್ವರಂ ॥೨೭॥

॥ ಪುರೂರವಾ ಉವಾಚ ॥

ಆಕಾಶವಾಸ ಭಗವನ್ನವ ಮಾಂ ಮಹೇಶ
ಶ್ರೀವ್ಯೋಮಕೇಶ ಭವಭೂತಪತೇ ಪಿನಾಕಿನ್ ।

---

ಶೂಲ ಮತ್ತು ಜಿಂಕೆಗಳನ್ನು ಕೈಯಲ್ಲಿ ಹಿಡಿದು ಪ್ರಕಾಶಿಸುತ್ತಿರುವ ವೇದಾರಣ್ಯವನಾಧೀಶ್ವರನಾದ ತೇಜನೀಶ್ವರನೇ, ನಿನಗೆ ಪ್ರಣಾಮಮಾಡುವೆನು ಎಂದು ವಿಷ್ಣುವು ಸ್ತೋತ್ರಮಾಡಿದನು. ॥೨೩॥

ಹೀಗೆ ವಿಷ್ಣುವಿನ ಸ್ತೋತ್ರದಿಂದ ಸಂತುಷ್ಟಾಂತರಂಗನಾಗಿ, ಮಹೇಶ್ವರನು, ತನಗೆ ತನ್ನ ನೇತ್ರಕಮಲವನ್ನೇ ಭಕ್ತಿಯಿಂದ ಪೂಜೆಮಾಡಿದುದರಿಂದ ಸುದರ್ಶನನೆಂಬ ಚಕ್ರವನ್ನು ದಯಪಾಲಿಸಿದನು. ಹೀಗೆ ವಿಷ್ಣುವು ಲಿಂಗದಲ್ಲಿ ಶಿವನನ್ನು ಪೂಜಿಸಿ ಪಡೆದ ಚಕ್ರದಿಂದ ಯುದ್ಧದಲ್ಲಿ ದೈತ್ಯರನ್ನು ಸಂಹಾರಮಾಡಿದನು. ಆ ಮಹೇಶ್ವರನು ಅಲ್ಲಿ ಕಾತ್ಯಾಯನೀದೇವಿಯೊಡನೆ ವಿವಾಹಮಾಡಿಕೊಂಡನು. ॥೨೪-೨೫॥

ಪುರೂರವನು ಮಹೇಶ್ವರನಿಗೆ ಅದ್ಭುತವಾದ ಸೇವೆಯನ್ನು ಅಲ್ಲಿ ಸಲ್ಲಿಸಿದನು. ಅವನು ಆ ಶಂಭುವಿಗೆ ಪ್ರಾಕಾರ ಮತ್ತು ಗೋಪುರಗಳನ್ನು ಕಟ್ಟಿಸಿದನು. ಅದರಿಂದ ಪರಶಿವನು ಸಂತುಷ್ಟನಾಗಿ ಆ ಪುರೂರವನಿಗೆ ಮೋಕ್ಷವನ್ನು ಕೊಟ್ಟನು. ಆಗ ಆ ಪುರೂರವನು ಶ್ರೀತೇಜನೀಶ್ವರಸಂಜ್ಞಕನಾದ ಮಹಾದೇವನನ್ನು ಇಂತು ಸ್ತೋತ್ರಮಾಡಿದನು. ॥೨೬-೨೭॥

ಆಕಾಶವನ್ನೇ ಬಟ್ಟೆಯಾಗುಳ್ಳವನೂ, ಭಗವಂತನೂ, ಆದ ಮಹೇಶನೇ! ವ್ಯೋಮಕೇಶನೂ, ಭವನೂ, ಭೂತಗಳಿಗೆಲ್ಲಾ ಒಡೆಯನೂ, ಪಿನಾಕವೆಂಬ ಬಿಲ್ಲನ್ನು

ಭಕ್ತಪ್ರಿಯಾಂತಕ ವಿನಾಯಕ ಪೂಜ್ಯಪಾದ
ವೇದಸ್ತುತಾದ್ಯ ಭಗವನ್ನಿವ ತೇಜನೀಶ ॥೨೮॥

ಶಿಬಿಸ್ತತ್ರಾರ್ಚಯಾಮಾಸ ತೇಜನೀಶಂ ಮಹೇಶ್ವರಂ ।
ಭಕ್ತ್ಯಾ ಪರಮಯಾ ಯುಕ್ತೋ ಸ್ತೌತಿ ದೇವಂ ಸ ಭೂಪತಿಃ ॥೨೯॥

॥ ಶಿಬಿರುವಾಚ ॥

ಗಂಗಾಧರಾಂತಕರಿಪೋ ಪ್ರಮಥಾಧಿನಾಥ
ವಿಶ್ವೋದ್ಭವಸ್ಥಿತಿವಿನಾಶನ ಕಾಮನಾಶ ।
ಪಾಹೀಶ ಮಾಂ ಕರುಣಯಾ ಧೃತಸಾಮಿಸೋಮ
ಶ್ರೀತೇಜನೀಶ ಗರಭೃತ್ಸತತಂ ನಮಸ್ತೇ ॥೩೦॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ತೇ ತೇಜನೀಶಂ ಹರಿನೃಪತಿವರಾಃ ಪೂಜಯಿತ್ವಾಥ ನತ್ವಾ
ಸ್ವಂ ಸ್ವಂ ಧಾಮಮಹಾದ್ಭುತಂ ನೃಪತಯಃ ಸಂಲೇಭಿರೇ ತತ್ರ ವೈ ।

---

ಹಿಡಿದಿರುವವನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ, ಯಮನನ್ನು ನಿಗ್ರಹಿಸಿದವನೂ, ಪೂಜ್ಯವಾದ ಪಾದವುಳ್ಳವನೂ, ವೇದಗಳಿಂದ ಸ್ತೋತ್ರಮಾಡಲ್ಪಟ್ಟವನೂ, ಷಡ್ಗುಣೈಶ್ವರ್ಯಭರಿತನೂ, ಆದ ತೇಜನೀಶನೇ! ಯೋಗಿಮನನಿವಾಸಿಯಾದ ನೀನು ನನ್ನನ್ನು ಕಾಪಾಡು, ಎಂದು ಪುರೂರವನು ಸ್ತೋತ್ರಮಾಡಿದನು. ॥೨೮॥

ಶಿಬಿಚಕ್ರವರ್ತಿಯೂ ಮಹೇಶ್ವರನಾದ ಆ ತೇಜನೀಶನನ್ನು ಅತ್ಯಂತ ಭಕ್ತಿಯಿಂದ ಪೂಜಿಸಿ, ಸ್ತೋತ್ರಮಾಡಿದನು. ॥೨೯॥

ಗಂಗೆಯನ್ನು ತಲೆಯಲ್ಲಿ ಧರಿಸಿದವನೂ, ಯಮಾಂತಕನೂ, ಪ್ರಮಥಗಣಗಳಿಗೆ ಒಡೆಯನೂ, ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣಭೂತನೂ, ಮನ್ಮಥನನ್ನು ನಾಶಮಾಡಿದವನೂ, ಅರ್ಧಚಂದ್ರ ಕಿರೀಟಿಯೂ, ವಿಷವನ್ನು ಕಂಠದಲ್ಲಿ ಧರಿಸಿರುವವನೂ, ಆದ ತೇಜನೀಶ್ವರ ದೇವನೇ! ನಿನಗೆ ನಮಸ್ಕಾರ ಮಾಡುವೆನು, ದಯವಿಟ್ಟು ನನ್ನನ್ನು ಪಾಲಿಸೆಂದು ಶಿಬಿಚಕ್ರವರ್ತಿಯು ತೇಜನೀಶ್ವರನನ್ನು ಸ್ತೋತ್ರಮಾಡಿದನು. ॥೩೦॥

ಹೀಗೆ ವಿಷ್ಣು, ಪುರೂರವ, ಮತ್ತು ಶಿಬಿಗಳೆಂಬ ಚಕ್ರವರ್ತಿಗಳು ಆ ತೇಜನೀಶ್ವರನನ್ನು ಪೂಜಿಸಿ, ನಮಸ್ಕಾರಮಾಡಿ, ಸ್ತುತಿಸಿ, ಅಲ್ಲಿ ತಮ್ಮ ತಮ್ಮ

ತಸ್ಮಾತ್ಸ್ಥಾನವರಂ ನಿಷೇವ್ಯ ನಗಜಾ ಕಾಂತಪ್ರಿಯಂ ಸಾದರಂ
ವಾರಂ ವಾರಮನುಸ್ಮರನ್ನಪಿ ಹೃದಾ ಮುಕ್ತೋಽಥ ಭಕ್ತೋಽಭವೇತ್ ॥೩೧॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶ್ರೀವಾಂಛೇಶತೇಜನೀಶ ವೈಭವಕಥನಂನಾಮ ಅಷ್ಟಾವಿಂಶೋಽಧ್ಯಾಯಃ

---

ಇಷ್ಟಾರ್ಥಗಳನ್ನು ಪಡೆದು ಧನ್ಯರಾದರು. ಆದ್ದರಿಂದ ಉತ್ತಮವಾದ ಆ ಪಾರ್ವತೀ ರಮಣನ ಸ್ಥಾನಗಳನ್ನು ಸೇವಿಸಿ, ಪದೇಪದೇ ಆದರದಿಂದ ಮಹಾದೇವನನ್ನು ಸ್ಮರಿಸುತ್ತಾ ಇರುವ ಭಕ್ತನು, ಮೋಕ್ಷವನ್ನೈದುವನು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಶ್ರೀವಾಂಛೇಶ್ವರ, ಮತ್ತು ತೇಜನೀಶ್ವರರ ವೈಭವವರ್ಣನೆಯೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಏಕೋನತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಕಾವೇರ್ಯಾ ಉತ್ತರೇ ತೀರೇ ಶ್ರೀಮತ್ತಾಲವನಂ ಮಹತ್ ।
ಸ್ಥಾನಂ ಶಂಭೋಃ ಪ್ರಿಯಕರಂ ಭವಭಕ್ತಿವಿವರ್ಧನಂ ||೧||

ಕಾವೇರೀ ಪುಣ್ಯಸಲಿಲೈರ್ಯೋಽಭಿಷಿಚ್ಯ ಮಹೇಶ್ವರಂ ।
ಶ್ರೀಮತ್ತಾಲವನೇಶಾನಂ ಕ್ಷೀರಸ್ನಾನಾದಿಕೃದ್ಭವೇತ್ ||೨||

ಸದ್ಯಃ ಪಾಪಹರಂ ಸ್ಥಾನಂ ಸದ್ಯೋಜಾತಪ್ರಿಯಂ ಸದಾ ।
ಮುನಿಭಿಶ್ಚ ಸುರೈಶ್ಚೈವ ಸೇವಿತಂ ಸರ್ವಕಾಮದಂ ||೩||

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಕ್ಷೇತ್ರವೈಭವವನ್ನು ಈರೀತಿ ಹೇಳಲುಪಕ್ರಮಿಸಿದನು. ಕಾವೇರೀನದಿಯ ಉತ್ತರದಡದಲ್ಲಿ ಸಂಪದ್ಯುಕ್ತವಾದ ಮಹಾಕಾಲವನಸ್ಥಾನವಿರುವುದು. ಆ ಸ್ಥಾನವು ಶಂಭುವಿಗೆ ಅತ್ಯಂತ ಪ್ರೀತಿಕರವೂ ಶಿವಭಕ್ತಿಯನ್ನು ಹೆಚ್ಚಿಸುವುದೂ ಆಗಿದೆ. ಕಾವೇರೀನದಿಯ ಪುಣ್ಯಕರವಾದ ಜಲಧಾರೆಯಿಂದ ಕಾಲವನಾಧೀಶನೆನಿಸಿದ ಮಹೇಶ್ವರನಿಗೆ ಅಭಿಷೇಕಮಾಡಿ, ಹಾಲು, ಮೊಸರು ಮುಂತಾದ ಪಂಚಾಮೃತಗಳಿಂದ ಸ್ನಾನಮಾಡಿಸುವವನು ಸಕಲ ಪಾಪಗಳನ್ನೂ ನಾಶಪಡಿಸಿಕೊಂಡು ಮುಕ್ತನಾಗುತ್ತಾನೆ. ಆ ತಾಲವನಸ್ಥಾನವು ದರ್ಶನದಿಂದಲೇ ಸಕಲ ಪಾಪಗಳನ್ನೂ ನಾಶಮಾಡುವುದೂ, ಸದ್ಯೋಜಾತನೆನಿಸಿದ ಮಹಾ

ಭೂಲೋಕೇ ಕಾಲನಾಥಸ್ಯ ಲಿಂಗಸ್ಯ ಸದೃಶಂ ನಹಿ ।
ದೇವ್ಯಾ ಸ್ಕಂದೇಭವಕ್ತ್ರಾಭ್ಯಾಂ ಸೇವಿತಂ ಪುಣ್ಯವರ್ಧನಂ ।೪।।

ತತ್ರ ಪೂರ್ವಂ ತಪಶ್ಚಕ್ರೇ ತಾಲಕೇತುರ್ನೃಪೋತ್ತಮಃ ।
ವರ್ಷತ್ರಯಂ ಶಿವಂ ಧ್ಯಾಯನ್ಭಸ್ಮರುದ್ರಾಕ್ಷಭೂಷಣಃ ।೫।।

ರುದ್ರಪಂಚಾಕ್ಷರಪರಸ್ತ್ರಿವಾರಂ ಶಂಕರಾರ್ಚಕಃ ।
ತತ್ರ ಕಾಲವನೇಶಸ್ಯ ಪ್ರಾಕಾರಂ ಗೋಪುರಂ ವ್ಯಧಾತ್ ।।೬।।

ಮಂಟಪಾದೀನಿ ಶಂಭೋರ್ನೃ ಕಾರಯಾಮಾಸ ಭೂಪತಿಃ ।
ಪಂಚಾಮೃತಾಭಿಷೇಕೈಶ್ಚ ಗಂಧೈರ್ಬಿಲ್ವೈಶ್ಚ ಪಂಕಜೈಃ ।೭।।

ಅಭ್ಯರ್ಚಯತ್ತಥೇಶಾನಂ ಕಾಲನಾಥಂ ನೃಪೋತ್ತಮಃ ।
ಅಸ್ತುವತ್ಸಾಂಬಮೀಶಾನಂ ಶ್ರೀಮತ್ತಾಲವನೇಶ್ವರಂ ।।೮।।

---

ದೇವನಿಗೆ ತುಂಬಾ ಪ್ರೀತಿಕರವೂ ಆಗಿರುವುದು. ಮುನಿಗಳಿಂದಲೂ, ದೇವತೆಗಳಿಂದಲೂ ಸೇವಿಸಲ್ಪಟ್ಟು ಸಕಲ ಇಷ್ಟಾರ್ಥಗಳನ್ನೂ ಕೊಡುವಂತದಾಗಿರುವುದು. ||೧-೨-೩||

ಭೂಲೋಕದಲ್ಲಿರುವ ಆ ತಾಲವನೇಶ್ವರನಿಗೆ ಇತರ ಯಾವ ದೇವತೆಗಳೂ ಸಾಟಿಯಾಗಲಾರರು. ಆ ಕ್ಷೇತ್ರವು ದೇವೀ, ಕುಮಾರಸ್ವಾಮಿ ಮತ್ತು ಗಣಪತಿ ಇವರಿಂದ ಸೇವಿಸಲ್ಪಟ್ಟು ಪುಣ್ಯವನ್ನು ಹೆಚ್ಚಿಸುವುದಾಗಿರುವುದು. ಹಿಂದೆ ಅಲ್ಲಿ ತಾಲಕೇತುವೆಂಬ ಉತ್ತಮನಾದ ರಾಜನು ಮೂರು ವರ್ಷಗಳಕಾಲ ಭಸ್ಮರುದ್ರಾಕ್ಷಾಲಂಕೃತನಾಗಿ ರುದ್ರ ಮತ್ತು ಶಿವಪಂಚಾಕ್ಷರಮಂತ್ರಗಳನ್ನು ಜಪಿಸುತ್ತಾ ಶಿವಧ್ಯಾನಯುಕ್ತನಾಗಿ ಬೆಳಗ್ಗೆ, ಮಧ್ಯಾಹ್ನ, ಮತ್ತು ಸಾಯಂಕಾಲ ಈ ಮೂರು ವೇಳೆಯಲ್ಲಿಯೂ ಶಂಕರನನ್ನು ಪೂಜೆಮಾಡಿಕೊಂಡು, ತಪಸ್ಸು ಮಾಡಿದನು. ಆ ತಾಲಕೇತುರಾಜನು, ತಾಲವನೇಶ್ವರನಿಗೆ ಪ್ರಾಕಾರವನ್ನೂ ಗೋಪುರವನ್ನೂ ನಿರ್ಮಾಣ ಮಾಡಿಸಿದನು. ||೪-೫-೬||

ಆ ರಾಜನೇ ಶಂಭುವಿಗೆ ಮಂಟಪ ಮುಂತಾದುವುಗಳನ್ನೆಲ್ಲಾ ಕಟ್ಟಿಸಿದನು. ಹೀಗೆ ದೇವಾಲಯ ನಿರ್ಮಾಣವಾದಮೇಲೆ ರಾಜಶ್ರೇಷ್ಠನಾದ ತಾಲಕೇತುವು ಪಂಚಾಮೃತಾಭಿಷೇಕಮಾಡಿ, (ಹಾಲು, ಮೊಸರು, ತುಪ್ಪ ಜೇನು, ಮತ್ತು ಸಕ್ಕರೆ

॥ ತಾಲಕೇತುರುವಾಚ ॥

ತಾಲಕೇತುರ್ಭಕ್ತಿಪರಸ್ತಸ್ಮಿನ್ಸ್ಥಾನೇ ನೃಪೋತ್ತಮಃ ॥೯॥
ನಮಸ್ತೇ ದೇವಾಯ ತ್ರಿಪುರದಲನಾಯಾಂತಕಭಿದೇ
ಜಗತ್ಪಾತ್ರೇ ಹಂತ್ರೇ ಅಸುರವಧಕರ್ತ್ರೇ ಚ ವಿಭವೇ ।
ನಮಸ್ತೇ ತಾಲಾಯ ಗರಲವರಭಕ್ಷಾಯ ಮಹತೇ
ತವ ಪ್ರಾರ್ಚಾತೃಪ್ತೋಽಹಂ ನ ಹಿ ಶಿವ ವಿಮುಕ್ತಿಂ ಚ ಗಣಯೇ ॥೧೦॥

ಅಗಣ್ಯಂ ಮೇ ಭಾಗ್ಯಂ ಹರ ಹರ ಕೃಪಾಸಾಗರ ವಿಭೋ
ಶರಣ್ಯಸ್ತ್ವಂ ಶಂಭೋ ಸಕಲದಿವಿಷನ್ಮೌಲಿನಮಿತಃ ।
ತ್ವದಕ್ಷ್ಣೋರುನ್ಮೀಲೇ ಜಗದುದಯನಾಶಾಸ್ತು ವಿಹಿತಾಃ
ವಿಭೋ ಕಲ್ಪೇ ಕಲ್ಪೇ ವಿಧಿಹರಿಹರಾದೇವಮುನಯಃ ॥೧೧॥

---

ಈ ಐದು ಪಂಚಾಮೃತದ್ರವ್ಯಗಳು.) ಗಂಧ, ಬಿಲ್ವಪತ್ರೆ, ತಾವರೇಹೂಗಳಿಂದ ಆ ತಾಲನಾಥೇಶ್ವರನನ್ನು ಪೂಜೆಮಾಡಿದನು. ಅನಂತರ ಸೌಂದರ್ಯಭರಿತನಾದ ತಾಲವನೇಶ್ವರನನ್ನು ರಾಜವರ್ಯನಾದ ತಾಲಕೇತುವು ಅದೇ ತಾಲವನಸ್ಥಾನದಲ್ಲಿ ಭಕ್ತಿಯುಕ್ತನಾಗಿ ನಿಂತು ಸ್ತೋತ್ರಮಾಡಿದನು. ॥೭-೮-೯॥

ತ್ರಿಪುರಗಳನ್ನು ಸಂಹರಿಸಿ, ಯಮನನ್ನು ನಿಗ್ರಹಿಸಿದವನೂ, ಪ್ರಪಂಚವನ್ನು ಪಾಲನೆಮಾಡಿ ಸಂಹರಿಸುವವನೂ, ರಾಕ್ಷಸರನ್ನು ಕೊಲ್ಲುವವನೂ ವಿಭುವೂ ಆದ ದೇವದೇವನೇ, ನಿನಗೆ ನಮಸ್ಕಾರ ಮಾಡುತ್ತೇನೆ. ಕಾಲಸ್ವರೂಪನೂ, ಕಾಲಕೂಟವನ್ನು ಭಕ್ಷಣೆಮಾಡಿದವನೂ, ಮಹಾತ್ಮನೂ ಆದ ನಿನಗೆ ಪ್ರಣಾಮಗಳು. ದೇವದೇವನೇ, ಪರಶಿವನೆನಿಸಿದ ನಿನ್ನ ಪೂಜೆಮಾಡುವುದರಿಂದ ಸಂತುಷ್ಟನಾದ ನಾನು ಮುಕ್ತಿಯನ್ನು ಸಹ ಗಣನೆಮಾಡುವುದಿಲ್ಲ. (ಮೋಕ್ಷಸುಖಕ್ಕಿಂತ ನಿನ್ನ ಪೂಜಾಸೌಖ್ಯವೇ ನನಗೆ ಹಿತಕರವಾಗಿರುವುದು.) ॥೧೦॥

ಭಕ್ತರ ಪಾಪರಾಶಿಯನ್ನು ಹೋಗಲಾಡಿಸುವವನೂ, ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ಸಂಹಾರಮಾಡುವವನೂ, ದಯಾಸಮುದ್ರನೂ ಆದ ವಿಭುವೇ! ನನಗೆ ಲೆಕ್ಕವಿಲ್ಲದಷ್ಟು ಭಾಗ್ಯವು ಮೊದಲಿನಿಂದಲೂ ನಿನ್ನ ಅನುಗ್ರಹದಿಂದ ಇರುವುದು. ಶಂಭುವೇ, ಸಕಲ ದೇವತೆಗಳ ಕಿರೀಟಯುಕ್ತ ತಲೆಗಳಿಂದಲೂ ನಮಸ್ಕರಿಸಲ್ಪಡುವ ನೀನೇ ನನಗೆ ಶರಣ್ಯನು, ನಿನ್ನ ಕಣ್ಣುಗಳ ಪಾಟವವು ಈ

ಇತ್ಥಂ ತತ್ರ ಮಹಾದೇವಸ್ತಾಲೇಶಸ್ತಾಲಕೇತುನಾ ।
ಪೂಜಿತಃ ಪರಯಾ ಭಕ್ತ್ಯಾ ಸ್ಥಾನೇ ತಸ್ಮಿನ್ಮಹೇಶ್ವರಃ ॥೧೨॥

ಪ್ರೀತ್ಯಾ ತಂ ರಾಜ್ಯಮದದಾತ್ ಪ್ರಣಾಮಾಪಹೃತಃ ಶಿವಃ ।
ವಿಮುಕ್ತಿಮಪ್ಯಥಾಂತೇ ಚ ದದೌ ತಸ್ಮೈ ಮಹೇಶ್ವರಃ ॥೧೩॥

ತತ್ಪ್ರಾಚ್ಯಾಂ ಕಂಚುಕಂ ಸ್ಥಾನಂ ಸ್ಥಾಣುಪ್ರಿಯಕರಂ ಸದಾ ।
ದೇವಃ ಪಶುಪತೀಶಾನಃ ಪಶುಪಾಶವಿಮೋಚಕಃ ॥೧೪॥

ದೇವ್ಯಾ ಸ್ಕಂದೇಭವಕ್ತ್ರಾಭ್ಯಾಂ ಕರ್ತುಂ ಭಕ್ತಿಧನಂ ವ್ಯಧಾತ್ ।
ಏಕಾಗ್ರಮೂಲೇ ಕಾವೇರ್ಯಾ ಉತ್ತರತೋಽಪತಚ್ಚ ಚ ॥೧೫॥

---

ಪ್ರಪಂಚದ ಮೇಲೆ ಬೀಳುವಾಗ ಸ್ವೇಚ್ಛೆಯಿಂದಲೇ ಪ್ರಪಂಚದ ಸೃಷ್ಟಿಸ್ಥಿತಿಸಂಹಾರ ರೂಪಕಾರ್ಯಗಳು ನಡೆಯುತ್ತಿರುವುವು. ವಿಭುವೇ, ಪ್ರತಿಕಲ್ಪದಲ್ಲಿಯೂ ಬ್ರಹ್ಮ, ವಿಷ್ಣು, ರುದ್ರರೂ ನಿನ್ನ ಅಪ್ಪಣೆಯಿಂದಲೇ ಈ ಜಗತ್ತಿನ ಸೃಷ್ಟಿಸ್ಥಿತಿಕಾರ್ಯಗಳನ್ನು ಮಾಡುತ್ತಿರುವರು, ಎಂದು ತಾಲಕೇತುವು ಸ್ತೋತ್ರಮಾಡಿದನು. ॥೧೧॥

ಹೀಗೆ ಮಹಾದೇವನು ತಾಲಕೇತುರಾಜನಿಂದ ಭಕ್ತಿಯುಕ್ತವಾಗಿ ಪೂಜಿಸಲ್ಪಟ್ಟು, ಪ್ರೀತಿಯಿಂದ ಅವನ ನಮಸ್ಕಾರಕ್ಕೆ ಸೋತು, ಪರಶಿವನು ಅವನಿಗೆ ರಾಜ್ಯವನ್ನು ಕೊಟ್ಟನು. (ದೇವನು ಭಕ್ತಪರಾಧೀನನಾದುದರಿಂದ ಅವರು ಮಾಡುವ ಪೂಜಾದಿಗಳಿಗೆ ಅಧೀನನಾಗಿ ಅನುಗ್ರಹಮಾಡುವನು.) ಅನಂತರ ಕೊನೆಗೆ ಆ ತಾಲಕೇತುವಿಗೆ ಮಹಾದೇವನು ಮೋಕ್ಷವನ್ನು ಅನುಗ್ರಹಿಸಿದನು. ॥೧೨-೧೩॥

ಅಲ್ಲಿಂದ ಪೂರ್ವದಲ್ಲಿ ಸ್ಥಾಣುವೆನಿಸಿದ (ನಿರ್ವಿಕಲ್ಪಸ್ವರೂಪನೆನಿಸಿದ) ಪರಶಿವನಿಗೆ ಪ್ರಿಯತರವಾದ ಕಂಚುಕಸ್ಥಾನವಿರುವುದು. ಜನನಮರಣರೂಪವಾದ ಪಾಶಯುಕ್ತರಾದ ಪ್ರಾಣಿಗಳ ಬಂಧನವನ್ನು ಹೋಗಲಾಡಿಸುವ ಪಶುಪತೀಶಾನ ದೇವನು ಅಲ್ಲಿ ದೇವೀ, ಷಣ್ಮುಖ, ಗಜಾನನ ಇವರಿಂದ ಸೇವಿಸಲ್ಪಡುತ್ತಾ, ಭಕ್ತಿರೂಪವಾದ ಧನವನ್ನು ಇಟ್ಟುಕೊಂಡು ಇಲ್ಲಿ ನೆಲಸಿರುವನು. ಹಿಂದೆ ವಾಯುವಿನಿಂದ ಕೈಲಾಸ ಶಿಖರವು ಭೂಮಿಗೆ ಬೀಳುವಾಗ ಅಲ್ಲಿದ್ದ ಶಿವಲಿಂಗವು ಕಾವೇರೀ ನದಿಯ ಉತ್ತರ ದಿಕ್ಕಿನಲ್ಲಿರುವ ಏಕಾಗ್ರಮೂಲಸ್ಥಾನದಲ್ಲಿ ಭೂಮಿಯಲ್ಲಿ ಬಿದ್ದು, ಅದೇ ಪಶುಪತೀಶ್ವರನೆಂಬ ಹೆಸರಿನಿಂದ ಆವಿರ್ಭವಿಸಿತು. ॥೧೪-೧೫॥

ತಲ್ಲಿಂಗಮುದಭೂದ್ಭೂಮೌ ಶ್ರೀಮತ್ಪಶುಪತೀಶ್ವರಂ ।
ದೇವೀ ತು ಪ್ರಾಗ್ಧೃತಸ್ತತ್ರ ಸ್ವಕಾಂತಮವೀಕ್ಷ್ಯ ಚ ॥೧೬॥

ಲಿಂಗಂ ಪಾಶುಪತೀಶಾಖ್ಯಮಾವಿರ್ಭೂತಂ ತದಾಂಬಿಕಾ ।
ಪ್ರಹೃಷ್ಟಹೃದಯೋನೇಯಾ ತತ್ರ ಸಂಪೂಜ್ಯ ಶಂಕರಂ ॥೧೭॥

ದಧ್ನಾ ಕ್ಷೀರೇಣ ಮಧುನಾ ಸಿತಯಾ ಸರ್ಪಿಷಾ ಶಿವಂ ।
ಕದಲೀನಾರಿಕೇಳಾಮ್ರಜಂಬೀರೈಃ ಪನಸೈಸ್ತದಾ ॥೧೮॥

ಗಂಧೋದಕೈಃ ಸಕರ್ಪೂರೈಃ ಪಾಟಿಲಾಗರುಮಿಶ್ರಿತೈಃ ।
ಸಹ್ಯಜಾತಾಪಗಾನೀರೈಃ ಶಿವತೀರ್ಥಜಲೈರಪಿ ॥೧೯॥

ಭಸ್ಮರುದ್ರಾಕ್ಷಭೂಷಾಢ್ಯಾ ರುದ್ರಸೂಕ್ತೈರಸೇಚಯತ್ ।
ದೇವಂ ಪಶುಪತೀಶಾನಂ ಗಂಧೈರಾಲಿಪ್ಯ ವಾಸಸಾ ॥೨೦॥

ರತ್ನಾಭರಣಪುಂಜೈಶ್ಚ ಬಿಲ್ವಮಂದಾರಪಂಕಜೈಃ ।
ಪೂಜಯಾಮಾಸ ಪರಯಾ ಭಕ್ತ್ಯಾ ಸಾ ದೇವೀ ವತ್ಸರತ್ರಯಂ ॥೨೧॥

---

ಆಗ ಮಹಾದೇವಿಯು ಜಾಗ್ರತೆಯಾಗಿ ಬಂದು, ಬೀಳುತ್ತಿರುವ ಶಿವಲಿಂಗವನ್ನು ಧರಿಸಿ, ತನ್ನ ಪತಿಯನ್ನು ಸಂದರ್ಶಿಸಿದಳು. ಅನಂತರ ಆ ಶಿವಲಿಂಗವು ಪಾಶುಪತೀಶ್ವರನೆಂಬ ಹೆಸರಿನಿಂದ ಆವಿರ್ಭವಿಸಿದುದನ್ನು ನೋಡಿ ಆಗ ಅಂಬಿಕೆಯು ಸಂತುಷ್ಟವಾದ ಮನಸ್ಸಿನಿಂದ ಅಲ್ಲಿಯೇ ಶಂಕರನನ್ನು ಪೂಜಿಸಿದಳು. ಅಂಬಿಕಾದೇವಿಯು ಮೊಸರು, ಹಾಲು, ಕಲ್ಲುಸಕ್ಕರೆ, ತುಪ್ಪ, ಜೇನು, ಈ ಪಂಚಾಮೃತದ್ರವ್ಯಗಳಿಂದಲೂ, ಬಾಳೆ, ತೆಂಗು, ಮಾವು, ನಿಂಬೆ, ಮತ್ತು ಹಲಸು, ಈ ಪಂಚಫಲಗಳ ರಸದಿಂದಲೂ, ಕರ್ಪೂರ, ಚಂದನ, ಅಗರುಮಿಶ್ರಿತವಾದ ಉತ್ತಮವಾದ ಗಂಧೋದಕದಿಂದಲೂ, ಅಲ್ಲದೇ ಕಾವೇರೀನದಿಯ ನೀರು, ಮತ್ತು ಇತರ ಶಿವತೀರ್ಥಗಳ ನೀರು ಇವುಗಳಿಂದಲೂ ಭಸ್ಮರುದ್ರಾಕ್ಷಗಳನ್ನು ಧಾರಣೆಮಾಡಿಕೊಂಡು, ರುದ್ರಸೂಕ್ತಮಂತ್ರಪೂರ್ವಕವಾಗಿ ಆ ಮಹಾದೇವನಿಗೆ ಅಭಿಷೇಕಮಾಡಿದಳು. ॥೧೬-೧೭-೧೮-೧೯॥

ಆ ದೇವಿಯು ಪಶುಪತೀಶ್ವರನನ್ನು ಗಂಧದಿಂದ ಲೇಪನಮಾಡಿ, ವಸ್ತ್ರಗಳಿಂದಲೂ ರತ್ನಾಭರಣಗಳಿಂದಲೂ, ಪೂಜಾರ್ಹವಾದ ಬಿಲ್ವ, ಮಂದಾರ, ತಾವರೆ ಮುಂತಾದ ಹೂಗಳಿಂದಲೂ, ಭಕ್ತಿಯುಕ್ತಳಾಗಿ ಮೂರುವರ್ಷಗಳಕಾಲ ಪೂಜಿ

ಫಲೈರ್ಜಲೈಶ್ಚ ನೈವೇದ್ಯೈರ್ನೀರಾಜನನತಿಸ್ತವೈಃ ।
ತತ್ರ ಸ್ಥಾನೇ ಪಶುಪತೀಶಾನವಿನಾಶಾನವಿನಾಶ್ವರಂ ॥೨೨॥

ತುಷ್ಟಾವ ಪ್ರಣತಾ ದೇವೀ ಪ್ರಣತಾನ್ಯಾಶ್ವವಿನಾಶ್ವರಂ ॥೨೩॥

॥ ಶ್ರೀದೇವ್ಯುವಾಚ ॥

ಹೇ ಕಂತುಕೇಶಾಂತಕದರ್ಪನಾಶ
ಸರ್ಪಾಂಗಹಾರ ಭಗವನ್ಷಡ್ಗುಣಾರ್ಧಸೋಮ ।
ಕಾಮಾಂಗನಾಶ ಪಶುಪಾಶವಿನಾಶಕೇಶ
ಸ್ವಾಮಿನ್ವಿಭೋ ಪಶುಪತೇ ಸತತಂ ನಮಸ್ತೇ ॥೨೪॥

ಉದ್ದಂಡದಂಡಧರದಂಡನಖಂಡಪರಶೋ
ಆಖಂಡಲಾದಿವಿಬುಧಾನತಪಾದ ಶಂಭೋ ।
ಪಾಹಿ ಪ್ರಭೋ ಪಶುಪತೇ ಪ್ರದಿಶಾತ್ರ ಭಕ್ತಿಂ
ಮುಕ್ತಿಂ ತಥಾತ್ರ ವಸತಾಂ ಕಿಲ ಸ್ಥಾನವರ್ಯೇ ॥೨೫॥

---

ಸಿದಳು. ಹಣ್ಣು, ನೀರು, ನೈವೇದ್ಯ, ಆರತಿ ನಮಸ್ಕಾರ ಮತ್ತು ಸ್ತೋತ್ರಗಳನ್ನು ಮಾಡಿ ಆ ಸ್ಥಾನದಲ್ಲಿ ಪಶುಪತೀಶನೆನಿಸಿದ ಪರಮೇಶ್ವರನನ್ನು ಸೇವಿಸಿ ನಮಸ್ಕಾರ ಮಾಡಿ, ಪ್ರಣವಕ್ಕಿಂತಲೂ ಆದಿಪುರುಷನೆನಿಸಿದ ಮಹಾದೇವನನ್ನು ಸ್ತೋತ್ರ ಮಾಡಿದಳು. ॥೨೦-೨೧-೨೨.೨೩॥

ಯಮನ ಮತ್ತು ಬ್ರಹ್ಮ ಮನ್ಮಥರ ಅಹಂಕಾರವನ್ನು ನಾಶಮಾಡಿದವನೂ, ಸರ್ಪವನ್ನು ಶರೀರಕ್ಕೆ ಮಾಲೆಯನ್ನಾಗಿಮಾಡಿಕೊಂಡಿರುವವನೂ, ಷಡ್ಗುಣಪರಿಪೂರ್ಣನೂ, ಅರ್ಧಚಂದ್ರನನ್ನು ತಲೆಯಲ್ಲಿ ಧರಿಸಿರುವವನೂ, ಮನ್ಮಥನ ದೇಹವನ್ನು ನಾಶಮಾಡಿದವನೂ, ಪಶುಗಳೆನಿಸಿದ ಪ್ರಾಣಿಗಳ ಬಂಧನವನ್ನು ನಾಶಮಾಡುವವನೂ, ಐಶ್ವರ್ಯಸಂಪನ್ನನೂ, ವಿಭುವೂ, ಪಶುಗಳಿಗೆ ಒಡೆಯನೂ, ಆದ ಕಂತುಕೇಶ್ವರಸ್ವಾಮಿಯೇ! ನಿನಗೆ ಯಾವಾಗಲೂ ನಮಸ್ಕಾರಮಾಡುವೆನು. ॥೨೪॥

ಹೊತ್ತ ದಂಡಾಯುಧಪಾಣಿಯಾದ ಯಮನನ್ನು ನಿಗ್ರಹಿಸಿದವನೂ, ಕೊಡಲಿಯಿಂದ ಶತ್ರುಗಳನ್ನು ಕಡಿಯುವವನೂ, ಇಂದ್ರನೇ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಪಾದವುಳ್ಳವನೂ ಆದ ಶಂಭುವೇ, ಪ್ರಭುವೂ

ಇತ್ಥಂ ಪಶುಪತೀಶಾನೋ ದೇವ್ಯಾ ಸಂಪ್ರಾರ್ಥಿತಸ್ತದಾ ।
ಓಮಿತ್ಯುಚ್ಚಾರಯನ್ದೇವ್ಯಾ ತತ್ರ ಲಿಂಗೇ ತಿರೋದಧೇ ॥೨೬॥

॥ ಶ್ರೀ ಸ್ಕಂದ ಉವಾಚ ॥

ಶ್ರೀಮತ್ಕಂತುಕಸಂಜ್ಞಕಂ ಪರಮುಮಾಕಾಂತಪ್ರಿಯಂ ಶಾಂಕರೈಃ
ಸಂಸೇವ್ಯಂ ಪಶುಪಾಶಮುಕ್ತಿದಮಹೋ ದೇವ್ಯಾ ಪುರಾ ಪೂಜಿತಂ ।
ದೇವಂ ತತ್ಪಶುಪಾಶನಾಶನಪರಂ ಸಂಸೇವಿನಾಂ ಪಾಪಭಿಃ
ನೋ ಜನ್ಮಾಸ್ತಿ ಶರೀರಿಣಾಂ ಯಮಭಯಂ ನೈವಾತ್ರ ಭರ್ಗಾಜ್ಞಯಾ॥೨೭॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ತಾಲವನಕಂತುಕಪುರಪ್ರಭಾವವರ್ಣನಂ ನಾಮ
ಏಕೋನತ್ರಿಂಶೋಽಧ್ಯಾಯಃ

---

ಪಶುಪತಿಯೂ ಆದ ನೀನು ನನ್ನನ್ನು ಕಾಪಾಡು ; ನಿನ್ನ ಉತ್ಕೃಷ್ಟವಾದ ಕ್ಷೇತ್ರದಲ್ಲಿ ವಾಸಮಾಡುವವರಿಗೆ ಇಹದಲ್ಲಿ ಭೋಗಗಳನ್ನೂ ಪರದಲ್ಲಿ ಮೋಕ್ಷವನ್ನೂ ಕರುಣಿಸುವನಾಗೆಂದು ದೇವಿಯು ಪಶುಪತೀಶ್ವರನನ್ನು ಸ್ತೋತ್ರಮಾಡಿದಳು. ॥೨೫॥

ಈರೀತಿಯಾಗಿ ದೇವಿಯಿಂದ ಪ್ರಾರ್ಥಿಸಲ್ಪಟ್ಟ ಪಶುಪತೀಶ್ವರನು, ಆಗ ದೇವಿಯ ಮಾತಿಗೆ 'ಓಂ' ಎಂದು (ಆಗಲಿ) ಅನುಮತಿಸಿ, ಆ ಲಿಂಗದಲ್ಲಿಯೇ ಮರೆಯಾದನು. ॥೨೬॥

ಉಮಾರಮಣನಿಗೆ ಪ್ರೀತಿಕರವೂ, ಪಶುಗಳ ಪಾಶವನ್ನು ಹೋಗಲಾಡಿಸಿ ಮೋಕ್ಷವನ್ನುಂಟುಮಾಡುವುದೂ, ವಿಶೇಷವಾಗಿ ದೇವಿಯಿಂದ ಹಿಂದೆ ಪೂಜಿಸಲ್ಪಟ್ಟದೂ ಆದ ಶ್ರೀಮತ್ಕಂತುಕಸಂಜ್ಞಕವಾದ ಪರಮಶ್ರೇಷ್ಠ ಶಿವಸ್ಥಾನವನ್ನು ಶಂಕರನ ಭಕ್ತರು ಅವಶ್ಯವಾಗಿ ಸೇವಿಸಬೇಕು. ಅಲ್ಲಿರುವ ಪಶುಪತೀಶ್ವರನು ಪ್ರಾಣಿಗಳ ಬಂಧನವನ್ನು ನಾಶಮಾಡಿ ತನ್ನನ್ನು ಸೇವಿಸುವವರ ಪಾಪಗಳನ್ನೆಲ್ಲಾ ಹೋಗಲಾಡಿಸುವನು. ಅಲ್ಲಿ ನೆಲಸಿರುವವರಿಗೆ ಪುನರ್ಜನ್ಮವಾಗಲೀ ಯಮನ ದೆಸೆಯಿಂದ ಭಯವಾಗಲೀ ಎಂದಿಗೂ ಇಲ್ಲವೆಂದು ಭರ್ಗನೆನಿಸಿದ ಮಹೇಶ್ವರನ ಆಜ್ಞೆಯಿರುವುದು ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಹೇಳಿದನು. ॥೨೭॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ತಾಲವನ ಕಂತುಕಪುರಗಳ ಮಹಿಮಾವರ್ಣನೆಯೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಸ್ಥಾನಾನ್ಮಾಯೂರಸಂಜ್ಞಸ್ಯ ಪ್ರಾಚ್ಯಾಂ ಧರ್ಮೇಶ್ವರಸ್ಥಳಂ ।
ಧರ್ಮೇಣ ತತ್ರ ದೇವೇಶಃ ಪೂಜಿತಸ್ತತ್ರ ಶಂಕರಃ ॥೧॥

ಧರ್ಮಜಾತಃ ಸುತಸ್ತತ್ರ ಪೂಜಯಾಮಾಸ ಶಂಕರಂ ।
ತುಷ್ಟಾವ ತತ್ರ ದೇವೇಶಂ ಭವಂ ಭಕ್ತಿಸಮನ್ವಿತಃ ॥೨॥

ಸಂಸ್ತುತಃ ಶ್ರೀಮಹಾದೇವಃ ಸ್ವರಾಜ್ಯಪ್ರಾಪ್ತಯೇ ಪುರಾ ।
ತದಾ ಧರ್ಮಪುರಂ ನಾಮ ಧರ್ಮೇಶಸ್ತತ್ರ ಶಂಕರಃ ॥೩॥

---

## ಮೂವತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಶಿವಕ್ಷೇತ್ರಮಹಿಮೆಯನ್ನು ಮುಂದುವರಿಸುತ್ತಾ ಹೀಗೆಂದನು. ಮಾಯೂರಕ್ಷೇತ್ರಕ್ಕೆ ಪೂರ್ವದಲ್ಲಿ ಧರ್ಮೇಶ್ವರಸ್ಥಳವಿರುವುದು. ಹಿಂದೆ ಧರ್ಮರಾಜನು ದೇವೇಶ್ವರನಾದ ಶಂಕರನನ್ನು ಅಲ್ಲಿ ಪೂಜಿಸಿದ್ದನು. ಧರ್ಮಸ್ವರೂಪನಾದ ಯಮನ ಕುಮಾರನಾದ ಧರ್ಮರಾಜನು ದೇವಾಧಿಪನಾದ ಶಂಕರನನ್ನು ಭಕ್ತಿಯಿಂದ ಪೂಜೆಮಾಡಿ, ಭವನೆನಿಸಿದ ಶಂಕರನನ್ನು ಸ್ತೋತ್ರಮಾಡಿದನು. ಹಿಂದೆ ತನ್ನ ರಾಜ್ಯವನ್ನು ಮರಳಿ ಪಡೆಯುವುದಕ್ಕೋಸ್ಕರ ಶ್ರೀಮಹಾದೇವನು ಧರ್ಮರಾಜನಿಂದ ಸ್ತೋತ್ರಮಾಡಲ್ಪಟ್ಟಿದ್ದರಿಂದ, ಆ ಸ್ಥಾನಕ್ಕೆ ಧರ್ಮಪುರವೆಂದೂ, ಅಲ್ಲಿರುವ ಶಂಕರನಿಗೆ ಧರ್ಮೇಶನೆಂದೂ ಹೆಸರಾಯಿತು. ||೧-೨-೩||

॥ ಧರ್ಮ ಉವಾಚ ॥

ನಮಸ್ತೇ ಧರ್ಮೇಶ ತ್ರಿಭುವನಧರಾಧಾರ ಭಗವನ್
ವಿಭೋ ಗಂಗಾಸಂಗೋದ್ಧೃತಶಶಿಜಟಸ್ತ್ವಗ್ವಸ ಹರ ।
ಪ್ರಸೀದ ತ್ವಂ ಮೇಽದ್ಯ ಗರಧರ ಹರಾಪಾರಕರುಣಾಂ
ಕುರುಷ್ವಾದ್ಯೇಶಾನ ಪ್ರಬಲಬಲಮಾಧೇಹಿ ಮಮ ವೈ ॥೪॥

ಇತ್ಥಂ ಧರ್ಮಪುರೇ ಶಂಭುಃ ಪೂಜಿತೋ ಧರ್ಮಜೇನ ಹಿ ।
ಜನ್ಯೇ ಜಯಂ ದದೌ ತಸ್ಯ ಧರ್ಮೇಶಃ ಕೌರವೇಷ್ವಪಿ ॥೫॥

ತತಃ ಪ್ರಾಚ್ಯಾಂ ಜ್ವರಹರೋ ಜ್ವರೇಣಾಭ್ಯರ್ಚಿತಃ ಪುರಾ ।
ತತ್ರ ಜ್ವರಹರೇಶಾನಃ ತಸ್ಮೈ ವರಮದಾತ್ಪುರಾ ॥೬॥

॥ ಜ್ವರ ಉವಾಚ ॥

ನಮೋ ನಮಸ್ತೇ ಶಶಿಖಂಡಚೂಡ
ಪ್ರಸೀದ ದೇವೇಶ ಪಿನಾಕಪಾಣೇ ।

---

ಮೂರು ಲೋಕಗಳನ್ನೂ ಹೊತ್ತಿರುವ ಆದಿಶೇಷನನ್ನು ಹಾರವನ್ನಾಗಿ ಮಾಡಿಕೊಂಡಿರುವವನೂ, ಭಗವಂತನೂ, ವಿಭುವೂ, ಗಂಗಾಸಹವಾಸದಿಂದ ಎತ್ತಿ ಕಟ್ಟಲ್ಪಟ್ಟಿರುವ ಜಡೆಯಲ್ಲಿ ಚಂದ್ರನನ್ನು ಧರಿಸಿರುವವನೂ, ಗಜಚರ್ಮವನ್ನು ಹೊದ್ದಿರುವವನೂ ಆದ ನಿನಗೆ ನಮಸ್ಕಾರಮಾಡುತ್ತೇನೆ. ವಿಷಕಂಠನೂ, ಪಾಪನಾಶಕನೂ ಆದ ಈಶಾನನೇ, ನನ್ನಲ್ಲಿ ಪ್ರಸನ್ನನಾಗಿ ಅಪಾರವಾದ ದಯೆಯನ್ನು ತೋರಿಸು. ದೇವ! ನನಗೆ ಪ್ರಬಲವಾದ ಶಕ್ತಿಯನ್ನು ಕರುಣಿಸೆಂದು ಧರ್ಮಜನು ಸ್ತೋತ್ರಮಾಡಿದನು. ॥೪॥

ಹೀಗೆ ಧರ್ಮಪುರದಲ್ಲಿ ಧರ್ಮರಾಜನಿಂದ ಪೂಜಿಸಲ್ಪಟ್ಟ ಶಂಭುವು ಆ ಧರ್ಮಜನಿಗೆ ಶಾಶ್ವತವಾದ ಸೌಜನ್ಯವನ್ನೂ, ಕೌರವರಮೇಲಿನ ಯುದ್ಧದಲ್ಲಿ ಪೂರ್ಣ ಜಯವನ್ನೂ ಅನುಗ್ರಹಿಸಿದನು. ಆ ಧರ್ಮೇಶಕ್ಷೇತ್ರಕ್ಕಿಂತ ಪೂರ್ವದಿಕ್ಕಿನಲ್ಲಿ ಜ್ವರನಿಂದ ಹಿಂದೆ ಪೂಜಿಸಲ್ಪಟ್ಟ ಜ್ವರಹರಕ್ಷೇತ್ರವಿರುವುದು. ಅಲ್ಲಿರುವ ಜ್ವರಹರೇಶ್ವರನು ಅವನಿಗೆ ಹಿಂದೆ ವರವನ್ನು ಕೊಟ್ಟಿರುವನು. ॥೫-೬॥

ಚಂದ್ರಖಂಡವನ್ನು ತಲೆಯಲ್ಲಿ ಧರಿಸಿರುವ ಸ್ವಾಮಿಯೇ, ನಿನಗೆ ನಮಸ್ಕಾರ ಮಾಡುವೆನು. ದೇವತೆಗಳಿಗೆ ಒಡೆಯನೂ, ಪಿನಾಕವೆಂಬ ಬಿಲ್ಲನ್ನು ಹಿಡಿದಿರುವ

ತ್ವದ್ಭಕ್ತಿಭಾಜಾಂ ವಸತಾಮಥಾತ್ರ
ಜ್ವರೋಽಸ್ಮ್ಯಹಂ ವಿಜ್ವರತಾಂ ಕರೋಮಿ ॥೭॥

ಇತ್ಥಂ ಜ್ವರಹರೇಶಾನಂ ಸಮಭ್ಯರ್ಚ್ಯ ಜ್ವರೋಽಬ್ರವೀತ್ ।
ತತ್ಪ್ರತೀಚ್ಯಾಂ ಶಿವಸ್ಥಾನಂ ಶ್ರೀಮದಾಪತ್ಸಹಾಯಕಂ ॥೮॥

ಭಕ್ತಾಪನ್ನಾಶಕಂ ದೇವಂ ಗಂಗಾತುಂಗಜಟಾಧರಂ ।
ಮುನಿನಾ ಜಾತುಕರ್ಣೇನ ಸಂಸ್ತುತಂ ಪಾಪನಾಶನಂ ॥೯॥

ಆಪತ್ಪ್ರಹರಣಂ ತೀರ್ಥಂ ಶಿವಾಜ್ಞೇಯಮ್ ನಿವಾರಕಂ ।
ತಸ್ಮಿನ್ಸ್ನಾತ್ವಾ ನರೋ ದೇವಂ ಪಶ್ಯತ್ಯಾಪತ್ಸಹಾಯಕಂ ॥೧೦॥

ಜಾತುಕರ್ಣಃ ಸ್ತವೇನೇಶಂ ಸ್ತುವನ್ ಪಾಪಾದ್ವಿಮೋಚಿತಃ ॥೧೧॥

॥ ಜಾತುಕರ್ಣ ಉವಾಚ ॥

ಆಪತ್ಸಹಾಯ ಶಿವ ದೇವ ಉಮಾಸಹಾಯ
ಶಂಭೋ ಪ್ರಸೀದ ಪರಿದಗ್ಧಸುಮೇಷುಕಾಯ ।

---

ದೇವನೂ ಆದ ನೀನು ನನಗೆ ಪ್ರಸನ್ನನಾಗು; ಎಲೈ ಜ್ವರೇಶ್ವರನೇ, ನಿನ್ನಲ್ಲಿ ಭಕ್ತಿಯಿಟ್ಟು ಈ ನಿನ್ನ ಸ್ಥಾನದಲ್ಲಿ ವಾಸಮಾಡುವವರಿಗೆ ಉಂಟಾಗುವ ಜ್ವರವನ್ನು ಜ್ವರರೋಗಾಧಿಪತಿಯಾದ ನಾನು ನಿವಾರಿಸುವೆನು ಎಂದು ಜ್ವರನು ಮಹೇಶನನ್ನು ಸ್ತೋತ್ರಮಾಡಿದನು. ॥೭॥

ಆ ಕ್ಷೇತ್ರದ ಪಶ್ಚಿಮಕ್ಕೆ ಆಪತ್ಸಹಾಯಕವೆಂಬ ಶೋಭಾಯುಕ್ತವಾದ ಶಿವಸ್ಥಾನವಿರುವುದು. ಭಕ್ತರ ಆಪತ್ತುಗಳನ್ನು ನಾಶಮಾಡುವವನೂ, ಗಂಗೆಯನ್ನು ತನ್ನ ಉನ್ನತವಾದ ಜಡೆಗಳಲ್ಲಿ ಧರಿಸಿರುವವನೂ, ಪಾಪಗಳನ್ನು ಪೂರ್ಣವಾಗಿ ನಾಶಗೊಳಿಸುವವನೂ ಆದ ಮಹಾದೇವನನ್ನು ಜಾತುಕರ್ಣನೆಂಬ ಮುನಿಯು ಸ್ತೋತ್ರಮಾಡಿದನು. ಅಲ್ಲಿ ಶಿವನ ಅಪ್ಪಣೆಯಂತೆ ಆಪತ್ತುಗಳನ್ನು ನಾಶಮಾಡುವ ಆಪತ್ಪ್ರಹರಣವೆಂಬ ತೀರ್ಥವಿರುವುದು. ಅದರಲ್ಲಿ ಸ್ನಾನಮಾಡಿ, ಮಾನವನು ಆ ಆಪತ್ಸಹಾಯಕನೆನಿಸಿದ ಮಹಾದೇವನನ್ನು ದರ್ಶನಮಾಡುತ್ತಾನೆ. ಅಲ್ಲಿ ಜಾತುಕರ್ಣ ಮುನಿಯು ದಿವ್ಯಸ್ತೋತ್ರದಿಂದ ಈಶ್ವರನನ್ನು ಸ್ತುತಿಸಿ, ತನ್ನ ಪಾಪಗಳಿಂದ ಬಿಡುಗಡೆ ಹೊಂದಿದನು. ॥೮-೯-೧೦-೧೧॥

ಆಪತ್ಸಹಾಯಕನೆಂಬ ಹೆಸರಿನಿಂದ ಪ್ರಖ್ಯಾತನಾಗಿರುವ ದೇವನೇ, ಉಮಾ

ಭಕ್ತೌಘಪಾಪಹರಣಾರ್ತಿನಿವಾರಕಾಯ
ಸೋಮಾಯ ತೇ ಭಗವತೇ ಸತತಂ ನಮಸ್ತೇ ॥೧೨॥

ಜಾತುಕರ್ಣಸ್ತದಾ ದೇವಂ ಸ್ತುವನ್ನಾಪತ್ಸಹಾಯಕಂ ।
ಸರ್ವಾಪದಾಂ ಮೂರ್ಧ್ನಿ ಪದಂ ನಿದಧೇ ಶಿವಭಕ್ತಿತಃ ॥೧೩॥

ಕಾವೇರ್ಯಾ ಉತ್ತರೇ ತೀರೇ ತ್ರಿಶಾಂಭವ್ಯಾ ತು ರೇಣುಕಾ ।
ಪೂಜಿತಾ ಪರಶುರಾಮೇಣ ಸಂಸ್ತುತಾ ಸರ್ವಕಾಮದಾ ॥೧೪॥

॥ ಪರಶುರಾಮ ಉವಾಚ ॥

ದೇವಿ ತ್ವಂ ಗಿರಿಜಾಪತಿಪ್ರಿಯತಮೇ ಸರ್ವಾಧಿಸಂತಾಪಹೇ
ತ್ವದ್ಭಕ್ತಾಧಿನಿವಾರಕೇ ಭಗವತಿ ಮಾಂ ಪಾಹಿ ತ್ವಂ ರೇಣುಕೇ ।
ದುಃಖಾನಾಂ ವಿನಿವಾರಕೇ ದಿವಿಷದಾಮಾರ್ತಿಂ ಸದಾ ಹಾರಿಕೇ
ಸ್ಥಾನೇಽತ್ರೈವ ವಿಹಾರಿಕೇ ತ್ರಿನಯನೇ ತುಭ್ಯಂ ನಮಸ್ತೇ ನಮಃ ॥೧೫॥

---

ಕಾಂತನೂ, ಜಗತ್ತಿಗೆ ಮಂಗಳವನ್ನುಂಟುಮಾಡುವವನೂ, ಮನ್ಮಥನ ದೇಹವನ್ನು ಭಸ್ಮಮಾಡಿದವನೂ ಆದ ನೀನು ನನ್ನಲ್ಲಿ ಪ್ರಸನ್ನನಾಗು; ಭಕ್ತರ ಪಾಪಗಳನ್ನು ಹೋಗಲಾಡಿಸಿ, ಪೀಡೆಗಳನ್ನು ನಾಶಮಾಡುವವನೂ, ಉಮಾಸಮೇತನೂ ಆದ ಭಗವಂತನೇ, ನಿನಗೆ ನಮಸ್ಕಾರಮಾಡುವೆನೆಂದು ಜಾತುಕರ್ಣನು ಸ್ತೋತ್ರ ಮಾಡಿದನು. ॥೧೨॥

ಆ ಜಾತುಕರ್ಣನು ಹೀಗೆ ಆಪತ್ಸಹಾಯಕೇಶ್ವರದೇವನನ್ನು ಸ್ತೋತ್ರ ಮಾಡುತ್ತಾ ಶಿವಭಕ್ತಿಪರವಶನಾಗಿ ಸಕಲ ವಿಪತ್ತುಗಳ ತಲೆಯಮೇಲೂ ತನ್ನ ಕಾಲನ್ನಿಟ್ಟನು. (ಅಂದರೆ ಎಲ್ಲಾ ವಿಪತ್ತುಗಳನ್ನೂ ನಿವಾರಣೆಮಾಡಿಕೊಂಡನು.) ಕಾವೇರೀನದಿಯ ಉತ್ತರದಡದಲ್ಲಿ ತ್ರಿಶಾಂಭವೀ ಎಂಬ ನಾಮದಿಂದ ಪ್ರಖ್ಯಾತಳಾದ ರೇಣುಕಾದೇವಿಯಿರುವಳು. ಸಕಲ ಇಷ್ಟಾರ್ಥಗಳನ್ನೂ ಸಲ್ಲಿಸುವ ಆ ದೇವಿಯು ಪರಶುರಾಮನಿಂದ ಪೂಜಿಸಲ್ಪಟ್ಟು ಹೀಗೆ ಸ್ತೋತ್ರಮಾಡಲ್ಪಟ್ಟಳು. ॥೧೩-೧೪॥

ದೇವಿ, ನೀನು ಗಿರಿಜಾರಮಣನಾದ ಶಿವನಿಗೆ ಪ್ರೀತಿಪಾತ್ರಳಾಗಿರುವೆ. ಭಕ್ತರ ಸಕಲ ಮನೋವ್ಯಥೆಗಳನ್ನೂ ಹೋಗಲಾಡಿಸುವೆ ಪೂಜ್ಯಳಾದ ರೇಣುಕಾದೇವಿಯೇ, ನಿನ್ನ ಭಕ್ತರ ಮನೋವ್ಯಥೆಗಳನ್ನು ನಿವಾರಣೆಮಾಡುವ ನೀನು

ಇತ್ಥಂ ಪರಶುರಾಮೇಣ ಸಂಸ್ತುತಾ ತತ್ರ ರೇಣುಕಾ ।
ತ್ರಿಶಾಂಭವೇಶಸ್ಥಾನವರೇ ಸಂಸ್ಥಿತಾ ಸರ್ವಕಾಮದಾ ॥೧೬॥

ತತ್ಪ್ರಾಚ್ಯಾಮಾಲವಾಲೇಶಂ ಸ್ಥಾನಂ ಮುಕ್ತಿವನೋಷಿತಂ ।
ಆಲವಾಲೇಶ್ವರೋ ದೇವಃ ಪೂಜಿತೋ ಮುನಿಭಿಃಸ್ತುತಃ ॥೧೭॥

॥ ಮುನಯ ಊಚುಃ ॥

ನಮಸ್ತೇ ದೇವಾಯ ತ್ರಿಪುರದಳನಾಯಾಂತಕಭಿದೇ
ಜಗತ್ಪಾತ್ರೇ ಹಂತ್ರೇ ತ್ರಿನಯನ ಹರಾಪಾರಕರುಣ ।
ಪ್ರಸೀದಾಸ್ಮಭ್ಯಂ ತ್ವಂ ತವ ಶಿವ ಪದಾಬ್ಜಂ ಹಿ ಶಿರಸಾ
ಪ್ರಪನ್ನಾಃ ಸಂಮಗ್ನಾಃ ಭವಜಲಧಿಮಧ್ಯೇ ಮುನಿಗಣಾಃ ॥೧೮॥

---

ನನ್ನನ್ನು ಕಾಪಾಡು; ದುಃಖಗಳನ್ನೆಲ್ಲಾ ಹೋಗಲಾಡಿಸಿ, ದೇವತೆಗಳ ಮಾನಸಿಕ ವ್ಯಥೆಗಳನ್ನು ಯಾವಾಗಲೂ ನಾಶಮಾಡುತ್ತಿರುವೆ. ಮೂರು ಕಣ್ಣುಗಳುಳ್ಳ ರೇಣುಕಾದೇವಿಯೇ, ಈ ಸ್ಥಾನದಲ್ಲಿಯೇ ವಿರಾಜಿಸುತ್ತಿರುವ ನಿನಗೆ ಅನಂತ ನಮಸ್ಕಾರಗಳು ಎಂದು ಪರಶುರಾಮನು ರೇಣುಕಾದೇವಿಯನ್ನು ಸ್ತೋತ್ರ ಮಾಡಿದನು. ॥೧೫॥

ಹೀಗೆ ಉತ್ತಮವಾದ ತ್ರಿಶಾಂಭವೇಶಸ್ಥಾನದಲ್ಲಿ ನೆಲಸಿ, ಸಕಲ ಮನೋರಥಗಳನ್ನೂ ಕೊಡುವ ರೇಣುಕಾ (ಪಾರ್ವತೀ) ದೇವಿಯು ಆ ಪರಶುರಾಮನಿಂದ ಸ್ತೋತ್ರಮಾಡಲ್ಪಟ್ಟಳು. ಅಲ್ಲಿಂದ ಪೂರ್ವದಿಕ್ಕಿನಲ್ಲಿ ಮುಕ್ತಿವನದಲ್ಲಿ ನೆಲಸಿರುವ ಆಲವಾಲೇಶಸ್ಥಾನವಿರುವುದು. ಅಲ್ಲಿರುವ ಆಲವಾಲೇಶ್ವರದೇವನು ಮುನಿಗಳಿಂದ ಪೂಜಿಸಲ್ಪಟ್ಟು ಸ್ತುತಿಸಲ್ಪಟ್ಟಿರುವನು. ॥೧೬-೧೭॥

ತ್ರಿಪುರರನ್ನು ಸಂಹರಿಸಿ ಯಮನನ್ನು ನಿಗ್ರಹಿಸಿದವನೂ, ಪ್ರಪಂಚವನ್ನು ರಕ್ಷಣೆಮಾಡಿ ಪ್ರಳಯಕಾಲದಲ್ಲಿ ನಾಶಮಾಡುವವನೂ, ಮೂರು ಕಣ್ಣುಗಳುಳ್ಳವನೂ, ತುಂಬಾ ದಯಾಪೂರ್ಣನೂ, ಆದ ನಿನಗೆ ನಮಸ್ಕಾರಮಾಡುವೆನು. ಶಿವನೇ, ನಮ್ಮ ಮೇಲೆ ಪ್ರಸನ್ನನಾಗು, ಸಂಸಾರವೆಂಬ ಸಮುದ್ರಮಧ್ಯದಲ್ಲಿ ಮುಳುಗಿರುವ ಈ ಮುನಿಗಣವೆಲ್ಲವೂ ತಲೆಬಾಗಿ ನಿನ್ನ ಪಾದಕಮಲಗಳಿಗೆ ನಮಸ್ಕರಿಸಿ, ಶರಣಾಗತರಾಗಿರುವೆವೆಂದು ಮುನಿಗಳು ಸ್ತೋತ್ರಮಾಡಿದರು. ॥೧೮॥

ಆಲವಾಲೇಶ್ವರಸ್ತೇಷಾಂ ಮುಕ್ತಿಸ್ಥಾನನಿವಾಸಿನಾಂ ।
ದದೌ ಮಹೇಶ್ವರಸ್ತತ್ರ ಸ್ಥಾನಂ ತತ್ತು ಚಿರಂತನಂ ॥೧೯॥

ತದುತ್ತರೇ ಶಿವಸ್ಥಾನಂ ಪಂಚವರ್ಣೇಶ್ವರಾಭಿಧಂ ।
ಪಂಚಭೂತಾರ್ಚಿತಂ ಲಿಂಗಂ ಪಂಚವರ್ಣೇಶ್ವರಾಭಿಧಂ ॥೨೦॥

ಪ್ರಳಯೇ ಸಮನುಪ್ರಾಪ್ತೇ ಭೂತೈರ್ಯೋಽಭೂಚ್ಚ ಪೂಜಿತಃ ।
ಆಕಾಶೇನಾರ್ಚಿತಃ ಪ್ರಾಚ್ಯಾಮಾದಿಪಶ್ಚಾನ್ಮುಖೇಽಂಭಸಾ ॥೨೧॥

ವಾಯುನಾ ಚೋತ್ತರೇ ವಕ್ತ್ರೇ ತೇಜಸಾ ತತ್ರ ದಕ್ಷಿಣೇ ।
ಭೂಮ್ಯಾ ಭೂತಪತಿಃ ಶಂಭುರರ್ಚಿತಃ ಸಂಸ್ತುತಃ ಸದಾ ॥೨೨॥

ಭೈರವೋ ವಸತೀಶಾನಪ್ರಸಾದೇನೋರ್ಧ್ವಭಾಗತಃ ॥೨೩॥

॥ ಭೂತಾ ಊಚುಃ ॥

ಭವ ಭೂತಪತೇ ಪಿನಾಕಪಾಣೇ
ಹರ ಗಂಗಾಧರ ಪಾಹಿ ನಃ ಸದಾ ತ್ವಂ ।

---

ಆ ಮುಕ್ತಿಸ್ಥಾನದಲ್ಲಿ ವಾಸಮಾಡುವವರಿಗೆ ಆಲವಾಲೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ಮಹೇಶ್ವರನು ಬಹಳ ಕಾಲದವರೆಗೆ ಶಾಶ್ವತಸುಖವನ್ನೀಯುವ ಸ್ಥಾನವನ್ನು ಕರುಣಿಸುವನು. ಅದಕ್ಕೆ ಉತ್ತರದಲ್ಲಿ ಪಂಚವರ್ಣೇಶ್ವರನೆಂಬ ಹೆಸರಿನ ಶಿವಸ್ಥಾನವಿರುವುದು. ಪೃಥಿವಿ, ಅಪ್, ತೇಜಸ್ಸು, ವಾಯು ಮತ್ತು ಆಕಾಶಗಳೆಂಬ ಐದು ಭೂತಗಳಿಂದ ಪೂಜಿಸಲ್ಪಟ್ಟ ಶಿವಲಿಂಗವು ಪಂಚವರ್ಣೇಶ್ವರನೆಂದು ಪ್ರಸಿದ್ಧ ವಾಗಿದೆ. ॥೧೯-೨೦॥

ಪ್ರಳಯಕಾಲವು ಸಮೀಪಿಸಲು, ಪಂಚಭೂತಗಳೂ ಬಂದು ಆ ಪಂಚ ವರ್ಣೇಶ್ವರನನ್ನು ಪೂಜೆಮಾಡಿದ್ದವು. ಪೂರ್ವಮುಖದಲ್ಲಿ ಆಕಾಶವೂ, ಪಶ್ಚಿಮ ಮುಖದಲ್ಲಿ ಜಲವೂ, ಉತ್ತರಮುಖದಲ್ಲಿ ವಾಯುವೂ ದಕ್ಷಿಣಭಾಗದಲ್ಲಿ ತೇಜಸ್ಸೂ, ಭೂಮಿಯಲ್ಲಿ ಪೃಥಿವಿಯೂ ಈ ರೀತಿ ಪಂಚಭೂತಗಳಿಂದಲೂ ಭೂತಗಳಿಗೆ ಒಡೆಯ ನಾದ ಶಂಭುವು ಪೂಜಿಸಲ್ಪಟ್ಟು, ಸ್ತೋತ್ರಮಾಡಲ್ಪಟ್ಟನು. ಭೈರವನು ಈಶ್ವರನ ಅನುಗ್ರಹಪಡೆದು ಅಲ್ಲಿಂದ ಉತ್ತರಭಾಗದಲ್ಲಿ ವಾಸಮಾಡುತ್ತಿರುವನು. ॥೨೧-೨೨-೨೩॥

ಜಗದುತ್ಪತ್ತಿಕಾರಣನೂ, ಪೃಥಿವೀ, ಅಪ್, ತೇಜಸ್ಸು, ವಾಯು ಮತ್ತು

ಜಗತಃ ಕಾರಣಕಾರಣಾವ್ಯಯೋಽತ್ರ
ತವಚಾಂಶಾ ಜಗತ್ಸು ವಸಾಮ ಭೂತಾಃ ॥೨೪॥

ಇತ್ಥಂ ಪಂಚಮಹಾಭೂತಾಸ್ತತ್ರೈವೇಶಂ ಪಿನಾಕಿನಂ ।
ಪೂಜಯಿತ್ವಾ ವಸಂತೀಶಸೋಮಸ್ಕಂಧೋರ್ಧ್ವಭಾಗಕೇ ॥೨೫॥

ತತ್ಪ್ರಾಚ್ಯಾಂ ಮಾಧವೋಽಪೀಶಂ ಸಮಾರಾಧ್ಯ ತ್ರಿವಿಕ್ರಮಃ ।
ವಸೇದೀಶಪ್ರಸಾದೇನ ಹರಿಃ ಶೇತೇ ತದುತ್ತರೇ ॥೨೬॥

ಸ್ವಭಕ್ತಕಾಮದಸ್ತತ್ರ ಶಿವಂ ಧ್ಯಾಯನ್ಸದಾ ಹೃದಿ ।
ತುಷ್ಟಾವಚೇಶ್ವರಂ ಪ್ರಾಚ್ಯಾಂ ಸ್ಥಾನಂ ತತ್ರ ಸುರಾವೃತೇ ॥೨೭॥

ಮೇಧ್ಯಕಲ್ಪೇ ವೃಷಸ್ತತ್ರ ತತಾಪ ಪರಮಂ ತಪಃ ।
ಶಿವಸ್ಯೋದ್ವಹನೇ ಶಕ್ತಿಂ ಪ್ರಸಾದಾತ್ಪ್ರಾಪ್ತವಾನ್ ವೃಷಃ ॥೨೮॥

---

ಆಕಾಶಗಳೆಂಬ ಪಂಚಭೂತಮಯುವಾದ ಸಕಲಚರಾಚರಪ್ರಾಣಿಗಳಿಗೂ ಒಡೆಯನೂ, ಪಿನಾಕವೆಂಬ ಬಿಲ್ಲನ್ನು ಧರಿಸಿರುವವನೂ, ಭಕ್ತರ ಪಾಪಗಳನ್ನು ನಾಶಮಾಡುವವನೂ, ಗಂಗಾನದಿಯನ್ನು ಜಡೆಯಲ್ಲಿ ಹೊತ್ತಿರುವವನೂ ಆದ ಸ್ವಾಮಿಯೇ, ನೀನು ಯಾವಾಗಲೂ ನಮ್ಮನ್ನು ಕಾಪಾಡು, ಪ್ರಪಂಚಕ್ಕೆ ಕಾರಣಭೂತರಾದ ಬ್ರಹ್ಮಾದಿದೇವತೆಗಳಿಗೂ ಕಾರಣನೂ (ಉತ್ಪಾದಕನೂ) ನಾಶರಹಿತನೂ, ನೀನೇ ಆಗಿರುವೆ. ದೇವ, ಮಹಾದೇವ, ನಿನ್ನ ದೇಹಜನ್ಯರಾದ ಈ ನಾವು ಪಂಚಭೂತಗಳೆಂದು, ಪ್ರಪಂಚಗಳಲ್ಲಿ ವಾಸಮಾಡುತ್ತಿರುವೆವು. ಎಂದು ಭೂತಗಳು ಸ್ತೋತ್ರ ಮಾಡಿದವು. ॥೨೪॥

ಹೀಗೆ ಐದು ಮಹಾಭೂತಗಳೂ ಅಲ್ಲಿಯೇ ಪಿನಾಕಪಾಣಿಯಾದ ಮಹೇಶ್ವರನನ್ನು ಪೂಜಿಸಿ ಈಶ್ವರನ ಸೋಮಸ್ಕಂಧದ ಮೇಲ್ಭಾಗದಲ್ಲಿ ವಾಸಮಾಡುತ್ತಿರುವುವು. ಅದಕ್ಕೆ ಪೂರ್ವದಲ್ಲಿ ತ್ರಿವಿಕ್ರಮರೂಪಿಯಾದ ಲಕ್ಷ್ಮೀಕಾಂತನೂ ಈಶ್ವರನನ್ನು ಪೂಜೆಮಾಡಿ, ಆ ಈಶ್ವರನ ಅನುಗ್ರಹವನ್ನು ಹೊಂದಿ ವಾಸಮಾಡುತ್ತಿರುವನು. ಅಲ್ಲಿಂದ ಉತ್ತರ ದಿಕ್ಕಿನಲ್ಲಿ ವಿಷ್ಣುವು ಮಲಗಿ ನಿದ್ರಿಸುತ್ತಿರುವನು. ॥೨೫-೨೬॥

ಭಕ್ತರ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸುವ ವೃಷಭನು ಆಕಾಶೇಶ್ವರನನ್ನು ಹೃದಯದಲ್ಲಿ ಧ್ಯಾನಮಾಡುತ್ತಾ, ಸುರರಿಂದ ವ್ಯಾಪೃತವಾದ ಮತ್ತು ಪವಿತ್ರವಾದ ಆ ಪ್ರದೇಶದಲ್ಲಿ ಅಖಂಡವಾದ ತಪಸ್ಸನ್ನಾಚರಿಸಿದನು. ಅದರ ಫಲವಾಗಿ ವೃಷಭನು

ತತ್ರ ಸ್ಥಾನೇ ಸ ತುಷ್ಟಾವ ದೇವದೇವಮುಮಾಪತಿಂ ॥೨೯॥

॥ ವೃಷ ಉವಾಚ ॥

ನಮೋ ನಮಸ್ತೇ ವೃಷವಾಹ ಶಂಭೋ
ಮಹಾಮಹಾದೇವವಿಭೋ ಪ್ರಸೀದ ।
ತ್ವತ್ತುಂಗ ದೇಹೋದ್ವಹನೇದ್ಯ ಶಕ್ತಿಂ
ಪ್ರದೇಹಿ ಮೇ ಲೋಕಪತೇ ಮಹೇಶ ॥೩೦॥

ತಸ್ಮೈ ವೃಷಪತೌ ಬಾಲೇ ಸ್ಥಾನೇ ತಸ್ಮಿನ್ ದದೌ ಹರಃ ।
ತಸ್ಮಿಂಸ್ಥಾನಂ ತು ತತ್ಪ್ರೋಕ್ತಂ ವೃಷವಾಹೇಶ್ವರಾಭಿಧಂ ॥೩೧॥

ಸಹ್ಯೋದ್ಭವೇಯಂ ಶಿವಲಿಂಗಸಂಗತಾ
ತಟದ್ವಯೇ ಪುಣ್ಯಗಣೈಶ್ಚ ಸೇವ್ಯಾ ।
ತತ್ರಾಧಿಕಾ ಸಾ ಸುಕೃತೋದಯಾಭಿ
ಸ್ತಸ್ಯೋತ್ತರೇ ಸಾ ಮಣಿಕರ್ಣಿಕೇತಿ ॥೩೨॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶಿವಸ್ಥಾನವೈಭವೇ
ತ್ರಿಂಶೋಧ್ಯಾಯಃ

---

ಶಿವಾನುಗ್ರಹವನ್ನು ಪಡೆದು ಅವನನ್ನು ಹೊರುವ ಸಾಮರ್ಥ್ಯವನ್ನು ಪಡೆದನು. ಮತ್ತು ಆ ಸಮಯದಲ್ಲಿ ವೃಷಭನು ಈ ರೀತಿ ಸ್ತೋತ್ರಮಾಡಿದನು. ॥೨೭-೨೮-೨೯॥

ಎಲೈ ವೃಷವಾಹನನೇ, ಶಂಕರನೇ, ಮಹಾದೇವನೇ, ನೀನು ಸರ್ವವ್ಯಾಪಕನು. ಸಕಲ ಲೋಕ ರಕ್ಷಕನು. ನಿನ್ನ ಉನ್ನತವಾದ ಶರೀರವನ್ನು ಹೊರುವ ಸಾಮರ್ಥ್ಯವನ್ನು ನನಗೆ ಕರುಣಿಸು. ಮಹಾದೇವನೇ, ನನ್ನಲ್ಲಿ ಅನುಗ್ರಹವಿಡು. ॥೩೦॥

ಎಲೌ ದೇವಿಯೇ, ಆಗ ಪರಶಿವನಾದ ನಾನು ಅವನ ಭಕ್ತಿಗೆ ಮೆಚ್ಚಿ ವೃಷಭನಿಗೆ ಅದೇ ರೀತಿ ವರವಿತ್ತೆನು. ಅಂದಿನಿಂದ ಆ ಶಿವಲಿಂಗಕ್ಕೆ ವೃಷವಾಹೇಶ್ವರವೆಂಬ ಹೆಸರು ಶಾಶ್ವತವಾಗಿ ನಿಂತಿದೆ. ॥೩೧॥

ಹೀಗೆ ಶಿವಲಿಂಗ ಸಂಬಂಧವುಳ್ಳ ಎರಡು ದಡಗಳಲ್ಲಿಯೂ ಪುಣ್ಯಕ್ಷೇತ್ರಗಳನ್ನು ಹೊಂದಿ ಸಹ್ಯಾದ್ರಿಯಲ್ಲಿ ಹುಟ್ಟಿ ಹರಿಯುವ ಈ ನದಿಯು ಆಸ್ತಿಕರ ಸುಕೃತರಾಶಿ

ಯನ್ನು ಅಭಿವೃದ್ಧಿಗೊಳಿಸುತ್ತಾ ಉತ್ತರ ಭಾಗದಲ್ಲಿ ಮಣಿಕರ್ಣಿಕೆಯೆಂಬ ಹೆಸರನ್ನು ಪಡೆದು ಸೌಮ್ಯರೀತಿಯಲ್ಲಿ ಮುಂದುವರಿಯುತ್ತಿರುವುದು ಎಂದು ಶಿವೋಕ್ತಿಯನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ||೩೨||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶಿವಸ್ಥಾನವೈಭವವನ್ನು ತಿಳಿಸುವ ಮೂವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಏಕತ್ರಿಂಶೋಽಧ್ಯಾಯಃ

||ಸ್ಕಂದ ಉವಾಚ ||

**ಕಾವೇರ್ಯಾ ದಕ್ಷಿಣೇ ತೀರೇ ಸ್ಥಾನಂ ಶ್ವೇತವನಾಭಿಧಂ ।**
**ಸೇವಿತಂ ದೇವಮುನಿಭಿರ್ಗಂಧರ್ವೈರಸುರೈರಪಿ ॥೧॥**

**ಶ್ವೇತಾರಣ್ಯೇಶ್ವರಃ ಸಾಕ್ಷಾದ್ಭವಾರಣ್ಯದವಾನಲಃ ।**
**ತತ್ರ ನದ್ಯೋರ್ಮಧ್ಯಗತಂ ಕ್ಷೇತ್ರಂ ಶಂಭೋಃ ಪ್ರಿಯಂ ಸದಾ ॥೨॥**

**ದಕ್ಷಿಣೇ ತತ್ರ ಕಾವೇರೀ ಉತ್ತರೇ ಮಣಿಕರ್ಣಿಕಾ ।**
**ಮಧ್ಯೇ ವಹತಿ ತತ್ರೈವ ಕಾವೇರೀ ಸರಿತಾಂ ವರಾ ॥೩॥**

---

## ಮೂವತ್ತೊಂದನೆಯ ಅಧ್ಯಾಯ

ಶ್ರೀಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಯನ್ನು ಕುರಿತು ಮತ್ತೂ ಕೆಲವು ಈಶ್ವರಕ್ಷೇತ್ರಗಳ ಮಹಿಮೆಯನ್ನು ವಿವರಿಸತೊಡಗಿದನು ಕಾವೇರೀನದಿಯ ದಕ್ಷಿಣ ಭಾಗದಲ್ಲಿ ಶ್ವೇತವನವೆಂಬ ಶಿವಕ್ಷೇತ್ರವಿರುವುದು. ಅಲ್ಲಿ ಶ್ವೇತಾರಣ್ಯೇಶ್ವರನೆಂಬ ಹೆಸರಿನಿಂದ ಮಹಾದೇವನು ಸಂಸಾರದುಃಖವೆಂಬ ಅರಣ್ಯಕ್ಕೆ ಕಾಡುಕಿಚ್ಚಿನಂತೆ ನೆಲಸಿರುವನು. ಆ ಕ್ಷೇತ್ರವು ಎರಡು ನದಿಗಳ ಮಧ್ಯದಲ್ಲಿದ್ದು ಶಂಕರನಿಗೆ ಅತ್ಯಂತ ಪ್ರಿಯವೆನಿಸಿಕೊಂಡಿದೆ. ||೧-೨||

ಆ ಕ್ಷೇತ್ರಕ್ಕೆ ದಕ್ಷಿಣದಲ್ಲಿ ಕಾವೇರಿಯೂ, ಉತ್ತರದಲ್ಲಿ ಮಣಿಕರ್ಣಿಕೆಯೂ ಹರಿಯುತ್ತಿರುವುದು. ಅಲ್ಲದೆ ಆ ಕ್ಷೇತ್ರದ ಮಧ್ಯಭಾಗದಲ್ಲಿ ಕಾವೇರಿಯು ಪ್ರವಹಿ

ಜೀವನ್ಮುಕ್ತಿಪ್ರದಂ ಕ್ಷೇತ್ರಂ ವಸತಾಂ ತತ್ರ ಮೋಕ್ಷದಂ ।
ಮೃತಾನಾಂ ತತ್ರ ಜಂತೂನಾಂ ದಿಶೇದೀಶೋ ಮನುಂ ಪರಂ ॥೪॥

ಸವ್ಯೇತರೇ ತು ಶ್ರವಣೇ ಶ್ರೀಮತ್ಪಂಚಾಕ್ಷರಂ ಪರಂ ।
ಕಾವೇರ್ಯಾಂ ತು ಜಲೇ ಸ್ನಾತ್ವಾ ದೃಷ್ಟ್ವಾ ಶ್ವೇತವನೇಶ್ವರಂ ॥೫॥

ಸ ಜೀವನ್ಮುಚ್ಯತೇ ತತ್ರ ನರಃ ಸಂಸಾರಸಾಗರಾತ್ ।
ಬ್ರಹ್ಮವಿದ್ಯಾಪತಿಶ್ಚಾಥ ಶ್ವೇತಾರಣ್ಯೇಶ್ವರೋ ಹರಃ ॥೬॥

ದದಾತಿ ಮುಕ್ತಿಂ ಭಕ್ತಾನಾಂ ಸ್ವಲಿಂಗಂ ಪರಿಸೇವತಾಂ ।
ತತ್ರೈವ ಸೋಮವಹ್ನ್ಯರ್ಕನೇತ್ರಜಾತೋರುಬಿಂದವಃ ॥೭॥

ಸರಸಾಂ ತ್ರಿತಯಂ ತತ್ರ ಸ್ನಾಸ್ಯತಾಮಘನಾಶನಂ ।
ಶಿಕ್ಷಯಂತಿ ಚ ಪಾಪಾನಿ ಸಂಗಸ್ತತ್ರ ಮಹೇಶಿತುಃ ॥೮॥

---

ಸುತ್ತಾ, ಅದನ್ನು ಮುಕ್ತಿಪ್ರದವನ್ನಾಗಿ ಮಾಡಿರುವುದು. ಆ ಕ್ಷೇತ್ರದಲ್ಲಿ ವಾಸ ಮಾಡುತ್ತಾ ದೇಹತ್ಯಾಗಮಾಡುವ ಜಂತುಗಳಿಗೆಲ್ಲಾ ಮಹೇಶ್ವರನು ಬಲಗಿವಿಯಲ್ಲಿ ಶಿವಪಂಚಾಕ್ಷರೀಮಂತ್ರವನ್ನು ಉಪದೇಶಿಸುತ್ತಾ ಅವರಿಗೆ ಮುಕ್ತಿಯನ್ನು ಕರುಣಿಸುವನು. ॥೩-೪॥

ಕಾವೇರೀನದಿಯ ನೀರಿನಲ್ಲಿ ಸ್ನಾನಮಾಡಿ, ಶ್ವೇತವನೇಶ್ವರನನ್ನು ದರ್ಶನ ಮಾಡಿದವರು ಜೀವನ್ಮುಕ್ತರಾಗುವರು ಮತ್ತು ಬ್ರಹ್ಮವಿದ್ಯಾಪತಿಯಾದ ಶ್ವೇತವನೇಶ್ವರನ ಸೇವೆಯಿಂದ ಎಲ್ಲರೂ ಭವಸಾಗರದಿಂದ ಪಾರಾಗುವರು. ಅದರಂತೆ ಅವರಿಗೆ ಮತ್ತೆ ನರಜನ್ಮವು ದೊರೆಯಲಾರದು. ॥೫-೬॥

ಆ ಶಿವಲಿಂಗವನ್ನು ಪೂಜಿಸುವವರಿಗೆ ನಿಜವಾಗಿಯೂ ಮುಕ್ತಿಯು ದೊರಕುವುದು. ಅಲ್ಲಿಯೇ ಶಂಕರನ ನೇತ್ರತ್ರಯಗಳೆನಿಸಿದ ಸೂರ್ಯ, ಚಂದ್ರ, ಅಗ್ನಿ ಎಂಬ ಮೂರುಕಣ್ಣುಗಳಿಂದಲೂ ಒಂದೊಂದು ನೀರಿನ ಬಿಂದು ಕೆಳಗೆ ಬಿದ್ದು ಅಲ್ಲಿ ಮೂರು ಸರೋವರಗಳಾಗಿರುವುವು. ಅಲ್ಲಿ ಸ್ನಾನಮಾಡಿದವರಿಗೆ ಸರ್ವಪಾಪವೂ ನಾಶವಾಗಿ ಮಹೇಶ್ವರನಸಾನ್ನಿಧ್ಯವು ಅನಾಯಾಸವಾಗಿ ದೊರಕುವುದು. ॥೭-೮॥

ಸ್ಥಾನೇ ಪುಣ್ಯತಮಾನ್ಯೇವ ಶಿವನೇತ್ರೋದ್ಭವಾನಿ ಚ ।
ವಟೋರುವಿಟಪೀಮೂಲೇ ಸ್ನಾತ್ವಾ ತೀರ್ಥೇಷು ಚ ತ್ರಿಷು ॥೯॥

ತರ್ಪಯೇತ್ತೇಷು ಚ ಪಿತೄನ್ ವಟಮೂಲೋದಬಿಂದವಃ ।
ಭೋಜಯೇದ್ಬ್ರಾಹ್ಮಣಾಂಸ್ತತ್ರ ಪಿತೃಶ್ರಾದ್ಧೇ ನಿಮಂತ್ರಿತಾನ್ ॥೧೦॥

ಸ್ವಪಿತೄಂಸ್ತಾರಯೇನ್ಮರ್ತ್ಯಸ್ತೀರ್ಥೇ ತತ್ರ ವಿಮುಕ್ತಿದೇ ।
ಪುಣ್ಯಪರ್ವಸು ಯಾತ್ರಾದಿ ಕಾವೇರ್ಯಾಃ ಸಂಗಮೇ ಸರಃ ॥೧೧॥

ಸ್ನಾತ್ವಾ ಶ್ರೀ ಸಂಗಮೇಶಾನಂ ದೃಷ್ಟ್ವಾ ಸಂತರ್ಪ್ಯ ವೈ ಪಿತೄನ್ ।
ಗ್ರಹಣೇ ಸೋಮಸೂರ್ಯೋತ್ಥೇ ಪೌಷಾಷಾಢಾದಿದರ್ಶಯೋಃ ॥೧೨॥

ಛಾಯಾವನೇಶಂ ದೃಷ್ಟ್ವಾತ್ರ ಸ್ನಾತ್ವಾ ತೀರ್ಥೇಷು ಚ ತ್ರಿಷು ।
ದೃಷ್ಟ್ವಾ ಶ್ವೇತವನಾಧೀಶಂ ಬ್ರಹ್ಮವಿದ್ಯಾಂ ಶಿವಾಮಪಿ ॥೧೩॥

ಭದ್ರಕಾಲೀ ತಪ್ತಘೋರಂ ಧೃತಶೂಲೋರುದಂಷ್ಟ್ರಕೌ ।
ನಿತ್ಯಂ ತೌ ತತ್ರ ದೃಷ್ಟ್ವೈವ ತೀರ್ಣಸ್ತೇನ ಭವಾರ್ಣವಃ ॥೧೪॥

ಆ ಮೂರು ಸರೋವರಗಳೂ ಶಿವನೇತ್ರೋದ್ಭವಗಳಾಗಿರುವುದರಿಂದ ಅವು ಪುಣ್ಯತಮವೆಂಬುದನ್ನು ಮತ್ತೆ ಒತ್ತಿ ಹೇಳಬೇಕಿಲ್ಲ. ವಟವೃಕ್ಷದ ಬುಡದಲ್ಲಿರುವ ಆ ತೀರ್ಥಗಳಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣಾದಿಗಳನ್ನು ಕೊಟ್ಟು ನಿಮಂತ್ರಿತರಾದ ಬ್ರಾಹ್ಮಣರನ್ನು ತೃಪ್ತಿಪಡಿಸಿ ತನ್ಮೂಲಕ ಪಿತೃಶ್ರಾದ್ಧ ಮಾಡಬೇಕು. ॥೯-೧೦॥

ಆದರಿಂದ ಅವನ ಪಿತೃಗಳೆಲ್ಲಾ ಕೂಡಲೇ ನರಕದಿಂದ ಪಾರಾಗುವರು ಕಾವೇರೀನದಿಯು ಇತರ ನದಿಗಳೊಡನೆ ಸೇರುವ ಸಂಗಮಸ್ಥಾನದಲ್ಲಿ ಪರ್ವದಿನಗಳು ಬಂದಾಗ ಸ್ನಾನಮಾಡಿ, ಅಲ್ಲಿರುವ ಸಂಗಮೇಶ್ವರನನ್ನು ದರ್ಶನಮಾಡಿದರೆ ಮಾನವನು ಅತಿಶಯ ಪುಣ್ಯಶಾಲಿಯಾಗುವನು. ಸೂರ್ಯ ಚಂದ್ರಗ್ರಹಣಕಾಲದಲ್ಲಿಯೂ, ಪುಷ್ಯ ಮತ್ತು ಆಷಾಢ ಇವೇ ಮುಂತಾದ ತಿಂಗಳುಗಳ ಅಮಾವಾಸ್ಯೆಯ ದಿನ, ಮೇಲೆ ಹೇಳಿದ ತೀರ್ಥತ್ರಯಗಳಲ್ಲಿ ಸ್ನಾನಮಾಡಿ ಛಾಯಾವನೇಶ್ವರನನ್ನೂ, ಶ್ವೇತವನೇಶ್ವರನನ್ನೂ ದರ್ಶನಮಾಡಿದುದೇ ಆದರೆ ಅವನು ಬ್ರಹ್ಮಜ್ಞಾನಿಯಾಗುವನು. ॥೧೧-೧೨-೧೩॥

ತ್ರಿಶೂಲ ಮತ್ತು ಕ್ರೂರದಂಷ್ಟ್ರಗಳನ್ನು ಹೊಂದಿರುವ ಭದ್ರಕಾಲೀಶ್ವರ ಮತ್ತು ತಪ್ತಘೋರೇಶ್ವರ ಇವರನ್ನು ಅಲ್ಲಿ ನಿತ್ಯವೂ ದರ್ಶನಮಾಡಿದವರು ಸಾಂಸಾರಿಕ

ಶ್ವೇತೋ ನಾಮ ನೃಪಃ ಪೂರ್ವಮಾಭವತ್ಸೋಮವಂಶಜಃ ।
ಸರ್ವಸದ್ಗುಣಸಂಪನ್ನೋ ನಿಚುಲಾಪುರನಾಯಕಃ ॥೧೫॥

ಪಂಚವಿಂಶತ್ತಮೇ ವರ್ಷೇ ತಸ್ಯ ರಾಜ್ಞೋ ಗೃಹೇ ಮೃತಃ ।
ವಾಚಾ ಚಾಹ ನೃಪಂ ದೃಷ್ಟ್ವಾ ಗೌತಮೋ ಮೃತ್ಯುಮಾಗತಂ ॥೧೬॥

॥ ಗೌತಮ ಉವಾಚ ॥

ಗಚ್ಛ ರಾಜನ್ಮಮಾದೇಶಾತ್ಕಾವೇರ್ಯಾ ದಕ್ಷಿಣೋತ್ತರೇ ।
ಶ್ವೇತಾರಣ್ಯಾಖ್ಯಮೀಶಾನಂ ಶರಣ್ಯಂ ಶರಣಂ ವ್ರಜ ॥೧೭॥

ತವಾದ್ಯಾಯುಷಶ್ಶಾಂತಿರ್ವರ್ಷೇ ಮೃತ್ಯುರುಪಸ್ಥಿತಃ ।
ಮೃತ್ಯುನಾಭಿಗೃಹೀತಸ್ಯ ಕಿಂ ರಾಜ್ಯೇನಾಪ್ಯನೇನ ತೇ ॥೧೮॥

ಮೃತ್ಯುಂಜಯಂ ವಿನಾ ನಾನ್ಯಸ್ತವ ಮೃತ್ಯುನಿವಾರಕಃ ।
ಶ್ವೇತಾರಣ್ಯೇಶ್ವರಂ ಯಾಹಿ ಶರಣ್ಯಂ ಪಾರ್ವತೀಪತಿಂ ॥೧೯॥

---

ದುಃಖಗಳಿಂದ ಸುಲಭವಾಗಿ ಪಾರಾಗುವರು. ಹಿಂದೆ ಶ್ವೇತರಾಜನೆಂಬ ಹೆಸರಿನ ಒಬ್ಬ ಚಂದ್ರವಂಶದರಸು ಸಕಲ ಸದ್ಗುಣಸಂಪನ್ನನಾಗಿ, ನಿಚುಲಾಪಟ್ಟಣದಲ್ಲಿ ವಾಸಿಸುತ್ತಾ ಸುಖದಿಂದಿದ್ದನು. ಆ ರಾಜನಿಗೆ ಇಪ್ಪತ್ತೈದನೆಯ ವಯಸ್ಸು ಪ್ರಾಪ್ತವಾದಾಗ ಮೃತ್ಯುವು ಸಮೀಪಿಸಿದುದನ್ನು ನೋಡಿ, ಗೌತಮಮಹರ್ಷಿಯು ರಾಜನೊಡನೆ ಹೀಗೆಂದನು. ॥೧೫-೧೬॥

ಎಲೈ ರಾಜನೇ, ಈ ವಯಸ್ಸಿನಲ್ಲಿ ನಿನಗೆ ಮರಣಕಾಲವು ಸಮೀಪಿಸುತ್ತಿದೆ. ಮೃತ್ಯುವಶನಾಗಲಿರುವ ನಿನಗೆ ಈ ರಾಜ್ಯದಿಂದಾಗಬೇಕಾಗಿರುವುದೇನು? ಇಲ್ಲಿಗೆ ಸ್ವಲ್ಪ ದೂರದಲ್ಲಿ ಕಾವೇರೀನದಿಯ ದಕ್ಷಿಣ ಮತ್ತು ಉತ್ತರಭಾಗದಲ್ಲಿ ಶ್ವೇತಾರಣ್ಯವೆಂದು ಪ್ರಸಿದ್ಧಿಗೊಂಡಿರುವ ಕ್ಷೇತ್ರವೊಂದಿರುವುದು. ಅಲ್ಲಿರುವ ಪರಶಿವಲಿಂಗವನ್ನು ಸೇವಿಸು. ॥೧೭-೧೮॥

ಮೃತ್ಯುಂಜಯನನ್ನು ಬಿಟ್ಟರೆ ಮೃತ್ಯುವನ್ನು ಪರಿಹರಿಸುವವನು ಯಾರು? ಆದಕ್ಕಾಗಿ ಈಗಲೇ ನೀನು ಶ್ವೇತಾರಣ್ಯಕ್ಕೆ ಹೋಗಿ ಅಲ್ಲಿರುವ ಪರಶಿವನನ್ನು ಸೇವಿಸು. ಶಂಕರನು ನಿನಗೆ ಶಿವಪಂಚಾಕ್ಷರಿಯನ್ನುಪದೇಶಿಸಿ ಮೃತ್ಯುವಿನಿಂದ

ಪಂಚಾಕ್ಷರಮುಪಾದಿಶ್ಯ ಭಸ್ಮರುದ್ರಾಕ್ಷಧಾರಣಃ ।
ಶ್ರುತ್ವಾ ಶ್ವೇತೋ ನೃಪೋ ವಿಪ್ರಾ ಜಾಪ್ಯತೇ ತೇನ ರುದ್ರಕಂ ॥೨೦॥

ಆಪ್ರೇಷಯತ್ತಂ ನೃಪತಿಂ ಮಾತ್ರೇ ನ್ಯಸ್ತಧುರಂ ಭುವಃ ।
ಗೌತಮೋಥ ಯಯೌ ತೇನ ರಾಜ್ಞಾ ತತ್ ಶ್ವೇತಕಾನನಂ ॥೨೧॥

ಕಾವೇರ್ಯಾಂ ತೇನ ವೈ ಸ್ನಾತ್ವಾ ಶ್ವೇತತೀರ್ಥೇಷು ಚ ತ್ರಿಷು ।
ಭಸ್ಮರುದ್ರಾಕ್ಷಧೃಗ್ಭೂತ್ವಾ ಜಜಾಪಾಯುತಶೋ ಮನುಂ ॥೨೨॥

ರುದ್ರೈಕಾದಶಕಂ ಶಂಭುಂ ಶ್ವೇತಾರಣ್ಯೇಶಮರ್ಚಯನ್ ।
ತ್ರಿಕಾಲಂ ಬಿಲ್ವಪತ್ರೈಶ್ಚ ಬ್ರಹ್ಮವಿದ್ಯಾಂ ಶಿವಾಮಪಿ ॥೨೩॥

ಧೂಪೈರ್ದೀಪೈಶ್ಚ ನೈವೇದ್ಯೈಃ ಪ್ರದಕ್ಷಿಣ ನತಿಸ್ತವೈಃ ।
ತೇನಾಥ ಕಾಲಂ ಶ್ವೇತೋಽಸೌ ತತ್ರ ವರ್ಷಾಂತಿಮೇ ನೃಪಃ ॥೨೪॥

ದೃಷ್ಟ್ವಾ ಕರಾಳವದನಂ ಪಾಶಹಸ್ತಂ ಸಮೀಕ್ಷ್ಯ ಸಃ ।
ಶ್ವೇತಾರಣ್ಯೇಶ್ವರಂ ತ್ರ್ಯಕ್ಷಮಸ್ತುವದ್ಧ್ಯಾತಮೇನ ಸಃ ॥೨೫॥

---

ರಕ್ಷಿಸುವನು ಎಂದು ಹೇಳಿದ ಗೌತಮಮುನಿಯ ಮಾತುಗಳನ್ನು ಕೇಳಿ ಶ್ವೇತ ರಾಜನು ತಡಮಾಡದೆ ಆ ಕ್ಷೇತ್ರಕ್ಕೆ ಹೊರಡಲುದ್ಯುಕ್ತನಾದನು. ||೧೯-೨೦||

ಗೌತಮನೂ ಸಹ ರಾಜ್ಯಭಾರವನ್ನು (ತಾಯಿಗೆ) ಒಪ್ಪಿಸಿಕೊಡುವಂತೆ ಮಾಡಿ, ರಾಜನೊಡನೆ ತಾನೂ ಶ್ವೇತಾರಣ್ಯಕ್ಕೆ ಹೋದನು. ಅಲ್ಲಿ ಕಾವೇರೀನದಿಯಲ್ಲಿ ಸ್ನಾನಮಾಡಿ ಹಾಗೇ ಮೂರು ತೀರ್ಥಗಳಲ್ಲಿಯೂ ಪ್ರತ್ಯೇಕವಾಗಿ ಮುಳುಗಿಸಿ ಭಸ್ಮರುದ್ರಾಕ್ಷಧಾರಿಯಾಗಿ, ಹತ್ತುಸಾವಿರ ಶಿವಪಂಚಾಕ್ಷರೀಮಂತ್ರವನ್ನು ಜಪಿಸಿದನು. ||೨೧-೨೨||

ಏಕಾದಶರುದ್ರವಿಶಿಷ್ಟನಾದ ಶ್ವೇತಾರಣ್ಯೇಶ್ವರನನ್ನೂ ಬ್ರಹ್ಮವಿದ್ಯಾರೂಪಿಣಿಯಾದ ಪಾರ್ವತಿಯನ್ನೂ ತ್ರಿಕಾಲಗಳಲ್ಲಿಯೂ ಬಿಲ್ವಾದಿಗಳಿಂದ ಅರ್ಚಿಸುತ್ತಾ, ಧೂಪ ದೀಪ ನೈವೇದ್ಯಾದಿಗಳನ್ನು ಸಮರ್ಪಿಸುತ್ತಾ, ಪ್ರದಕ್ಷಿಣ ನಮಸ್ಕಾರಾದಿಗಳಿಂದ ಪರಶಿವನನ್ನು ಪೂಜಿಸಲಾರಂಭಿಸಿದನು. ಹೀಗಿರುವಾಗ ಆ ವರ್ಷದ ಕೊನೆಯ ದಿನವು ಬಂದಿತು ಆ ಕಾಲಕ್ಕೆ ಸರಿಯಾಗಿ ಈ ರಾಜನ ಪ್ರಾಣವನ್ನೊಯ್ಯಲು ಪಾಶಹಸ್ತನಾದ, ಭಯಂಕರಾಕಾರದ ಮೃತ್ಯುದೇವತೆಯು ಸಮೀಪಿಸುತ್ತಿರಲು ಆಗ

ಅತಿಭೀಷಣಕಟುಭಾಷಣಯಮಕಿಂಕರಪಟಲೀ
ಕೃತತಾಡನ ಪರಿಪೀಡನ ಮರಣಾಗಮಸಮಯೇ ।
ಉಮಯಾಸಹ ಮಮ ಚೇತಸಿ ಯಮಶಾಸನ ನಿವಸನ್
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೨೬॥

ಅಸದಿಂದ್ರಿಯವಿಷಯೋದಯಸುಖಸಂಹೃತ ಸುಕೃತೇಃ
ಪರಿಹರ್ಷಣ ಪರಿತೋಷಣ ಕೃತನಾಟಕವಿಕೃತೇಃ ।
ಶಮನಾಶನ ಭವಕಾನನನಿರತೋ ಭವ ಶರಣಂ
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೨೭॥

ವಿವಿಧಾಧಿಭಿರತಿಭೀತಿಭಿರಕೃತಾಮಿತಸುಕೃತಂ
ಶತಕೋಟಿಷು ನರಕಾದಿಷು ಪರಿಪಾತನವಿವಶಂ ।
ಪೃಥಮಾವಹ ಸುಕೃತೈರಿಹ ಶಿವಯಾ ಸಹ ಕೃಪಯಾ
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೨೮॥

---

ರಾಜನು ಗೌತಮನೊಡಗೂಡಿ ಪರಶಿವನನ್ನು ಹೀಗೆ ಸ್ತುತಿಸಲಾರಂಭಿಸಿದನು. ॥೨೩-೨೪-೨೫॥

ಲೋಕಸುಖಕರನೆ, ಮಹಾದೇವನೆ, ಭಯಂಕರವಾದ ಆಕಾರಗಳಿಂದಲೂ, ಕಟೂಕ್ತಿಗಳಿಂದಲೂ ಗರ್ಜಿಸುತ್ತಿರುವ ಯಮದೂತರು ಬಂದು ಅವರ ಪಾಶಗಳಿಂದ ನಮ್ಮನ್ನು ಕಟ್ಟಿ ನಮ್ಮ ಪ್ರಾಣವನ್ನು ಎಳೆದೊಯ್ಯುವ ಸಮಯದಲ್ಲಿ, ನೀನು ದೇವಿಯೊಡಗೂಡಿ ನನ್ನ ಹೃದಯಕಮಲದಲ್ಲಿ ನೆಲಸುವವನಾಗು. ಯಮಭಯಹರನೇ, ನನ್ನ ಪೂರ್ವಜನ್ಮಾರ್ಜಿತವಾದ ದುರಿತವನ್ನು ನಾಶಗೊಳಿಸುವವನಾಗು. ॥೨೬॥

ಇಂದ್ರಿಯಗಳು ದುರ್ಮಾರ್ಗವನ್ನವಲಂಬಿಸುವುದರಿಂದ ಒದಗುವ ಪಾಪರಾಶಿಗಳಿಂದ ನಾವು ಸಕಲ ಸುಕೃತವನ್ನೂ ಕಳೆದುಕೊಂಡು ನರಳುತ್ತಿರುವೆವು. ಯಮನನ್ನು ಶಿಕ್ಷಿಸಿ, ಸಂಸಾರವೆಂಬ ಅರಣ್ಯಸಂಬಂಧವನ್ನು ನಮಗೆ ತಪ್ಪಿಸಿ ನಮ್ಮನ್ನು ಪಾಪರಹಿತರನ್ನಾಗಿ ಮಾಡಿ ರಕ್ಷಿಸು. ॥೨೭॥

ಶಿವಶಂಕರನೇ, ಅನೇಕ ರೀತಿಯ ಮಾನಸಿಕ ಭಯಗಳಿಂದಲೂ, ಅನೇಕ ಪಾಪಕರ್ಮಗಳಿಂದಲೂ ಪುಣ್ಯವನ್ನೇನೂ ಸಂಪಾದಿಸದೆ, ಬಹುಕಾಲ ನರಕವಾಸಕ್ಕೆ ಸಿದ್ಧ

ವಿಷಮಾಯುಧ ವಿಶಿಖೋದಿತನಿಶಿತಾದ್ಭೃತ ಸುಖದೇ
ಮುಖರಾವೃತ ಮತಿಸಂತತ ಕೃತಸಾಹಸಮಿವ ಶಂ ।
ಪರಮಾಲಯ ಪರಿಪಾಲಯ ಪರಿತಾಪಿತಮಿತಿ ಮಾಂ ।
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೨೯॥

ದಯಿತಾ ಮಮ ದುಹಿತಾ ಮಮ ಜನನೀ ಮಮ ಜನಕೋ
[1]ಗೃಹಮೇತದ್ವಿದಿತಂ ಮಮ ಮರುಭೂಮಿಷು ನಿರತೇ ।
ಗಿರಿಜಾಸಖ ಜನಿತಾ ಸುಖವಿವಶಂ ಕುರು ಸುಕೃತಿನ್
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೩೦॥

ಜನಿನಾಶನ ಮೃತಿಮೋಚನ ಶಿವಪೂಜನ ನಿರತೇ
ರಭಿತೋಽದೃಶಮತಿಮೀದೃಶಮವ ಮಾಹರಿವಿನುತ ।

---

ನಾಗಿರುವ ನನ್ನನ್ನು ನಿನ್ನ ಕೃಪೆಯಿಂದ ಸುಕೃತಿಯನ್ನಾಗಿ ಮಾಡು. ದೇವಿಯೊಡಗೂಡಿರುವ ನೀನು ನನ್ನನ್ನು ಕರುಣಾಪಾಂಗದಿಂದ ದೃಷ್ಟಿಸಿ ನೋಡು. ॥೨೮॥

ಕಾಮಬಾಣಗಳಿಗೆ ಸಿಕ್ಕಿ, ತತ್ಪ್ರಯುಕ್ತಗಳಾದ ಕಷ್ಟಪರಂಪರೆಗಳಿಗೆ ಈಡಾಗಿರುವವರು ಸುಖವನ್ನೇ ಕಾಣದೆ ತೊಳಲುವರು. ಅಂತಹವರಿಗೆ ನಿತ್ಯಸುಖವನ್ನು ಕರುಣಿಸುವವನೇ, ಮೊಸಳೆಯಿಂದ ಕೂಡಿರುವ ಸಂಸಾರಸಾಗರದೊಳಗೆ ಮುಳುಗಿ, ಸರ್ವದಾ ವ್ಯರ್ಥಪ್ರಯತ್ನಗಳಿಗೆ ಉದ್ಯೋಗಿಸುತ್ತಿರುವ ನನಗೆ ಮುಕ್ತಿಸುಖವನ್ನಿತ್ತು ಮತ್ತೆ ಈ ಜನ್ಮವು ದೊರೆಯದಂತೆ ಮಾಡು. ಮಹಾದೇವನೇ, ನನ್ನನ್ನು ಪಾಪಮುಕ್ತನನ್ನಾಗಿ ಮಾಡಿ ಕಷ್ಟಗಳನ್ನು ಪರಿಹರಿಸಿ ಕಾಪಾಡು. ॥೨೯॥

ಇವಳು ನನ್ನ ಹೆಂಡತಿ, ಇವಳು ಮಗಳು, ತಾಯಿತಂದೆಗಳಿವರು, ಈ ಮನೆ ನನ್ನದು, ಎಂಬ ವ್ಯರ್ಥವಾದ ಯೋಚನೆಗಳೆಂಬ ಮರುಭೂಮಿಯಲ್ಲಿ ವಿಹರಿಸುತ್ತಿರುವ ನನಗೆ ಪಾರ್ವತೀಪತಿಯೂ, ಸುಖಪ್ರದನೂ ಆದ ಪರಶಿವನೇ ನಿಜವಾದ ಸುಖಪರಂಪರೆಯನ್ನಿತ್ತು ಸರ್ವದಾ ನಮ್ಮನ್ನು ಸಲಹುತ್ತಿರು. ॥೩೦॥

ಉತ್ಪತ್ತಿವಿನಾಶಕನೇ, ನಾಶರಹಿತನೇ, ಸದಾ ನಿನ್ನನ್ನೇ ಪೂಜಿಸುತ್ತಿರುವ ಮತ್ತು ನಿನ್ನ ವಿಷಯಕವಾಗಿಯೇ ಸದಾ ಚಿಂತಿಸುತ್ತಿರುವ ನನ್ನನ್ನು ಕರುಣಾದೃಷ್ಟಿಯಿಂದ ಸಲಹು. ವಿಷ್ಣುವಿನಿಂದ ಪೂಜಿತನಾದ ಪರಶಿವನೇ, ನನ್ನನ್ನು ಪ್ರೀತಿ

---

(1) ಗೃಹಮಿದಮಿತಿಸಂತತಮರುಭೂಮಿಷು (ಭಾಷಾಂತರ)

ಭಜಕಾಮಿತಮಮಿತಾಂ ಕುರು ಸುಮತಿಂ ಪರಮೇಶ ।
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೩೦॥

ಶರಣಾಗತಭವ ಸಾದ್ಭುತ ಕರುಣಾಮೃತಜಲಧೇ
ಶರಣಂ ತವ ಚರಣಾಂ ಮಮ ಭವಸಂಸೃತಿವಸತೇಃ ।
ಪರಿಚಿಂತಯ ಜಗದುದ್ವ್ಯಯವಿಷಮೋಚಕಭವ ತೇ
ಶಿವಶಂಕರ ಶಿವಶಂಕರ ಹರ ಮೇ ಹರ ದುರಿತಂ ॥೩೨॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಶ್ವೇತಾರಣ್ಯಜಮದ್ಭುತಮಜೋಕಾರುಣ್ಯವಾರಾಂನಿಧಿಃ
ಕಾರುಣ್ಯೇನ ವದಾಂತಕಂ ಹರಶ್ವೇತಾರಣ್ಯಾಧಿನಾಥೋ ಹರ ।
ದೇವಾಸ್ತಂ ಕುಸುಮಂ ವವರ್ಷುರಥದ್ರಾಕ್ ಶ್ವೇತೋಪಿ ಭಕ್ತ್ಯಾ ಶಿವೇ
ಕೈಂಕರ್ಯಂ ಸ ಚಕಾರ ಗೌತಮಯುತೋ ನ ತ್ವಾಹರಂ
ಖ್ಯಾತ್ಪುರಂ ॥೩೩॥

---

ಯಿಂದ ರಕ್ಷಿಸು. ಶಿವಶಂಕರನೇ, ಭಜಕರಿಗೆ ಸಕಲ ಇಷ್ಟಾರ್ಥಗಳನ್ನೂ ಒದಗಿಸಿ, ಸನ್ಮತಿಯನ್ನು ಕರುಣಿಸುವ ಮಹಾದೇವನೇ, ನಮ್ಮನ್ನು ಪಾಪಮುಕ್ತರನ್ನಾಗಿ ಮಾಡು. ॥೩೨॥

ಶರಣಾಗತರನ್ನು ರಕ್ಷಿಸುವೆನೆಂಬ ಪ್ರತಿಜ್ಞೆಯನ್ನೇ ಮುಖ್ಯಾಭರಣವನ್ನಾಗಿ ಹೊಂದಿರುವ ಕರುಣಾಸಮುದ್ರನೇ, ದುಃಖಭೂಯಿಷ್ಠವಾದ ಸಂಸಾರಸಾಗರದಲ್ಲಿ ಮುಳುಗಿರುವ ನನಗೆ ನಿನ್ನ ಪಾದವೇ ಶರಣು. ಜಗದ್ವ್ಯಾಪಿಯಾಗಿರುವ ಮಹಾದೇವನೇ, ನೀನು ಯೋಚಿಸಿ, ಈ ನನ್ನ ಪಾಪಿದೇಹವನ್ನು ಕಾಪಾಡುವವನಾಗು. ಪಾಪಭೂಯಿಷ್ಠವಾದ ಈ ನನ್ನ ಶರೀರವನ್ನು ರಕ್ಷಿಸು. ನಾನು ಬೇಡಿಕೊಳ್ಳುವ ವರವಿದೆ. ॥೩೩॥

ಹೀಗೆ ಶ್ವೇತಾರಣ್ಯಮಹಿಮೆಯನ್ನು ಕಾರುಣ್ಯನಿಧಿಯೆನಿಸಿಕೊಂಡಿರುವ ಪರಶಿವನು ಅತಿಶಯಪಡಿಸಿರುವವನಲ್ಲವೆ! ಎಂದು ಗೌತಮಮಹರ್ಷಿಯು ಸ್ತುತಿಸುತ್ತಿರುವಂತೆಯೇ ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸಿದರು. ಇದರಿಂದ ಆಶ್ಚರ್ಯಚಕಿತನಾಗಿ ಶ್ವೇತರಾಜನು ಅಲ್ಲಿಯೇ ಪರಶಿವನನ್ನು ನಾನಾವಿಧವಾಗಿ ಅರ್ಚಿಸಿ

**ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶ್ವೇತಾರಣ್ಯೇಶ್ವರ ವೈಭವವರ್ಣನೇ ಏಕತ್ರಿಂಶೋಽಧ್ಯಾಯಃ**

---

ಸೇವಿಸಿ, ಪೂಜಿಸಿ ಗೌತಮಮಹರ್ಷಿಯೊಡನೆ ಅದೇ ವನದಲ್ಲಿ ವಾಸವಾಗಿದ್ದನು. ಇಂತಹ ಮಹಾಮಹಿಮೆಯುಳ್ಳ ಶ್ವೇತಾರಣ್ಯಕ್ಷೇತ್ರವು ಪರಶಿವನಿಗೆ ಆಶ್ರಯಪ್ರದವಾಗಿರುವುದರಲ್ಲಿ ಯಾವ ಸಂದೇಹವೂ ಇಲ್ಲ. ||೩೪||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶ್ವೇತಾರಣ್ಯೇಶ್ವರವೈಭವವರ್ಣನೆಯೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ದ್ವಾತ್ರಿಂಶೋಽಧ್ಯಾಯಃ

|| ಸ್ಕಂದ ಉವಾಚ ||

ತತ್ಪ್ರಾಚ್ಯಾಂ ಸ್ಥಾನಮಸ್ತ್ಯೇಕಂ ಛಾಯಾವನಸಮಾಹ್ವಯಂ ।
ಪರಮಂ ವಸತಾಂ ಪುಂಸಾಂ ಪಾವನಂ ಮುಕ್ತಿದಂ ಪರಂ ॥೧॥

ಶಂಭೋಃ ಪ್ರಿಯಕರಂ ಸಾಕ್ಷಾನ್ಮುನಿಭಿಃ ಸೇವಿತಂ ಸದಾ ।
ಛಾಯಾವನೇಶ್ವರಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ॥೨॥

ಛಾಯಾವನೇಶಮಧ್ಯೇ ಯಃ ಸ್ನಾತ್ವಾ ಗಚ್ಛೇದ್ವಿಮುಕ್ತಿದಂ ।
ಕೃಚ್ಛ್ರಾಣಾಂ ದಶಕಂ ತತ್ರ ಫಲಂ ಲಬ್ಧ್ವಾ ಸಮುತ್ಥಿತಃ ॥೩॥

---

## ಮೂವತ್ತೆರಡನೆಯ ಅಧ್ಯಾಯ

ಪುನಃ ಕುಮಾರಸ್ವಾಮಿಯು ಛಾಯಾವನೇಶ್ವರವಿಷಯವನ್ನು ಪ್ರಸ್ತಾಪಿಸುತ್ತಾ ಹೀಗೆಂದನು. "ಅಯ್ಯಾ ಜೈಗೀಷವ್ಯನೇ, ಶ್ವೇತಾರಣ್ಯದ ಪೂರ್ವದಿಕ್ಕಿನಲ್ಲಿ ಛಾಯಾವನವೆಂಬ ಕ್ಷೇತ್ರವಿರುವುದು. ಅದು ಪರಮ ಪವಿತ್ರವಾದದ್ದು ಮತ್ತು ಭಕ್ತರಿಗೆ ಮುಕ್ತಿಯನ್ನು ಅನುಗ್ರಹಿಸತಕ್ಕುದು. ಅದು ಪರಮೇಶ್ವರನಿಗೆ ಪ್ರೀತಿಪಾತ್ರವಾದ ಕ್ಷೇತ್ರವೆಂದು ತಿಳಿದೇ ಸಕಲ ಮುನಿಗಳೂ ಅಲ್ಲಿಗೆ ಬಂದು ವಾಸಿಸುತ್ತಿರುವರು. ಅಲ್ಲಿರುವ ಛಾಯಾವನೇಶ್ವರನ ದರ್ಶನದಿಂದ ಸರ್ವಪಾಪಗಳೂ ನಿವಾರಣೆಯಾಗುತ್ತವೆ. ||೧-೨||

ಛಾಯಾವನದ ಮಧ್ಯದಲ್ಲಿರುವ ತೀರ್ಥದಲ್ಲಿ ಸ್ನಾನಮಾಡಿ, ಈಶ್ವರದರ್ಶನ ಮಾಡಿದ್ದೇ ಆದರೆ ದಶಕೃಚ್ಛ್ರಾಚರಣೆಯ (ಕೃಚ್ಛ್ರಾಚರಣೆಯೆಂಬುದು ಪ್ರಾಯಶ್ಚಿತ್ತ

ಮೋದತೇ ಶಿವಲೋಕೇಽರ್ಥೇ ವಿಮಾನೇನ ನರೋತ್ತಮಃ ।
ಛಾಯಾವನೀಪುರೇ ಸೂರ್ಯಸ್ತತ್ರ ತೇಪೇ ಮಹತ್ತಪಃ ॥೪॥

ಭಸ್ಮದಿಗ್ಧಶರೀರೋಽಸೌ ರುದ್ರಾಕ್ಷಾಭರಣಾವೃತಃ ।
ರುದ್ರಂ ಚ ಪ್ರಜಪನ್ನುಚ್ಚೈಃ ಪಂಚಾಕ್ಷರಜಪೇ ರತಃ ॥೫॥

ಛಾಯಯಾ ರಹಿತಸ್ಸೂರ್ಯೋ ದೇವಂ ಛಾಯಾವನೇಶ್ವರಂ ।
ಸಂಪೂಜ್ಯ ತತ್ರ ದೇವೇಶಂ ತುಷ್ಟಾವ ಪ್ರಮಥಾಧಿಪಂ ॥೬॥

॥ ಶ್ರೀ ಸೂರ್ಯ ಉವಾಚ ॥

ಅರ್ಯಮಾ ನಮ್ರಯಾ ವಾಚಾ ಸ್ತೌತಿ ಛಾಯಾವನೇಶ್ವರಂ ॥೭॥

ಛಾಯಾವನೇಶ ಭಗವನ್ ಶಶಿಧಾಮಮೌಲೇ
ಗಂಗೋತ್ತಮಾಂಗಧೃತ ಬಾಲಕುರಂಗಶಂಭೋ ।
ತ್ವಚ್ಛಕ್ತಿವೈಭವವಶಾಃ ಜಗದೇತದೇವ
ಬ್ರಹ್ಮೇಶವಿಷ್ಣುಪರಿಪಾಲನನಾಶಸೃಷ್ಟ್ಯಃ ॥೮॥

---

ಕಾಂಡದಲ್ಲಿ ಹೇಳಿರುವ ವಿಧಿಯಂತೆ ನಡೆಸುವ ಕರ್ಮ) ಫಲವನ್ನು ಪಡೆಯಬಹುದು. ಹಾಗೆಯೇ ಸಕಲೇಷ್ಟಾರ್ಥಗಳನ್ನೂ ಪಡೆದು ದಿವ್ಯವಿಮಾನಾರೂಢನಾಗಿ ಶಿವಲೋಕವನ್ನು ಹೊಂದುವನು. ಹಿಂದೆ ಸೂರ್ಯದೇವನು ಶಂಕರನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿದ್ದನು. ॥೩-೪॥

ಸೂರ್ಯದೇವನು ತನ್ನ ಶರೀರಕ್ಕೆಲ್ಲಾ ಭಸ್ಮವನ್ನು ಬಳಿದುಕೊಂಡು ರುದ್ರಾಕ್ಷಿಯ ಸರವನ್ನು ಧರಿಸಿ, ಶ್ರೀರುದ್ರ, ಶಿವಪಂಚಾಕ್ಷರೀ ಮುಂತಾದ ಮಂತ್ರಗಳನ್ನುಚ್ಚರಿಸುತ್ತಾ, ಪತ್ನಿಯಾದ ಛಾಯೆಯೊಡಗೂಡಿ, ಪರಶಿವನನ್ನು ಆ ಕ್ಷೇತ್ರದಲ್ಲಿ ಧ್ಯಾನಿಸಿ ಪೂಜಿಸಿದನು. ॥೫-೬॥

ಮತ್ತು ಈರೀತಿ ಮೃದುಮಧುರವಾಗಿ ಛಾಯಾವನೇಶ್ವರನನ್ನು ಸ್ತುತಿಸಿದನು. "ಛಾಯಾವನಾಧಿಪತಿಯೇ, ಚಂದ್ರಶೇಖರನೇ, ಶಿರಸ್ಸಿನಲ್ಲಿ ಗಂಗಾದೇವಿಯನ್ನೂ, ಕೈಯಲ್ಲಿ ಜಿಂಕೆಯ ಮರಿಯನ್ನೂ ಧರಿಸಿರುವ ಮಹಾದೇವನೇ, ಈ ಜಗತ್ತೆಲ್ಲವೂ ನಿನ್ನ ಶಕ್ತಿ ಮತ್ತು ವೈಭವಗಳಲ್ಲವೆ? ಬ್ರಹ್ಮ, ವಿಷ್ಣು, ರುದ್ರಾದಿದೇವತೆಗಳನ್ನು

ನತ್ವಾಽನನ್ಯಶರಣೋಽಪಿ ಪಿಶಾಚವಾಚಾ
ಸಂಸ್ತೌಮಿ ನೌಮಿ ತವ ಪಾದಸರೋರುಹಂ ಮೇ ।
ಸ್ವಚ್ಛಂ ಶರಣ್ಯಕುತುಕಂ ಭವದಾವತಾಪ
ಸಂತಪ್ತಮೂರ್ಧಸುಖದಂ ಶುಭದಂ ಪವಿತ್ರಂ ॥೯॥

ತ್ವಾಂ ಲಿಂಗಸಂಗಂ ಕಿಲ ಪಾಪಭಂಗಾ
ನಂಗಾಂಗದಗ್ಧಪರಿಶೋಭಿತಭಸ್ಮಭೂಷಂ ।
ಯೋಷಾರ್ಧಕಾಯಧೃತಶೇಷವಿಹಾರಭೂಷ
ಪೋಷಾಯ ಮೇ ಭವ ಭವಾವ ಮುದಾದ್ಯ ಪೂಷನ್ ॥೧೦॥

ಇತ್ಥಂ ಛಾಯಾವನೇಶಾನಂ ಪರಿಪೂಜ್ಯಾರ್ಯಮಾ ತದಾ ।
ಛಾಯಾವನೇಶದಯಯಾ ಸ್ಥಾನಂ ಲೇಭೇ ಮಹತ್ತರಂ ॥೧೧॥

ತಸ್ಮಾತ್ಸ್ಥಾನಂ ಪುಣ್ಯತಮಂ ಸಂಸೇವ್ಯಂ ಪಾಪಭೀರುಭಿಃ ।
ಮುಕ್ತಿರ್ಹಿ ವಸತಾಂ ತತ್ರ ಶ್ರೀಮಚ್ಛಾಯಾವನೇಶಿತುಃ ॥೧೨॥

ರಕ್ಷಿಸುವವನೂ, ಹಾಗೆಯೇ ನಾಶಗೊಳಿಸುವವನೂ ಮತ್ತೆ ಸೃಷ್ಟಿಸುವವನೂ ನೀನೇ ಅಲ್ಲವೆ ? ॥೭-೮॥

ನನಗೆ ರಕ್ಷಕರು ಮತ್ತಾರೂ ಇಲ್ಲ. ಆದಕ್ಕಾಗಿಯೇ ಈಗ ನನಗೆ ತೋರಿದ ಕೆಲವು ಕಠಿನೋಕ್ತಿಗಳಿಂದ ನಿನ್ನನ್ನು ಸ್ತುತಿಸಿ, ಈರೀತಿ ಪ್ರಾರ್ಥಿಸುವೆನು. ಸ್ವಚ್ಛವೂ, ಭಕ್ತರಕ್ಷಕವೂ, ಸಂಸಾರಭಯಗ್ರಸ್ತರಿಗೆ ಶಾಶ್ವತಸುಖಪ್ರದವೂ, ಸಕಲ ಜನರಕ್ಷಕವೂ, ಸದ್ವರ್ತನೆಯಲ್ಲಿ ಪ್ರಸಿದ್ಧಿಗೊಂಡಿರುವುದೂ ಆದ ನಿನ್ನ ಪಾದಕಮಲವು ಸಾಂಸಾರಿಕದುಃಖವನ್ನು ಹೊತ್ತು ಬಳಲಿರುವ ನನ್ನ ತಲೆಯಮೇಲೆ ಸರ್ವದಾ ಸ್ಥಿರವಾಗಿರಲಿ. ॥೯॥

ಅತಿಶಯವಾದ ಪಾಪದ ಪೆಟ್ಟಿಗೆ ಸಿಕ್ಕಿದ ನಾನು, ಶಿವಲಿಂಗದಲ್ಲಿ ನೆಲಸಿರುವವನೂ, ಮನ್ಮಥನನ್ನು ಸುಟ್ಟು ಅವನ ಭಸ್ಮವನ್ನು ತನ್ನ ದೇಹಕ್ಕೆ ಬಳಿದುಕೊಂಡಿರುವವನೂ, ಅರ್ಧನಾರೀಶ್ವರನೂ, ನಾಗಾಭರಣನೂ ಆದ ನಿನ್ನನ್ನು ಮರೆ ಹೊಕ್ಕಿರುವೆನು. ನನ್ನ ಸಕಲ ದುಃಖಗಳನ್ನೂ ನಿವಾರಿಸಿ ಸಲಹುವವನಾಗು." ॥೧೦॥

ಹೀಗೆ ಸೂರ್ಯದೇವನು ಛಾಯಾವನೇಶನನ್ನು ಧ್ಯಾನಿಸಿ ಅವನ ಅನುಗ್ರಹದಿಂದ ಅಲ್ಲಿಯೇ ನೆಲಸಿ ಶಾಶ್ವತವಾದ ಮೋಕ್ಷವನ್ನು ಪಡೆದನು. ಆದ್ದರಿಂದ ಅಂತಹ

ಪ್ರಸಾದೇನ ಸದಾ ತತ್ರ ಜನಾನಾಂ ಶಂಭುಸೇವಿನಾಂ ।
ಕಿಂ ಪುನರ್ಬಹುನೋಕ್ತೇನ ನ ಮುನಿಭಿಃ ಪರಿಸೇವಿತಂ ॥೧೩॥

ಮುಕ್ತ್ಯೈ ಛಾಯಾವನೇಶಾನಮಾಶ್ಚರ್ಯೋ ಭಕ್ತಿತತ್ಪರಃ ।
ಪುರಾ ಕವೇರೋ ನೃಪತಿಃ ಸೂರ್ಯವಂಶೋದ್ಭವೋ ಮಹಾನ್ ॥೧೪॥

ತಸ್ಯೈವಂ ವಸತಃ ಕಾಲಾತ್ಕಾಲಕಾಲೋ ಮಹೇಶ್ವರಃ ।
ಪುನಃ ಪ್ರಮಥಕೈಃ ಸಾರ್ಧಂ ಮಹೋಕ್ಷವರವಾಹನಃ ॥೧೫॥

ತಂ ದೃಷ್ಟ್ವಾ ದೇವಮೀಶಾನಂ ವವಂದೇ ಚರಣೌ ನೃಪಃ ।
ಪ್ರತ್ಯಕ್ಷೋ ಭೂನ್ಮಹೇಶೋಽಪಿ ರೂಪಂದೃಷ್ಟ್ವಾ ಪಿನಾಕಿನಃ ॥೧೬॥

ತದಾ ತುಷ್ಟಾವ ತಂ ಸಾಂಬಮಂಬಿಕಾಪತಿಮೀಶ್ವರಂ ॥೧೭॥

॥ ಕವೇರನೃಪತಿರುವಾಚ ॥

ನಮೋ ನಮಸ್ತೇ ಧೃತಸಾಮಿಸೋಮ
ಮಮ ಧ್ರುವಂ ಮೇ ಸಗುಣ ತ್ರಿಶೂಲಿನ್ ।

---

ಕ್ಷೇತ್ರವನ್ನು ಪಾಪಭೀರುಗಳೂ, ಮೋಕ್ಷಾರ್ಥಿಗಳೂ ಸರ್ವದಾ ಸೇವಿಸುತ್ತಿರಬೇಕು. ॥೧೧-೧೨॥

ಈಶ್ವರನನ್ನು ಭಜಿಸುವ ಜನರಿಗೆ ಅಲ್ಲಿ ಶಿವಾನುಗ್ರಹದಿಂದ ಶಾಶ್ವತ ಸುಖವು ಲಭಿಸುವುದರಲ್ಲಿ ಅನುಮಾನವೇನು ? ಅದಕ್ಕಾಗಿಯೇ ಸಕಲ ಋಷಿಗಣವೂ ಅದನ್ನು ಸೇವಿಸುತ್ತಿರುವುದು. ಹಿಂದೆ ಸೂರ್ಯವಂಶದಲ್ಲಿ ಜನಿಸಿದ ಕವೇರನೆಂಬ ಒಬ್ಬ ಶ್ರೇಷ್ಠರಾಜನಿದ್ದನು. ॥೧೩-೧೪॥

ಆತನು ಈಶ್ವರಾರಾಧನೆಯಿಂದಲೇ ಅಲ್ಲಿ ತಪಸ್ಸುಮಾಡುತ್ತಿರುವಾಗ, ಒಂದು ಸಾರಿ ಕಾಲಕಾಲನೂ, ಮಹೇಶ್ವರನೂ, ವೃಷಭವಾಹನನೂ ಆದ ಪರಶಿವನು ಅವನಿಗೆ ಪ್ರತ್ಯಕ್ಷನಾದನು. ಹಾಗೆ ಪ್ರತ್ಯಕ್ಷನಾದ ಮಹಾದೇವನಿಗೆ ಈ ರಾಜನು ವಂದಿಸಿ, ಪಿನಾಕಧಾರಿಯಾದ ಶಿವನನ್ನು ಹೀಗೆ ಸ್ತುತಿಸಿದನು. ॥೧೫-೧೬-೧೭॥

ಎಲೈ ಚಂದ್ರಶೇಖರನೇ, ಗುಣತ್ರಯವಿಶಿಷ್ಟನೇ, ತ್ರಿಶೂಲಿಯೇ ನನಗೆ ಸದ್ಗತಿಯನ್ನನುಗ್ರಹಿಸು. ಮಾನವವಂಶದಲ್ಲಿ ಜನಿಸಿದ ನನಗೆ ಇನ್ನು ಮುಂದೆ

ಪ್ರಸೀದ ಮೇ ಮಾನವಪುತ್ರಮೀಶ
ಪ್ರದೇಹಿ ಮದ್ವಂಶಧುರಂಧರಂ ಹರ ॥೧೮॥

॥ ಈಶ್ವರ ಉವಾಚ ॥

ತತ್ಸ್ತುತ್ಯಾ ತುಷ್ಟಚಿತ್ತೇಶೋ ಮಹೇಶಂ ತಮಥಾಬ್ರವೀತ್ ।
ಕವೇರಂ ಪ್ರಣತಂ ತತ್ರ ಪ್ರಾಂಜಲಿಂ ಪ್ರಾಂಜಲೇಶ್ವರಃ ॥೧೯॥

ಪುತ್ರಾಚ್ಛತಗುಣಾ ಪುತ್ರೀ ತವ ದತ್ತಾ ನೃಪೋತ್ತಮ ।
ಕಾವೇರೀತಿ ಭವಿತ್ರೀ ತೇ ಕನ್ಯಾರೂಪಗುಣಾನ್ವಿತಾ ॥೨೦॥

ಸಾ ತ್ವಯಾ ಕಸ್ಯಚಿನ್ನೈವ ದಾತವ್ಯಾ ನೃಪಸೂನವೇ ।
ಸಾ ಭವಿತ್ರೀ ಸರಿದ್ರೂಪಾ ತಸ್ಯಾಸ್ತೀರೇ ವಸಾಮ್ಯಹಂ ॥೨೧॥

ಕ್ಷೇತ್ರೇ ತತ್ರ ಮೇಂಬುಚೋಲೇ ನೈ ತಯಾ ಪುಣ್ಯವತೀ ಭವೇತ್ ।
ಸ್ನಾಸ್ಯತಾಂ ಪಾಪಶಮನೀ ಶಮನಾರ್ತಿನಿವಾರಿಣೀ ॥೨೨॥

---

ವಂಶಾನುಕ್ರಮವಾಗಿ ಅಭಿವೃದ್ಧಿಗೊಳಿಸುವ ಪುತ್ರಸಂಪತ್ತನ್ನು ಕರುಣಿಸಿ, ನನ್ನನ್ನುದ್ಧರಿಸು. ಇದೇ ನನ್ನ ಪ್ರಾರ್ಥನೆ."

ಎಂಬ ಅವನ ಸ್ತುತಿಗೆ ಮೆಚ್ಚಿ ಈಶ್ವರನು ತೃಪ್ತನಾಗಿ, ಕೈಮುಗಿದು ನಿಂತಿದ್ದ ಕವೇರರಾಜನಿಗೆ ಹೀಗೆ ವರವಿತ್ತನು. "ರಾಜನೇ, ನಿನಗೆ ಪುತ್ರನಿಗಿಂತಲೂ ಶತಾಧಿಕವಾದ ಗುಣಗಳಿಂದ ಕೂಡಿ ಮೆರೆಯುವ ಪುತ್ರಿಯೊಬ್ಬಳನ್ನು ಅನುಗ್ರಹಿಸಿರುವೆನು ಆಕೆಯು ಕಾವೇರೀ ಎಂಬ ಹೆಸರಿನಿಂದ ಸದ್ಗುಣಸಂಪನ್ನೆಯಾಗಿ ಬೆಳೆಯುವಳು. ॥೧೯-೨೦॥

ಆಕೆಯನ್ನು ನೀನು ಯಾರಿಗೂ ಕೊಟ್ಟು ಮದುವೆಮಾಡಬೇಡ. ಅವಳು ಮುಂದೆ ನದಿಯ ರೂಪವನ್ನು ತಾಳುವಳು. ಆ ನದಿಯ ದಡದಲ್ಲಿ ನಾನೇ ನೆಲಸುವೆನು. ಚೋಲದೇಶವೆಂದು ಪ್ರಸಿದ್ಧಿಗೊಂಡಿರುವ ಆ ಕ್ಷೇತ್ರದಲ್ಲೆಲ್ಲಾ ಯಾರು ಭಕ್ತಿಯಿಂದ ಆ ಕಾವೇರಿಯಲ್ಲಿ ಸ್ನಾನಮಾಡುವರೋ ಅಂತಹವರ ಪಾಪಗಳನ್ನು ತೊಳೆಯುತ್ತಾ, ಯಮನ ಭಯವನ್ನೂ ಸಹ ತಪ್ಪಿಸಲಿರುವ ನಿನ್ನ ಮಗಳು ಆಗ ಪರಮ ಪವಿತ್ರಳೆನಿಸುವಳು." ॥೨೧-೨೨॥

ತಥೇತಿ ಪ್ರಾಂಜಲಿಃ ಪ್ರಾಹ ಶಿವೋಽಪ್ಯಂತರ್ದಧೇ ಹರಃ ।
ಕವೇರಸ್ಸಪುರಂ ಪ್ರಾಪ ಕಾಲೇನ ತನಯಾಭವತ್ ॥೨೩॥

ಕಾವೇರೀತಿ ತದಾ ನಾಮ್ನಾ ರೂಪೌದಾರ್ಯಗುಣಾನ್ವಿತಾ ।
ಲಾಲಿತಾವರ್ಧತ ಮುದಾ ಧಿಯೈವಂ ಪ್ರಾಪ ಸಾ ತದಾ ॥೨೪॥

ಜಿಜ್ಞಾಸುರವದತ್ತಾತಂ ಕಸ್ಮೈದಾಸ್ಯಸಿ ಮಾಂಪಿತಃ ।
ತತಃ ಕೋಪೇನ ತಾಂ ತತ್ರೈವಾಶಪನ್ನೃಪತಿಃ ಪಿತಾ ॥೨೫॥

ಭವಾಪಗಾ ಸಹ್ಯಸುತಾ ಸಂಗಾಭಿಲಷಿತಾ ಸದಾ ।
ನ ಸಾಗರಸ್ಯ ಸಂಗತ್ವಂ ಪ್ರಾಪ್ಯಸೇ ವಾ ಪಿತಾಮಯಾ ॥೨೬॥

ತತಃ ಕಾಲೇನ ತತ್ರಾಭೂಚ್ಚೋಲೇ ಸಹ್ಯೋದ್ಭವಾ ಸರಿತ್ ।
ಕಾವೇರೀತಿ ತದಾಚೋಲೇ ಸಿಂಧುತೀರೇ ಮಹೇಶ್ವರಃ ॥೨೭॥

ಪ್ರತಿಷ್ಠಾಪ್ಯಾರ್ಚಯಾಮಾಸ ಸಂಗಮೇಶ್ವರಮೀಶ್ವರಂ ।
ಕಾವೇರೀಪತ್ತನೇ ಸ್ನಾತ್ವಾ ಭಸ್ಮರುದ್ರಾಕ್ಷಧಾರಿಣೇ ॥೨೮॥

---

ಎಂದು ಶಂಕರನು ವರಕೊಟ್ಟು ಒಡನೆಯೇ ಮಾಯವಾದನು. ಶಿವಾನುಗ್ರಹದಿಂದ ತುಷ್ಟನಾಗಿದ್ದ ಕವೇರರಾಜನಿಗೆ ಕೆಲವು ಕಾಲಾನಂತರ ಕಾವೇರೀನಾಮಕಳಾದ ಮಗಳು ಸೌಂದರ್ಯ, ಔದಾರ್ಯ ಇವೇಮೊದಲಾದ ಸಕಲಸದ್ಗುಣಗಳಿಂದಲೂ ಕೂಡಿದವಳಾಗಿ, ತಂದೆಯಿಂದ ಪೋಷಿತಳಾಗಿ ಅಭಿವೃದ್ಧಿಹೊಂದುತ್ತಿದ್ದಳು ||೨೩-೨೪||

ಒಂದುದಿನ ಕಾವೇರಿಯು ತಂದೆಯುನ್ನು ಕುರಿತು ತನ್ನನ್ನು ಯಾರಿಗೆ ಕೊಟ್ಟು ಲಗ್ನಮಾಡುವೆ? ಎಂದು ಪ್ರಶ್ನಿಸಿದಳು. ಒಡನೆಯೇ ತಂದೆಯು ಕುಪಿತನಾಗಿ ಹೀಗೆ ಶಪಿಸಿದನು. ಎಲೌ ಪುತ್ರಿಯೇ, ನೀನು ಈಗಲೇ ಪತಿಸಂಗವನ್ನು ಅಪೇಕ್ಷಿಸಿದುದರಿಂದ, ಸಹ್ಯರಾಜನಿಗೆ ಮಗಳಾಗಿ (ಸಹ್ಯಾದ್ರಿಯಲ್ಲಿ ಹುಟ್ಟಿ) ಜನಿಸಿ ನದಿಯರೂಪದಿಂದ ಹರಿದು ಸಮುದ್ರರಾಜನ ಸಂಗವನ್ನು ಸೇರುವವಳಾಗು. ||೨೫-೨೬||

ಹೀಗೆ ಕೆಲವುಕಾಲ ಕಳೆದನಂತರ, ಕಾವೇರಿಯು ಸಹ್ಯಾದ್ರಿಯಲ್ಲಿ ನದಿಯರೂಪದಿಂದ ಜನಿಸಿ ಸಮುದ್ರಗಾಮಿನಿಯಾದಳು. ಆಗ ತಂದೆಯು ಕಾವೇರಿಯು

ತುಷ್ಟಾವ ಸಂಗಮೇಶಾನಂ ಪಾಪಭಂಗಕರಂ ಹರಂ ॥೨೯॥

॥ ಕಾವೇರ್ಯುವಾಚ ॥

ಶ್ರೀಸಂಗಮೇಶ್ವರ ಮಹೇಶ್ವರ ಶಂಕರೇಶ
ಪಾಹಿ ಪ್ರಸೀದ ಮಯಿ ಧೇಹಿ ಕೃಪಾಕಟಾಕ್ಷಂ ।
ತ್ರ್ಯಕ್ಷಾವ ಮಾಂ ಗಣಪತೇ ತವ ಸುಪ್ರಸಾದಾ
ತ್ಸಂಗಂ ಪ್ರಯಾಮಿ ಭವಸಾಗರಗಾಸ್ಮಿ ಶಂಭೋ ॥೩೦॥

॥ ಶ್ರೀಸ್ಕಂದ ಉವಾಚ ॥

ಇತ್ಥಂ ಸಹ್ಯತನೂದ್ಭವಾ ಸ್ತುತಿವಶಾದ್ದೃಷ್ಟೋ ಬಭಾಷೇ ತಥಾ
ಸಂಗೇಶೋ ಜನಪಾಪಭಂಜನಕರಃ ಪರ್ವಣ್ಯಥಾತ್ರಾಸ್ತ್ವಿತಿ ।
ಸಂಗಾಸ್ಯಂ ಭವತಾಪನಾಶನಕರಂ ಸಹ್ಯಾದ್ರಿಜಾಸ್ನಾಯಿನಾಂ
ಮಲ್ಲಿಂಗೇತ್ರ ವಿಮುಕ್ತಿದೇ ಕ್ಷಯ ಪುರೇ ದೇವಾಸುರಾಣಾಮಪಿ ॥೩೧॥

---

ಸಮುದ್ರವನ್ನು ಸೇರುವ ಸ್ಥಳದಲ್ಲಿ ಸಂಗಮೇಶ್ವರನೆಂಬ ಹೆಸರಿನಿಂದ ಒಂದು ಶಿವಲಿಂಗವನ್ನು ಪ್ರತಿಷ್ಠಾಪಿಸಿದನು. ಕಾವೇರಿಯು ಭಸ್ಮರುದ್ರಾಕ್ಷಧಾರಿಣಿಯಾಗಿ ಆ ಸಂಗಮೇಶ್ವರಲಿಂಗವನ್ನು ವಿಧಿವತ್ತಾಗಿ ಅರ್ಚಿಸಿ ಹೀಗೆ ಸ್ತುತಿಸತೊಡಗಿದಳು. ॥೨೭-೨೮-೨೯॥

'ಸಂಗಮೇಶ್ವರನೆ, ಮಹೇಶ್ವರನೇ, ಪ್ರಮಥಗಣಾಧೀಶನೇ ನಿನಗೆ ನಮಸ್ಕಾರ. ನನ್ನ ಮೇಲೆ ನಿನ್ನ ಕೃಪಾಕಟಾಕ್ಷವನ್ನಿಡು. ಮಹಾದೇವನೇ, ನಿನ್ನ ಅನುಗ್ರಹದಿಂದ ಈಗ ಸಂಸಾರವೆಂಬ ಸಾಗರವನ್ನು ಸೇರುತ್ತಲಿರುವೆನು, ನನ್ನನ್ನು ಅನುಗ್ರಹಿಸು. ನನ್ನನ್ನು ಉದ್ಧರಿಸು.' ॥೩೦॥

ಹೀಗೆ ಕಾವೇರಿಯಿಂದ ಸ್ತುತಿಸಲ್ಪಟ್ಟ ಸಂಗಮೇಶ್ವರನು ಕಾವೇರೀದೇವಿಯ ಪ್ರಾರ್ಥನೆಯಂತೆ, ಕಾವೇರೀಸಂಗಮಸ್ಥಾನದಲ್ಲಿ ಪರ್ವಕಾಲದ ಸ್ನಾನಮಾಡುವವರಿಗೆ ಸಕಲಪಾಪರಾಶಿಯೂ ನಾಶವಾಗುವಂತೆ ಅನುಗ್ರಹಿಸಿದನು. ಜೈಗೀಷವ್ಯಾದಿಗಳೇ, ಅಂತಹ ಪವಿತ್ರವಾದ ಕ್ಷಯಪುರವೆಂಬ ಮುಕ್ತಿಪ್ರದವಾದ ಕ್ಷೇತ್ರದಲ್ಲಿ, ಕಾವೇರೀಸ್ನಾನ ಮಾಡಿ, ಶಿವಲಿಂಗದರ್ಶನಮಾಡುವ ಮಾನವರಿಗೂ, ದೇವತೆಗಳಿಗೂ, ರಾಕ್ಷಸರಿಗೂ, ಪರಶಿವನು ಸುಪ್ರೀತನಾಗಿ ಅವರ ಇಷ್ಟಾರ್ಥವನ್ನು ಕರುಣಿಸುವನೆಂಬುದರಲ್ಲಿ

ಬಾಣಸ್ತಸ್ಯ ಪುರಸ್ಯ ದಕ್ಷಿಣತಟೇ ದೇವೇ ಕ್ಷಯಾಖ್ಯೇ ವನೇ ।
ಶಂಖಂ ಪ್ರಾಪ್ಯ ತದಾ ಮುದೇ ಕ್ಷಣವಶಾತ್ಪಾಪಾಯ ಭಂಗಾಯ ಹಿ ॥೩೨॥

**ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಭಾಗೇ ಕಾವೇರ್ಯುತ್ಪತ್ತಿ ಕಥಾವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ**

---

ಸಂಶಯವಿಲ್ಲ. ಅದೇಕ್ಷೇತ್ರದ ದಕ್ಷಿಣದಿಕ್ಕಿನಲ್ಲಿರುವ ಕ್ಷಯುವನದಲ್ಲಿ ಬಾಣಾಸುರನು ಪರಶಿವನನ್ನು ಅರ್ಚನಾದಿಗಳಿಂದ ತೃಪ್ತಿಪಡಿಸಿ ಶತ್ರುನಾಶಕವೂ, ಪಾಪವಿಮೋಚಕವೂ ಆದ ಶಂಖವನ್ನು ಪಡೆದು ಯುದ್ಧದಲ್ಲಿ ಜಯಶೀಲನಾದನು. ಎಂಬುದಾಗಿ ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದನು. ||೩೧-೩೨|

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಮುವತ್ತೆರಡನೆಯ ಅಧ್ಯಾಯವು ಮುಗಿದುದು.

---

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ತ್ರಯಸ್ತ್ರಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

**ಶ್ವೇತಾರಣ್ಯತಟೇಶಾನ್ಯಾಂ ಜಟಾಯೋಃ ಸ್ಥಾನಮುತ್ತಮಂ ।**
**ಪೂಜಿತಂ ಪಾವನಂ ತತ್ರ ದೇವದೇವೇತಿ ಗದ್ಯತೇ ॥೧॥**

**ತಂ ಪೂಜ್ಯ ಪೂತಭಸ್ಮೋಗ್ರಮಾತ್ರಯಾ ವೈ ಪವಿತ್ರಯಾ ।**
**ಪಾಪರೋಗಾದಿತಾಪೇಭ್ಯೋ ಮುಚ್ಯತೇ ಮಾನವೋಽಪಿ ಸನ್ ॥೨॥**

**ಬಾಲಾಂಬಿಕಾಪತಿಶ್ಶಂಭುರ್ದೃಷ್ಟೋ ಮುಕ್ತಿಪ್ರದಾಯಕಃ ।**
**ಸರ್ವೇಷಾಂ ಕಾಮದಾನೇ ಹಿ ನಿಪುಣಃ ಕಾಮನಾಶನಃ ॥೩॥**

---

## ಮೂವತ್ತಮೂರನೆಯ ಅಧ್ಯಾಯ

ಶ್ವೇತಾರಣ್ಯದ ಈಶಾನ್ಯಭಾಗದಲ್ಲಿ ಜಟಾಯುವಿನ ಸ್ಥಾನವೆನಿಸಿದ ಒಂದು ಶಿವಕ್ಷೇತ್ರವಿರುವುದು. ಅಲ್ಲಿ ಜಟಾಯುವು ಶಿವಲಿಂಗವನ್ನು ಪ್ರತಿಷ್ಠಾಪಿಸಿ, ಭಕ್ತಿಯಿಂದರ್ಚಿಸಿ, ಸಿದ್ಧಿಯನ್ನು ಪಡೆದಿರುವನು. ಆ ಶಿವಲಿಂಗವು ಈಗಲೂ ಅತ್ಯಂತ ಪವಿತ್ರವಾದ ದೇವಶ್ರೇಷ್ಠವೆನಿಸಿಕೊಂಡಿದೆ. ಅಲ್ಲಿರುವ ಆ ದಿವ್ಯ ಜಟಾಯು ಲಿಂಗವನ್ನು ಪವಿತ್ರವಾದ ಭಸ್ಮಧಾರಣೆಯಿಂದ ಭಕ್ತಿಭರಿತನಾಗಿ ಪೂಜಿಸುವವನು ಅನೇಕ ರೋಗಗಳಿಂದಲೂ ಪಾಪಗಳಿಂದಲೂ ಬಿಡುಗಡೆ ಹೊಂದುವನು. ||೧-೨||

ಅಲ್ಲಿರುವ ಶಿವಲಿಂಗವು ಬಾಲಾಂಬಿಕಾಪತಿಯೆಂಬ ಹೆಸರಿನಿಂದ, ತನ್ನ ಭಕ್ತರಿಗೆಲ್ಲಾ ಮುಕ್ತಿಯನ್ನೂ, ಸಕಲ ಇಷ್ಟಾರ್ಥಗಳನ್ನೂ ಕೊಟ್ಟು ರಕ್ಷಿಸುತ್ತಿರುವುದು.

ತತ್ರ ಬಾಲಾಂಬಿಕಾ ದೇವೀ ಷಣ್ಮುಖೋಮರಸಂನುತಾ ।
ತತ್ರ ಶ್ರೀ ವೈದ್ಯನಾಥಂ ಪೂಜಯಂತಿ ಸುರಾಸುರಾಃ ॥೪॥

ಮುನಯೋ ವೈದ್ಯನಾಥಸ್ಯ ಲಿಂಗಂ ಸಂಪೂಜಯಂತಿ ಹಿ ।
ತತ್ರತೀರ್ಥಂ ಪರಂ ಪುಣ್ಯಂ ದೇವ್ಯಾಃ ಕಾರುಣ್ಯಪೂರಿತಂ ॥೫॥

ಸ್ನಾತ್ವಾಂಗಾರಕವಾರೇ ತು ದೃಷ್ಟ್ವಾ ವೈದ್ಯೇಶ್ವರಂ ಶಿವಂ ।
ಬಾಲಾಂಬಿಕಾಂ ಕುಮಾರಂ ಮಾಮಸ್ಮಿನ್ ಸ್ಥಾನೇ ಸುಪಾವನೇ ॥೬॥

ಸರ್ವಾನ್ಕಾಮಾನವಾಪ್ನೋತಿ ನ ರೋಗೈರಭಿಭೂಯತೇ ।
ಭೂತಪ್ರೇತಪಿಶಾಚಾನಾಂ ಬಾಲಾಂಬಾಪಿ ನಿವಾರಿತಾ ॥೭॥

ತತ್ಸ್ಥಾನರಕ್ಷಣೇ ಚಾಹಂ ಶಕ್ತಿಹಸ್ತೋ ನಿಯೋಜಿತಃ ।
ಭವರೋಗ ಮಹಾವೈದ್ಯೋ ಭಿಷಜಾಂ ಪತಿರೀಶ್ವರಃ ॥೮॥

ಭಸ್ಮೋಥಮಾತ್ರಯಾ ಸರ್ವಾನ್ ಮೋಚಯೇದಥರೋಗತಃ ।
ತಾದೃಶಂ ಪರಮಂ ಸ್ಥಾನಂ ನ ಕುತ್ರಾಪಿ ಭವಿಷ್ಯತಿ ॥೯॥

ಅಲ್ಲಿಯೇ ಬಾಲಾಂಬಿಕಾದೇವಿಯು ಷಣ್ಮುಖನಿಂದಲೂ, ಅನೇಕ ದೇವತೆಗಳಿಂದಲೂ ಸೇವಿಸಲ್ಪಡುತ್ತಿರುವಳು. ಹಾಗೆಯೇ ಅಲ್ಲಿರುವ ವೈದ್ಯನಾಥೇಶ್ವರಲಿಂಗವನ್ನು ಸಕಲ ಮುನಿಗಳೂ, ದೇವರಾಕ್ಷಸರೂ ಸರ್ವದಾ ಆರಾಧಿಸುತ್ತಿರುವರು. ॥೩-೪॥

ಸಕಲಮುನಿಗಳಿಂದಲೂ ಪೂಜಿತವಾದ ವೈದ್ಯನಾಥಲಿಂಗವನ್ನೂ, ಅಲ್ಲಿಯೇ ದೇವಿಯು ಅನುಗ್ರಹಕ್ಕೆ ಪಾತ್ರವಾಗಿರುವ ಪುಣ್ಯತೀರ್ಥವನ್ನೂ, ಹಾಗೆಯೇ ಬಾಲಾಂಬಿಕೆ, ಕುಮಾರಸ್ವಾಮಿ ಈ ದೇವತೆಗಳನ್ನೂ ಮಂಗಳವಾರದದಿನ ದರ್ಶನ ಮಾಡುವವರಿಗೆ ವಿಶೇಷಸಿದ್ಧಿಯು ಲಭಿಸುವುದು. ॥೫ ೬॥

ಅಂತಹವರಿಗೆ ಸಕಲ ಇಷ್ಟಾರ್ಥಪ್ರಾಪ್ತಿಯೂ ಆಗುವುದಲ್ಲದೇ ಅವರು ರೋಗಾದಿಗಳಿಂದ ಮುಕ್ತರಾಗುವರು. ಬಾಲಾಂಬಿಕಾರಾಧನೆಯಿಂದ ಭೂತ ಪ್ರೇತಾದಿಗಳ ಬಾಧೆತಪ್ಪುವುದು. ಆ ಸ್ಥಾನವನ್ನು ರಕ್ಷಿಸುವುದಕ್ಕಾಗಿ ಸಾಕ್ಷಾತ್ಪರ ಶಿವನೇ ಶಕ್ತಿಹಸ್ತನಾಗಿ ನಿಂತಿರುವನು. ಅಲ್ಲಿರುವ ಈಶ್ವರಲಿಂಗವು ಸಂಸಾರವೆಂಬ ರೋಗಕ್ಕೆ ವೈದ್ಯನಂತಿರುವುದು. ॥೭-೮॥

ಈ ಈಶ್ವರನ ಪ್ರಸಾದರೂಪವಾದ ಭಸ್ಮಧಾರಣೆಯಿಂದಲೇ ಸಕಲರೋಗವೂ ನಿವಾರಣೆಯಾಗುವುದು. ಇಂತಹ ಪರಮಪವಿತ್ರವಾದ ಸ್ಥಾನವು ಭೂಲೋಕದಲ್ಲಿ

ಜಟಾಯುಷಾ ಪುರಾ ತತ್ರ ತಪಸ್ತಪ್ತಂ ಮಹೇಶ್ವರಂ ।
ಸಮಾರಾಧ್ಯಾವಸತ್ತತ್ರ ವೈದ್ಯನಾಥಂ ತದಾಸ್ತುವತ್ ॥೧೦॥

॥ ಜಟಾಯುರುವಾಚ ॥

ನಮೋಸ್ತು ವೈ ದೇವಮಹೇಶ ಶಂಭೋ
ಹಾಲಾಹಲಾಸ್ಯ ವಿಶ್ವೇಶ್ವರ ಪರ್ಣಶದ್ಯ ।
ಅಭೇದ್ಯ ಅಚ್ಛೇದ್ಯ ಪಿನಾಕಪಾಣೇ
ಆದ್ಯಃ ಸುರಾಣಾಂ ಪರಿಪಾಲಯಾದ್ಯಮಾಂ ॥೧೧॥

ಜಟಾಯೋರಾಯುರುತ್ಕೃಷ್ಟಂ ಪ್ರಾದಾದ್ವೈದ್ಯೇಶ್ವರಸ್ತಥಾ ।
ಚಂಡಾಂಶುದಗ್ಧಪಕ್ಷೈಶ್ಚ ತತ್ರೇಡ್ಯೋಽಭೂತ್ತನುತ್ವಿಷಾ ॥೧೨॥

ವೇದಾ ವೈದ್ಯೇಶ್ವರಂ ತತ್ರ ಸಮಭ್ಯರ್ಚ್ಯ ಪ್ರತುಷ್ಟುವುಃ ॥೧೩॥

---

ಎಲ್ಲಿಯೂ ದೊರಕಲಾರದು. ಜಟಾಯುವು ಹಿಂದೆ ಈ ವೈದ್ಯನಾಥೇಶ್ವರನನ್ನು ಕುರಿತು ಭಯಂಕರವಾದ ತಪಸ್ಸನ್ನಾಚರಿಸಿ ಹೀಗೆ ಸ್ತುತಿಸಿರುವನು. ॥೯-೧೦॥

'ದೇವದೇವನೇ, ಮಹೇಶ್ವರನೇ, ಹಾಲಾಹಲವೆಂಬ ವಿಷವನ್ನೂ ಕುಡಿದವನೇ, ವಿಶ್ವೇಶ್ವರನೇ, ಪರ್ಣಶದ್ಯ (ಎಲೆಗಳರಾಶಿಯಲ್ಲಿ ಅಡಗುವವನು) ಯಾರಿಂದಲೂ ಭೇದಿಸಲಾಗದವನೇ, ಯಾರ ಆಯುಧಗಳಿಗೂ ಸಿಲುಕದವನೇ, ಪಿನಾಕಪಾಣಿಯೇ, ದೇವತೆಗಳಿಗೆಲ್ಲಾ ಮೊದಲನೆಯನೆನಿಸಿದವನೇ, ನನ್ನನ್ನು ಸಲಹು.' ॥೧೧॥

ಹಾಗೆ ಪ್ರಾರ್ಥಿಸಿದ ಜಟಾಯುವಿಗೆ ತೃಪ್ತನಾಗಿ ಮಹಾದೇವನು, ಅವನಿಗೆ ಉತ್ಕೃಷ್ಟಜೀವನವನ್ನು ಕಲ್ಪಿಸಿದನು. ಆತನು ಸೂರ್ಯಕಿರಣಗಳಿಂದ ದೇಹವನ್ನು ಸುಟ್ಟುಕೊಂಡಿದ್ದರೂ, ಈಶ್ವರ ಮಹಿಮೆಯಿಂದ ಆತನ ದೇಹವು ಸೌಂದರ್ಯ ವಿಶಿಷ್ಟವಾಗಿತ್ತು. ಇದನ್ನು ನೋಡಿ ಸಕಲವೇದಗಳೂ, ವೈದ್ಯೇಶ್ವರನನ್ನು ಅರ್ಚಿಸಿ ಈರೀತಿ ಸ್ತೋತ್ರಮಾಡಿದುವು, 'ಮಹಾಮಹಿಮನಾದ ಶಂಕರನೇ, ನೀನು ಸಕಲ ಮರುದ್ಗಣಗಳಿಗೂ, ಪಿತೃವೆನಿಸಿರುವೆ. ತ್ರಿನಯನನಾಗಿ ಶ್ರೇಷ್ಠವಾದ ಬಾಣಗಳಿಂದ ಕೂಡಿರುವ ನೀನು ನನ್ನನ್ನುದ್ಧರಿಸು. ನೀನೇ ಚಂದ್ರಸೂರ್ಯರು. ಸಕಲ ಜೀವರಾಶಿಗಳಿಗೂ ಅನ್ನದ ರೂಪದಿಂದ ವಿಹರಿಸುತ್ತಲಿರುವೆ. ಪ್ರಣವರೂಪ

ಶಂಭೋ ತ್ವಂ ಮರುತಾಂ ಪಿತಾತ್ರಿನಯನೋ ದೇವಸ್ತ್ವಿಷುರ್ನಾಮವ
ಸೋಮಸ್ತ್ವಂ ಅರುಣೋದು ಸುಮಂಗಲ (?) ತರಃ ಸಾಹೀಶವಾಂ
ತ್ವದ್ದೃಶಾ ।
ಅನ್ನಾನಾಂ ಚ ಪತಿಸ್ತ್ವಮೇವ ಹಿ ಪಿತಾ ಬಿಲ್ವಾ ಶಿವಾದ್ಯಾವನಾಂ
ಓಂಕಾರಸ್ತವವಾಚಕಃ ಸ್ವ ಚ ಸ್ವರಃ ಸರ್ವಂ ನಮಸ್ತೇ ನಮಃ ॥೧೪॥

ಇತ್ಥಂ ಮಹೇಶ್ವರಂ ವೇದಾಃ ವೈದ್ಯನಾಥಸ್ತುತೌ ರತಾಃ ।
ಆದಿತ್ಯೋಽಪಿ ಚ ವೈದ್ಯೇಶ ಮರ್ಚಾಂ ದತ್ವಾತ್ರ ಸಂಸ್ತುವತ್ ॥೧೫॥

ವೇದಾ ವೈದ್ಯಮಹೇಶ್ವರೇ ಚರಣ್ಯ ಸದ್ಯೈನಮಾಯನಿಕರೇಶ್ವರ(?)
ಮಹಾದೇವೇಶ ಸದ್ಯೋವಮಾಂ ।
ಶ್ರೀವೈದ್ಯೇಶ ಸದೈವತೇ ಪದಯುಗಂ ತನ್ಮೌಲಿಸಂಸ್ಥಂಕುರು
ತೇನಾಹಂ ಭಗವನ್ ಸದೈವಸುನಯಂ ಲೋಕಂ ಪುನಾಮೀಶ್ವರಿ ॥೧೬॥

ಆದಿತ್ಯೋ ವೈದ್ಯನಾಥಂ ತತ್ಸ್ತುತ್ವಾ ಭಾಸಯತೇ ಜಗತ್ ।
ಅಂಗಾರಕೋಽಪಿ ದೇವೇಶಂ ಬಾಲಾಂಬಾಪತಿಮೀಶ್ವರಂ ॥೧೭॥

---

ದಿಂದಲೂ, ಸ್ವಸ್ವರೂಪಿಯಾಗಿಯೂ ಇದ್ದು ನಮ್ಮನ್ನು ನೀನು ಸಲಹುತ್ತಿರುವೆ. ಮಹಾದೇವನೇ, ಇದೇರೀತಿ ನೀನು ನಮ್ಮನ್ನು ಸರ್ವದಾ ರಕ್ಷಿಸುತ್ತಿರು. ನಿನಗೆ ನಮಸ್ಕಾರ, ನೀನೇ ನಮಗೆ ರಕ್ಷಕನು.' ॥೧೨-೧೩-೧೪॥

ಹೀಗೆ ಸಕಲವೇದಗಳೂ, ವೈದ್ಯನಾಥೇಶ್ವರನನ್ನು ಬಹಳವಾಗಿ ಸ್ತುತಿಸಿದ ನಂತರ, ಸೂರ್ಯದೇವನೂ ವೈದ್ಯನಾಥನನ್ನು ಪೂಜಿಸಿ ಈರೀತಿ ಸ್ತೋತ್ರಮಾಡಿದನು. 'ವೈದ್ಯೇಶ್ವರನೇ ನೀನು ಸರ್ವರಕ್ಷಕನು. ನಿನ್ನ ಪಾದಯುಗಳವು ಸದಾ ನನ್ನ ತಲೆಯಮೇಲಿದ್ದು ನನ್ನನ್ನು ರಕ್ಷಿಸುವಂತೆಮಾಡು. ಅಪ್ಪುಟಿನುಗ್ರಹವು ನಿನ್ನಿಂದ ದೊರೆತುದೇ ಆದರೆ, ಆಗ ನಾನು ಸಕಲ ಲೋಕವನ್ನೂ ಪವಿತ್ರಗೊಳಿಸುವೆನು.' ॥೧೫-೧೬॥

ಹೀಗೆ ಸೂರ್ಯದೇವನು ಸ್ತೋತ್ರಮಾಡಿ ವೈದ್ಯೇಶ್ವರನಿಂದ ತೇಜಸ್ಸನ್ನು ಪಡೆದು ಸಕಲ ಲೋಕವನ್ನೂ ಪವಿತ್ರಗೊಳಿಸುತ್ತಿರುವನು. ಇದನ್ನು ನೋಡಿ ಅಂಗಾರಕನೂ ಮತ್ತೆ ಸ್ವಾಮಿಯನ್ನು ಹೀಗೆ ಸ್ತುತಿಸಿದನು. ॥೧೭॥

ನಮಸ್ತೇಽಸ್ತು ವಿಶ್ವಾಧಿಕೇಶ ಪ್ರಸೀದಾದ್ಯ ಶಂಭೋ
ಮುದಾ ಮಾಮವಾದ್ಯ ಹೃದಾ ಮಾಂ ಸದಾ ತ್ವಂ।
ನಮಸ್ಯಾಮಿ ಕಾಯೈಃ ಕರೋಮೀಶಪೂಜಾಂ
ಕರಾಭ್ಯಾಮುಭಾಭ್ಯಾಂ ನಮಸ್ಯಾಮಿ ಶಂಭೋ ॥೧೮॥

ಶ್ರೀವೈದ್ಯನಾಥಂ ದೇವೇಶಮಸ್ಮದಾರಾಧ್ಯಮೀಶ್ವರಂ।
ತತ್ರ ಹಿ ವೈದ್ಯನಾಥಂ ತಂ ಪೂಜಯಾಮಿ ಭಿಷಗ್ವರಂ ॥೧೯॥

ಬಾಲಾಂಬಯಾ ಮುದಾಸ್ತೌಮಿ ವಾಚಾ ಕಾಯೇನ ನೌಮಿ ತಂ॥೨೦॥

॥ ಶ್ರೀಸ್ಕಂದ ಉವಾಚ ॥

ಅಂಭೋಧರಾಯಾಮಲಕುಂತಲಾಯೈ
ತಟಿತ್ಪ್ರಭಾದೀಪ್ತಜಟಾಧರಾಯ।
ನಿರೀಶ್ವರಾಯೈ ನಿಖಿಲೇಶ್ವರಾಯ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೧॥

---

"ಲೋಕೈಕನಾಥನೇ, ಮಹಾದೇವನೇ, ನನ್ನನ್ನು ಹೃತ್ಪೂರ್ವಕವಾದ ಕರುಣೆಯಿಂದ ಕಾಪಾಡುವವನಾಗು. ನಾನು ನಿನ್ನನ್ನು ಸದಾ ನಮಸ್ಕರಿಸುತ್ತಿರುವೆನು. ಎರಡು ಕೈಗಳಿಂದಲೂ ಕೂಡಿ ಸಾಷ್ಟಾಂಗನಮಸ್ಕಾರವೆಸಗುವೆನು. ನನ್ನನ್ನು ರಕ್ಷಿಸು." ॥೧೮॥

ಹೀಗೆ ಸಕಲ ದೇವತೆಗಳಿಂದಲೂ ಸ್ತುತ್ಯನಾದ ನಮ್ಮ ಬಾಲಾಂಬಾ ಸಹಿತನಾದ ವೈದ್ಯಶ್ರೇಷ್ಠನಾದ ವೈದ್ಯನಾಥನನ್ನು ಕಾಯಿಕವಾದ ಮತ್ತು ಮಾನಸಿಕವಾದ ಭಾವನೆಗಳಿಂದ ಸದಾ ನಮಸ್ಕರಿಸುವೆನು. ॥೧೯-೨೦॥

ಎಂದು ಕುಮಾರಸ್ವಾಮಿಯು ಪಾರ್ವತೀಪರಶಿವರನ್ನು ಧ್ಯಾನಿಸುತ್ತಾ ಹೀಗೆ ಸ್ತುತಿಸತೊಡಗಿದನು. "ಗಂಗಾಧರನೂ, ಮಿಂಚಿನ ಕಾಂತಿಯಂತೆ ಹೊಳೆಯುವ ಜಟಾಧರನೂ, ಸಕಲ ಲೋಕಗಳಿಗೂ ಒಡೆಯನೂ ಆಗಿರುವ ಪರಶಿವನಿಗೂ, ನೀಲವರ್ಣದ ಕೇಶಪಾಶವುಳ್ಳವಳೂ, ಸಕಲ ಜಗತ್ತಿಗೂ ತಾನೇ ಮುಖ್ಯಾಧಿದೇವತೆಯೂ ಆದ ಬಾಲಾಂಬಿಕೆಗೂ ನಾನು ಶಿರಸಾ ಎರಗುವೆನು. ॥೨೧॥

ಪ್ರಫುಲ್ಲನೀಲೋತ್ಪಲಲೋಚನಾಯೈ
ಸೋಮಾರ್ಕವಹ್ನ್ಯರುಣಲೋಚನಾಯ ।
ಸಮೇಕ್ಷಣಾಯೈ ವಿಷಮೇಕ್ಷಣಾಯ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೨॥

ಕಸ್ತೂರಿಕಾಚಂದನಲೇಪನಾಯೈ
ಸ್ಮಶಾನಭಸ್ಮಾಂಗವಿಲೇಪನಾಯ ।
ಕೃತಸ್ಮರಾಯೈ ವಿಕೃತಸ್ಮರಾಯ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೩॥

ಪ್ರಚಂಡಸೃಷ್ಟ್ಯೈ ನಿಖಿಲೇಶ್ವರಾಯೈ
ಸಮಸ್ತಸಂಹಾರ ಕೃತಾಂಬುದಾಯ ।
ಜಗಜ್ಜನನ್ಯೈ ಶವಭಸ್ಮಲೇಪಿನೇ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೪॥

ಮಂದಾರಮಾಲಾ ಲಲಿತಾಲಕಾಯೈ
ಕಪಾಲಮಾಲಾಂಕಿತಶೇಖರಾಯ ।

---

ಅರಳಿದ ಕಮಲದಂತೆ ಲೋಚನವುಳ್ಳವಳೂ, ಭಕ್ತರಲ್ಲೆಲ್ಲಾ ಸಮದೃಷ್ಟಿಯುಳ್ಳವಳೂ ಆದ ಮಹಾದೇವಿಗೂ, ಸೋಮಸೂರ್ಯಾಗ್ನಿಗಳನ್ನೇ ನೇತ್ರವನ್ನಾಗಿ ಉಳ್ಳ, ತ್ರಿಲೋಚನನೆನಿಸಿದ ಶ್ರೀವೈದ್ಯನಾಥೇಶ್ವರನಿಗೂ ವಂದಿಸುವೆನು. ॥೨೨॥

ಕಸ್ತೂರಿಯೇ ಮೊದಲಾದ ಸುಗಂಧದ್ರವ್ಯಗಳಿಂದ ಲಿಪ್ತವಾದ ಅಂಗವುಳ್ಳವಳೂ, ಮನ್ಮಥನನ್ನು ಬದುಕಿಸಿದವಳೂ, ಆದ ಬಾಲಾಂಬಿಕೆಗೂ, ಸ್ಮಶಾನದ ಭಸ್ಮದಿಂದ ಭೂಷಿತನಾದ, ಮನ್ಮಥನನ್ನು ನಾಶಗೊಳಿಸಿದ ವೈದ್ಯನಾಥನಿಗೂ ನಮಸ್ಕರಿಸುವೆನು. ॥೨೩॥

ಪ್ರಚಂಡವಾದ ಪ್ರಪಂಚದ ಸೃಷ್ಟಿಗೆ ಸ್ವಾಮಿನಿಯಾದವಳೂ, ಜಗನ್ಮಾತೆಯೂ ಆದ ಪಾರ್ವತಿಗೂ, ಸಮಸ್ತಲೋಕವನ್ನೇ ನಾಶಗೊಳಿಸುವ ಅಗ್ನಿಸ್ವರೂಪನಾದ ಮತ್ತು ಶವಭಸ್ಮಧಾರಿಯಾದ ಮಹಾದೇವನಿಗೂ ನಮಸ್ಕಾರ. ॥೨೪॥

ಮಂದಾರಪುಷ್ಪಗಳಿಂದ ಕೂಡಿದ ಮುಂಗುರುಳುಳ್ಳವಳೂ, ದಿವ್ಯಾಂಬರ

ದಿವ್ಯಾಂಬರಾಯೈ ಚ ದಿಗಂಬರಾಯ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೫॥

ವಿಚಿತ್ರರತ್ನೋತ್ತಮಕುಂಡಲಾಯೈ
ಸ್ಫುರನ್ಮಹಾಪನ್ನಗಕುಂಡಲಾಯ ।
ಶಿವಪ್ರಿಯಾಯೈ ಚ ಶಿವಾಪ್ರಿಯಾಯ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೬॥

ಅಂತರ್ಬಹಿಶ್ಚೋರ್ಧ್ವಮಧಶ್ಚ ಮಧ್ಯೇ
ಪುರಶ್ಚ ಪಶ್ಚಾದ್ದಶದಿಕ್ಷು ಭೂಮ್ಯಾಂ ।
ಸರ್ವಾತ್ಮಿಕಾಯೈ ಸಕಲಾತ್ಮಕಾಯ
ಶ್ರೀವೈದ್ಯನಾಥಾಯ ನಮಶ್ಶಿವಾಯ ॥೨೭॥

ಇತ್ಥಂ ತತ್ರ ಸುರಾಸುರೇಂದ್ರನಮಿತಂ ಶ್ರೀವೈದ್ಯನಾಥಾಭಿಧಂ ।
ಲಿಂಗಂ ಮಂಗಲದಂ ಸ್ಮರನ್ ಭಗವತೋ ಬಾಲಾಂಬಿಕಾಮಂಬಿಕಾಂ ॥೨೮॥

ವಾರಂ ವಾರಮನುಸ್ಮರಾಮಿ ಹೃದಯೇ ತದ್ಧ್ಯಾನವರ್ಯೇ ಮುದಾ ।
ಹಸ್ತೇ ಶಕ್ತಿಧರೋ ವಸಾಮಿ ಶಿವಯೋಃ ಪಾದಾಂಬುಜಾರಾಧಕಃ ॥೨೯॥

---

ಧಾರಿಣಿಯೂ ಆದ ಮಹಾದೇವಿಗೂ, ಕಪಾಲ ಮಾಲೆಗಳಿಂದ ಅಲಂಕೃತನಾದ ಮತ್ತು ದಿಗಂಬರನೆನಿಸಿದ ವೈದ್ಯನಾಥೇಶ್ವರನಿಗೂ ವಂದನೆಗಳು. ॥೨೫॥

ದಿವ್ಯರತ್ನಕುಂಡಲಗಳನ್ನು ಧರಿಸಿ, ಪರಶಿವನಿಗೆ ಪ್ರೀತಿಪಾತ್ರಳೆನಿಸಿದ ಶಂಕರಿಗೂ, ಆದಿಶೇಷನನ್ನೇ ಕುಂಡಲವನ್ನಾಗಿ ಮಾಡಿಕೊಂಡು, ಭಕ್ತರಿಗೆ ಮಂಗಳ ಪ್ರದನಾಗಿರುವ ಶಂಕರನಿಗೂ ಅನಂತಾನಂತ ಪ್ರಣಾಮಗಳು. ॥೨೬॥

ಒಳಗೂ, ಹೊರಗೂ, ಊರ್ಧ್ವಾಧೋಭಾಗಗಳಲ್ಲಿಯೂ, ಭೂಮ್ಯಂತರಿಕ್ಷ ಗಳಲ್ಲಿಯೂ ಸರ್ವಾತ್ಮಕಳಾಗಿ ನೆಲಸಿರುವ ಪಾರ್ವತಿಗೂ, ಸಕಲಾತ್ಮಕನಾಗಿರುವ ವೈದ್ಯನಾಥನಿಗೂ ಸರ್ವದಾ ವಂದಿಸುವೆನು. ॥೨೭॥

ಎಲೈ ಜೈಗೀಷವ್ಯಮಹರ್ಷಿಯೇ, ಹೀಗೆ ದೇವರಾಕ್ಷಸರಿಂದ ಪೂಜಿತವಾದ ವೈದ್ಯನಾಥಲಿಂಗವನ್ನೂ, ಜಗನ್ಮಾತೆಯಾದ ಬಾಲಾಂಬಿಕೆಯನ್ನೂ, ಸರ್ವದಾ ಸ್ಮರಿಸುತ್ತಾ, ಹೃದಯಕಮಲದಲ್ಲಿ ಧ್ಯಾನಿಸುತ್ತಾ, ಶಕ್ತ್ಯಾಯುಧದಿಂದ ಕೂಡಿ,

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಭಾಗೇ ವೈದ್ಯನಾಥ
ಬಾಲಾಂಬಿಕಾ ವೈಭವೋ ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ನಾನು ಪಾರ್ವತೀಪರಶಿವರ ಪಾದಕಮಲಗಳ ಆರಾಧಕನಾಗಿ ಈ ಕ್ಷೇತ್ರದಲ್ಲಿ ನೆಲಸಿರುವೆನು. ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ಹೇಳಿದನು. ||೨೮-೨೯||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರ ಭಾಗದಲ್ಲಿ ವೈದ್ಯನಾಥ
ಬಾಲಾಂಬಿಕಾ ವೈಭವವನ್ನು ವಿವರಿಸುವ ಮೂವತ್ತುಮೂರನೆಯ
ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಚತುಸ್ತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದುತ್ತರೇ ಮಹೇಶಸ್ಯ ಸ್ಥಾನಂ ಶ್ರೀಕಾಲಸಂಜ್ಞಿಕಂ ।
ದ್ರೋಣೀಪುರಂ ಬ್ರಹ್ಮಪುರಂ ತತ್ರ ಬ್ರಹ್ಮಪುರೀಶ್ವರಃ ॥೧॥

ಬ್ರಹ್ಮಣಾ ಭೈರವೇಣಾಪಿ ತತ್ರ ಸ್ಥಾನೇ ತಪಃಕೃತಂ ।
ರುದ್ರಸ್ಥಾನೇ ನಿವಸತಾಮ್ಪುಣ್ಯಯುಸ್ಸ್ಯುರ್ನ ಸಂಶಯಃ ॥೨॥

ಮುನಿಭಿರ್ದೇವಗಂಧರ್ವೈಃ ಸಿದ್ಧೈಶ್ಚ ಪರಿಶೋಭಿತಂ ।
ಪುಣ್ಯಂ ಚ ದರ್ಶನಾತ್ತತ್ರ ವಸತಾಂ ಭುಕ್ತಿಮುಕ್ತಯಃ ॥೩॥

ಪುರಾ ಬ್ರಹ್ಮಾ ಮುನಿಗಣೈಃಸ್ವೈರ್ವಿಪ್ರೈಸ್ತತ್ರ ಚಾಗತಃ ।
ತತ್ಸ್ಥಾನವೈಭವಂ ದೃಷ್ಟ್ವಾ ತತ್ರ ತೇಪೇ ಮಹತ್ತಪಃ ॥೪॥

---

## ಮೂವತ್ತುನಾಲ್ಕನೆಯ ಅಧ್ಯಾಯ

ವೈದ್ಯನಾಥೇಶ್ವರಲಿಂಗವಿರುವ ವನದ ಉತ್ತರ ಭಾಗದಲ್ಲಿ ಕಾಲಸಂಜ್ಞಕವಾದ ದ್ರೋಣೀಪುರ, ಬ್ರಹ್ಮಪುರಗಳೆಂಬ ಕ್ಷೇತ್ರಗಳಿರುವುವು. ಅಲ್ಲಿ ಬ್ರಹ್ಮಪುರೀಶ್ವರವೆಂಬ ಶಿವಲಿಂಗವಿರುವುದು. ಅಂತಹ ಶಿವಕ್ಷೇತ್ರದಲ್ಲಿ ಹಿಂದೆ, ಬ್ರಹ್ಮ ಮತ್ತು ಭೈರವ ಇವರಿಬ್ಬರೂ ಘೋರವಾದ ತಪಸ್ಸನ್ನಾಚರಿಸಿದರು. ಆ ಶಿವಸ್ಥಾನದಲ್ಲಿ ವಾಸಮಾಡುತ್ತಿರುವವರೆಲ್ಲಾ ಪುಣ್ಯಾತ್ಮರೆನಿಸಿಕೊಂಡಿರುವರು. ಇದರಲ್ಲಿ ಸಂಶಯವಿಲ್ಲ. ||೧-೨||

ಆ ಕ್ಷೇತ್ರವು ಅನೇಕ ಮಹರ್ಷಿಗಳಿಂದಲೂ, ಸಿದ್ಧಗಂಧರ್ವಾದಿಗಳಿಂದಲೂ ಶೋಭಿಸುತ್ತಿರುವುದು. ಅಲ್ಲಿ ವಾಸಮಾಡುವವರಿಗೆ ಭುಕ್ತಿ (ಐಹಿಕಸುಖ) ಮುಕ್ತಿ

ಭಸ್ಮಧೃಜ್ಜಿಯತೋ ಮೌನೀ ರುದ್ರಜಾಪ್ಯಪರಾಯಣಃ ।
ತ್ರಿಕಾಲಮರ್ಚಯನ್ ದೇವಂ ತತ್ರ ಬ್ರಹ್ಮವನೇ ವಿಧಿಃ ॥೫॥

ತುಷ್ಟಾವ ದೇವಂ ಹೃಷ್ಟಾತ್ಮಾ ಸಾಂಬಂ ಚಂದ್ರಕಲಾಧರಂ ॥೬॥

॥ ಬ್ರಹ್ಮೋವಾಚ ॥

ನಮಃ ಪ್ರಪನ್ನಾರ್ತಿಹರಾಯ ಶಂಭವೇ
ಮಯೋ ಭುವೇ ಪಾಪಹರಾಯ ತುಭ್ಯಂ ।
ಗೀರ್ವಾಣಬೃಂದಸ್ತುತಪಾದುಕಾಯ
ನಮೋಸ್ತು ಬ್ರಹ್ಮೇಂದ್ರಹರಿಸ್ತುತಾಯ ॥೭॥

ಸನಾತನಾಯಾಗಮಬೋಧಿತಾಯ
ಭಕ್ತೌಘಮುಕ್ತಿಪ್ರಣವಾಯ ತೇ ನಮಃ ।
ದ್ರೋಣೀಪುರೇಶಾಯ ಮಹೇಶ್ವರಾಯ
ಶ್ರೀಕಾರ್ಶನಾಥಾಯ ನಮೋಸ್ತು ಶಂಭವೇ ॥೮॥

---

(ಆಮುಷ್ಮಿಕಸುಖ) ಇವು ಸುಲಭವಾಗಿ ದೊರಕುವುವು. ಇಂತಹ ಪುಣ್ಯಕ್ಷೇತ್ರವನ್ನು ನೋಡಿಯೇ ಬ್ರಹ್ಮನು ಘೋರವಾದ ತಪಸ್ಸನ್ನಾಚರಿಸಿದನು. ॥೩-೪॥

ಬ್ರಹ್ಮನು ಭಸ್ಮಧಾರಿಯಾಗಿ ಮೌನದಿಂದ ರುದ್ರಾಧ್ಯಾಯವನ್ನೇ ಜಪಿಸುತ್ತಾ, ತ್ರಿಕಾಲದಲ್ಲಿಯೂ ಪರಶಿವನನ್ನು ಅರ್ಚಿಸುತ್ತಿದ್ದನು. ಅದೇ ಈಗ ಬ್ರಹ್ಮವನವೆನಿಸಿದೆ. ಅಲ್ಲಿ ಬ್ರಹ್ಮದೇವನು ವಿಧವಿಧವಾದ ಸ್ತೋತ್ರಗಳಿಂದ ಚಂದ್ರಶೇಖರನೆನಿಸಿದ ಮಹಾದೇವನನ್ನು ಹೀಗೆ ಸ್ತುತಿಸತೊಡಗಿದನು. ॥೫-೬॥

'ಮಹಾದೇವನೇ, ನೀನು ಭಕ್ತರ ದುಃಖಗಳನ್ನು ಹರಿಸುವವನು, ಮಯೋಭೂ: (ಸುಖಸ್ವರೂಪಿಯು ಮತ್ತು ಭಕ್ತರಿಗೆ ಸುಖಪ್ರದನು)ಸಕಲಪಾಪನಿವಾರಕನು, ಸಮಸ್ತ ದೇವಗಣದಿಂದಪೂಜಿತವಾದ ಪಾದುಕೆಗಳುಳ್ಳವನು. ಬ್ರಹ್ಮ, ಇಂದ್ರ, ವಿಷ್ಣು ಮೊದಲಾದವರಿಂದಲೂ ಪೂಜಿತನಾದವನು. ಇಂತಹ ನಿನಗೆ ವಂದನೆಗಳು. ॥೭॥

ಆದ್ಯಂತವಿಲ್ಲದವನೂ, ವೇದಪ್ರತಿಪಾದ್ಯನೂ, ಭಕ್ತರತಂಡಕ್ಕೆ ಮುಕ್ತಿಯನ್ನು ಕರುಣಿಸುವವನೂ, ದ್ರೋಣೀನಗರಾಧಿಪತಿಯೂ, ತಪಸ್ಸಿನಿಂದ ಕೃಶರಾಗಿರುವವರಿಗೆ ರಕ್ಷಕನೂ ಆಗಿರುವ ನಿನಗೆ ವಂದನೆಗಳು. ॥೮॥

ಬ್ರಹ್ಮಣಾ ಸಂಸ್ತುತೋ ದೇವಸ್ತತ್ರಸ್ಥಾನೇ ಮುನೀಶ್ವರೈಃ ।
ತತ್ರ ಬ್ರಹ್ಮವನಾಧೀಶೋ ತಸ್ಮೈ ವೇದಾನ್ ಪ್ರದತ್ತವಾನ್ ॥೯॥

ಭೈರವೋಪಿ ಸದಾ ದೇವಂ ಸಮಾರಾಧ್ಯ ಮಹೇಶ್ವರಂ ।
ತತಾಪ ನಿಯತಂ ಘೋರಂ ದ್ವಾದಶಾಬ್ದಮಹರ್ನಿಶಂ ॥೧೦॥

ಭಸ್ಮೋದ್ಧೂಲಿತಸರ್ವಾಂಗಸ್ತ್ರಿಪುಂಡ್ರಪರಿಶೋಭಿತಃ ।
ಕಪಾಲಮಾಲಾಭರಣಃ ಶೂಲಾಸಕ್ತಕರಾಂಬುಜಃ ॥೧೧॥

ಜಟಿಲಶ್ಚಂದ್ರರೇಖಾಂಕಃ ದಿಗ್ವಾಸಾಃ ಪಟಲಾಂಘ್ರಿಕಃ ।
ಶ್ವಭಿಃ ಪರಿವೃತೋ ಘೋರೈರ್ವೇದಾಗಮಪುರಾಣಕೈಃ ॥೧೨॥

ಜಜಾಪ ನಿಯತೋ ರುದ್ರಂ ಶ್ರೀಮತ್ಪಂಚಾಕ್ಷರಂ ಪರಂ ।
ಏಕಾದಶಗುಣಂ ರುದ್ರಂ ನಿಯಮಾರಾಧ್ಯತೋ ಮನುಂ ॥೧೩॥

ಧ್ಯಾಯನ್ ದ್ರೋಣಿಪುರೇಶಾನಮರ್ಚಯನ್ ಭೈರವೋತ್ತಮಃ ।
ಬಿಲ್ವೈಃ ಪಂಕಜದಾಮಾದ್ಯೈರ್ಮಂದಾರಾರ್ಕೈಃ ಸುಚಂಪಕೈಃ ॥೧೪॥

---

ಹೀಗೆ ಬ್ರಹ್ಮವನದಲ್ಲಿ ಬ್ರಹ್ಮನಿಂದ ಸ್ತುತನಾದ ಮಹೇಶ್ವರನು ಬ್ರಹ್ಮನಿಗೆ ಅನುಗ್ರಹಿಸಿ, ಅವನಿಗೆ ಸಮಸ್ತವೇದರಾಶಿಯನ್ನು ಅನುಗ್ರಹಿಸಿದನು. ಹಾಗೆಯೇ ಭೈರವನೂ ಸಹ ಅಲ್ಲಿಯೇ ಹನ್ನೆರಡುವರ್ಷಪರ್ಯಂತ ಘೋರವಾದ ತಪಸ್ಸನ್ನಾಚರಿಸಿದನು. ॥೯-೧೦॥

ಹೀಗೆ ಭೈರವನು ದ್ರೋಣಿಪುರದಲ್ಲಿ ಭಸ್ಮಲಿಪ್ತಗಾತ್ರನೂ, ಭಸ್ಮತ್ರಿಪುಂಡ್ರಾಂಕಿತಫಾಲನೂ ಆಗಿ, ಕಪಾಲಮಾಲೆಗಳಿಂದಲೂ, ತ್ರಿಶೂಲಾಯುಧಗಳಿಂದಲೂ, ಚಂದ್ರಕಲೆಯಿಂದಲೂ, ಕೂಡಿದವನಾಗಿ ದಿಗಂಬರನೆನಿಸಿ, ವೇದ, ಆಗಮ, ಪುರಾಣ ರೂಪಿಗಳಾದ ನಾಯಿಗಳಿಂದ ಸುತ್ತುವರಿದು, ಪರಶಿವನನ್ನು ಧ್ಯಾನಿಸುತ್ತಿದ್ದನು. ಅಲ್ಲದೇ ಶಿವಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ, ರುದ್ರಾಧ್ಯಾಯವನ್ನೂ ಏಕಾದಶಗುಣಕವಾಗಿ ಅಂದರೆ ನೂರಿಪ್ಪತ್ತೊಂದುಸಾರಿ ಉಚ್ಚರಿಸುತ್ತಾ ಪರಶಿವನನ್ನು ತೃಪ್ತಿಪಡಿಸಿದನು. ॥೧೧.೧೨-೧೩॥

ಮತ್ತು ದ್ರೋಣೀಕ್ಷೇತ್ರಸ್ಥನಾದ ಪರಶಿವನನ್ನು ಭೈರವನು, ಬಿಲ್ವಪತ್ರೆಗಳಿಂದಲೂ, ಮಂದಾರ, ಅರ್ಕ, ಸಂಪಿಗೆ ಮುಂತಾದ ಪುಷ್ಪಗಳಿಂದಲೂ ಪೂಜಿಸಿದನು.

ಶೂಲೇನ ಖಾತಯಿತ್ವಾತ್ರ ತೀರ್ಥಂ ದೇವಸ್ಯ ಸನ್ನಿಧೌ ।
ಶೂಲಖಾತಾಭಿಧಂ ತೀರ್ಥಂ ಪಾವನಂ ಪಾಪವಾರಕಂ ॥೧೫॥

ಭೌಮವಾರಾರ್ಕವಾರೇಷು ನಿಯಮಂ ಸ್ನಾನಮಾಚರೇತ್ ।
ಬ್ರಹ್ಮೇಶ್ವರಸ್ಯ ವಾಯವ್ಯಾಂ ಲಿಂಗಂ ವೈ ಭೈರವೇಶ್ವರಂ ॥೧೬॥

ಪ್ರತಿಷ್ಠಾಪ್ಯಾರ್ಚಯಾಮಾಸ ಭೈರವಸ್ತತ್ರ ಶಂಕರಂ ।
ಸಮಾಸಾದ್ಯೈಕಪಾದೇನ ಭೈರವೋಽಪೂಜಯದ್ಧರಂ ॥೧೭॥

ಬ್ರಹ್ಮೇಶಾನಂ ಭೈರವೇಶಂ ಯೋಗಿನೀಭಿರನೇಕಶಃ ।
ಗೀತನಿಷ್ಠೈಃ ನಟೈರ್ನಾದಿವಾದ್ಯಂ ತತ್ರಾಪ್ಯವಾದಯತ್ ॥೧೮॥

ಸ್ತೌತಿ ಬ್ರಹ್ಮವನಾಧೀಶಂ ಭೈರವೋ ಘನಗರ್ಜಿತಃ ॥೧೯॥

॥ ಶ್ರೀ ಭೈರವ ಉವಾಚ ॥

ಹರಹರ ಶಂಕರ ದೇವದಯಾಕರ ಪುರಹರ ಭವಹರ ಸುಂದರ ಭೋ
ದೇವಮುನಿವ್ರಜಗಣಗಣಪೂಜಿತ ತನುಮನವಚಸಾ ಪ್ರಣಮಾಮಿ ।

---

ಅಲ್ಲದೆ ತನ್ನ ತ್ರಿಶೂಲಾಯುಧದಿಂದಲೇ ಒಂದು ಕೊಳವನ್ನು ದೇವಸನ್ನಿಧಿಯಲ್ಲಿ ನಿರ್ಮಿಸಿದನು. ಅದಕ್ಕೆ ಈಗಲೂ ಶೂಲಖಾತ ತೀರ್ಥವೆಂದು ಹೆಸರಿದೆ. ಅದು ಸಕಲ ಪಾಪನಿವಾರಕವಾದುದು. ॥೧೪-೧೫॥

ಅದರಲ್ಲಿ ಭಾನುವಾರ ಮತ್ತು ಮಂಗಳವಾರಗಳಲ್ಲಿ ಸ್ನಾನಮಾಡುವುದರಿಂದ ಪಾಪನಾಶವಾಗುವುದು. ಬ್ರಹ್ಮೇಶ್ವರಲಿಂಗದ ವಾಯುವ್ಯದಲ್ಲಿ ಭೈರವೇಶ್ವರ ಲಿಂಗ ವಿರುವುದು. ಭೈರವನು ಆ ಲಿಂಗವನ್ನು ತಾನೇ ಪ್ರತಿಷ್ಠೆಮಾಡಿ, ಅಲ್ಲಿ ಏಕಪಾದದಿಂದ ನಿಂತು ಸ್ಥಿರಮನಸ್ಸಿನಿಂದ ಪೂಜಿಸಿರುವನು. ॥೧೬-೧೭॥

ಬ್ರಹ್ಮೇಶ್ವರ ಮತ್ತು ಭೈರವೇಶ್ವರ ಲಿಂಗವನ್ನು ಅನೇಕ ಯೋಗಿನಿಯರೂ, ಗಾನಲೋಲರಾದ ಇತರ ಗಂಧರ್ವರೂ ಸಹ ನಾಟ್ಯವಾಡುತ್ತಾ ನಾನಾರೀತಿಯಲ್ಲಿ ಅರ್ಚಿಸಿರುವರು. ಭೈರವನು ಮಾತ್ರ ಬ್ರಹ್ಮವನದಲ್ಲಿರುವ ಶಿವಲಿಂಗವನ್ನು ಈರೀತಿ ಸ್ತುತಿಸಿರುವನು. ॥೧೮-೧೯॥

ಮಹಾದೇವನೇ, ಶಂಕರನೇ, ದಯಾಕರನೇ, ತ್ರಿಪುರಗಳನ್ನೂ, ಸಂಸಾರ ದುಃಖವನ್ನೂ ನಾಶಮಾಡಿದವನೇ, ದೇವಗಣಗಳಿಂದಲೂ, ಮುನಿಗಣಗಳಿಂದಲೂ

ಗುರುಗರಭಕ್ಷಕ ದಕ್ಷಕಶಿಕ್ಷಕ ತ್ರ್ಯಕ್ಷ ಮಹೋಕ್ಷಗ ಪಾಹಿ ವಿಭೋ
ಶಸ್ತಸಮಸ್ತಸುರಾಸುರಸುಖಕರ ಭಸ್ಮಧೃತಾಮಲಶೂಲಧರ ॥೨೦॥

ಪಾಹಿ ಪದಾಹಿಧರಾಂತಕಹರಹರ ಪಾಪಮಪಾಕುರು ಶಂಕುರು ಮೇ
ದಂಡನಿಖಂಡಿತಮುಂಡಧರಾಂತಕಷಂಡಕರಂಡಕಭಂಡಹರ ।
ತಂಡುಲಪೂಜಿತಪದಯುಗಪಂಡಿತಜನಮುನಿಪೂಜಿತ ಶಂಕರ ಶಂಭೋ
ಮಾಮವ ತವಪದಸಕ್ತಮಸಕ್ತಮಮುಂತವದರ್ಶನತೋಽನ್ಯಸುರಾನಮತಃ ॥೨೧॥

ಹೇತಿಧರಾವ್ಯಯಪಾಹಿ ಸದಾಶಿವ ।
ದೇವದಯಾಕರ ಪಾಹಿ ಸದಾ ॥೨೨॥

ಇತ್ಥಂ ಭೈರವವರ್ಯೇಣ ಸ್ತುತಸ್ತುಷ್ಟೋ ಮಹೇಶ್ವರಃ ।
ತಸ್ಮೈ ಪ್ರಸನ್ನೋ ಭಗವಾನುವಾಚ ಪ್ರಹಸನ್ನಿವ ॥೨೩॥

---

ಪೂಜಿತನಾದವನೇ, ನಿನಗೆ ಮನಸ್ಸಿನಿಂದಲೂ ಮತ್ತು ದೇಹದಿಂದಲೂ ನಮಸ್ಕರಿಸುವೆನು. ಗುರುತರವಾದ ವಿಷವನ್ನು ಪಾನಮಾಡಿ, ದುಷ್ಟ ದಕ್ಷನಿಗೆ ಶಿಕ್ಷೆಕೊಟ್ಟಿರುವ ಮಹಾತ್ಮನೇ, ವೃಷಭವಾಹನನೇ, ಸರ್ವವ್ಯಾಪಿಯೇ, ಸಮಸ್ತ ದೇವರಾಕ್ಷಸರಿಗೆಲ್ಲಾ ಸುಖವನ್ನುಂಟುಮಾಡಿ, ಭಸ್ಮವನ್ನು ಧರಿಸಿರುವ ಮಹಾದೇವನೇ, ನಿನಗೆ ವಂದನೆ. ॥೨೦॥

ಪರಶಿವನೇ, ನೀನು ಆದಿಶೇಷನನ್ನೇ ಕೈಯ್ಯಲ್ಲಿ ಹಿಡಿದಿರುವೆಯಲ್ಲವೆ! ಯಮನನ್ನೂ ಭಂಗಗೊಳಿಸಿದ ಮಹಾತ್ಮನೇ, ನನ್ನ ಪಾಪರಾಶಿಯನ್ನೆಲ್ಲಾ ನಾಶಗೊಳಿಸು. ದಂಡಾಯುಧದಿಂದ ಶತ್ರುಗಳನ್ನು ನಿರ್ಮೂಲಗೊಳಿಸಿ ಅವರ ಮುಂಡಗಳನ್ನುರುಳಿಸುವ ರಾಕ್ಷಸರನ್ನು ಧ್ವಂಸಮಾಡುವವನೇ, ತಂಡುಲ (ಮಂತ್ರಾಕ್ಷತೆ) ದ ರಾಶಿಯಿಂದ ಪೂಜಿತವಾದ ಪಾದಪದ್ಮವುಳ್ಳವನೇ, ವಿದ್ವಾಂಸರಿಂದ ನಾನಾರೀತಿಯಲ್ಲಿ ಪೂಜಿತನಾದವನೇ, ಶಂಕರನೇ, ನಿನ್ನ ಪಾದಪದ್ಮಗಳಲ್ಲಿಯೇ ಯಾವಾಗಲೂ ಆಸಕ್ತನಾಗಿರುವ ನನಗೆ ನಿನ್ನ ದರ್ಶನವನ್ನಿತ್ತು ರಕ್ಷಿಸು. ಇತರದೇವತಾ ದರ್ಶನವು ನಮಗೆ ಅಷ್ಟು ಸುಖಕರವಲ್ಲವೆಂಬುದನ್ನು ಅರಿತಿರುವೆನು. ॥೨೧॥

ಸಕಲಾಯುಧಗಳನ್ನೂ ಧರಿಸಿರುವ ನಾಶರಹಿತನಾದ ಮಹಾತ್ಮನೇ, ದಯಾಕರನೇ, ಸದಾ ನನ್ನನ್ನು ರಕ್ಷಿಸು.'' ಹೀಗೆ ಭೈರವನಿಂದ ಸ್ತುತಿಸಲ್ಪಟ್ಟ ಮಹಾದೇವನು ಭೈರವನಿಗೆ ಪ್ರಸನ್ನನಾಗಿ ನಗುತ್ತಾ ಹೀಗೆಂದನು. ॥೨೨-೨೩॥

॥ ಶ್ರೀ ಶಿವ ಉವಾಚ ॥

ಭೈರವಸ್ತ್ವಂ ಮಮಾದೇಶಾಚ್ಛಿವಕ್ಷೇತ್ರೇಷು ಪಾಪಿನಾಂ ।
ಶಾಸಕೋ ಭವ ನೈತೇಷು ಶಮನಸ್ಯ ಗಣಾಗಮಃ ॥೨೪॥

ಕಾಶ್ಯಾಂ ತ್ವಂ ವಸ ತತ್ರೈವ ಕಾಲಭೈರವನಾಮತಃ ।
ಅತ್ರತ್ಯಸಹ್ಯಜಾತೀರಶಿವಕ್ಷೇತ್ರೇಷು ಪಾಪಿನಾಂ ॥೨೫॥

ಶಾಸಕೋ ಭೈರವಾತ್ರ ತ್ವಂ ವಾಸಃ ಪ್ರಲಯಸಂತತಂ ।
ಅಂಗಾರಕಾರ್ಕವಾರೇತ್ರ ಯೇ ತ್ವಾಂ ಸಂಪೂಜಯಂತ್ಯಪಿ ॥೨೬॥

ತ್ವದಂಗೇ ಲೇಪಯಂತ್ಯೇವ ಸಾರ್ಧೈರ್ಮೃಗಮದೋದ್ಭವೈಃ ।
ಭಕ್ಷ್ಯೈಸ್ಸವಟಿಕೈರ್ಯೇ ತ್ವಾಂ ವಿನಿವೇದ್ಯ ನಮಂತ್ಯಪಿ ॥೨೭॥

ತೇಷಾಮಿಷ್ಟಪ್ರದೋ ಭೂಯಾಃ ಸತತಂ ತ್ವತ್ರ ವಾಸಿನಾಂ ।
ವಿನಾ ಶ್ರೀಭಾಂಛ (?) ಮುತ್ಕೃಷ್ಟಂ ಸ್ವವ್ಯಾಪಾರೇ ವಸಾಧುನಾ ॥೨೮॥

---

ಎಲೈ ಭೈರವನೇ, ಇನ್ನು ಮೇಲೆ ನೀನು ಶಿವಕ್ಷೇತ್ರಗಳಲ್ಲಿ ವಾಸಮಾಡುತ್ತಾ, ಅಲ್ಲಿರುವ ಪಾಪಿಗಳಿಗೆ ಶಿಕ್ಷೆಗೊಟ್ಟು ಬುದ್ಧಿಗಲಿಸುತ್ತಿರು. ಏಕೆಂದರೆ ಶಿವಕ್ಷೇತ್ರವಾಸಿಗಳ ಸಮೀಪಕ್ಕೆ ಯಮನಾಗಲಿ, ಅವನ ದೂತರಾಗಲಿ ಬರುವಂತಿಲ್ಲ. ಕಾಶಿಯಲ್ಲಿ ಮಾತ್ರ ಕಾಲಭೈರವನೆಂಬ ಹೆಸರಿನಿಂದ ಸರ್ವದಾ ವಾಸಮಾಡುತ್ತಿರು. ಹಾಗೆಯೇ ಈ ಕಾವೇರೀತೀರದಲ್ಲಿರುವ ಎಲ್ಲಾ ಶಿವಕ್ಷೇತ್ರಗಳಲ್ಲಿಯೂ ನೆಲಸಿ, ಅಲ್ಲಿರುವ ಪಾಪಿಗಳಿಗೆ ಶಿಕ್ಷೆಯನ್ನು ವಿಧಿಸುತ್ತಿರು. ॥೨೪-೨೫॥

ಎಲೈ ಭೈರವನೇ, ನೀನು ಪ್ರಳಯಕಾಲಪರ್ಯಂತವಾಗಿ ಇಲ್ಲಿಯೇ ವಾಸಿಸುತ್ತಿರು. ಭಾನುವಾರ ಮತ್ತು ಮಂಗಳವಾರಗಳಲ್ಲಿ ತಪ್ಪದೆ ನಿನ್ನನ್ನು ಪೂಜಿಸಿ, ನಿನ್ನ ಅಂಗಗಳಿಗೆಲ್ಲಾ ಕಸ್ತೂರೀಗಂಧವನ್ನು ಲೇಪಿಸಿ, ವಡೆಯೇ ಮೊದಲಾದ ಭಕ್ಷ್ಯಗಳ ಸ್ಸರ್ಪಿಸಿ. ನಮುಸ್ಕರಿಸಿದವರಿಗೆ ಸಕಲೇಷ್ಟಾರ್ಥಗಳನ್ನೂ ಅನುಗ್ರಹಿಸುವವನಾಗು. ॥೨೬-೨೭॥

ಮತ್ತು ಅವರಲ್ಲಿ ಶ್ರೇಷ್ಠ ಭಕ್ತರಾದವರಿಗೆ ಯಾವ ತೊಂದರೆಯನ್ನೂ ಕೊಡದೆ ಪಾಪಿಗಳ ಪಾಪವನ್ನು ಶಿಕ್ಷೆಯಿಂದ ಕಳೆಯುತ್ತಾ, ಶಿವಪದಸೇವನೆಯಲ್ಲಿ ನಿರತನಾಗಿ ಯಾರಿಗೂ ವಿಶೇಷ ಹಿಂಸೆ ಕೊಡದೆ ವಾಸಿಸು. ಎಂದು ಮಹಾದೇವ

ಶಿವಕ್ಷೇತ್ರೇಷು ವಸತಾಂ ಪಾಪಿನಾಂ ಪಾಪಶೋಧಕಃ ।
ಭವಸ್ತ್ವಾತಂದ್ರಿತೋ ನಿತ್ಯಂ ಭವೇ ಭವಪದಾರ್ಚಕಃ ॥೨೯॥

ಇತ್ಥಂ ದೇವೇನ ಸಂದಿಷ್ಟೋ ಭೈರವೋಽಭ್ಯವಸತ್ತದಾ ।
ತಸ್ಮಿನ್ ಶ್ರೀಕಾಶೀನಗರೇ ಸರ್ವೇಷಾಮಿಷ್ಟದಾಯಕಃ ॥೩೦॥

ಭೌಮಾರ್ಕವಾರಯೋಃ ಪೂಜಾಂ ಭೈರವಸ್ಯ ಪ್ರತುಷ್ಟಯೇ ।
ಕುರ್ವಂತಿ ಸ್ತುತಿಮಿಚ್ಛಂತಿ ಭೈರವಸ್ಯ ಸುರಾಸುರಾಃ ॥೩೧॥

ಸದೈವೇಂದ್ರೋ ಭಯಾತ್ತತ್ರ ದೈತ್ಯಾನಾಂ ಭೈರವಂತದಾ ।
ಜಗಾಮ ಶರಣಂ ತತ್ರ ಭೈರವಂ ತುಷ್ಟುವೇ ಹರಿಃ ॥೩೨॥

॥ ಇಂದ್ರ ಉವಾಚ ॥

ಹೇ ಭೈರವಾಸಿತ ಶೂಲಧರಾಂಗಸಂಗ
ಮಾತಂಗಕೃತ್ತಿವಸನಾನಲಲೋಚನಾದ್ಯ ।
ವಿದ್ಯಾಸುರಾಸುರಸಮೂಹಶಿವಸ್ಥಲೇಷು
ಪಾಪೌಘಶಿಕ್ಷಕ ಯಮಾಧಿಕ ದೇವ ಪಾಹಿ ॥೩೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಬ್ರಹ್ಮಪುರೇಶ ಭೈರವಮಹಿಮಾನುವರ್ಣನಂ ನಾಮ ಚತುಸ್ತ್ರಿಂಶೋಽಧ್ಯಾಯಃ

---

ನಿಂದ ಆಜ್ಞಪ್ತನಾಗಿ ಭೈರವನು ಕಾಶೀಕ್ಷೇತ್ರದಲ್ಲಿ ಸರ್ವಭಕ್ತರ ಕೋರಿಕೆಗಳನ್ನೆಲ್ಲಾ ನೆರವೇರಿಸುತ್ತಾ ಕಾಲಕಳೆಯುತ್ತಿದ್ದನು. ॥೨೮-೨೯-೩೦॥

ಸಕಲದೇವರಾಕ್ಷಸರೂ, ಪ್ರತಿ ಭಾನುವಾರ ಮತ್ತು ಮಂಗಳವಾರಗಳಲ್ಲಿ ಭೈರವಪ್ರೀತ್ಯರ್ಥವಾಗಿ ಭೈರವನನ್ನು ಸ್ತುತಿಸುವರು. ಇಂದ್ರನು ದೈತ್ಯರಿಂದ ಭಯವುಂಟಾದಕಾಲದಲ್ಲೆಲ್ಲಾ, ಶತ್ರುಭಯಂಕರನಾದ ಭೈರವನ ಸಮೀಪಕ್ಕೆ ಬಂದು ಭಕ್ತಿಯಿಂದ ಈರೀತಿ ಸ್ತುತಿಸುವನು. ॥೩೧-೩೨॥

ಕಾಲಭೈರವನೇ, ತ್ರಿಶೂಲಧಾರಿಯೇ, ಗಜಚರ್ಮಾಂಬರಧಾರಿಯೇ, ಅಗ್ನಿನೇತ್ರನೇ, ವಿದ್ಯಾಧರರೇ ಮೊದಲಾದ ದೇವತೆಗಳ ಮತ್ತು ರಾಕ್ಷಸರ ಸಮೂಹಗಳಲ್ಲಿಯೂ, ಶಿವಕ್ಷೇತ್ರಗಳಲ್ಲಿಯೂ ನೆಲಸಿ, ಪಾಪಿಗಳಿಗೆ ಅತಿಯಾದ ಶಿಕ್ಷೆಯನ್ನೂ

ವಿಧಿಸುತ್ತಿರುವ ಯಮಾಧಿಕನಾದ ಸ್ವಾಮಿಯೇ ನನ್ನನ್ನು ಕಾಪಾಡು.' ಎಂದು ಇಂದ್ರನು ಪ್ರಾರ್ಥಿಸಿಕೊಳ್ಳುವನು. ಇಂತಹ ಕಾಲಭೈರವನ ಮಹಿಮೆಯನ್ನು ಕೇಳುವವನಾಗು ಎಂದು ಸ್ಕಂದಸ್ವಾಮಿಯು ಜೈಗೀಷವ್ಯಮಹರ್ಷಿಗೆ ತಿಳಿಯ ಹೇಳಿದನು. ||೩೩||

ಇಲ್ಲಿಗೆ ಶ್ರೀಶಿವರಹಸ್ಯದ ಸಪ್ತಮಾಂಶದ ಉತ್ತರಾರ್ಧದಲ್ಲಿ
ಬ್ರಹ್ಮಪುರೇಶ್ವರನೆನಿಸಿದ ಭೈರವಮಹಿಮೆಯನ್ನು ವರ್ಣಿಸುವ
ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಪಂಚತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಶ್ವೇತಾರಣ್ಯೇ ತಥಾಗ್ನೇಯ್ಯಾಂ ಘಟೇಶಂ ಶಾಂಭವಂ ಸ್ಥಲಂ ।
ಸರ್ವಕಾಮಪ್ರದಂ ಸಾಕ್ಷಾತ್ತ್ರ್ಯಕ್ಷಪ್ರೀತಿಕರಂ ಶುಭಂ ||೧||

ವಸತಾಂ ಪುಣ್ಯದಂ ಶಂಭೋಃ ಪ್ರಸಾದೇನ ಮುನೀಶ್ವರ ।
ಶಿವದಾಘಭಿದಂ ತೀರ್ಥಂ ತತ್ರ ಶಂಭೋಃ ಪುರಸ್ಸ್ಥಿತಂ ||೨||

ತಸ್ಮಿನ್ ಸ್ನಾತ್ವಾ ನರಶ್ಚಿತ್ರಾಪೌರ್ಣಮ್ಯಾಂ ಚಿತ್ತಭೇ ತದಾ ।
ಶಿವಮುದ್ದಿಶ್ಯ ಯತ್ಕಿಂಚಿದ್ದತ್ವಾ ವೈ ಶಾಂಭವೇ ಧನಂ ||೩||

---

## ಮೂವತ್ತೈದನೆಯ ಅಧ್ಯಾಯ

ಶ್ವೇತಾರಣ್ಯಕ್ಷೇತ್ರದ ಆಗ್ನೇಯಭಾಗದಲ್ಲಿರುವ ಘಟೇಶಕ್ಷೇತ್ರದ ಮಹಿಮೆಯನ್ನು ತಿಳಿಸುತ್ತಾ ಕುಮಾರಸ್ವಾಮಿಯು ಜೈಗೀಷವ್ಯನಿಗೆ ಈರೀತಿ ತಿಳಿಸಿದನು. “ಮಹರ್ಷಿಯೇ, ಶ್ವೇತಾರಣ್ಯಕ್ಷೇತ್ರದ ಆಗ್ನೇಯದಿಕ್ಕಿನಲ್ಲಿ ಘಟೇಶವೆಂಬ ಕ್ಷೇತ್ರವಿರುವುದು. ಅದು ಸರ್ವಕಾಮಪ್ರದವಾದುದು ಮತ್ತು ಈಶ್ವರಪ್ರೀತಿಕರವಾದುದು. ಅಲ್ಲಿ ವಾಸಮಾಡುವವರಿಗೆ ಪುಣ್ಯರಾಶಿಯು ಪ್ರಾಪ್ತವಾಗುವುದಲ್ಲದೆ ಪಾಪನಿವೃತ್ತಿಯಾಗಿ ತನ್ಮೂಲಕ ಸನ್ಮಂಗಳಪ್ರಾಪ್ತಿಯಾಗುವುದು. ||೧-೨||

ಚಿತ್ತಾನಕ್ಷತ್ರಯುಕ್ತವಾದ ಚೈತ್ರಮಾಸದ ಚಿತ್ರಾಪೂರ್ಣಿಮಾದಿನ ಈ ಕ್ಷೇತ್ರದಲ್ಲಿ ಸ್ನಾನಮಾಡಿ, ಶಿವಪ್ರೀತ್ಯರ್ಥವಾಗಿ, ಶಿವಾರಾಧಕನಾದವನಿಗೆ ಎಳ್ಳು,

ತಿಲಂ ತಂಡುಲಮುದ್ಗಾದಿವಾಸೋ ಗೋಧನಭೋಜನೈಃ ।
ಭಕ್ತ್ಯಾ ವಿತ್ತಾನುಸಾರೇಣ ಶಿವಮುದ್ದಿಶ್ಯ ತತ್ರ ವೈ ॥೪॥

ಏಕಂ ಕೋಟಿಗುಣಂ ಜ್ಞಾತ್ವಾ ಶಿವಕ್ಷೇತ್ರೇಷು ಸಂತತಂ ।
ಇತರೇಭ್ಯೋಽಪಿ ವಿಪ್ರೇಭ್ಯಃ ಶಿವಭಕ್ತೇತ್ವನಂತಕಂ ॥೫॥

ದೇವ್ಯಾನುರಾಗಃ ಕರ್ತವ್ಯೋ ಶಿವಕ್ಷೇತ್ರೇ ವಿಶೇಷತಃ ।
ಪಶ್ಚಿಮಾಭಿಮುಖಂ ಲಿಂಗಂ ಜಟೇಶಾನ್ಯಾಂ ಮಹಾದ್ಭುತಂ ॥೬॥

ಅಭೀರಾಮಾ ತತ್ರ ದೇವೀ ಅಭಿತೋ ರಮ್ಯಸುಂದರಾ ।
ತತ್ರ ವಾಸಃ ಪುಣ್ಯಕಾಲೈರ್ಲಭ್ಯತೇ ಘಟಜೇ ಸ್ಥಲೇ ॥೭॥

ಸರ್ವೇಷಾಂ ಪ್ರಾಣಿನಾಂ ತತ್ರ ವಸತಾಂ ಕಾಲಜಂ ಭಯಂ ।
ಕಾಲಕಾಲಪ್ರಸಾದೇನ ನ ವೈ ಭೂಯಾಚ್ಚ ತತ್ರ ವೈ ॥೮॥

ಮೃತ್ಯುಂಜಯೋ ಮಹಾದೇವಸ್ತತ್ರ ಪಾದೇನ ಚಾಂತಕಂ ।
ಅಹನಚ್ಛೂಲಪಾತೇನ ಕಾಲಸಂಹಾರರೂಪಧೃಕ್ ॥೯॥

ಅಕ್ಕಿ, ಹೆಸರು, ಗೋವು, ಧನ ಇವುಗಳನ್ನು ಯಥಾಶಕ್ತಿಯಾಗಿ ದಾನಮಾಡಿ ಅವನಿಗೆ ಭೋಜನ ಮಾಡಿಸಿದರೆ ಅತಿಶಯವಾದ ಪುಣ್ಯಪ್ರಾಪ್ತಿಯಾಗುವುದು. ॥೩-೪॥

ಶಿವಕ್ಷೇತ್ರಗಳಲ್ಲಿ ಮಾಡಿದ ದಾನವು ಕೋಟಿಗುಣಕವಾಗಿ ಫಲವನ್ನು ಕೊಡುವುದು. ಇತರ ಬ್ರಾಹ್ಮಣರಿಗಿಂತ ಈಶ್ವರಭಕ್ತನಾಗಿರುವ ಬ್ರಾಹ್ಮಣನಿಗೆ ಕೊಟ್ಟ ದಾನವೂ ಅದರಂತೆಯೇ ವಿಶೇಷ ಫಲದಾಯಕವಾಗುವುದು. ಶಿವಕ್ಷೇತ್ರದಲ್ಲಿ ದೇವಿಯ ಅನುಗ್ರಹವನ್ನು ಸಂಪಾದಿಸಬೇಕು. ॥೫-೬॥

ಅಲ್ಲಿ ಸರ್ವಸುಂದರಿಯಾದ ಅಭೀರಾಮಾ ನಾಮಕಳಾದ ದೇವಿಯು ನೆಲಸಿರುವಳು. ಅಲ್ಲಿ ವಾಸವು ಲಭಿಸಬೇಕಾದರೆ ಜನ್ಮಾಂತರೀಯ ಸುಕೃತವಿರಬೇಕು. ಅಲ್ಲಿ ವಾಸಮಾಡುವ ಎಲ್ಲಾ ಪ್ರಾಣಿಗಳಿಗೂ ಕಾಲಕಾಲನ ಅನುಗ್ರಹದಿಂದ ಮರಣವೇ ಸಂಭವಿಸುವುದಿಲ್ಲ. ॥೭-೮॥

ಇಲ್ಲಿ ಸಾಕ್ಷಾನ್ಮೃತ್ಯುಂಜಯನೆನಿಸಿದ ಮಹಾದೇವನು ತನ್ನ ತ್ರಿಶೂಲದಿಂದ ಮೃಕಂಡುಪುತ್ರನಾದ ಮಾರ್ಕಂಡೇಯನನ್ನು ರಕ್ಷಿಸಲು ಯಮನನ್ನು ನಿಗ್ರಹಿಸಿದನು.

ದಂಷ್ಟ್ರಾಕರಾಳವದನಃ ಅಗ್ನ್ಯಂಗಾರಲೋಚನಃ ।
ಪುರಾ ಮೃಕಂಡುತನಯಸ್ತತ್ರ ತೇಪೇ ಮಹತ್ತಪಃ ॥೧೦॥

ಭಸ್ಮದಿಗ್ಧತ್ರಿಪುಂಡ್ರಾಂಕೋ ರುದ್ರಾಕ್ಷಾಭರಣೋಜ್ಜ್ವಲಃ ।
ರುದ್ರಪಂಚಾಕ್ಷರಜಪಂ ಕುರ್ವನ್ ಧ್ಯಾಯನ್ ಮಹೇಶ್ವರಂ ॥೧೧॥

ತ್ರಿಕಾಲಮರ್ಚಯನ್ ದೇವಂ ಬಿಲ್ವಪತ್ರೈರ್ಘಟೇಶ್ವರಂ ।
ಪ್ರಸಾದಾಯಾಭಿತುಷ್ಟಾವ ತತ್ರ ದೇವಂ ಮೃಕಂಡುಜಃ ॥೧೨॥

ಬ್ರಹ್ಮಮುರಾರಿ ಸುರಾರ್ಚಿತಲಿಂಗಂ
ನಿರ್ಮಲ[1] ಕಾರಣ ಶೋಭಿತಲಿಂಗಂ ।
[2]ಜನ್ಮಮೃತೀರುಜ ನಾಶನಲಿಂಗಂ
[3]ತಂ ಪ್ರಣತೋಽಸ್ಮಿ ಸದಾಶಿವಲಿಂಗಂ ॥೧೩॥

---

ಮಾರ್ಕಂಡೇಯನು ತಪಸ್ಸು ಮಾಡುತ್ತಿರುವಾಗ ಯಮನನ್ನು ಶಿಕ್ಷಿಸಲು ಮಹಾದೇವನು ಭಯಂಕರವಾದ ಕೋರೆಪಲ್ಲುಗಳಿಂದಲೂ ಅಗ್ನಿನೇತ್ರದಿಂದಲೂ ಕಾಲಕಾಲನ ವೇಷವನ್ನು ಧರಿಸಿಕೊಂಡಿದ್ದನು. ॥೯-೧೦॥

ಮಾರ್ಕಂಡೇಯನು ಭಸ್ಮಲೇಪಿತಗಾತ್ರನಾಗಿ, ರುದ್ರಾಕ್ಷಾಭರಣಗಳಿಂದ ಅಲಂಕೃತನಾಗಿ, ಸದಾ ಶಿವಪಂಚಾಕ್ಷರಿಯನ್ನೇ ಜಪಿಸುತ್ತಾ ತ್ರಿಕಾಲದಲ್ಲಿಯೂ ಶಂಕರನನ್ನೇ ಪೂಜಿಸುತ್ತಾ, ಘಟೇಶ್ವರಲಿಂಗವನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸುತ್ತಾ ಶಿವಾನುಗ್ರಹಕ್ಕಾಗಿ ಈರೀತಿ ಸ್ತೋತ್ರಮಾಡಿದನು. ॥೧೧-೧೨॥

ಬ್ರಹ್ಮನಿಂದಲೂ (ವೇದರಾಶಿಯಿಂದಲೂ) ವಿಷ್ಣುವೇ ಮೊದಲಾದ ದೇವತೆಗಳಿಂದಲೂ ಪೂಜಿತವಾದ ಮತ್ತು ನಿರ್ಮಲಸ್ವರೂಪನಾಗಿ ತೋರುತ್ತಾ, ಜನನಮರಣಾತ್ಮಕವಾದ ಸಕಲದುಃಖವನ್ನೂ ನಾಶಗೊಳಿಸುವ ಸದಾಶಿವಲಿಂಗವನ್ನು ನಾನು ಸದಾ ನಮಸ್ಕರಿಸುವೆನು. ॥೧೩॥

---

(1) ಭಾಸಿತ. (2) ಜನ್ಮಜದುಃಖವಿನಾಶಕ (3) ತತ್ಪ್ರಣಮಾಮಿ, (ಬೃಹತ್ಸ್ತೋತ್ರರತ್ನಾಕರದಲ್ಲಿ ಲಿಂಗಾಷ್ಟಕವೆಂಬ ಹೆಸರಿನ ಸ್ತೋತ್ರವೊಂದಿದೆ ಅದಕ್ಕೂ ಇದಕ್ಕೂ ಅನೇಕ ಕಡೆಗಳಲ್ಲಿ ಸಾಮ್ಯವಿದೆ).

ದೇವಗಣಸ್ತುತ ದಿವ್ಯಸುಲಿಂಗಂ
ಕಾಮವಿನಾಶಕ ಕಾರಣಲಿಂಗಂ ।
ರಾವಣಧೈರ್ಯವಿನಾಶನಲಿಂಗಂ
ತಂ ಪ್ರಣತೋಽಸ್ಮಿ ಸದಾಶಿವಲಿಂಗಂ ॥೧೪॥

ಯಕ್ಷಸುರಾಸುರವೀಕ್ಷಿತಲಿಂಗಂ
ಕುಕ್ಷಿಗಸರ್ವಜಗತ್ತ್ರಯಲಿಂಗಂ ।
ಅಂತಕಕಾಮವಿನಾಶನಲಿಂಗಂ
ತಂ ಪ್ರಣಮಾಮಿ ಸದಾಶಿವಲಿಂಗಂ ॥೧೫॥

ಚಂದನಕುಂಕುಮಲೇಪಿತಲಿಂಗಂ
ಪಂಕಜಬಿಲ್ವದಳಾರ್ಚಿತಲಿಂಗಂ ।
ಶೇಷಫಣಾಮಣಿಭೂಷಿತಲಿಂಗಂ
ತಂ ಪ್ರಣಮಾಮಿ ಸದಾಶಿವಲಿಂಗಂ ॥೧೬॥

---

ಸಕಲದೇವಗಣದಿಂದಲೂ ಸ್ತುತವಾದ ದಿವ್ಯಲಿಂಗಕ್ಕೆ ಎರಗುವೆನು. ಈ ಶಿವಲಿಂಗವು ಕಾಮನಾಶನಕ್ಕೆ ಮುಖ್ಯಕಾರಣವಾದುದು. ರಾವಣನ ಧೈರ್ಯವನ್ನು ನಿರ್ಮೂಲಗೊಳಿಸಿದುದು. ಇಂತಹ ಶಿವಲಿಂಗಕ್ಕೆ ನಾನು ಸದಾನಮಸ್ಕರಿಸುವೆನು. ॥೧೪॥

ಯಕ್ಷರಿಂದಲೂ, ಶೂರರಾದ ದೇವರಾಕ್ಷಸರಿಂದಲೂ ಭಕ್ತಿಯಿಂದ ದೃಷ್ಟವಾಗಿರುವ ಲಿಂಗವಿದು. ಸಕಲಜಗತ್ತ್ರಯವನ್ನೂ ಹೃದಯದಲ್ಲಿ ಅಡಗಿಸಿಕೊಂಡಿರುವ ಲಿಂಗವಿದು. ಯಮನನ್ನೂ, ಮನ್ಮಥನನ್ನೂ ಧ್ವಂಸಮಾಡಿದ ಲಿಂಗವಿದು. ಇಂತಹ ದಿವ್ಯಲಿಂಗಕ್ಕೆ ಅನಂತ ಪ್ರಣಾಮಗಳು. ॥೧೫॥

ದಿವ್ಯಚಂದನದಿಂದಲೂ, ಕುಂಕುಮಕೇಸರಿಯಿಂದಲೂ ಲಿಪ್ತವಾದ, ಮತ್ತು ಕಮಲ, ಬಿಲ್ವದಳ ಇವುಗಳಿಂದ ಅರ್ಚಿತವಾದ, ಆದಿಶೇಷನ ಹೆಡೆಗಳಲ್ಲಿರುವ ನಾಗರತ್ನಗಳಿಂದ ಭೂಷಿತವಾದ ಸದಾ ಶಿವಲಿಂಗಕ್ಕೆ ಮನಸಾ ವಂದಿಸುವೆನು. ॥೧೬॥

ದಿನಕರಕೋಟಿಸಮಪ್ರಭಲಿಂಗಂ
ಸುರಗಣವಿಷ್ಣುಗಣಾರ್ಚಿತಲಿಂಗಂ ।
ನಾಗಗಣಾರ್ಚಿತಸಂಸ್ತುತಲಿಂಗಂ
ತತ್ ಪ್ರಣಮಾಮಿ ಘಟೇಶ್ವರಲಿಂಗಂ ॥೧೭॥

ಇತ್ಥಂ ಮೃಕಂಡುತನಯೋ ಘಟೇಶಂ ಸಂಸ್ತುವನ್ ಸ್ಥಿತಃ ।
ತದಾ ಘಟೇಶ್ವರಸ್ಯಾಗ್ರೇ ಮಹಾಕಾಲಸ್ಸಮಾಗತಃ ।
ಹರಿಮಾರಿಮಾರುಹ್ಯ ಸ ದಂಡಪಾಣಿಃ
ಕರಾಳದಂಷ್ಟ್ರೋ ಧೃತಪಾಶಹಸ್ತಃ ।
ಗದೋಗ್ರದಂಡಾಂಕುಶಪಾಶಪಾಣಿಭಿಃ
ಸಮಾವೃತೋಗಾತ್ಸ್ವಗಣೈಸ್ಸವೈ ಯಮಃ ॥೧೯॥

ಮೃಕಂಡುಸೂನುಃ ಸಭಯೋ ಮಹೇಶ
ಲಿಂಗಂ ಸಮಾಲಿಂಗ್ಯ ಘಟೇಶ್ವರಾಖ್ಯಂ ।
ಮಹೇಶ ವಿಶ್ವೇಶ್ವರ ಪಾಹಿಮಾಮವ
ಪ್ರಸೀದ ಸೀದಂತಮಹೋ ಮಹೇಶ ॥೨೦॥

---

ಕೋಟಿಸೂರ್ಯರಂತೆ ಹೊಳೆಯುವ ಈ ದಿವ್ಯಲಿಂಗವು, ವಿಷ್ಣುಗಣಗಳಿಂದಲೂ, ದೇವಗಣಗಳಿಂದಲೂ ಪೂಜಿತವಾದುದು. ಅನೇಕ ನಾಗಗಣಗಳು ಈ ಶಿವಲಿಂಗವನ್ನು ಬಹಳವಾಗಿ ಸ್ತುತಿಸುತ್ತಿರುವುವು. ಇಂತಹ ಘಟೇಶ್ವರಲಿಂಗವನ್ನು ಸದಾ ಧ್ಯಾನಿಸುವೆನು. ॥೧೭॥

ಹೀಗೆ ಮಾರ್ಕಂಡೇಯನು ಘಟೇಶ್ವರಲಿಂಗವನ್ನು ಧ್ಯಾನಿಸುತ್ತಿರುವಾಗಲೇ ಯಮನು ಮಹಿಷಾರೂಢನಾಗಿ, ದಂಡವನ್ನು ಕೈಯಿಂದ ಹಿಡಿದು, ಪಾಶ, ಅಂಕುಶ, ಗದೆ ಇವುಗಳನ್ನೂ ಧರಿಸಿ ತನ್ನ ದೂತರೊಡನೆ ಇವನಿಗೆ ಎದುರಾಗಿ ಬಂದು ನಿಂತನು. ॥೧೮-೧೯॥

ಮೃಕಂಡುಪುತ್ರನಾದ ಮಾರ್ಕಂಡೇಯನು ಭಯವಿಹ್ವಲನಾಗಿ ಘಟೇಶ್ವರ ಲಿಂಗವನ್ನು ಆಲಿಂಗಿಸಿಕೊಂಡು, ಮಹೇಶನೇ, ವಿಶ್ವೇಶ್ವರನೇ, ನನ್ನನ್ನು ಪಾಲಿಸು. ಯಮಪಾಶಕ್ಕೆ ಸಿಕ್ಕಿ ನಾಶವಾಗುವ ನನ್ನನ್ನುದ್ಧರಿಸು. ॥೨೦॥

ಪಿನಾಕಪಾಣೇ ಭಗವನ್ ಕಪರ್ದಿನ್
ಕಾಲಂ ಹರಸ್ವಾದ್ಯ ಮಹೇಶ್ವರೇಶ್ವರ ॥೨೧॥

॥ ಯಮ ಉವಾಚ ॥

ಇತ್ಥಂ ಮುನೀಶ್ವರ ಸುತಂ ಪರಿರಭ್ಯ ಕುಂಭ
ಲಿಂಗಂ ತದಾ ಸದೃಢಪಾಶಯುತಃ ಸಕಾಲಃ ।
ಸ್ವಪಾಶ ಸಂವೇಷ್ಟನತಃ ಸ ಲಿಂಗಂ
ಚಕರ್ಷ ಚ ಸ್ವೈರ್ಗನಾಪ್ಯೈ(?) ಜಗತ್
ಮತ್ಪಾಶಬಂಧಸ್ಯ ತವಾದ್ಯಕೋಪನೇ
ಪ್ರಭುರ್ನಿಮುಚ್ಯಾಂಗ ಹಿಮಾಂ ದ್ವಿಜಾರ್ಭಕೇ ।
ರಾಜ್ಞಾಂ ಸಹಸ್ರಂ ಕ್ರತುಮುಖ್ಯಲಕ್ಷಿತಂ
ತಪಸ್ವಿವೃಂದಂ ಸಚರಾಚರಂ ಜಗತ್ ॥೨೩॥

ಮಯ್ಯೈವ ನೀತಂ ಚ ನ ಯಾಮಿ ಚಾಗ್ರೇ
ಮಾಕ್ರೋಶ ವಿಶ್ವೇಶ್ವರ ಪಾಹಿ ಮಾಮಿತಿ
ಅಖರ್ವಗರ್ವೋದ್ಧತಕಾಲವಾಕ್ಯಂ
ನಿಶಮ್ಯ ಶಂಭುರ್ಘಟಜೇಶಲಿಂಗಾತ್ ॥೨೪॥

---

ಪಿನಾಕಪಾಣಿಯೇ, ಭಗವಂತನೇ, ಜಟಾಧಾರಿಯೇ, ಜಗದೀಶ್ವರನೇ ಯಮನನ್ನು ನಿಗ್ರಹಿಸು ಎಂದು ಪ್ರಾರ್ಥಿಸುತ್ತಾ ಶಿವಲಿಂಗವನ್ನು ತಬ್ಬಿಕೊಂಡಿದ್ದ ಮಾರ್ಕಂಡೇಯನನ್ನು ನೋಡಿ ಯಮನು ತನ್ನ ಪಾಶವನ್ನು ಲಿಂಗಸಹಿತನಾದ ಅವನಮೇಲೆ ಬೀರಿ ದೃಢವಾಗಿ ಎಳೆದನು. ॥೨೧-೨೨॥

ಎಲೈ ದ್ವಿಜಪುತ್ರನೇ, ನನ್ನ ಪಾಶಬಂಧವನ್ನು ತಪ್ಪಿಸಿ ನಿನ್ನನ್ನು ರಕ್ಷಿಸುವ ಧೀರನು ತ್ರಿಲೋಕದಲ್ಲಿ ಯಾವನು ತಾನೆ ಇರುವನು? ನನ್ನ ಈ ಪಾಶಕ್ಕೆ ಸಹಸ್ರಾರು ಮಂದಿ ರಾಜರೂ, ಮಹರ್ಷಿಗಳ ಗುಂಪೂ, ಚರಾಚರಾತ್ಮಕವಾದ ಈ ಜಗತ್ತೂ ಗುರಿಯಾಗುತ್ತಿರುವಾಗ ನಿನ್ನ ಅಗ್ಗಳಿಕೆಯೇನು? ॥೨೩॥

ನಿನ್ನನ್ನು ಎಳೆದುಕೊಂಡು ಹೋಗದೆ ನಾನು ಹಿಂದಿರುಗುವುದಿಲ್ಲ. ಸ್ವಾಮಿಯೇ, ವಿಶ್ವೇಶ್ವರನೇ ನನ್ನನ್ನು ರಕ್ಷಿಸು ಎಂದು ಅರಚಿಕೊಳ್ಳಬೇಡ, ಎಂದು

ತ್ರಿಶೂಲಪಾಣಿರ್ಭಗವಾನ್ ಜಗತ್ಪತಿ
ಸ್ತ್ರಿಲೋಚನೋಽಥಾವಿರಭೂದ್ಯಮಂ ದಮನ್ ।
ಕಾಲಂ ದಿಧಕ್ಷನ್ನಿವ ಲೋಚನೈಸ್ತ್ರಿಭಿ
ಸ್ತ್ರಿಶೂಲಮೂಲೇನ ಜಘಾನ ಚೋರಸಿ ॥೨೫॥

ವ್ಯಸುಃ ಪಪಾತಾಥ ಹಯಾರಿಪೃಷ್ಠಾ
ತ್ಕಾಲಸ್ತದಾ ಶೂಲವರೇಣ ಭಿನ್ನಃ ।
ವಜ್ರಾಭಿಘಾತೇನ ಯಥಾ ಗಿರೀಂದ್ರಃ
ಸುಸ್ರಾವ ತದ್ವತ್ಸಗತಂ ಚ ಶೋಣಿತಂ ॥೨೬॥

ಗಣಾಸ್ತದಾ ಕಾಂದಿಶೀಕಾ ಬಭೂವುಃ
ಘಾತೇ ಯಮೇ ದೇವದೇವೇನ ತತ್ರ ।
ಜಗರ್ಜುರುಚ್ಚೈರ್ಮುನಯಸ್ಸುರಾಶ್ಚ
ಖಾತ್ಪಪಾತ ವೃಷ್ಟಿಃ ಕುಸುಮಸ್ಯ ತತ್ರ ॥೨೭॥

---

ಹೇಳಿದ ಯಮನ ಗರ್ವೋಕ್ತಿಯನ್ನು ಕೇಳಿ ಪರಶಿವನು ಆದೇ ಘಟೇಶ್ವರಲಿಂಗದಿಂದ ಉದ್ಭವಿಸಿದನು. ॥೨೪॥

ಪರಶಿವನು ತ್ರಿಶೂಲಪಾಣಿಯಾಗಿ, ತನ್ನ ಮೂರು ನೇತ್ರಗಳಿಂದಲೂ ಯಮನನ್ನು ಸುಟ್ಟುಹಾಕುವನಂತೆ ಕಂಡುಬರುತ್ತಾ, ಯಮನನ್ನು ಹೆದರಿಸುತ್ತಾ, ತನ್ನ ತ್ರಿಶೂಲಗಳ ತುದಿಯಿಂದ ಯಮನ ಎದೆಯನ್ನು ಚುಚ್ಚಿದನು. ॥೨೫॥

ಮಹಿಷದ ಮೇಲಿನಿಂದ ಯಮನು ತ್ರಿಶೂಲದ ತಿವಿತಕ್ಕೆ ಸಿಕ್ಕಿ ಪ್ರಜ್ಞಾಶೂನ್ಯನಾಗಿ ಕೆಳಕ್ಕೆ ಬಿದ್ದನು. ವಜ್ರಾಯುಧದ ಏಟಿಗೆ ಸಿಕ್ಕಿ ಬೆಟ್ಟವು ಉರುಳಿದಂತೆ ಆತನು ನೆಲಕ್ಕೆ ಉರುಳಿ, ತನ್ನ ದೇಹದಿಂದ ರಕ್ತವು ಸುರಿಯುವುದನ್ನು ನೋಡಬೇಕಾಯಿತು. ॥೨೬॥

ಒಡನೆಯೇ ಯಮಗಣಗಳೆಲ್ಲವೂ ದಿಕ್ಕಾಪಾಲಾಗಿ ಚದರಿ ಓಡಿಹೋದವು. ದೇವದೇವನಾದ ಶಂಕರನು ಯಮನನ್ನು ಹೀಗೆ ತಿವಿದು ಬೀಳಿಸಲು, ಸಕಲ ಮುನಿಗಳೂ ಹಾಹಾಕಾರಮಾಡಿದರು. ಆಕಾಶದಿಂದ ದೇವತೆಗಳು ಹೂಮಳೆಗರೆದರು. ॥೨೭॥.

ನೇದುಸ್ತದಾ ದುಂದುಭಯೋ ದಿವಿಸ್ಥಾ
ನ್ಮೃಕಂಡುಸೂನುಃ ಪ್ರಸಮೀಕ್ಷ್ಯ ಶಂಕರಂ ।
ತುಷ್ಟಾವ ನಷ್ಟಂ ಪುರತಃ ಪುರಾರಿಣಾ
ಕಾಲಂ ಪ್ರಸೀದೇಶ ವಿಭೋ ಮಹೇಶ ॥೨೮॥

ತದಾ ಮಹೇಶಃ ಪ್ರಸಮೀಕ್ಷ್ಯಬಾಲ
ಮುವಾಚ ದತ್ತಂ ತವ ಚಾಯುರುತ್ತಮಂ ।
ಆಕಲ್ಪಸಪ್ತಂ ವಸ ಶಂಕರಾರ್ಚಕ
ಸ್ತ್ವಂ ಷೋಡಶಾಬ್ದೋ ಭವಿತಾ ದ್ವಿಜಾರ್ಭಕ ॥೨೯॥

ಸ್ಥಾನೇತ್ರ ವಾಸಾನ್ಮಮ ಪೂಜನಸ್ತನ್ಮೈ
ರ್ಮುಕ್ತೋಸಿ ಕಾತ್ಸ್ನ್ಯೇನ ಭೃಶೋ ಮೃಕಂಡುಜ ।
ದೇವೈರ್ಹರಿಬ್ರಹ್ಮಪುರೋಗಮೈರ್ಹರಃ
ಪ್ರಸಾದಿತಃ ಪಾಹಿ ಶಿವೇತಿಕಾಲೇ ॥೩೦॥

ಅಂತರಿಕ್ಷದಲ್ಲಿ ದುಂದುಭಿಯು ಧ್ವನಿ ಮೊಳಗಿತು. ಇದನ್ನೆಲ್ಲಾ ನೋಡಿದ ಮಾರ್ಕಂಡೇಯನು ಶಂಕರನನ್ನು ಕುರಿತು "ಮಹಾದೇವನೇ, ಸರ್ವವ್ಯಾಪಿಯೇ, ನಿನಗೆ ಅವಿಧೇಯನಾಗಿ ವರ್ತಿಸಿದ ಯಮನು ಈಗ ನಿನ್ನಿಂದ ಶಿಕ್ಷಿತನಾಗಿ ಬಿದ್ದಿರುವನು. ಇವನನ್ನು ಅನುಗ್ರಹಿಸು" ಎಂದು ಪ್ರಾರ್ಥಿಸಿದನು. ॥೨೮॥

ಆಗ ಮಹೇಶ್ವರನು ಆ ಬಾಲಕನನ್ನು ನೋಡುತ್ತಾ "ಎಲೈ ಬ್ರಾಹ್ಮಣ ಶಿಶುವೇ, ನೀನು ಏಳು ಕಲ್ಪಪರ್ಯಂತ ಸುಖದಿಂದ ಜೀವಿಸು. ಸದಾ ಹದಿನಾರು ವರ್ಷದ ಯುವಕನಂತೆಯೇ ಇದ್ದು ಐಹಿಕಸುಖವನ್ನೆಲ್ಲಾ ಅನುಭವಿಸುವಂತೆ ವರವಿತ್ತಿರುವೆನು. ॥೨೯॥

ನೀನು ಅಲ್ಲಿನವರೆಗೂ ಇಲ್ಲಿಯೇ ವಾಸಿಸುತ್ತಾ ನನ್ನ ಪೂಜೆ, ಧ್ಯಾನ ಇವುಗಳಿಂದ ಆ ಆಯುಸ್ಸನ್ನೆಲ್ಲಾ ಕಳೆಯುವವನಾಗು. ಎಂದು ಅನುಗ್ರಹಿಸಿದನಂತರ, ಅಲ್ಲಿಗೆ ಹರಿ, ಬ್ರಹ್ಮ ಮೊದಲಾದ ಸಕಲ ದೇವತೆಗಳೂ ಬಂದು ಪರಶಿವನನ್ನು ವಿಧವಿಧವಾಗಿ ಸ್ತುತಿಸಿದರು. ॥೩೦॥

ಉವಾಚ ಚಾಬೋಧಯದೀಶ್ವರೇಶ್ವರಃ ।
ಯಮಂ ಸ್ವಭಕ್ತಂ ಪ್ರವಿಮೋಚಯಾತ್ರ ॥೩೧॥

॥ ಶ್ರೀ ಶಿವ ಉವಾಚ ॥

ಸ್ಥಾನೇ ಘಟೇಶೇ ಶಿವಭಕ್ತವರ್ಯಾನ್
ಜನಾನ್ ಮದೀಯಾನಪಿ ಕ್ಷೇತ್ರಕಸ್ಥಾನ್ ।
ವಿಸೃಜ್ಯ ಪಶ್ಚಾದುತ ಯಾಹಿ ಚಾನ್ಯತ
ಸ್ತವಾಧಿಕಾರೋ ನ ಯಮಾತ್ರ ಶಸ್ಯತೇ ॥೩೨॥

॥ ಸ್ಕಂದ ಉವಾಚ ॥

ಇತ್ಥಂ ಶಿವಾಜ್ಞಾಮುಪಲಭ್ಯ ಧರ್ಮೋ
ಭಿಯಾ ಪುರೀಂ ಸ್ವಾಂ ಚ ಗಣಾನಚೋದಯತ್ ।
ವಿಶೇಷತಃ ಕ್ಷೇತ್ರಗಣೇಷು ಶಂಭೋ
ರ್ಘಟೇಶ್ವರೇ ಮಾ ಪ್ರತಿಯಾತ ಭೋ ಗಣಾಃ ॥೩೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಘಟೇಶವೈಭವೇ ಯಮಪ್ರಹಾರ ಮೃಕಂಡುಪುತ್ರವರಪ್ರದಾನಂ ನಾಮ ಪಂಚತ್ರಿಂಶೋಽಧ್ಯಾಯಃ

॥ ಶ್ರೀಮೃತ್ಯುಂಜಯಾಯ ನಮಃ ॥

---

ಮತ್ತು ಆ ಗುಂಪೆಲ್ಲವೂ ಪರಶಿವನನ್ನು ಕುರಿತು, ತನ್ನ ಭಕ್ತನಾದ ಯಮನನ್ನು ರಕ್ಷಿಸುವಂತೆ ವಿನಯದಿಂದ ಪ್ರಾರ್ಥಿಸಿತು. ॥೩೧॥

ಆಗ ಮಹಾದೇವನು ಯಮನಿಗೆ ಹೀಗೆ ಕಟ್ಟಪ್ಪಣೆಯಿತ್ತನು. "ಎಲೈ ಯಮನೇ, ಈ ಘಟೇಶಕ್ಷೇತ್ರದಲ್ಲಿ ವಾಸಮಾಡುವ ನನ್ನ ಭಕ್ತರ ಗೋಜಿಗೆ ನೀನು ಬರಬೇಡ. ಒಂದುವೇಳೆ ಇವರನ್ನು ನೀನು ನೋಡಿದರೂ ದೂರಹೋಗು. ಇವರ ಮೇಲೆ ನಿನ್ನ ಯಾವ ಅಧಿಕಾರವೂ ನಡೆಯಲಾರದು. ಜೋಕೆ" ಎಂದು ಎಚ್ಚರಿಕೆಯಿತ್ತನು. ॥೩೨॥

ಹೀಗೆ ಶಿವಾಜ್ಞಾಪಾಲಕನಾದ ಯಮನು ಭಯದಿಂದ ತನ್ನ ನಗರಿಗೆ ಬಂದು, ತನ್ನ ದೂತರನ್ನೆಲ್ಲಾ ಕರೆಕಳುಹಿಸಿ, ಇನ್ನುಮೇಲೆ ಘಟೇಶ್ವರಕ್ಷೇತ್ರದಲ್ಲಿ ವಾಸ

ಮಾಡುವ ಶಿವಸೇವಕರನ್ನು ನೀವು ಹಿಂಸಿಸಬೇಡಿರಿ ಎಂದು ಅವರಿಗೆ ಅಪ್ಪಣೆಯಿತ್ತನು ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ತಿಳಿಸಿದನು. ॥೩೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಘಟೇಶವೈಭವವನ್ನು ವಿವರಿಸುವ ಮೂವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಷಟ್ತ್ರಿಂಶೋಽಧ್ಯಾಯಃ

||ಸ್ಕಂದ ಉವಾಚ ||

ತದ್ದಕ್ಷಿಣೇ ತದೀಶಾನ್ಯಾಮುತ್ತರೇ ಚಾಗ್ನಿನಿಋತೌ ।
ಸ್ಥಾನಾನಿ ದೇವದೇವಸ್ಯ ತತ್ರ ಪುಣ್ಯತಮಾನಿ ಹಿ ||೧||

ತ್ರಿನಲೇಶಂ ಮಹಾಸ್ಥಾನಂ ನಲಾರಾಧಿತಮುತ್ತಮಂ
ವೀರಸೇನಸುತಸ್ತತ್ರ ಪೂಜಯಾಮಾಸ ಶಂಕರಂ ||೨||

ತತ್ರ ತುಷ್ಟಾವ ದೇವೇಶಂ ಭಕ್ತ್ಯಾ ಪುಣ್ಯಂ ಮಹೇಶ್ವರಂ ||೩||

|| ನಳ ಉವಾಚ ||

ಹರ ಮಹೇಶ ವಿಭೋ ಪಿನಾಕಪಾಣೇ
ಧೃತಸೋಮಫಣೀಶವಿಭೂಷಣ ।

---

## ಮೂವತ್ತಾರನೆಯ ಅಧ್ಯಾಯ

ಘಟೇಶಕ್ಷೇತ್ರದ ದಕ್ಷಿಣದಲ್ಲಿಯೂ, ಈಶಾನ್ಯಭಾಗದಲ್ಲಿಯೂ, ಹಾಗೆಯೇ ಉತ್ತರ, ಆಗ್ನೇಯ, ನೈಋತ್ಯಭಾಗಗಳಲ್ಲಿಯೂ, ದೇವದೇವನಿಗೆ ಆಶ್ರಯವಿತ್ತಿರುವ ಅನೇಕ ಪುಣ್ಯಕ್ಷೇತ್ರಗಳಿರುವುವು. ಅದರಲ್ಲಿ ತ್ರಿನಲೇಶಕ್ಷೇತ್ರವೆಂಬುದು ಬಹು ಪ್ರಸಿದ್ಧವಾದುದು. ಅಲ್ಲಿ ವೀರಸೇನಪುತ್ರನಾದ ನಳಮಹಾರಾಜನು ದೇವದೇವನೆನಿಸಿದ ಮಹಾದೇವನನ್ನು ಭಕ್ತಿಯಿಂದ ಈರೀತಿ ಪ್ರಾರ್ಥಿಸಿರುವನು. ||೧-೨-೩||

ಮಹಾದೇವನೇ, ಶಂಕರನೇ, ಪಿನಾಕಪಾಣಿಯೇ, ಚಂದ್ರ ಮತ್ತು ಆದಿಶೇಷ

ಪರಮೇಶ ಸುಚಂದ್ರಕಪರ್ದಧರ
ವಿಲಸದ್ಗಾಂಗ ತರಂಗ ಮಾಮವೇಶ ॥೪॥

ಇತ್ಥಂ ಸಂಸ್ತೂಯ ರಾಜಾ ತು ಸ ಸಂಪ್ರಾಪ್ಯ ಮಹದ್ವರಾನ್ ।
ರಾಜ್ಯಂ ರಾಜಾ ತದಾ ಪ್ರಾಪ ದಮಯಂತ್ಯಾ ಶಿವಾರ್ಚನಾತ್ ॥೫॥

ತತ್ಪ್ರಾಚ್ಯಾಂ ಕಾರಕಾಲಾಖ್ಯಂ ಸ್ಥಾನಂ ಶಂಭೋಸ್ತು ಪಾವನಂ ।
ತತ್ರ ರಾಜ್ಯೇ ಮಹೇಶಾನಂ ನಿತ್ಯಕಲ್ಯಾಣಸಂಜ್ಞಿಕಂ ॥೬॥

ಹರಿರಾರಾಧಯಾಮಾಸ ಕಾರಕಾಲೇಶ್ವರಂ ಶಿವಂ । ॥೭॥

॥ ಹರಿರುವಾಚ ॥

ನಮಸ್ತೇ ದೇವೇಶ ತ್ರಿನಯನ ಹರಾಪಾರಕರುಣ
ಪ್ರಸೀದೇಶಾನಾದ್ಯ ಶಶಿಧರ ಉಮಾಕಾಂತ ಭಗವನ್ ।
ತವಾಲೋಕೋ ಲೋಕೇ ನಿರತಿಶಯಭಕ್ತ್ಯೈ ಮಮ ವಿಭೋ
ವಿಮುಕ್ತ್ಯೈ ಸಕ್ತಂ ಮಾಮವ ಶಿವ ದಯಾಸಾಗರ ವಿಭೋ ॥೮॥

---

ಇವರನ್ನು ಹಣೆಯಲ್ಲಿ ಧರಿಸಿರುವವನೇ, ಪರಶಿವನೇ, ಚಂದ್ರನಿಂದಲೂ, ಜಟೆಯಿಂದಲೂ, ಗಂಗಾತರಂಗದಿಂದಲೂ ವಿರಾಜಿಸುವ ಮಹಾದೇವನೇ, ನನ್ನನ್ನು ರಕ್ಷಿಸು. ॥೪॥

ಹೀಗೆಂದು ನಳರಾಜನೂ ಮತ್ತು ಅವನ ಪತ್ನಿಯಾದ ದಮಯಂತಿಯೂ ವಿಧವಿಧವಾಗಿ ಪ್ರಾರ್ಥಿಸಿದರು ಆಗ ಶಿವನ ಅನುಗ್ರಹವೊದಗಿ ಅವರಿಗೆ ಮತ್ತೆ ರಾಜ್ಯಪ್ರಾಪ್ತಿಯಾಯಿತು. ಅದರ ಪೂರ್ವಭಾಗದಲ್ಲಿ ಕಾರಕಾಲೇಶ್ವರಕ್ಷೇತ್ರವೆಂಬ ಹೆಸರಿನ ಪುಣ್ಯತೀರ್ಥವಿರುವುದು. ಅಲ್ಲಿ ನಿತ್ಯಕಲ್ಯಾಣಪ್ರದನೆನಿಸಿದ ಮಹೇಶ್ವರನು ಸರ್ವದಾ ನೆಲಸಿರುವನು. ಇಂತಹ ಈಶ್ವರನನ್ನು ವಿಷ್ಣುವು ಭಕ್ತಿಯಿಂದ ಪೂಜಿಸಿ, ಹೀಗೆ ಸ್ತುತಿಸಿದನು. ॥೫-೬-೭॥

ಎಲೈ ಪರಮಾತ್ಮನೇ, ದೇವದೇವನೇ, ತ್ರಿನಯನನೇ, ಅಪಾರವಾದ ಕರುಣಾಶಾಲಿಯೇ, ಚಂದ್ರಶೇಖರನೇ, ಪಾರ್ವತೀಪತಿಯೇ, ನಿನ್ನ ತೇಜೋವಿಶೇಷದಿಂದ ನನಗೆ ನಿನ್ನಲ್ಲಿ ಅತಿಶಯವಾದ ಭಕ್ತಿಯುದಯಿಸಲಿ. ಅಲ್ಲದೆ ಸ್ಥಿರವಾದ ಮುಕ್ತಿಪ್ರಾಪ್ತಿಗೆ ಕಾದು ಕುಳಿತಿರುವ ನನ್ನನ್ನು ಅನುಗ್ರಹಿಸಿ ರಕ್ಷಿಸು. ॥೮॥

ತ್ರಿಕಾಲಕಾಲಸಂಜ್ಞಂ ಚ ಸ್ಥಾನಂ ಶಂಭೋಽಸ್ತಿ ಪುಣ್ಯದಂ ।
ತತ್ರ ಸಂವಸತಾಂ ಪುಂಸಾಂ ಶಿವ ಏವ ವಿಮುಕ್ತಿದಃ ॥೯॥

ತತ್ರ ಜಹ್ನುಃ ಪುರಾಭ್ಯರ್ಚ್ಯ ತುಷ್ಟಾವೇಶಂ ಕೃಪಾಂಬುಧಿಂ ॥೧೦॥

॥ ಜಹ್ನುರುವಾಚ ॥

ಜಯ ಶಂಕರ ಪಾರ್ವತೀಪತೇ
ಹರ ಏಣಾಂಕಧರಾವ್ಯಯಾದ್ಯ ಮಾಂ ।
ಪ್ರಸೀದ ಮೇ ಚಾತ್ರ ತವಾರ್ಚನೇ ರತಂ
ವಿಶ್ವೇಶ ದೇವೇಶ ಸುಕಾಲಕಂಧರ ॥೧೧॥

ತದ್ದಕ್ಷಿಣೇಽಸ್ತಿ ಭರ್ಗಾಖ್ಯಂ ಕಾರಂಧ್ಯಾನಮಹತ್ಸ್ಥಲಂ ।
ತತ್ರ ಲಿಂಗಂ ಸಮಭ್ಯರ್ಚ್ಯ ಕಾರಂಧ್ಯಾನೇಶ್ವರಂ ಹರಂ ॥೧೨॥

ಕಹೋಳಸ್ತುಷ್ಟುವೇ ಸಾಂಬಂ ಭಕ್ತ್ಯಾ ಪರಮಯಾ ಮುದಾ ॥೧೩॥

---

ತ್ರಿಕಾಲಕಾಲೇಶ್ವರಕ್ಷೇತ್ರವೆನಿಸಿದ ಪವಿತ್ರಕ್ಷೇತ್ರವು ಶಂಕರನಿಗೆ ಅತ್ಯಂತ ಪ್ರಿಯವಾದುದು. ಅಲ್ಲಿ ವಾಸಿಸುವವರಿಗೆ ಶಂಕರನು ಮುಕ್ತಿಯನ್ನು ಕರುಣಿಸುವನು. ಇಲ್ಲಿಯೇ ಹಿಂದೆ ಜಹ್ನುಮಹರ್ಷಿಯು ದಯಾಸಾಗರನಾದ ಶಂಕರನನ್ನು ಭಕ್ತಿಯಿಂದ ಪೂಜಿಸಿ ಬಹುವಾಗಿ ಸ್ತುತಿಸಿರುವನು. ॥೯-೧೦॥

ಪಾರ್ವತೀಪತಿಯಾದ ಶಂಕರನೇ, ನೀನು ಜಯಶೀಲನಾಗು. ಚಂದ್ರಶೇಖರನೆನಿಸಿ, ನಾಶರಹಿತನಾಗಿರುವವನೇ, ನನ್ನ ಸಕಲ ಪಾಪರಾಶಿಯನ್ನೂ ನಿವಾರಿಸು. ನಿನ್ನ ಅರ್ಚನೆಯಲ್ಲಿ ನಿರತನಾದ ನನ್ನಮೇಲೆ ಅನುಗ್ರಹವಿಡು. ವಿಶ್ವೇಶ್ವರನೇ, ವಿಷಕಂಠನೇ, ನನ್ನನ್ನು ರಕ್ಷಿಸು, ಎಂದು ಜಹ್ನುಮಹರ್ಷಿಯು ಬಹುವಾಗಿ ಸ್ತುತಿಸಿದನು. ॥೧೧॥

ತ್ರಿಕಾಲೇಶ್ವರಕ್ಷೇತ್ರದ ದಕ್ಷಿಣಭಾಗದಲ್ಲಿ ಕಾರಂಧ್ಯಾನಕ್ಷೇತ್ರವಿರುವುದು. ಅಲ್ಲಿ ಭರ್ಗನೆಂದು ಪ್ರಸಿದ್ಧವಾಗಿರುವ ಕಾರಂಧ್ಯಾನೇಶ್ವರಲಿಂಗವಿರುವುದು. ಆ ಲಿಂಗವನ್ನು ಕಹೋಳಮಹರ್ಷಿಯು ಭಕ್ತಿಯಿಂದ ಬಹುವಾಗಿ ಹೀಗೆ ಸ್ತುತಿಸಿರುವನು. ॥೧೨-೧೩॥

॥ ಕಹೋಳ ಉವಾಚ ॥

ಶ್ರೀ ಕಾಲಕಾಲ ಭವಪಾಪಹರಾವ್ಯಯೇಶ
ವಿಶ್ವಾಧಿಕ ತ್ರಿನಯನಾವ ಪಿನಾಕಪಾಣಿನ್ ।
ಗಂಗಾಧರಾಂತಕಹರ ಪ್ರಮಥಾಧಿನಾಥ
ಪಾಹಿ ಪ್ರಸೀದ ದಯಯಾ ಸುಖಧಾಮ ಭೂಮನ್ ॥೧೪॥

ತದುತ್ತರೇ ಚ ಕದಲೀವನೇಶಸ್ಥಾನಮುತ್ತಮಂ ।
ತತ್ರಾರಾಧ್ಯೇಶ್ವರಂ ಭಕ್ತ್ಯಾ ಶೌರಿಸ್ತುಷ್ಟಾವ ವೈ ಹರಿಃ ॥೧೫॥

ಗೌರೀರಾಜಂ ಮಹಾದೇವಂ ದ್ವಿಜರಾಜಕಲಾಧರಂ ॥೧೬॥

॥ ಶೌರಿರುವಾಚ ॥

ಯಕ್ಷರಾಜಸಖ ದೇವ ದಯಸ್ವ (?)
ವಿಪ್ರರಾಜಕಲಿತಾಲಕ ಶಂಭೋ ।
ಪಕ್ಷಿರಾಜಪತಿಪೂಜ್ಯಪದಾಬ್ಜ
ದೇವರಾಜವರದಾವ ಮಹೇಶ ॥೧೭॥

---

"ಕಾಲಕಾಲನೇ, ಸಾಂಸಾರಿಕವಾದ ಸಕಲ ಪಾಪಗಳನ್ನೂ ನಿವಾರಿಸುವವನೇ, ನಾಶರಹಿತನೇ, ವಿಶ್ವೇಶ್ವರನೇ, ತ್ರಿನೇತ್ರನೇ, ಪಿನಾಕಪಾಣಿಯೇ, ಗಂಗಾಧರನೇ, ನನ್ನನ್ನು ರಕ್ಷಿಸು. ಯಮಶಿಕ್ಷಕನಾಗಿಯೂ, ಪ್ರಮಥಾಧಿನಾಥನಾಗಿಯೂ, ಇರುವ ಸುಖಸ್ವರೂಪಿಯೇ, ನನ್ನ ಮೇಲೆ ಪ್ರಸನ್ನನಾಗು." ॥೧೪॥

ಕಾರಂಥ್ವಾನೇಶ್ವರಕ್ಷೇತ್ರದ ಉತ್ತರದಲ್ಲಿ ಕದಲೀವನೇಶಕ್ಷೇತ್ರವಿರುವುದು. ಅಲ್ಲಿರುವ ಆರಾಧ್ಯೇಶ್ವರಲಿಂಗವನ್ನು ಶೌರಿಯು ಬಹಳ ಭಕ್ತಿಯಿಂದ ಈರೀತಿ ಸ್ತುತಿಸಿರುವನು. ಗೌರೀಪತಿಯೂ, ಮಹಾದೇವನೂ, ಚಂದ್ರಕಲಾಧರನೂ ಆದ ಸ್ವಾಮಿಯು ಅಲ್ಲಿ ಹೀಗೆ ಸ್ತುತ್ಯನಾಗಿರುವನು. ॥೧೫-೧೬॥

ಕುಬೇರನಿಗೆ ಸ್ನೇಹಿತನೂ, ಚಂದ್ರಕಲೆಗೆ ಆಶ್ರಯವಿತ್ತ ಮುಂಗುರುಳುಳ್ಳವನೂ, ಗರುಡಧ್ವಜನಾದ ವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನೂ, ದೇವೇಂದ್ರನಿಗೆ ವರವಿತ್ತವನೂ ಆದ ಮಹಾದೇವನೇ, ನೀನು ನನ್ನನ್ನು ಸರ್ವದಾ ರಕ್ಷಿಸು. ॥೧೭॥

॥ ಸೋಮ ಉವಾಚ ॥

ತದ್ದಕ್ಷಿಣೇ ತ್ರಿಧಾಮೇಶಂ ಸೋಮಧಾಮೋರುಶಂಕರಂ ।
ಸೋಮಸ್ತತ್ರೇಶ್ವರಂ ಪೂಜ್ಯ ತುಷ್ಟಾವ ಪ್ರಾಂಜಲಿರ್ಹರಂ ॥೧೮॥

ನಮಸ್ತೇ ತ್ರಿಧಾಮೇಶ ಸೋಮೋತ್ತಮಾಂಗ
ಪ್ರಸೀದಾಧುನಾ ದೇವದೇವೇಶ ಶಂಭೋ ।
ಸುಗಂಗಾತರಂಗೌಘದೀವ್ಯತ್ಕಲಾಪ
ಪ್ರಸನ್ನೋ ಭವಾದ್ಯೈವ ಶಂಭೋ ವಿಭೋ ಮೇ ॥೧೯॥

ತನ್ನೈರ್ಋತ್ಯಾಂ ತ್ರಿಶೃಂಗೇಶಂ ತ್ರಿಭಿಃ ಶೃಂಗೈರ್ಯುತಸ್ಥಲಂ ।
ತುಷ್ಟಾವ ಚ ತ್ರಿಶೃಂಗೋಽಪಿ ತ್ರಿಸುಪರ್ಣೈರ್ವಿಭುಂ ಶಿವಂ ॥೨೦॥

ಪ್ರಸನ್ನೋಽಸಿ ಚೇನ್ಮೇ ದೇಹಿ ಭುಕ್ತಿಂ ಮುಕ್ತಿಂ ಮಮಾದ್ಯ ಚ ।
ತತ್ಪ್ರಾಚ್ಯಾಂ ಕಟಕಂ ಸ್ಥಾನಂ ಕರಂಧಮನೃಪಾರ್ಚಿತಂ ॥೨೧॥

॥ ಕರಂಧಮ ಉವಾಚ ॥

ಕರಂಧಮೇಶ್ವರೋ ದೇವಸ್ತೀರ್ಥಂ ಕಾರಂಧಮಾಭಿದಂ ।
ಕರಂಧಮಃ ಪ್ರತುಷ್ಟಾವ ಕೃಪಾಮೂರ್ತಿಂ ಸದಾಶಿವಂ ॥೨೨॥

---

ಕದಲೀವನಕ್ಷೇತ್ರದ ದಕ್ಷಿಣದಲ್ಲಿ ತ್ರಿಧಾಮೇಶಕ್ಷೇತ್ರವಿರುವುದು. ಅಲ್ಲಿರುವ ಸೋಮೇಶ್ವರಲಿಂಗವನ್ನು ಸೋಮನು ಈ ರೀತಿ ಸ್ತುತಿಸಿರುವನು. "ತ್ರಿಧಾಮೇಶ್ವರ ಕ್ಷೇತ್ರಕ್ಕೆ ಒಡೆಯನೂ, ಚಂದ್ರಕಲೆಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿರುವವನೂ, ಗಂಗಾನದಿಯ ಅಲೆಗಳಿಂದ ಪ್ರಕಾಶಿಸುವ ಜಟಾಕಲಾಪವುಳ್ಳವನೂ, ಸರ್ವ ವ್ಯಾಪಿಯೂ ಆಗಿರುವ ಪರಮಾತ್ಮನೇ ನಿನಗೆ ಶರಣಾಗತನಾಗಿರುವೆನು. ನೀನು ನನ್ನನ್ನು ಸರ್ವದಾ ರಕ್ಷಿಸುತ್ತಿರು." ॥೧೮-೧೯॥

ತ್ರಿಧಾಮೇಶಕ್ಷೇತ್ರದ ನೈಋತ್ಯದಲ್ಲಿ ತ್ರಿಶೃಂಗೇಶಕ್ಷೇತ್ರವಿರುವುದು. ಅಲ್ಲಿ ತ್ರಿಶೃಂಗಮಹರ್ಷಿಯು "ತ್ರಿಸುಪರ್ಣಮಯಾಚಿತಂ" ಇತ್ಯಾದಿ ವೇದಮಂತ್ರಗಳಿಂದ ಸ್ತುತಿಸಿ, 'ಮಹಾದೇವನೇ, ನೀನು ನನಗೆ ಪ್ರಸನ್ನನಾಗಿ ಭುಕ್ತಿಯನ್ನೂ ಮುಕ್ತಿ ಯನ್ನೂ ಕರುಣಿಸು' ಎಂದು ಪ್ರಾರ್ಥಿಸಿರುವನು. ॥೨೦-೨೧॥

ತ್ರಿಧಾಮೇಶ್ವರಕ್ಷೇತ್ರದ ಪೂರ್ವಭಾಗದಲ್ಲಿ ಕರಂಧಮರಾಜನಿಂದ ಪೂಜಿತವಾದ ಕರಂಧಮೇಶ್ವರಲಿಂಗವಿರುವುದು. ಆ ಕ್ಷೇತ್ರಕ್ಕೆ ಕರಂಧಮಕ್ಷೇತ್ರವೆಂದೇ ಹೆಸರಿರು

ಶಂಭೋ ಪ್ರಿಯಂಕರಸ್ಥಾನಕ ವಿಭೋ
ದೇವಾಧಿದೇವೇಶ್ವರ ವಿಶ್ವಾಧೀಶ ಕೃಪಾಂ ಕುರುಷ್ವ ।
ಭಗವನ್ ಸಿದ್ಧ್ಯೈ ವಿಮುಕ್ತ್ಯೈ ಮಮ ॥೨೩॥

[1]ತತಶ್ಚ ದಕ್ಷಿಣೇ ಪಾರ್ಶ್ವೇ ಸ್ಥಾನಂ ಪಾಪಹರಂ ಪರಂ ।
ಅದತ್ತೇಶ್ವರವಿಖ್ಯಾತಂ ಯತ್ರ [2]ಪೈಪ್ಪಲ್ಯಪ್ರೀತಿದಂ ॥೨೪॥

॥ ಪೈಪ್ಪಲ್ಯ ಉವಾಚ ॥

ವಂದೇ (?) ಅದತ್ತೇಶ್ವರಪಾದಪದ್ಮಂ
ಅದತ್ತಪುಣ್ಯಪ್ರದಂ ಮೇ ವರಪ್ರದಂ ।
ಕಿಂ ಮೇಽಧುನಾ ಧನಗೃಹೈಃ ಸುತದಾರಸಂಘೈಃ
ಅಸ್ತ್ರೋಽಯು (?) ಮೇ ಜಗತಿ ತೇ ಚ ಗದಾಂ ಶರಣ್ಯಂ ॥೨೫॥

॥ ಶ್ರೀ ಸ್ಕಂದ ಉವಾಚ ॥

ತ್ರಿಶೃಂಗೇಶಾತ್ತತಃ ಪ್ರಾಚ್ಯಾಂ ಲಿಂಗಂ ಪಾಪೈಕಭಂಜನಂ ।
ತತ್ರಾರಾಧ್ಯಾಸ್ತುವದ್ಗಾರ್ಗ್ಯೋ ತ್ರಿಸಂಗೇಶಂ ಮಹೇಶ್ವರಂ ॥೨೬॥

ವುದು. ಅಲ್ಲಿ ಕರಂಧಮರಾಜನು ಹೀಗೆ ಸ್ತೋತ್ರಮಾಡಿರುವನು. "ಶಂಭುವೇ, ಸರ್ವವ್ಯಾಪಿಯೇ, ಪ್ರಿಯಂಕರವಾದ ಸ್ಥಾನಗಳನ್ನು ಅನುಗ್ರಹಿಸುವವನೇ, ದೇವಾಧಿದೇವನೇ, ಲೋಕರಕ್ಷಕನೇ, ನನಗೆ ಸಿದ್ಧಿಬುದ್ಧ್ಯಾದಿಗಳನ್ನು ಅನುಗ್ರಹಿಸಿ, ಶಾಶ್ವತವಾದ ಮುಕ್ತಿಯನ್ನು ಕರುಣಿಸು" ॥೨೨-೨೩॥

ಅದರ ದಕ್ಷಿಣಭಾಗದಲ್ಲಿ ಪೈಪ್ಪಲಾದಋಷಿಯಿಂದ ಸ್ತುತವಾದ ಅದತ್ತೇಶ್ವರ ಕ್ಷೇತ್ರವಿರುವುದು. ಅಲ್ಲಿರುವ ಅದತ್ತೇಶ್ವರಲಿಂಗವು ಈರೀತಿ ಸ್ತುತ್ಯವಾಗಿರುವುದು. "ಎಲೈ ಅದತ್ತೇಶ್ವರಲಿಂಗವೇ, ನಿನ್ನ ಪಾದಪದ್ಮವು ಅತಿಶಯವಾದ ಸುಕೃತವನ್ನು ಅನುಗ್ರಹಿಸುವುದಲ್ಲವೆ? ಇಂತಹ ಪುಣ್ಯರಾಶಿಯು ಮುಂದೆ ನನಗೆ ಧನವಾಗಲಿ, ಗೃಹವಾಗಲಿ, ಹೆಂಡಿರು ಮಕ್ಕಳಾಗಲಿ, ಇತರವಿಧವಾದ ಅಸ್ತ್ರಶಸ್ತ್ರಗದಾದಿ ಆಯುಧಗಳಾಗಲಿ ಬೇಕೆನಿಸುವುದಿಲ್ಲ." ॥೨೪-೨೫॥

ತ್ರಿಶೃಂಗಕ್ಷೇತ್ರದ ಪೂರ್ವಕ್ಕೆ ಗಾರ್ಗ್ಯಮುನಿಸ್ತುತವಾದ ತ್ರಿಸಂಗೇಶಲಿಂಗವಿರುವುದು. ಅದನ್ನು ಗಾರ್ಗ್ಯಮಹರ್ಷಿಯು ಈರೀತಿ ಸ್ತುತಿಸಿರುವನು. "ಮನ್ಮಥನೆಂಬ

(1) ತದಸ್ಯ ಕಂಪ್ರಕ್ಷೇಶೇ (2) ಪೈಪ್ಪಲ್ಯಸ್ತುತದ್ವರಂ

॥ ಗಾರ್ಗ್ಯ ಉವಾಚ ॥

ಅನಂಗಮಾತಂಗಹರಾವ ಶಂಕರ
ಪ್ರಸೀದ ಗಂಗಾಧರ ಪಾರ್ವತೀಶ ।
ಶ್ರೀ ನೀಲಕಂಠೇಶ ದಯಾರ್ದ್ರ ಕುಂಠ
ವೈಕುಂಠಪೂಜಾರ್ಹಸುಪಾದ ಶಂಭೋ ॥೨೭॥

॥ ಶ್ರೀ ಸ್ಕಂದ ಉವಾಚ ॥

ಏವಂ ಸ್ಥಾನೇಷು ಶಂಭುರ್ದ್ರುಹಿಣಮುಖಸುರೈರ್ವಿಷ್ಣುನಾಭ್ಯರ್ಚಿತೋ ಸೌ
ದೇವೋ ವೇದಶಿಖಾಸ್ತುತಃ ಸ ಭಗವಾನ್ಪ್ರಸ್ತಾವ್ಯಲಿಂಗೋಽಪಿ ಸನ್ ।
ಲಿಂಗೇಷು ಪ್ರಥಮಾನಪೂಜನವಿಧಿಂ ದಾತುಂ ಚ ಮುಕ್ತಿಂ ಪರಾಂ
ಸರ್ವಾಪದ್ವಿನಿವಾರಣಾಯ ಜಗತಾಂ ಶ್ರೀ ಚಂದ್ರಚೂಡೋ ಹರಃ ॥೨೮॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಶಿವಕ್ಷೇತ್ರವೈಭವವರ್ಣನಂ ನಾಮ ಷಟ್ತ್ರಿಂಶೋಽಧ್ಯಾಯಃ

---

ಮದ್ದಾನೆಯನ್ನು ನಾಶಮಾಡಿದ ಪರಶಿವನೇ, ಗಂಗೆಯನ್ನೂ, ಪಾರ್ವತಿಯನ್ನೂ ಧರಿಸಿರುವ ಮಹಾದೇವನೇ, ನೀಲಕಂಠನೇ, ಮಹಾವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನೇ, ನನ್ನಮೇಲೆ ದಯೆಯಿಡು. ನನಗೆ ಅನುಗ್ರಹಮಾಡು. ॥೨೬-೨೭॥

ಹೀಗೆ ಮಹಾದೇವನು ದೇವತೆಗಳಿಂದಲೂ, ಬ್ರಹ್ಮರ್ಷಿ ಮಹರ್ಷಿಗಳಿಂದಲೂ, ವಿಷ್ಣ್ವಾದಿ ಮಹಾದೇವತೆಗಳಿಂದಲೂ ಪೂಜಿತನಾಗಿ, ವೇದ, ಉಪನಿಷತ್ತು, ವಿಧವಿಧವಾದ ಸ್ತುತಿವಚನಗಳು ಇವುಗಳಿಂದ ಶ್ಲಾಘಿಸಲ್ಪಟ್ಟವನಾಗಿ, ಸಕಲ ಶಿವಲಿಂಗಗಳಲ್ಲಿಯೂ ನೆಲಸಿರುವನು. ಇಂತಹ ಕರುಣಾಕರನೂ, ಚಂದ್ರಶೇಖರನೂ ಆದ ಪರಮೇಶ್ವರನನ್ನು ಯಾರು ಈ ಶಿವಲಿಂಗಗಳಲ್ಲಿ ಮನಸಾ ಧ್ಯಾನಮಾಡಿ, ಭಕ್ತಿಯಿಂದರ್ಚಿಸುವರೋ ಅಂತಹವರ ಸಕಲ ವಿಪತ್ಪರಂಪರೆಯನ್ನೂ ಮಹಾದೇವನು ದೂರಮಾಡಿ, ಅವರಿಗೆ ಭುಕ್ತಿ, ಮುಕ್ತಿ ಇವೆರಡನ್ನೂ ಅನುಗ್ರಹಿಸುವನೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲವೆಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ವಿವರಿಸಿ ಹೇಳಿದನು. ॥೨೮॥

ಇಲ್ಲಿಗೆ ಶ್ರೀ ಶಿವರಹಸ್ಯದ ಸಪ್ತಮಾಂಶದ ಉತ್ತರಾರ್ಧದಲ್ಲಿ ಶಿವಕ್ಷೇತ್ರ ವೈಭವ ವರ್ಣನೆಯನ್ನು ವಿವರಿಸುವ ಮೂವತ್ತಾರನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಸಪ್ತತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

ತದ್ದಕ್ಷಿಣೇ ಮಹತ್ಸ್ಥಾನಂ ಕಮಲಾಲಯಮುತ್ತಮಂ ।
ತದೇವ ಹಾಟಕೇಶಾಖ್ಯಂ ಕ್ಷೇತ್ರಂ ಮುಕ್ತಿಪ್ರದಂ ಸದಾ ॥೧॥

ವಸತಾಂ ಪಾಪಶಮನಂ ಶಿವಭಕ್ತಿವಿವರ್ಧನಂ ।
ಕಲಿದೋಷಹರಂ ಸಾಕ್ಷಾತ್ತ್ರ್ಯಕ್ಷಾಲಯಮನುತ್ತಮಂ ॥೨॥

ಲಿಂಗಮಂಡಲಸಕ್ತಾನಾಂ ತೀರ್ಥಷಂಡವಿರಾಜಿತಂ ।
ಚಂಡಾಂಶುತನಯೋದ್ದಂಡಸರ್ವದರ್ಪವಿನಾಶನಂ ॥೩॥

ದೇವತೀರ್ಥಂ ಕ್ಷೀರಕುಂಡಂ ತೀರ್ಥದ್ವಯವಿರಾಜಿತಂ ।
ತತ್ರ ಸ್ನಾತ್ವಾ ನರೋ ದೃಷ್ಟ್ವಾ ಪಾತಾಳೇ ಹಾಟಕೇಶ್ವರಂ ॥೪॥

---

## ಮೂವತ್ತೇಳನೆಯ ಅಧ್ಯಾಯ

ಹಿಂದೆ ಹೇಳಿದ ತ್ರಿಶೃಂಗೇಶಕ್ಷೇತ್ರದಲ್ಲಿ ಕಮಲಾಲಯವೆಂಬ ಹೆಸರಿನ ಪ್ರದೇಶವಿರುವುದು. ಅಲ್ಲಿ ಹಾಟಕೇಶ್ವರಕ್ಷೇತ್ರವೆಂಬುದು ಜನರಿಗೆ ಶಿವಭಕ್ತಿವಿವರ್ಧಕವಾಗಿಯೂ, ಕಲಿಕಲ್ಮಷವನ್ನೆಲ್ಲಾ ಪರಿಹರಿಸಿ, ಮುಕ್ತಿಪ್ರದವಾಗಿಯೂ ಪ್ರಸಿದ್ಧವಾಗಿರುವುದು. ಅದು ಶಿವನ ಸ್ಥಾನಗಳಲ್ಲಿ ಅತಿ ಶ್ರೇಷ್ಠವಾದುದು. ॥೧-೨॥

ಶಿವಲಿಂಗಾರಾಧನೆಯಲ್ಲಿ ಆಸಕ್ತರಾದವರಿಗೆ ಅಲ್ಲಿ ಅನೇಕ ಶಿವತೀರ್ಥಗಳು ದೊರೆಯುವುವು. ಅದರ ಸ್ನಾನಪಾನಾದಿಗಳಿಂದ ಸೂರ್ಯಪುತ್ರನಾದ ಯಮನ

ಜೀವನ್ಮುಕ್ತೋ ಭವೇದೇವ ಪಾಪರಾಶೇರ್ವಿಮುಚ್ಯತೇ ।
ಭೂಕೈಲಾಸಂ ಮಹಾಕ್ಷೇತ್ರಂ ಪವಿತ್ರಂ ವಸತಾಂ ಸದಾ ॥೫॥

ಬ್ರಾಹ್ಮಣಾಯ ಗ್ರಾಸಮಾತ್ರಂ ದತ್ವಾನ್ನಂ ಕೋಟಿಭೋಜನೇ ।
ಯತ್ಫಲಂ ತತ್ಫಲಂ ಭೂಯಾತ್ತಸ್ಮಿನ್ ಸ್ಥಾನೇ ಮುನೀಶ್ವರ ॥೬॥

ದೇವತೀರ್ಥೋದಕೇನೈವ ಯಃ ಪಿತೄನ್ಸಂತರ್ಪಯೇತ್ಸ್ವಕಾನ್ ।
ದಶ ಪೂರ್ವಪರಾಸ್ತಸ್ಯ ಪಿತರಃ ಷೋಡಶಾಬ್ದಕಂ ॥೭॥

ತೃಪ್ತಿಂ ಸಂಪ್ರಾಪ್ನುಯುಸ್ತತ್ರ ಅನ್ನಶ್ರಾದ್ಧಾದನಂತಕಂ ।
ಲಿಂಗಾಖ್ಯಾನಂ ತತ್ರ ಮುನೇ ಶೃಣುಷ್ವ ಗಣಪೈಃ ಸುರೈಃ ॥೮॥

॥ ದೇವರ್ಷಯ ಊಚುಃ ॥

ಹಾಟಕೇಶಂ ಮಹಾಲಿಂಗಂ ಸುರಾಸುರಮುನೀಶ್ವರೈಃ ।
ಪೂಜಿತಂ ಮುಕ್ತಿದಂ ಸಾಕ್ಷಾದ್ದರ್ಶನಾದ್ಜ್ಞಾನದಂ ಪರಂ ॥೯॥

---

ದರ್ಪವನ್ನೇ ನಾಶಮಾಡಬಹುದು. ದೇವತೀರ್ಥ, ಕ್ಷೀರಕುಂಡವೆಂಬ ಎರಡು ದಿವ್ಯ ತೀರ್ಥಗಳಿವೆ. ಅಲ್ಲಿ ಸ್ನಾನಮಾಡಿ, ಪಾತಾಳದಲ್ಲಿರುವ ಹಾಟಕೇಶ್ವರಲಿಂಗವನ್ನು ದರ್ಶನಮಾಡಿದವರು ಜೀವನ್ಮುಕ್ತರಾಗುವರು. ॥೩-೪॥

ಮತ್ತು ಪಾಪರಾಶಿಯಿಂದ ಬಿಡುಗಡೆ ಹೊಂದುವರು. ಅದು ಭೂಕೈಲಾಸವೆಂಬ ಹೆಸರಿನ ಪವಿತ್ರಕ್ಷೇತ್ರವಾಗಿರುವುದು. ಅಲ್ಲಿ ಬ್ರಾಹ್ಮಣನಿಗೆ ಒಂದು ಗ್ರಾಸ ಆಹಾರವನ್ನು ಕೊಡುವುದರಿಂದಲೇ ಕೋಟಿಜನರಿಗೆ ಸಮಾರಾಧನೆ ಮಾಡಿದಷ್ಟು ಸುಕೃತವು ಲಭಿಸುವುದು. ॥೫-೬॥

ಯಾರು ದೇವತೀರ್ಥೋದಕ ತರ್ಪಣದಿಂದ ಪಿತೃಗಳನ್ನು ತೃಪ್ತಿಪಡಿಸುವರೋ ಅವರು ತನ್ನ ಹಿಂದಿನ ಮತ್ತು ಮುಂದಿನ ಹತ್ತು ವಂಶದ ಪಿತೃವರ್ಗಕ್ಕೆ ಹದಿನಾರು ವರ್ಷಪರ್ಯಂತ ತೃಪ್ತಿಪಡಿಸುವರು. ಅಲ್ಲಿ ಅನ್ನಶ್ರಾದ್ಧಮಾಡುವುದರಿಂದಲಂತೂ ಸಮಸ್ತ ಪಿತೃಗಣವೂ ತೃಪ್ತಿಹೊಂದುವುದು. ಎಲೈ ಜೈಗೀಷವ್ಯಾದಿ ಮಹರ್ಷಿಗಳೇ ಆ ಹಾಟಕೇಶ್ವರ ಲಿಂಗದ ಮಹಿಮೆಯನ್ನು ಹೇಳುವೆನು. ಕೇಳಿರಿ. ॥೭-೮॥

“ ಹಾಟಕೇಶ್ವರನೇ, ನಿನ್ನ ಆಕೃತಿಯು ಕರಹಾಕಾರದಲ್ಲಿದೆ (ತಾವರೆಗೆಡ್ಡೆ) ನಾಗಗಳಿಗೆ ಒಡೆಯನಾದ ಕರ್ಕೋಟಕನೆಂಬ ಹೆಸರಿನಿಂದ ನೀನು ಪ್ರಸಿದ್ಧನಾಗಿರುವೆ.

ತಲ್ಲಿಂಗಂ ತತ್ರ ಸಂಪೂಜ್ಯ ಹರಿಬ್ರಹ್ಮರ್ಷಯೋಽಸ್ತುವನ್ ॥೧೦॥

ಶ್ರೀ ಹಾಟಕೇಶ ಕರಹಾಟಕನಾಗನಾಥ
ಕರ್ಕೋಟಕಾಖ್ಯಕರಟಿತ್ವಗಲಂಕೃತಾಂಗ ।
ಪಾಪಾಹಿಪಾಟನಸಮೀರಣ ದೇವವಂದ್ಯ (?)
ಕೋಟೀರ ಅದ್ರಿತನಯಾಂಬುಜ ಹೇ ನಮಸ್ತೇ ॥೧೧॥

ತತ್ರಾಚಲೇಶ್ವರಂ ಲಿಂಗಮಾಶ್ರಿತಾಭಿಮುಖಂ ಪರಂ ।
ಮುನಿದೇವಗಣೇಂದ್ರಾದ್ಯೈಃ ಸ್ವಸ್ಥಾನೇ ಪರಿಪೂಜಿತಂ ॥೧೨॥

ಸಂಸ್ತುತಂ ಪರಯಾ ಭಕ್ತ್ಯಾ ದ್ರಷ್ಟುರ್ಮೋಕ್ಷಪ್ರದಾಯಕಂ ॥೧೩॥

|| ಮುನಯ ಊಚುಃ ||

ಪಾಪಾಚಲಾದಿಭಿದುರೋಽಸಿ ಜಲೇಶ ಶಂಭೋ
ಭಕ್ತಾವನೈಕನಿಪುಣಸ್ತರುಣೇಂದುಮೌಲೇ ।
ತ್ವಲ್ಲಿಂಗಸಂಗತದೃಶಾಂ ಕಲಿಪಾಪಭಂಗಃ
ಸದ್ಯೋ ವಿಮುಕ್ತಿಮಪಿ ದಿತ್ಸಸಿ ಭಕ್ತವೃಂದೇ ॥೧೪॥

---

ಗಜಚರ್ಮಾಂಬರಧಾರಿಯಾಗಿ, ಪಾಪವೆಂಬ ಸರ್ಪವನ್ನು ಭೇದಿಸಿರುವೆ. ವಾಯುವೇ ಮೊದಲಾದ ದೇವಸಂಘಗಳಿಂದ ಪೂಜಿತನಾಗಿರುವೆ. ಪಾರ್ವತೀದೇವಿಗೆ ಪ್ರೀತಿಪಾತ್ರವಾದ ಕಮಲದಂತಿರುವ ನಿನಗೆ ಸರ್ವದಾ ನಮಸ್ಕರಿಸುವೆನು" ಎಂದು ದೇವರ್ಷಿಗಳು ಹರಿಬ್ರಹ್ಮಾದಿಗಳೊಡಗೂಡಿ, ಕೇವಲ ದರ್ಶನದಿಂದಲೇ ಮುಕ್ತಿಯನ್ನನುಗ್ರಹಿಸುವ ಪರಶಿವನ ಮುಖ್ಯಲಿಂಗವೆನಿಸಿದ ಹಾಟಕೇಶ್ವರನನ್ನು ಬಹುವಾಗಿ ಸ್ತುತಿಸುವರು. ಅಲ್ಲಿಯೇ ಈ ಹಾಟಕೇಶ್ವರಲಿಂಗದ ಎದುರಿನಲ್ಲಿ ಅಚಲೇಶ್ವರವೆಂಬ ದಿವ್ಯಲಿಂಗವಿರುವುದು. ಅದನ್ನು ಭಕ್ತಿಯಿಂದ ದರ್ಶನಮಾಡಿ ಸ್ತುತಿಸಿದವರಿಗೆ ಮುಕ್ತಿಯು ಲಭಿಸುವುದು. ||೯-೧೦-೧೧-೧೨-೧೩||

ಆ ಶಿವಲಿಂಗವನ್ನು ಅನೇಕಮಹರ್ಷಿಗಳು ಈ ರೀತಿ ಸ್ತುತಿಸಿರುವರು. "ಮಹೇಶ್ವರನೇ, ನೀನು ಪಾಪವೆಂಬ ಮಹಾಪರ್ವತವನ್ನು ಭೇದಿಸುವುದರಲ್ಲಿ ಅತಿಸಮರ್ಥನು. ಭಕ್ತವೃಂದವನ್ನು ರಕ್ಷಿಸುವುದರಲ್ಲಿ ಅತಿಚತುರನು. ಚಂದ್ರಶೇಖರನೇ,

ತತ್ರ ಸಿದ್ಧೇಶ್ವರಂ ಲಿಂಗಂ ಸಿದ್ಧವೃಂದಾರ್ಚಿತಂ ಸ್ತುತಂ ।
ದೃಷ್ಟಂ ಸಿದ್ಧಿಪ್ರದಂ ತತ್ರ ವೃದ್ಧಿಕಾಮ್ಯೈರಪಿ ಸ್ತುತಂ ॥೧೫॥

॥ ಸಿದ್ಧಾ ಊಚುಃ ॥

ನಮಸ್ತೇ ಸಿದ್ಧೇಶ ತ್ರಿನಯನ ಭವಾಪಾರಕರುಣ
ಕೃಪಾಲೋ ಕಾಮಾರೇ ತರುಣಶಶಿಚೂಡಾಲ ಭಗವನ್ ।
ಸದಾಸ್ಮಾಕಂ ಸಿದ್ಧ್ಯೈ ಜಗದುದಯವೃದ್ಧ್ಯೈ ತವ ವಿಭೋ
ಸವಿನಿಾಕ್ಷಂತೇ ದೇವಾ ಹರಿವಿಧಿಹರೀಶಾನಮುನಯಃ ॥೧೬॥

ತತ್ರಾನಂದೇಶ್ವರಂ ಲಿಂಗಂ ದೃಷ್ಟಮಾನಂದದಂ ತತಃ ।
ಮಹಾತುಂದಿಲಪಾಪಾನಾಂ ವಿನಾಶಕರಮುತ್ತಮಂ ॥೧೭॥

॥ ಬ್ರಹ್ಮಾದ್ಯಾ ಊಚುಃ ॥

ಬ್ರಹ್ಮಾದಿವಿಬುಧೈಃ ಪೂಜ್ಯಂ ಸ್ತುತಸ್ತೇ ಸರ್ವಕಾಮದಂ ॥೧೮॥

---

ನಿನ್ನ ಶಿವಲಿಂಗವನ್ನು ದರ್ಶನಮಾಡುವವರಿಗೆ ಕಲಿಯುಗದ ಸಕಲ ಪಾಪರಾಶಿಯೂ ನಿವಾರಣೆಯಾಗಿ, ಸದ್ಯೋಮುಕ್ತಿಯು ದೊರೆಯುವುದರಲ್ಲಿ ಸಂದೇಹವೇನು ?" ॥೧೪॥

ಅಲ್ಲಿಯೇ ಸಿದ್ಧೇಶ್ವರಲಿಂಗವೆಂಬ ಮತ್ತೊಂದು ಶಿವಲಿಂಗವು ಸಿದ್ಧವೃಂದರಿಂದ, ಪೂಜಿತವಾಗಿ, ದರ್ಶನಲಾಲಸರಿಗೆಲ್ಲಾ ಸಕಲ ಇಷ್ಟಾರ್ಥಗಳನ್ನೂ ಒದಗಿಸತಕ್ಕು ದಾಗಿದೆ. ಆ ಲಿಂಗವನ್ನು ಸಿದ್ಧಪುರುಷರು ಹೀಗೆ ಸ್ತೋತಿಸಿರುವರು. "ಸಿದ್ಧೇಶ್ವರನೇ, ತ್ರಿನಯನನೇ, ಸಂಸಾರಸಾಗರದಲ್ಲಿ ಬಿದ್ದಿರುವವರನ್ನು ಕರುಣೆಯಿಂದ ಉದ್ಧರಿಸು ವವನೇ, ಕೃಪಾಳುವೇ; ಕಾಮನಾಶಕನೇ, ಬಾಲಚಂದ್ರಧರನೇ, ನಿನ್ನಿಂದ ಸಕಲ ಲೋಕವೂ ಸದಾ ಅಭಿವೃದ್ಧಿಹೊಂದುತ್ತಿರಲೆಂದೇ ವಿಷ್ಣು, ಬ್ರಹ್ಮಾದಿ ಸಕಲ ದೇವತೆ ಗಳೂ ನಿನ್ನನ್ನು ಸದಾ ಅರ್ಚನೆಮಾಡುತ್ತಿರುವರು." ॥೧೫-೧೬॥

ಅಲ್ಲಿಯೇ ಆನಂದೇಶ್ವರವೆಂಬ ಮತ್ತೊಂದು ಶಿವಲಿಂಗವಿರುವುದು. ಅದು ಆನಂದವರ್ಧಕವಾಗಿ, ಭಕ್ತರ ಮಹಾಪಾಪಗಳನ್ನೆಲ್ಲಾ ನಾಶಪಡಿಸತಕ್ಕುದಾಗಿದೆ. ಮತ್ತು ಆ ಶಿವಲಿಂಗವು ಬ್ರಹ್ಮಾದಿಗಳಿಂದ ಪೂಜಿತವಾಗಿ ಸರ್ವಕಾಮಪ್ರದವಾಗಿದೆ. "ಆನಂದೇಶ್ವರನೇ, ಮಹಾದೇವನೇ, ಶಂಕರನೇ, ಸಕಲ ದೇವತೆಗಳಿಂದಲೂ, ಮುನೀಂದ್ರರಿಂದಲೂ ಅರ್ಚಿತವಾದ ಪಾದಕಮಲವುಳ್ಳವನೇ, ನೀನು ನಿನ್ನ ಭಕ್ತರ

ಆನಂದೇಶ ಮಹೇಶ ಶಂಕರ ವಿಭೋ ಮಂದಾರಮಾಲಾರ್ಚಿತ
ವೃಂದಾರಾದಿಮುನೀಂದ್ರವೃಂದನಿವಹೈಃ ಸಂಪೂಜ್ಯಪಾದಾಂಬುಜ।
ಶಂಭೋ ತುಂದಿಲ ವಿಘ್ನಪಾರ್ಚಿತ ಮುದಾ ನಿತ್ಯಂ ಸದಾತ್ರಾವ ಮಾಂ॥೧೮॥
ಭಸ್ಮಾಭ್ಯಕ್ತ ಸುಭಕ್ತಮುಕ್ತಿವರದಂ ತ್ವಾಂ ಸ್ತೌಮಿ ನೌಮೀಶ್ವರ ॥೧೯॥

ತಸ್ಮಿನ್ನೇವ ಪರೇ ಸ್ಥಾನೇ ವಲ್ಲೀದಾರಂ ಮಹೇಶ್ವರಂ।
ದೃಷ್ಟ್ವಾsರ್ಚಿತಂ ಪೂಜಿತಂ ಚ ಸ್ತುತಂ ಸರ್ವಾರ್ಥದಂ ಮುನೇ ॥೨೦॥

ವಿಷ್ಣುಃ ಪುರಾsಸುರಾನ್ ಜಿತ್ವಾ ಸಗರ್ವಂ ಧನುಷಾ ಶರೈಃ।
ಧನುಷಃ ಕೋಟಿಮಾಲಂಬ್ಯ ತತ್ರಸ್ಥಾಸ್ವಶಿರೋಹರಿಃ ॥೨೧॥

ಉಪಾಧಿಕಭವಂ ದೇವಾಸ್ತಸ್ಮಿನ್ವಿಸ್ಮಿತಮಧ್ಯತಃ।
ಅಲತಂ ತಧ್ಯಕತುಷ್ಟೇ ಜಾತೇಬಿಲ್ವ ಭಿನ್ನಂ ಸ್ತದಾಶಿವಃ (?) ॥೨೨॥

ತದದ್ಭುತಮಭೂಲ್ಲಿಂಗಂ ದೃಷ್ಟ್ವಾ ಸಂಪೂಜ್ಯತೇ ಸುರಾಃ।
ಹರಿಣಾಗರ್ವಮುಕ್ತೇನ ವಲ್ಮೀಕೇಶಂ ಮಹೇಶ್ವರಂ ॥೨೩॥

---

ಗೊದಗುವ ಸಕಲ ವಿಘ್ನಪರಂಪರೆಗಳನ್ನೂ ನಾಶಮಾಡುವೆಯಲ್ಲವೆ! ಭಸ್ಮಭೂಷಿತನಾಗಿ ಸದಾ ನಿನ್ನನ್ನೇ ಸೇವಿಸುತ್ತಲಿರುವ ಭಕ್ತವೃಂದಕ್ಕೆ ಒಡನೆಯೇ ಮುಕ್ತಿಯನ್ನು ಅನುಗ್ರಹಿಸುತ್ತಿರುವೆ! ಇಂತಹ ಮಹಾಮಹಿಮನಾದ ನಿನಗೆ ಸರ್ವಾತ್ಮನಾ ವಂದಿಸುತ್ತಿರುವೆನು.'' ||೧೭-೧೮-೧೯||

ಅಲ್ಲಿಯೇ ವಲ್ಲೀದಾರೇಶ್ವರಕ್ಷೇತ್ರವಿರುವುದು. ಅದು ಅನೇಕರಿಂದ ಪೂಜಿತವಾಗಿ ಸರ್ವಾರ್ಥಪ್ರದವಾಗಿರುವುದು. ಹಿಂದೆ ವಿಷ್ಣುವು ರಾಕ್ಷಸರನ್ನು ಗೆದ್ದು ಧನುರ್ಬಾಣಗಳಿಂದ ಕೂಡಿ ಗರ್ವದಿಂದ ಆ ಸ್ಥಳಕ್ಕೆ ಬಂದು ಧನುಸ್ಸಿನ ತುದಿಗೆ ತಲೆಯನ್ನಿಟ್ಟು ಮಲಗಿಕೊಂಡಿದ್ದನು. ||೨೦-೨೧||

ಹಾಗೆಯೇ ಅಕಸ್ಮಾತ್ತಾಗಿ ಅಲ್ಲಿಯೇ ಇದ್ದ ಒಂದು ಬಿಲ್ವವೃಕ್ಷದಿಂದ ಒಂದು ಚಿಗುರು ಕೆಳಕ್ಕೆ ಹುತ್ತದ ಮೇಲೆ ಬಿದ್ದು, ಅದು ಒಡನೆಯೇ ಒಂದು ಶಿವಲಿಂಗವಾಯಿತು. ಇಂತಹ ಅದ್ಭುತರೀತಿಯಿಂದ ಉದ್ಭವವಾದ ವಲ್ಮೀಕೇಶಲಿಂಗವನ್ನು ಹರಿಯೇ ಮೊದಲಾದವರು ಈ ರೀತಿ ಪ್ರಾರ್ಥಿಸತೊಡಗಿದರು. ||೨೨-೨೩||

॥ ವಿಷ್ಣ್ವಾದ್ಯಾ ಊಚುಃ ॥

ನಮೋ ವಲ್ಮೀಕೇಶಾವ ವರಕಾಕೋದರಫಣಾ
ಲಸನ್ಮೌಲೇ ಶಂಭೋ ಹರಿಹರವಿಧೀಂದ್ರಾರ್ಚಿತಪದ ।
ಪ್ರಸೀದೇಶಾನಂಗಜ್ವರಹರಹರಾವಾದ್ಯಸುರತಾ
ವತಾಂ ತ್ವತ್ಪಾದಾಬ್ಜೇ ವಿತರ ಭವಭಕ್ತಿಂ ಪಶುಪತೇ ॥೨೪॥

ತತ್ರ ಶ್ರೀಪಾರ್ವತೀಶಾಖ್ಯಂ ಲಿಂಗಮಸ್ತಿ ಚಿರಂತನಂ ।
ಪಾರ್ವತ್ಯಾ ಪೂಜಿತಂ ದೃಷ್ಟ್ವಾ ನ ತಂ ಸಂಸ್ತುತಕಾಮದಂ ॥೨೫॥

ಶರ್ವ ವೇದಶಿಖರಸ್ತುತದೇವ
ಗರ್ವನಾಶಕಸುಖಪ್ರದಾಯಿನ್ ।
ಮೃಲ್ಲಿಂಗಪೂಜಕಜನಾವನ ಪಾವನೇಶ
ದೇವೇಶ ಮಾಮವ ವಿಭೋ ಶಿವಪಾರ್ವತೀಶ ॥೨೬॥

---

ವಲ್ಮೀಕೇಶ್ವರನೇ, ಶ್ರೇಷ್ಠನಾದ ಆದಿಶೇಷನ ಫಣಾಮಣಿಗಳಿಂದ ಅಲಂಕೃತನಾದ ಮಹಾದೇವನೇ, ವಿಷ್ಣುವೇ ಮೊದಲಾದ ಸಕಲ ದೇವತೆಗಳಿಂದಲೂ ಪೂಜಿತವಾದ ಪಾದಕಮಲವುಳ್ಳವನೇ, ಮನ್ಮಥವಿಕಾರಗಳಿಂದ ನರಳುತ್ತಿರುವವರನ್ನು ರಕ್ಷಿಸುವವನೇ, ದೇವತೆಗಳಾದ ನಮಗೆ ಸರ್ವದಾ ನಿನ್ನ ಪಾದಕಮಲದಲ್ಲಿ ಸ್ಥಿರವಾದ ಭಕ್ತಿಯಿರುವಂತೆ ಅನುಗ್ರಹಿಸು.” ॥೨೪॥

ಅಲ್ಲಿಂದ ಮುಂದೆ ಪಾರ್ವತೀಶವೆಂಬ ಶಿವಲಿಂಗವೊಂದಿರುವುದು. ಅದು ಪಾರ್ವತಿಯಿಂದ ಪೂಜಿತವಾಗಿ ಸಕಲರಿಗೂ ಇಷ್ಟಾರ್ಥಪ್ರದವಾಗಿರುವುದು. ॥೨೫॥

ಪಾರ್ವತಿಯು ಈ ರೀತಿ ಅದನ್ನು ಸ್ತುತಿಸಿರುವಳು. “ ಪಾರ್ವತೀಶನೇ, ಸುಖಕರನೇ, ವೇದಾಂತಗಳೆನಿಸಿದ ಉಪನಿಷತ್ತುಗಳಿಂದ ಸ್ತುತನಾದವನೇ, ದೇವತೆಗಳಿಗಿದ್ದ ಗರ್ವವನ್ನೆಲ್ಲಾ ನಾಶಗೊಳಿಸಿ ಅವರಿಗೆ ಸಕಲ ಸುಖಗಳನ್ನೂ ಒದಗಿಸುವವನೇ, ನೀನು ಮೃತ್ತಿಕಾಲಿಂಗಾರ್ಚನೆ ಮಾಡುವವರಿಗೆಲ್ಲಾ ಅನಾಯಾಸವಾಗಿ ಮುಕ್ತಿಯನ್ನನುಗ್ರಹಿಸುವೆಯಲ್ಲವೆ! ದೇವದೇವನೇ, ನನ್ನನ್ನು ಪರಿಪಾಲಿಸು. ನನಗೆ ಜ್ಞಾನವನ್ನು ನೀಡು.” ॥೨೬॥

ತತ್ರೈವ ಗಣನಾಥೇಶೋ ಗಣಪೇನಾರ್ಚಿತಸ್ಸ್ತುತಃ ।
ಗಣೇಶ್ವರೇತ್ಯಾಖ್ಯಲಿಂಗಮಘೌಘವಿನಾಶನಂ ॥೨೭॥

ಸ್ತುತನತಗಣವೃಂದಂ ವೇದವೇದಾಂತವೇದ್ಯಂ
ವಿಧಿಹರಿಹರಶಕ್ತಿಂ ವಂದ್ಯಪಾದಾರವಿಂದಂ ।
ನಿಗಮಸುಗಮವಾಕ್ಯೈರ್ಭಕ್ತಿಮುಕ್ತಿಪ್ರದಂ ತ್ವಾಂ
ಪ್ರಣತಜನಶರಣ್ಯಂ ತ್ವಾಂ ಶ್ರಯೇಽಹಂ ಗಣೇಶಂ ॥೨೮॥

ಮಯಾ ತತ್ರಾರ್ಚಿತಂ ಲಿಂಗಂ ದೃಷ್ಟ್ವಾ ಸ್ಕಂದೇಶ್ವರಾಭಿಧಂ ।
ಪುಣ್ಯಪ್ರದಂ ಪಾಪಹರಂ ಪೂಜಿತಂ ತತ್ರ ಸಂಸ್ತುತಂ ॥೨೯॥

॥ ಸ್ಕಂದ ಉವಾಚ ॥

ಕರ್ಪೂರಪೂರಸಿತಗಾತ್ರ ವಿಭೋ ತ್ರಿನೇತ್ರ
ಶಂಭೋ ವಿಭೋ ಗಿರಿವರಾತ್ಮಭವಾಕಲತ್ರ ।
ಮಾಮತ್ರ ಪಾಲಯ ವಿಭೋ ಭಗವನ್ ಪವಿತ್ರ
ಸತ್ರಾತಿರಾತ್ರಫಲದಾಯಕ ಹೇ ನಮಸ್ತೇ ॥೩೦॥

---

ಆದರ ಹತ್ತಿರದಲ್ಲಿಯೇ ಗಣಪತಿಯಿಂದ ಪೂಜಿತವಾಗಿ ಗಣನಾಥೇಶ್ವರನೆಂಬ ಹೆಸರಿನಿಂದ ಪಾಪನಾಶಕವಾಗಿರುವ ಶಿವಲಿಂಗವೊಂದಿರುವುದು ಅದನ್ನು ಗಣನಾಥನು ಹೀಗೆ ಸ್ತೋತ್ರಗೈದಿರುವನು. "ಗಣನಾಥೇಶ್ವರನೇ, ನೀನು ಅನೇಕರೀತಿಯಲ್ಲಿ ಹೊಗುಳವಭಕ್ತರಿಂದಲೂ, ವೇದೋಪನಿಷದ್ರಾಶಿಗಳಿಂದಲೂ ಸ್ತುತಿಸಲ್ಪಡುತ್ತಿರುವೆ. ಬ್ರಹ್ಮೇಂದ್ರಾದಿ ಸಕಲ ದೇವತೆಗಳಿಗೂ ಶಕ್ತಿರೂಪದಿಂದಿರುವೆ. ವೇದವೇದಾಂತ ಗಳಿಂದ ಸ್ತುತವಾದ ಪಾದಮಹಿಮೆಯುಳ್ಳ ಮುಕ್ತಿಪ್ರದನೂ ಭಕ್ತಜನರಕ್ಷಕನೂ ಆದ ನಿನ್ನನ್ನು ನಾನು ಮೊರೆಹೊಗುವೆನು." ॥೨೭-೨೮॥

ಎಲೈ ಜೈಗೀಷವ್ಯನೇ, ಆ ಗಣೇಶಲಿಂಗದ ಪಕ್ಕದಲ್ಲಿಯೇ ನನ್ನಿಂದ (ಸ್ಕಂದ ನಿಂದ) ಪೂಜಿತವಾದ ಮತ್ತು ಸ್ತುತವಾದ ದಿವ್ಯಲಿಂಗವಿರುವುದು. ಅದಕ್ಕೆ ಸ್ಕಂದೇ ಶ್ವರನೆಂದೇ ಹೆಸರಿದೆ. ಅಲ್ಲಿ ನಾನು ಶಂಕರನನ್ನು ಹೀಗೆ ಸ್ತುತಿಸಿರುವೆನು. "ಮಹಾ ದೇವನೇ, ನಿನ್ನ ದೇಹವು ಕರ್ಪೂರರಾಶಿಯಂತೆ ಶುಭ್ರವಾಗಿ ಹೊಳೆಯುತ್ತಿರುವು ದಲ್ಲವೆ! ತ್ರಿನಯನನೇ, ಪರಶಂಭುವೇ, ಭಗವಂತನೇ, ಗಿರಿರಾಜಪುತ್ರಿಯನ್ನೇ ಏಕ ಪತ್ನಿಯನ್ನಾಗಿ ವರಿಸಿದವನೇ, ನನ್ನನ್ನು ರಕ್ಷಿಸು. ನಿನ್ನ ಸೇವೆಯು ಭಕ್ತರಿಗೆ

|| ವಿಷ್ಣುರುವಾಚ ||

ವಿಷ್ಣುಸ್ತತ್ರಾರ್ಚಯಲ್ಲಿಂಗಂ ವಾಸುದೇವೇಶ್ವರಾಭಿಧಂ।
ತುಷ್ಟಾವಾಷ್ಟಾಕೃತಿಂ ದೇವಂ ವಾಸುದೇವೋ ಮಹೇಶ್ವರಂ ॥೩೧॥

ಹೇ ದೇವದೇವಸ್ತುತ ವೇದಮಹೋರುಸಾಮ
ಸೋಮೈಕವೇದ್ಯ ಭವಭೂತಪತೇ ಪಿನಾಕಿನ್।
ಮಾಮದ್ಯ ದೈತ್ಯಪರಿಖಂಡನಚಿತ್ತಮೇವ
ಸದ್ಯೋ ವಿನಾಶಯ ಭಯಂ ಭವ ಮೇ ಪ್ರಸೀದ ॥೩೨॥

ಬ್ರಹ್ಮಾ ತತ್ರಾರ್ಚಯಾಮಾಸ ಬ್ರಹ್ಮೇಶಾನಮಥಾ ಸ್ತುವತ್ ॥೩೩॥

|| ಬ್ರಹ್ಮೋವಾಚ ||

ಹರ ಹರ ಶಿವ ಶಂಭೋ ವ್ಯೋಮಕೇಶಾಷ್ಟಮೂರ್ತೇ
ಅವ ಶಿವ ದಯಯಾ ಮಾಂ ಪಾಹಿ ವೇದಾಂತವೇದ್ಯ।
ಶಶಿಧರ ಪರಮಾತ್ಮನ್ ಭರ್ಗಭೂತೇಶ ಬಿಲ್ವೀ
ನಯನ ದ್ವಯಯುಗಬ್ಜಂ ಚಾನತೋಽಸ್ಮ್ಯದ್ಯ ಶಂಭೋ ॥೩೪॥

---

ಅತಿರಾತ್ರವೇ ಮೊದಲಾದ ಅನೇಕ ಯಾಗಗಳ ಆಚರಣೆಯಿಂದ ಬರುವ ಫಲವನ್ನು ಒದಗಿಸುವುದಲ್ಲವೆ!" ||೨೯-೩೦||

ಅಲ್ಲಿಯೇ ವಿಷ್ಣುವಿನಿಂದ ಸ್ತುತವಾಗಿ, ಅರ್ಚಿತವಾಗಿರುವ ವಾಸುದೇವೇಶ್ವರ ಲಿಂಗವಿರುವುದು. ಅದನ್ನು ವಿಷ್ಣುವು ಹೀಗೆ ಸ್ತೋತ್ರಮಾಡಿರುವನು. "ಎಲೈ ದೇವ ದೇವನಿಂದ ಸ್ತುತನಾದವನೇ, ವೇದದಲ್ಲಿ ಉಕ್ತವಾಗಿರುವ ಮಹಾಸಾಮಗಾನದಿಂದ ಹೊಗಳಿಸಲ್ಪಟ್ಟಿರುವವನೇ, ಚಂದ್ರಕಲೆಯಿಂದ ಊಹಿತನಾಗುವವನೇ, ಸಕಲ ಭೂತ ಗಳಿಗೂ ಪತಿಯೆನಿಸಿ, ಬಲಿಷ್ಠವಾದ ಪಿನಾಕಾಯುಧವನ್ನು ಧರಿಸಿರುವ ಮಹಾತ್ಮನೇ, ನನಗೆ ದೈತ್ಯರನ್ನು ನಾಶಮಾಡುವ ಶಕ್ತಿಯನ್ನೂ ಉತ್ಸಾಹವನ್ನೂ ಕರುಣಿಸಿ ಅನುಗ್ರಹಿಸುವವನಾಗು." ||೩೧-೩೨||

ಅಲ್ಲಿಯೇ ಬ್ರಹ್ಮೇಶ್ವರನೆಂದು ಪ್ರಸಿದ್ಧಿಗೊಂಡಿರುವ ಶಿವಲಿಂಗವನ್ನು ಬ್ರಹ್ಮನು ಈರೀತಿ ಸ್ತುತಿಸಿರುವನು. "ಪರಶಿವನೇ, ವ್ಯೋಮ (ಅಂತರಿಕ್ಷ) ವನ್ನೇ ಕೇಶ ವನ್ನಾಗಿ ಹೊಂದಿರುವವನೇ, ಅಷ್ಟಮೂರ್ತಿಸ್ವರೂಪನೇ, ಚಂದ್ರಶೇಖರನೇ, ಸೂರ್ಯ

॥ ಈಶಾನ ಉವಾಚ ॥

ಈಶಾನೇಶಂ ತತ್ರ ಲಿಂಗಮೀಶಾನಾರ್ಚಿತಮುತ್ತಮಂ ।
ಸ್ತುತಂ ನತಂ ಪೂಜಿತಂ ಚ ಪಾಪಸಂಘಾತಭೇದನಂ ॥೩೫॥

ನಮಸ್ತೇ ಈಶಾನ ತ್ರಿನಯನ ಮಹೇಶಾನ ಗಿರಿಶ
ಪ್ರಸೀದಾಪ್ಯಾಂವಿದ್ಯಾಂ ಹರಹರ ಪರಾಪಾರಕರುಣ ।
ತ್ವಯಿ ನ್ಯಸ್ತಂ ಜಾತಂ ಜಗದತಿವಿಚಿತ್ರಂ ಪಶುಪತೇ
ವಿಧೀಂದ್ರೇಶಾನಾದ್ಯಾಃ ಪ್ರತಿಯುಗಮುಪಾಸ್ಯಾನು ಭಗವನ್ ॥೩೬॥

ಸೂರ್ಯಸ್ಸೋಮೋಗ್ನಿರಿಂದ್ರಾದ್ಯಾ ದಿಕ್ಪಾಲಾ ಗಣಸತ್ತಮಾಃ ।
ಮುನಯೋ ಮನವಃ ಸಿದ್ಧಾ ನಾಗಾ ವಿದ್ಯಾಧರಾಸ್ಸುರಾಃ ॥೩೭॥

ಯಥಾ ದೇವಾಸ್ತಥಾ ದೈತ್ಯಾ ನದಾ ನದ್ಯೋಽಪಿ ಸಾಗರಾಃ ।
ನೃಪಾಶ್ಚ ತತ್ರ ವಲ್ಮೀಕೇ ಹಾಟಕೇ ಕ್ಷೇತ್ರಮಧ್ಯಮೇ ॥೩೮॥

ತೀರ್ಥತೀರೇಷು ಲಿಂಗಾನಿ ಸ್ಥಾಪ್ಯ ಸಂಪೂಜ್ಯ ತುಷ್ಟುವುಃ ।
ವಿಧಿರ್ಯದೈಶ್ವರಂ ಲಿಂಗಂ ದಕ್ಷೇಶಂ ತೀರ್ಥಮಧ್ಯಮೇ ॥೩೯॥

---

ರೂಪಿಯಾಗಿರುವ ಭೂತಪತಿಯೇ, ಬಿಲ್ವದಳಗಳನ್ನೇ ನೇತ್ರಯುಗ್ಮವನ್ನಾಗಿ ಹೊಂದಿರುವ ಮಹಾದೇವನೇ, ಈಗ ನಿನಗೆ ವಂದಿಸುವೆನು." ॥೩೩-೩೪॥

ಅಲ್ಲಿಯೇ ಇರುವ ಈಶಾನೇಶ್ವರಲಿಂಗವನ್ನು ಈಶಾನನು ಬಹಳವಾಗಿ ಪೂಜಿಸಿ ಹೀಗೆ ಧ್ಯಾನಿಸಿರುವನು. ಅದು ಸಕಲಪಾಪನಿವಾರಕವಾದ ಶಿವಲಿಂಗವೆನಿಸಿದೆ. "ಈಶಾನೇಶ್ವರನೇ, ತ್ರಿನಯನನೇ, ಗಿರಿಶನೂ, ಮಹೇಶ್ವರನೂ ಎನಿಸಿ ಪ್ರಸಿದ್ಧಿಗೊಂಡಿರುವವನೇ, ನನ್ನದಾಗಿರುವ ಅಜ್ಞಾನವನ್ನು ಸಂಪೂರ್ಣವಾಗಿ ನಾಶಮಾಡು. ಪರಶಿವನೇ, ನಿನ್ನಿಂದ ಸೃಷ್ಟವಾಗಿರುವ ಈ ಜಗತ್ತು ಅತಿವಿಚಿತ್ರವಾಗಿದೆ. ಕರುಣಾಶಾಲಿಯೇ, ಬ್ರಹ್ಮಾದಿದೇವತೆಗಳು ಪ್ರತಿಯುಗದಲ್ಲಿಯೂ ನಿನ್ನ ದಯೆಯಿಂದ ಮತ್ತೆ ಮತ್ತೆ ಆವಿರ್ಭವಿಸುತ್ತಿರುವರಲ್ಲವೇ!" ॥೩೫-೩೬॥

ಅಲ್ಲಿಯೇ ಸೂರ್ಯ, ಚಂದ್ರ, ಅಗ್ನಿ, ಇಂದ್ರ, ದಿಕ್ಪಾಲಕರು, ಮುನಿಗಳು, ಮನುಗಳು, ಸಿದ್ಧರು, ನಾಗರು, ವಿದ್ಯಾಧರರು, ಹಾಗೆಯೇ ಇತರ ರಾಕ್ಷಸರೂ, ನದನದೀ ಸಾಗರಗಳೂ, ಮಾನವವರ್ಗದ ರಾಜರೂ, ಆದೇ ವಲ್ಮಿಕಸ್ಥಾನವೆನಿಸಿದ

ವಿಧಿರ್ದಕ್ಷಶ್ಚ ತತ್ರೇಶಂ ತುಷ್ಟಾವಾಂತೇ ಸಮರ್ಚ್ಯ ಚ ।
ರುದ್ರಾಣಾಂ ಕೋಟಯೋಽಪ್ಯತ್ರ ರುದ್ರಕೋಟೀಶ್ವರಾಭಿಧಂ ॥೪೦॥
ಸಮಭ್ಯರ್ಚ್ಯ ಪರಂ ಕ್ಷೇತ್ರೇ ವಲ್ಮೀಕೇ ಪಾವನೇ ಪರೇ ॥೪೧॥

॥ ಸರ್ವದೇವಮುನಿಗಣಾ ಊಚುಃ ॥

ಜಯ ಜಯ ಜಯ ಶಂಭೋ ವಿಶ್ವವಿಶ್ವಾಧಿಕೇಶ
ಪುರಹರವಿಧಿಮುಸ್ತಸ್ವಸ್ಥಶಸ್ತೋರುಹಸ್ತ ।
ಪ್ರಮಥಪ್ರಥಮಯಾಮಃ ಪಾಲಯೇಶಾದ್ಯದೇವ
ಸುರಮುನಿಗಣೇಶಾನ ಸದ್ದಯಾಸಾರದೃಷ್ಟ್ಯಾ ॥೪೨॥

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಕಮಲಾಲಯ ಹಾಟಕೇಶ ವಲ್ಮೀಕಾದಿ ವೈಭವವರ್ಣನೇ ಸಪ್ತತ್ರಿಂಶೋಽಧ್ಯಾಯಃ**

---

ಹಾಟಕೇಶ್ವರಕ್ಷೇತ್ರದಲ್ಲಿ ತಮ್ಮ ತಮ್ಮ ಹೆಸರಿನಿಂದ ಪ್ರತ್ಯೇಕ ಪ್ರತ್ಯೇಕವಾದ ಶಿವಲಿಂಗಗಳನ್ನು ಸ್ಥಾಪಿಸಿ, ವಿಧವಿಧವಾಗಿ ಮಹಾದೇವನನ್ನು ಸ್ತುತಿಸಿರುವರು. ಆ ಕ್ಷೇತ್ರಮಧ್ಯದಲ್ಲಿ, ವಿಧಿಯೂ, ದಕ್ಷನೂ, ದಕ್ಷೇಶ್ವರವೆಂಬ ಶಿವಲಿಂಗವನ್ನೂ, ಕೋಟಿಸಂಖ್ಯೆಯ ರುದ್ರಗಣಗಳು ರುದ್ರಕೋಟೀಶ್ವರನಾಮಕಶಿವಲಿಂಗವನ್ನೂ ಅದೇ ವಲ್ಮೀಕಕ್ಷೇತ್ರದಲ್ಲಿ ಸ್ಥಾಪಿಸಿ ಧ್ಯಾನಿಸಿರುವರು. ॥೩೭-೩೮-೩೯-೪೦-೪೧॥

ಹಾಗೆಯೇ ಅಲ್ಲಿ ಸಕಲ ದೇವತೆಗಳೂ, ಮುನಿಗಳೂ, ಗಣನಾಯಕರೂ ಮಹಾದೇವನನ್ನು ಈರೀತಿ ಸ್ತೋತ್ರಮಾಡಿರುವರು. "ಎಲೈ ಶಂಭುವೇ, ಮಹಾದೇವನೇ, ಲೋಕೋತ್ತರಮಹಿಮನೇ, ನೀನು ತ್ರಿಪುರಾಸುರರನ್ನೂ, ತ್ರಿಪುರಗಳನ್ನೂ ಧ್ವಂಸಮಾಡಿದವನಲ್ಲವೆ! ಅಲ್ಲದೆ ಚತುರ್ಮುಖಬ್ರಹ್ಮನ ತಲೆಯನ್ನು ನಿನ್ನ ಪವಿತ್ರವಾದ ಕೈಯಿಂದಲೇ ಚಿಗುಟಿ ಧರಿಸಿದೆಯಲ್ಲವೆ! ಮಹಾದೇವನೇ, ನೀನು ಪ್ರಮಥಗಣಗಳಿಗೆಲ್ಲಾ ಮೊದಲನೆಯವನು ಈಶಾನಾದಿ ಸಕಲ ದೇವತೆಗಳ ಗುಂಪಿಗೂ ಅಧಿದೇವತೆಯೆನಿಸಿ ಪ್ರಸಿದ್ಧಿಗೊಂಡಿರುವ ಮಹಾತ್ಮನೇ, ನಮ್ಮನ್ನು ನಿನ್ನ ಕರುಣಾಪೂರಿತವಾದ ದೃಷ್ಟಿಯಿಂದ ನೋಡಿ ಉದ್ಧರಿಸು. ನಾವೆಲ್ಲರೂ ನಿನ್ನನ್ನೇ ಮೊರೆಹೊಕ್ಕಿರುವೆವು. ಕೈಬಿಡಬೇಡ" ಎಂದು ಸಕಲರೂ ಆ ಕ್ಷೇತ್ರದಲ್ಲಿ ಮಹಾದೇವನನ್ನು ಸ್ತುತಿ

ಸಿರುವರೆಂದು ತಿಳಿ. ಜೈಗೀಷವ್ಯಾದಿ ಮಹರ್ಷಿಗಳಿರಾ, ಹೀಗೆ ಸಕಲ ದೇವತೆಗಳಿಂದಲೂ ಪ್ರತಿಷ್ಠಿತಳಾಗಿರುವ ಶಿವಲಿಂಗಗಳಿಂದ ಅತಿ ಪವಿತ್ರವೆನಿಸಿಕೊಂಡಿರುವ ಆ ಹಾಟಕೇಶ್ವರಕ್ಷೇತ್ರವು ಬಹು ಪುರಾತನವಾದುದು ಮತ್ತು ಪವಿತ್ರವಾದುದು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹರ್ಷಿಗಳಿಗೆ ಕ್ಷೇತ್ರಮಹಿಮೆಯನ್ನು ವಿವರಿಸಿ ಹೇಳಿದನೆಂಬಲ್ಲಿಗೆ—॥೪೨॥

ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಕಮಲಾಲಯ, ಹಾಟಕೇಶ್ವರ, ವಲ್ಮೀಕ ಮುಂತಾದ ಹೆಸರಿನ ಕ್ಷೇತ್ರವರ್ಣನೆಯನ್ನು ತಿಳಿಸುವ ಮೂವತ್ತೇಳನೆಯ ಅಧ್ಯಾಯವು ಸಮಾಪ್ತವಾದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಅಷ್ಟತ್ರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಈಶಾನಕಲ್ಪೇ ತು ಪುರಾ ದೇವಾ ದೈತ್ಯೈಃ ಪರಾಜಿತಾಃ ।
ಇಂದ್ರಾದ್ಯಾಶ್ಚೈವ ದಿಕ್ಪಾಲಾ ವಸುರುದ್ರಾರ್ಯಮಾದಯಃ ॥೧॥

ಹೃತಾಧಿಕಾರಾಸ್ತ್ರಿದಶಾಃ ದುರ್ದಶಾಮಾಪಿರೇ ತದಾ ।
ಬಲೋಪಬಲನಾಮಾಭ್ಯಾಂ ದೈತ್ಯಾಭ್ಯಾಂ ವಿದ್ರುತಂ ಸುರಾಃ ॥೨॥

ಜನ್ಯೇ ಪರ್ಜನ್ಯನಿನದೈರಸುರೈರ್ಬಲವತ್ತರೈಃ ।
ವೈಕುಂಠಂ ಶರಣಂ ಪ್ರಾಪ್ತಾಃ ಶರಣ್ಯಂ ಕಮಲಾಪತಿಂ ॥೩॥

---

## ಮೂವತ್ತೆಂಟನೆಯ ಅಧ್ಯಾಯ

ಕುಮಾರಸ್ವಾಮಿಯು ಶಿವಕ್ಷೇತ್ರಮಹಿಮೆಯನ್ನು ವಿವರಿಸುತ್ತಾ ಜೈಗೀಷವ್ಯ ಮಹರ್ಷಿಯನ್ನು ಕುರಿತು ಇಂತೆಂದನು. "ಹಿಂದೆ ಈಶಾನಕಲ್ಪದಲ್ಲಿ ಇಂದ್ರಾದಿ ಸಕಲ ದೇವತೆಗಳೂ, ವಸುರುದ್ರಾದಿಗಳೂ, ದೈತ್ಯರಿಗೆ ಸೋತುಹೋಗಿ ಅತಿಶಯವಾದ ಕಷ್ಟಕ್ಲೇಶಪಡಾದರು. ಅದರಲ್ಲಿಯೂ ಬಲ, ಉಪಬಲ ಎಂಬಿಬ್ಬರು ರಾಕ್ಷಸರಂತೂ ದೇವತೆಗಳನ್ನು ಬಹಳವಾಗಿ ಪೀಡಿಸಲಾರಂಭಿಸಿದರು ॥೧-೨॥

ಮೇಘಧ್ವನಿಯಂತೆ ಗರ್ಜಿಸುವ ಅನೇಕ ರಾಕ್ಷಸರ ತಂಡಗಳಿಂದ ಕೂಡಿದ ಯುದ್ಧದಲ್ಲಿ ದೇವತೆಗಳು ಸೋತುಹೋಗಿ ಕೊನೆಗೆ ತಮಗೆಲ್ಲಾ ರಕ್ಷಕನೆನಿಸಿದ ಮಹಾವಿಷ್ಣುವನ್ನು ಮೊರೆಹೊಕ್ಕರು. ಮೊದಲು ಇಂದ್ರಾದಿ ಸಕಲ ದೇವತೆಗಳೆಲ್ಲರೂ

ಇಂದ್ರಾದಯಸ್ಸುರಾಸ್ಸರ್ವೇ ಸದಿಕ್ಪಾಲಾ ಮಹೌಜಸಃ ।
ದೃಷ್ಟ್ವಾ ವಿಷ್ಣುಂ ರಮಾಯುಕ್ತಂ ಪೂಜಯಂತಂ ಮಹೇಶ್ವರಂ ॥೪॥

ಸರ್ಪಸಿಂಹಾಸನಾರೂಢಂ ಪ್ರಭಯಾ ಚ ವಿರಾಜಿತಂ ।
ಸೋಮಾಸೋಮಧಾಮಸಮಾನಾಸ್ಯಂ ತ್ರಿಲೋಚನಂ ॥೫॥

ನೀಲಕಂಠಂ ಚಂದ್ರರೇಖಾಧರಂ ಗಂಗಾಧರಂ ವಿಭುಂ ।
ತೀರಸಕ್ತಾಭಿರಾಮಂ ಚ ವಿಟಂಕಂ ಸುಂದರಾಕೃತಿಂ ॥೬॥

ತ್ಯಾಗರಾಜಂ ಸಮುತ್ಫುಲ್ಲಹಲ್ಲಕಾಧರಕಂಧರಂ ।
ಸಂಪೂಜ್ಯ ಧೂಪದೀಪಾದ್ಯೈರ್ನೈವೇದ್ಯೈರ್ವಿವಿಧೈರ್ಹರಿಃ ॥೭॥

ನೀರಾಜ್ಯ ಪ್ರಮಥಾಧೀಶಮಸ್ತುವತ್ ಪರಮೇಶ್ವರಂ ॥೮॥

॥ ವಿಷ್ಣುರುವಾಚ ॥

ತ್ಯಾಗಾಧೀಶ ಮಹೇಶ ಶಂಕರವಿಭೋ ತ್ಯಾಗೇನ ಭೋಗೇಷಣಾ
ಪ್ರಾಪ್ಯಸ್ತ್ವಂ ಯಮಿನಾಂ ಹೃದಂಬುಜದರೇ ಸಂಸ್ಥಾಯ ಸನ್ಮಾನಸೇ।
ಹತ್ಯಾಕೋಟಿನಿವಾರಣೇ ಭಗವತೇ(?) ಸ್ತುತ್ಯಾಸು ಪೂಜ್ಯಾಯತೇ
ಮತ್ಯಾ ಸ್ವಾನುಭವೇನ ತೇ ಪ್ರತಿಪದಂ ಪಾದಾಂಬುಜಂ ಧ್ಯಾಯಿನಾಂ ॥೯॥

---

ಮಹೇಶ್ವರಪೂಜಕನೂ ರಮಾಪತಿಯೂ ಆದ ಮಹಾವಿಷ್ಣುವನ್ನು ಭಕ್ತಿಯಿಂದ ಎದುರುಗೊಂಡರು. ॥೩-೪॥

ಆಗ ವಿಷ್ಣುವು ತ್ಯಾಗರಾಜೇಶ್ವರ ಲಿಂಗವನ್ನು ಪೂಜಿಸುತ್ತಿದ್ದನು. ಆ ಈಶ್ವರ ಮೂರ್ತಿಯಾದರೋ, ಸರ್ಪಸಿಂಹಾಸನದಲ್ಲಿ ಅಲಂಕೃತವಾಗಿಯೂ ರತ್ನಪ್ರಭೆಯಿಂದ ವಿರಾಜಿತವಾಗಿಯೂ, ಪಾರ್ವತೀಷಣ್ಮುಖರಿಂದೊಡಗೂಡಿ ಚಂದ್ರಮಂಡಲದಂತೆ ಸುಂದರವಾದ ಮುಖವುಳ್ಳದ್ದಾಗಿಯೂ ಪ್ರಕಾಶಿಸುತ್ತಿದ್ದಿತು. ತ್ಯಾಗರಾಜೇಶ್ವರ ಬಿಂಬವು ಅರಳಿದ ಕಲ್ಹಾರಪುಷ್ಪಮಾಲೆಗಳಿಂದ ಮತ್ತೂ ಶೋಭಿಸುತ್ತಿದ್ದಿತು. ಇಂತಹ ಶಿವಲಿಂಗವನ್ನು ವಿಷ್ಣುವು ಧೂಪದೀಪಾದಿಗಳಿಂದ ಪೂಜಿಸಿ ನೈವೇದ್ಯ ನೀರಾಜನಗಳನ್ನು ಸಮರ್ಪಿಸಿ ಈರೀತಿ ಸ್ತೋತ್ರಮಾಡಿದನು. ॥೫-೬ ೭-೮॥

ತ್ಯಾಗರಾಜೇಶ್ವರನೇ, ನೀನು ತ್ಯಾಗವೆಂಬ ಗುಣಕ್ಕೆ ಅಧಿಪತಿಯೆನಿಸಿರುವೆ. ಯಮನಿಯಮಾದಿಗಳಿಂದ ಯೋಗಿಗಳೆನಿಸಿರುವವರ ಹೃದಯಕಮಲದಲ್ಲಿ ನೀನು

ಧನ್ಯಾನಾಂ ಕಿಲ ಮುಕ್ತಯಸ್ತವ ವಿಭೋ ಭೂಯಾತ್ಪ್ರಸಾದೇನ ನೋ॥೧೦॥

ಇತ್ಥಂ ಸ್ತುವಂತಂ ವಿಷ್ಣ್ವಾದ್ಯಾಸ್ತ್ಯಾಗರಾಜಂ ಮಹೇಶ್ವರಂ ।
ರತ್ನರಾಜಿವಿರಾಜಚ್ಛ್ರೀಮುಕುಟಂ ದೇವಸತ್ತಮಂ ॥೧೧॥

ಯಕ್ಷರಾಜಾರ್ಚಿತಪದಂ ದೇವರಾಜಂ ಪ್ರಣಮ್ಯ ಚ ।
ಉವಾಚ ಪ್ರಾಂಜಲಿರ್ವಿಷ್ಣುಂ ತಂ ತದಾ ಪಾಕಶಾಸನಃ ॥೧೨॥

॥ ಇಂದ್ರ ಉವಾಚ ॥

ಮಹ್ಯಂ ದೇಹಿ ಹರೇ ಮೂರ್ತಿಂ ಸೋಮಾಸ್ಕಂದತ್ರಿಶೂಲಿನಃ ।
ಪೂಜಾರ್ಥ್ಯೈ ಮಮ ದೇವೇಶ ಹೃದಯಂ ಸದಯಂ ತವ ॥೧೩॥

ಮಯಿ ನಿತ್ಯಂ ಸುದುಃಖಾರ್ತೇ ಬಲೋಪಬಲಪೀಡಿತೇ ।
ತದಿಂದ್ರವಚನಾದ್ವಿಷ್ಣುಸ್ತಸ್ಮೈ ಪ್ರಾದಾನ್ಮಹೇಶ್ವರಂ ॥೧೪॥

---

ಸ್ಥಿರವಾಗಿ ನಿಂತಿರುವೆ. ನಿನ್ನ ಸೇವೆಯಿಂದಲೇ ಸಕಲ ಭೋಗಪ್ರಾಪ್ತಿಯೂ ಒದಗುವುದು. ನಿನ್ನ ಧ್ಯಾನಬಲದಿಂದಲೇ ಭಕ್ತರೆಲ್ಲರೂ ಅನೇಕ ಹಿಂಸಾಕಾರ್ಯಗಳಿಂದ ಮುಕ್ತರಾಗಿರುವರು. ನಿನ್ನ ಪಾದಕಮಲವನ್ನೇ ಸದಾ ಧ್ಯಾನಮಾಡುತ್ತಾ ಧನ್ಯರಾಗಿರುವವರಿಗೆ ನಿನ್ನನುಗ್ರಹದಿಂದ ಸ್ಥಿರಮುಕ್ತಿಯು ಪ್ರಾಪ್ತವಾಗಿರುವುದರಲ್ಲಿ ಆಶ್ಚರ್ಯವೇನು? ॥೯-೧೦॥

ಹೀಗೆ ರತ್ನಮಯವಾದ ಕಿರೀಟದಿಂದ ಶೋಭಿಸುವ ದೇವದೇವನೂ, ಕುಬೇರನಿಂದ ಅತಿಯಾಗಿ ಪೂಜಿತನೂ ಆದ ದೇವರಾಜನೆನಿಸಿದ ತ್ಯಾಗರಾಜೇಶ್ವರನನ್ನು ಬಹಳವಾಗಿ ವಿಷ್ಣ್ವಾದಿದೇವತೆಗಳು ಸ್ತೋತ್ರಮಾಡುತ್ತಿದ್ದರು. ಆಗ ಇಂದ್ರನು ಅಂಜಲಿಬದ್ಧನಾಗಿ ನಿಂತು ವಿಷ್ಣುವನ್ನು ಕುರಿತು ಹೀಗೆಂದನು. ॥೧೧-೧೨॥

“ ದೇವದೇವನೇ, ನಾನು ಬಲ, ಉಪಬಲರೆಂಬ ಹೆಸರಿನ ರಾಕ್ಷಸರಿಂದ ಬಹಳವಾಗಿ ಪೀಡಿತನಾಗಿರುವೆನು. ಆ ಕಷ್ಟವನ್ನು ಪರಿಹರಿಸಿಕೊಳ್ಳಲು ನನಗೆ ಉಪಾಯವೇ ತೋರದಾಗಿದೆ. ಆದ್ದರಿಂದ ನನಗೆ ಪಾರ್ವತೀ ಮತ್ತು ಸ್ಕಂದ ಇವರಿಬ್ಬರಿಂದ ಕೂಡಿದ ಈಶ್ವರವಿಗ್ರಹವೊಂದನ್ನು ಅನುಗ್ರಹಿಸು. ನಿತ್ಯವೂ ಅದನ್ನು ಪೂಜಿಸಿ ಕಷ್ಟಪರಂಪರೆಯನ್ನು ಕಳೆದುಕೊಳ್ಳುವೆನು ” ಎಂದು ಪ್ರಾರ್ಥಿಸಲು ಆಗ

ತ್ಯಾಗರಾಜಂ ವಿಟಂಕಂ ಚ ಇಂದ್ರಮಾಹ ತದಾ ಹರಿಃ ॥೧೫॥

ಕಾಲಾಂತರೇ ಭೂಗತೇಯಂ ಭವೇನ್ಮೂರ್ತಿರ್ಮಹೇಶಿತುಃ ।
ಕೈಲಾಸೇತು ಮಯಾ ಲಬ್ಧಾ ಪುರಾ ಶಂಭೋಃ ಪ್ರಸಾದತಃ ॥೧೬॥

ದೈತ್ಯೇಭ್ಯಃ ಪಾಹಿ ಮಾಂ ಮೂರ್ತಿಂ ಪೂಜಯಸ್ವ ವಿಧಾನತಃ ।
ತ್ಯಾಗರಾಜಸಪರ್ಯಾತಃ ಜಪ್ಯೇ ತವ ಜಯೋಭವೇತ್ ॥೧೭॥

ಭುವಸ್ತಲೇ ನೃಪವರೋ ಮುಚುಕುಂದೋ ಬಲಾಧಿಕಃ ।
ತೇನ ಸಖ್ಯಂ ಸಮಾಸಾದ್ಯ ಬಲೋಪಬಲನಾಶನಂ ॥೧೮॥

ಕರ್ತಾಸಿ ದೇವರಾಜಾದ್ಯ ತ್ಯಾಗರಾಜಪ್ರಸಾದತಃ ।
ತಥೇತ್ಯುಕ್ತ್ವಾ ಯಯೌ ದೇವೈರ್ದೇವರಾಜೋಮರಾವತಿಂ ॥೧೯॥

ತ್ಯಾಗರಾಜಂ ಗೃಹೀತ್ವಾ ವೈ ರಹಸ್ಯೇನಾಯಯೌ ದ್ರುತಂ ।
ಸ ಶಕ್ರಸ್ತ್ವಮರಾವತ್ಯಾಂ ದೇವ್ಯಾ ಸಿಂಹಾಸನಸ್ಥಿತಂ ॥೨೦॥

---

ವಿಷ್ಣುವು ಅವನಿಗೆ ತ್ಯಾಗರಾಜೇಶ್ವರಮೂರ್ತಿಯನ್ನೂ ಅದಕ್ಕೆ ಸಂಬಂಧಿಸಿದ ಒಂದು ಪಾಲಿಕೆ ಅಂದರೆ ಸಂಪುಟವನ್ನೂ ಕೊಟ್ಟನು. ॥೧೩-೧೪॥

ಅನಂತರ ಹೀಗೆ ಹೇಳಿದನು. "ಎಲೈ ಇಂದ್ರನೇ, ಕೆಲವು ಕಾಲಾನಂತರ ಈ ವಿಗ್ರಹವು ಭೂಗತವಾಗಿ ನಿಲ್ಲುವುದು. ಈ ಮೂರ್ತಿಯನ್ನು ನಾನು ಈಶ್ವರಾನುಗ್ರಹ ದಿಂದ ಕೈಲಾಸದಲ್ಲಿ ಹೊಂದಿದೆನು. ॥೧೫-೧೬॥

ಈ ಮೂರ್ತಿಯನ್ನು ರಾಕ್ಷಸರಿಗೆ ಸಿಕ್ಕಿಸಬೇಡ. ಇದನ್ನು ಆರಾಧಿಸುವುದ ರಿಂದ ನಿನಗೆ ಜಾಗ್ರತೆ ಜಯವು ಲಭಿಸುವುದು. ಭೂಲೋಕದಲ್ಲಿ ಮುಚುಕುಂದ ನೆಂಬ ಶೂರನಾದ ರಾಜನೊಬ್ಬನಿರುವನು. ಅವನ ಸ್ನೇಹದಿಂದಲೂ, ಈ ತ್ಯಾಗರಾಜಾ ನುಗ್ರಹದಿಂದಲೂ ನೀನು ಜಯಶಾಲಿಯಾಗಿ, ಬಲೋಪಬಲರನ್ನು ನಾಶಮಾಡುವೆ" ಎಂದು ಹೇಳಲು ಆಗ ಇಂದ್ರನು ಸಂತೋಷದಿಂದ ಕೂಡಿ ಆ ದಿವ್ಯಲಿಂಗದೊಡನೆ ದೇವತೆಗಳಿಂದ ಪರಿವೃತನಾಗಿ ಅಮರಾವತಿಗೆ ತೆರಳಿದನು. ॥೧೭-೧೮-೧೯॥

ಅದನ್ನು ರಹಸ್ಯವಾಗಿ ಪತ್ನಿಯೊಡನೆ ಕೂಡಿ ಸಿಂಹಾಸನದಮೇಲೆ ಪ್ರತಿಷ್ಠಿಸಿ, ಕಲ್ಹಾರಮಾಲಿಕೆಗಳಿಂದಲೂ, ಧೂಪದೀಪನೈವೇದ್ಯಾದ್ಯುಪಚಾರಗಳಿಂದಲೂ ಸ್ವಾಮಿ

ತ್ಯಾಗರಾಜಂ ನಟನ್‌ಸ್ತೌತಿ ಪೂಜ್ಯಮಭ್ಯರ್ಚಯಂಸ್ತದಾ ।
ಕಲ್ಹಾರಮಾಲಿಕಾಭಿಶ್ಚ ಧೂಪದೀಪನಿವೇದನೈಃ ॥೨೧॥

ನೀರಾಜನೈಸ್ತ್ಯಾಗರಾಜಂ ದೇವರಾಜೋ ಮುದಾಸ್ತುವತ್ ॥೨೨॥

॥ ದೇವೇಂದ್ರ ಉವಾಚ ॥

ತ್ಯಾಗರಾಜಸುರರಾಜನತಾಂಘ್ರೇ
ರಾಜರಾಜಮುಕುಟಾವ ಮಾಂ ಸದಾ ।
ಯಕ್ಷರಾಜಸಖಪಕ್ಷಿರಾಡ್ವಹ
ಪೂಜ್ಯಪಾದ ಭಗವನ್ ಪ್ರಸೀದ ಮೇ ॥೨೩॥

ಇತ್ಥಂ ಸಂಸ್ತುತ್ಯ ದೇವೇಂದ್ರಃ ಕಾಲೇನ ಮಹತಾ ತದಾ ।
ಬಲೋಪಬಲನಾಶಾರ್ಥಂ ಮುಚುಕುಂದಮಥಾಹ್ವಯತ್ ॥೨೪॥

ರಾಜಾನಂ ಮುಚುಕುಂದಂ ತಂ ಪೂಜಯಾಮಾಸ ತತ್ರ ವೈ ॥೨೫॥

ಮುಚುಕುಂದಸ್ತದಾ ಪ್ರಾಹ ಪ್ರಾಂಜಲಿಃ ಪಾಕಶಾಸನಂ ॥೨೬॥

---

ಯನ್ನು ಪೂಜಿಸಿ, ದೇವೇಂದ್ರನು ನಾಟ್ಯವಾಡುತ್ತಾ ಈ ರೀತಿ ಸ್ತೋತ್ರಮಾಡಿದನು. ॥೨೦-೨೧-೨೨॥

" ತ್ಯಾಗರಾಜೇಶ್ವರನೇ, ನೀನು ದೇವರಾಜನಿಂದ ಪೂಜಿತನಾಗಿ ಅತಿಶಯವಾಗಿ ಪ್ರಕಾಶಿಸುತ್ತಿರುವ ಕಿರೀಟವನ್ನು ಧರಿಸಿಕೊಂಡಿರುವವನು. ಕುಬೇರನಿಗೂ ಪರಮ ಮಿತ್ರನಾಗಿರುವವನೇ, ನೀನು ಪಕ್ಷಿವಾಹನನಾದ ವಿಷ್ಣುವಿನಿಂದಲೂ ಪೂಜಿತನಾಗಿರುವೆಯಲ್ಲವೆ? ಮಹಾದೇವನೇ, ನನ್ನಮೇಲೆ ಅನುಗ್ರಹವಿಡು. ನನಗೆ ಪ್ರಸನ್ನನಾಗು." ॥೨೩-೨೪॥

ಈರೀತಿ ದೇವೇಂದ್ರನು ಈಶ್ವರನನ್ನು ಸ್ತುತಿಸಿ, ಅನೇಕ ಕಾಲಾನಂತರ ಬಲೋಪಬಲರನ್ನು ಸಂಹರಿಸಲೋಸುಗ ಮುಚುಕುಂದರಾಜನ ಸಮೀಪಕ್ಕೆ ಹೋಗಿ ಅಲ್ಲಿ ಅವನನ್ನು ಸಹಾಯಕ್ಕಾಗಿ ಕರೆದನು. ಆಗ ಮುಚುಕುಂದನು ಅಂಜಲಿಬದ್ಧನಾಗಿ ಹೀಗೆ ಇಂದ್ರನನ್ನು ಪ್ರಾರ್ಥಿಸಿಕೊಂಡನು. ॥೨೫-೨೬॥

|| ಮುಚುಕುಂದ ಉವಾಚ ||

ಪ್ರಣೌಮಿ ತ್ಯಾಗರಾಜಂ ಮೇ ಪೂಜಾರ್ಥಂ ಶಕ್ರ ದೇಹಿತೇ ।
ಮುಚುಕುಂದವಚಶ್ಶ್ರುತ್ವಾ ಸೋಽಪಿ ಹೃಷ್ಟಮನಾಽಬ್ರವೀತ್ ॥೨೭॥

ಶಕ್ರೋ ದೇವೈಶ್ಚ ಗುರುಣಾ ದದಾಮಿ ತವ ಶಂಕರಂ ।
ತಥೇತ್ಯುಕ್ತ್ವಾ ಸ ರಾಜಾಪಿ ಶಕ್ರೇಣ ಪರಿಪೂಜಿತಃ ॥೨೮॥

ವಿಶ್ವಕರ್ಮಾಣಮಾಹೂಯ ಶಕ್ರಸ್ತತ್ರ ರಹೋ ಮುನೇ ।
ಷಟ್ ತ್ಯಾಗರಾಜಪ್ರತಿಮಾಃ ವಿಟಂಕೈಸ್ಸಮಕಾರಯತ್ ॥೨೯॥

ದದೌ ರುದ್ರಸ್ತದಾ ಹಸ್ತೇ ಪರಿತ್ಯಾಗ (?) ಮುಹುರ್ಮುಹುಃ ।
ತೇನ ಕೋಪಪರೀತೇನ ತ್ಯಾಗರಾಜಂ ಪ್ರಯಾಚತಾ ॥೩೦॥

ರುದ್ರಃ ಪ್ರಹಸ್ಯ ತಂ ಪ್ರಾಹ ದೇಯಂ ಮೇ ದಯಯಾ ಇತಿ ॥೩೧॥

|| ಗುರುರುವಾಚ ||

ವಿಷ್ಣುನಾಪಿ ಪುರಾ ಪ್ರೋಕ್ತಂ ಭೂಲೋಕೇ ಸ್ಥಾಯಿನೀತ್ವಿಯಂ ।
ಮೂರ್ತಿಸ್ತ್ಯಾಗಾಖ್ಯಕಾ ಶಂಭೋ ಮಾತ್ರ ತ್ವಂ ಸಂಶಯಂ ಕುರು ॥೩೨॥

---

"ದೇವೇಂದ್ರನೇ. ನಿನ್ನ ಮಾತಿನಂತೆಯೇ ನಾನು ನಡೆಯುವೆನು. ಆದರೆ ನಿನ್ನಲ್ಲಿರುವ ತ್ಯಾಗರಾಜಮೂರ್ತಿಯನ್ನು ಪೂಜಾರ್ಥವಾಗಿ ನನಗೆ ಅನುಗ್ರಹಿಸುವವನಾಗು" ಎಂದು ಮುಚುಕುಂದನು ಕೇಳಿಕೊಳ್ಳಲು ಇಂದ್ರನು ಅದೇರೀತಿ ಗುರುವಾದ ಬೃಹಸ್ಪತಿಯೊಂದಿಗೂ ಇತರ ದೇವತೆಗಳೊಡನೆಯೂ ಕೂಡಿ ಈ ಶಿವಲಿಂಗವನ್ನು ಮುಚುಕುಂದನಿಗೆ ಪೂಜಾಪೂರ್ವಕವಾಗಿ ಸಮರ್ಪಿಸಿದನು. ||೨೮||

ಮತ್ತು ವಿಶ್ವಕರ್ಮನನ್ನು ಕರೆದು ಏಕಾಂತದಲ್ಲಿ ಆರು ತ್ಯಾಗರಾಜೇಶ್ವರ ಪ್ರತಿಮೆಗಳನ್ನು ವಿಟಂಕ (ಪಾಲಿಕೆ) ದೊಡನೆ ನಿರ್ಮಿಸಬೇಕೆಂದು ಅಪ್ಪಣೆಮಾಡಿದನು. ಆತನು ಹಾಗೆ ಮಾಡಿದೊಡನೆಯೇ, ರುದ್ರನು ಕೋಪಾವೇಶದಿಂದ ಬಂದು ಆ ತ್ಯಾಗರಾಜೇಶ್ವರಮೂರ್ತಿಯನ್ನು ತನಗೆ ಕೊಡಬೇಕೆಂದು ವಿನಯದಿಂದ ಕೇಳಿದನು. ಆಗ ಬೃಹಸ್ಪತ್ಯಾಚಾರ್ಯರು ಬಂದು ಅವನೊಡನೆ ಹೀಗೆಂದರು. ||೨೯-೩೦-೩೧||

ರುದ್ರನೇ, ಈ ವಿಷಯವಾಗಿ ಹಿಂದೆಯೇ ವಿಷ್ಣುವು ಈ ತ್ಯಾಗರಾಜ

ಮುಚುಕುಂದಶ್ಚ ಸಂಪೂಜ್ಯ ತ್ಯಾಗರಾಜಂ ಪದೇ ಮುದಾ ।
ಸ ಷಟ್ ತ್ಯಾಗೇಶ ಮೂರ್ತೀಶ್ಚ ಗೃಹೀತ್ವಾ ಭೂತಲೇ ನೃಪಃ ॥೩೩॥

ಸ್ಥಾಪಯಾಮಾಸ ಪರಿತಃ ಸ್ಥಾನೇಷು ಚ ಮಹೇಶಿತುಃ ।
ಸಕಾಲಸಂಜ್ಞೇ ಸ್ಥಾನೇತು ವೇದಾರಣ್ಯೇ ತಲೇಶ್ವರೇ ॥೩೪॥

ಕಹೋಳೇಶ್ಚ ತ್ರಿಕೂಟೇಶತ್ರಿಯಾಸ್ಯೌ ಹರ ಪೂಜನೇ ।
ತ್ಯಾಗೇಶಂ ಹಾಟಕೇಶಾನ್ಯೇ ಕ್ಷೇತ್ರೇ ವಲ್ಮೀಕದಕ್ಷಿಣೇ ॥೩೫॥

ಸ್ಥಾನಂ ಕೃತ್ವಾ ಶಿವಾಕಾರಂ ರಮ್ಯಪ್ರಾಕಾರಗೋಪುರಾಃ ।
ದಿವ್ಯಸಿಂಹಾಸನಾಸೀನಂ ಫುಲ್ಲಹಲ್ಲಕಧಾರಿಣಂ ॥೩೬॥

ಮೃಗಟಂಕಧರಂ ಸೋಮಂ ಪಾದಪ್ರಾಂಶೇऽಹಿ ಕಿಂಕಿಣೇ ।
ಸಂಪೂಜ್ಯ ಮುಚುಕುಂದೋತ್ರ ತ್ಯಾಗರಾಜಂ ಪ್ರತುಷ್ಟುವೇ ॥೩೭॥

॥ ಮುಚುಕುಂದ ಉವಾಚ ॥

ಹೇ ತ್ಯಾಗರಾಜ ಗಿರಿರಾಜಸುತಾಕಳತ್ರ
ಪಾಹಿ ತ್ರಿನೇತ್ರ ದ್ವಿಜರಾಜಕಳಾಧರೇಶ ।

---

ಮೂರ್ತಿಯು ಭೂಲೋಕದಲ್ಲಿಯೇ ಮುಂದೆ ನೆಲಸುವುದು. ಇದರಲ್ಲಿ ಸಂಶಯ ಪಡಬೇಡ ಎಂದು ಹೇಳಿರುವನು." ಎಂದು ಗುರುವು ಹೇಳಿದ ಆ ಮಾತುಗಳನ್ನು ಕೇಳಿ ಮುಚುಕುಂದನು ತ್ಯಾಗರಾಜೇಶ್ವರನನ್ನು ಪೂಜಿಸಿ, ಆ ಆರು ಶಿವಮೂರ್ತಿಗಳನ್ನೂ ತೆಗೆದುಕೊಂಡು ಬಂದು ಭೂಲೋಕದ ಆರು ಕ್ಷೇತ್ರಗಳಲ್ಲಿಟ್ಟನು. ಅದರಲ್ಲಿ ವೇದಾರಣ್ಯದಲ್ಲಿರುವ ನಲೇಶ್ವರಕ್ಷೇತ್ರವೊಂದು. ॥೩೨-೩೩-೩೪॥

ಹಾಗೆಯೇ ಕಹೋಳಕ್ಷೇತ್ರ, ತ್ರಿಕೂಟೇಶಕ್ಷೇತ್ರ, ತ್ರಿಯಾಸ್ಯಕ್ಷೇತ್ರ, (?) ತ್ಯಾಗೇಶಕ್ಷೇತ್ರ, ಹಾಟಕೇಶ್ವರಕ್ಷೇತ್ರಗಳೆಂಬ ಇತರ ಐದು ಕ್ಷೇತ್ರಗಳಲ್ಲಿ ಐದು ಶಿವಲಿಂಗಗಳನ್ನು ಪ್ರತಿಷ್ಠಾಪಿಸಿದನು. ಇಲ್ಲಿ ಮಾತ್ರ ಮುಚುಕುಂದನು ಅನೇಕ ದಿವ್ಯ ಪ್ರಾಕಾರಾದಿಗಳಿಂದ ಶಿವಾಲಯವನ್ನು ನಿರ್ಮಿಸಿ, ಮೃಗ ಮತ್ತು ಟಂಕಾಯುಧ ಇವುಗಳನ್ನು ಧರಿಸಿ ಸರ್ಪಾಭರಣಗಳಿಂದ ಅಲಂಕೃತನಾದ ತ್ಯಾಗರಾಜೇಶ್ವರಲಿಂಗವನ್ನು ಭಕ್ತಿಯಿಂದ ಈ ರೀತಿ ಪ್ರಾರ್ಥಿಸಿದನು. ॥೩೫-೩೬-೩೭॥

ತ್ಯಾಗರಾಜಮೂರ್ತಿಯೇ, ಪಾರ್ವತೀಪತಿಯೇ, ನನ್ನನ್ನು ರಕ್ಷಿಸು.

ಯಕ್ಷಾಧಿರಾಜಸಖ ಪಕ್ಷಿಸುರಾಜವಾಹ
ನೇತ್ರಾಬ್ಜಪೂಜ್ಯವಿನತಾಮರರಾಜ ಪಾಹಿ ॥೩೮॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ಶ್ರೀತ್ಯಾಗರಾಜಂ ವಿಧಿಹರಿಹರಿಣಾ ಪೂಜಿತಂ ನೀಲಕಂಠಂ
ಟಂಕಾಖ್ಯೇ ಸ್ಥಾಪ್ಯ ಕ್ಷೇತ್ರೇ ಸ ನರಪತಿಃ ಪರಮಯಾ ಭಕ್ತ್ಯಾ
ಮಹೇಶಾರ್ಚನಂ ।
ಕೃತ್ವಾ ಮುಕ್ತಿಮವಾಪ ಭಕ್ತಿನಿವಹೈಃ ಸಂಸೇವ್ಯ ಪಾದಾಂಬುಜಂ
ಧ್ಯಾಯಂಸ್ತತ್ಸ್ಥಲವೈಭವೇನ ಸ ತದಾ ಭೂಭೃತ್ಕುಮಾರೀಸಖಂ ॥೩೯॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ತ್ಯಾಗರಾಜವೈಭವೇ
ಅಷ್ಟತ್ರಿಂಶೋಽಧ್ಯಾಯಃ

---

ಮೂರುಕಣ್ಣುಗಳಿಂದಲೂ, ಚಂದ್ರಕಲೆಯಿಂದಲೂ ಪ್ರಕಾಶಿಸುತ್ತಿರುವ ಮಹಾದೇವನೇ, ನೀನು ಕುಬೇರನಿಗೆ ಗೆಳೆಯನಾಗಿಯೂ, ಪಕ್ಷಿವಾಹನನೆನಿಸಿದ ವಿಷ್ಣುವಿನ ನೇತ್ರಕಮಲದಿಂದ ಪೂಜಿತನಾಗಿಯೂ, ಇಂದ್ರನಿಂದ ನಮಸ್ಕೃತನಾಗಿಯೂ ಇರುವೆಯಲ್ಲವೆ? ಇಂತಹ ನೀನು ನನ್ನನ್ನು ಸದಾ ರಕ್ಷಿಸುತ್ತಿರು. ॥೩೮॥

ಹೀಗೆ ಮುಚುಕುಂದರಾಜನು ಟಂಕಕ್ಷೇತ್ರವೇ ಮೊದಲಾದ ಕ್ಷೇತ್ರಗಳಲ್ಲಿ ಬ್ರಹ್ಮಾದಿಗಳಿಂದ ಪೂಜಿತವಾದ ಶಿವಲಿಂಗವನ್ನು ಸ್ಥಾಪನೆಮಾಡಿ, ಭಕ್ತಿಯಿಂದ ಆ ಶಿವಲಿಂಗಗಳನ್ನು ಅರ್ಚಿಸಿ, ಆ ಕ್ಷೇತ್ರಮಹಿಮೆಯನ್ನು ತಿಳಿಯುತ್ತಾ ತನ್ಮೂಲಕ ಸ್ಥಿರಮುಕ್ತಿಯನ್ನು ಪಡೆದು, ಪರಶಿವನ ಸಾನ್ನಿಧ್ಯವನ್ನು ಪಡೆದನೆಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ತಿಳಿಸಿದನು. ॥೩೯॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ತ್ಯಾಗರಾಜವೈಭವವನ್ನು ತಿಳಿಸುವ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ತದೀಶಾನ್ಯಾಂ ರಾಮ'ಗಯಾಸ್ಥಾನಂ ತೀರ್ಥಂ ಗಯಾಭಿಧಂ ।
ತಸ್ಮಿನ್ ತೀರ್ಥೇ ಪುರಾ ರಾಮೋ ದದಾವಂಜಲಿಜಂ ಪಯಃ ॥೧॥

ಪಿತರಂ ಸ್ವಂ ಸಮುದ್ದಿಶ್ಯ ಪ್ಲಕ್ಷಮೂಲೇ ತು ಪಿಂಡದಃ ।
ತದಾಸ್ಯ ಪಿತರಸ್ತೃಪ್ತಾಃ ರಾಮಮೂಚುಸ್ತದಾ ಮುದಾ ॥೨॥

॥ ಪಿತರ ಊಚುಃ ॥

ಗಯಾಧಿಕೇ ತೀರ್ಥವರೇ ಅದದಾ? ಯತ್ತಿಲೋದಕಂ ।
ವಟಾಧಿಕೇ ಪ್ಲಕ್ಷಮೂಲೇಽಸ್ಮಾನುದ್ದಿಶ್ಯ ಪಿಂಡದಃ ॥೩॥

---

## ಮೂವತ್ತೊಂಬತ್ತನೆಯ ಅಧ್ಯಾಯ

ಈ ತ್ಯಾಗರಾಜಕ್ಷೇತ್ರದ ಈಶಾನ್ಯದಿಕ್ಕಿನಲ್ಲಿ ಗಯಾತೀರ್ಥವೆಂಬ ಕ್ಷೇತ್ರವೊಂದಿರುವುದು. ಅದನ್ನು ರಾಮಗಯೆಯೆನ್ನುವರು. ಏಕೆಂದರೆ ಹಿಂದೆ ಶ್ರೀರಾಮನು ಇಲ್ಲಿಗೆ ಬಂದಿದ್ದಾಗ ಈ ಕ್ಷೇತ್ರದಲ್ಲಿ ನಿಂತು ಅಲ್ಲಿದ್ದ ಒಂದು ಪ್ಲಕ್ಷ (ಆಲ) ವೃಕ್ಷದ ಅಧೋಭಾಗದಲ್ಲಿ ಪಿತೃತೃಪ್ತ್ಯರ್ಥವಾದ ತರ್ಪಣ, ಪಿಂಡಪ್ರದಾನ ಇವುಗಳನ್ನು ನಡೆಸಿದನು. ಅದರಿಂದ ತೃಪ್ತರಾದ ರಾಮನ ಪಿತೃಗಳು ಪ್ರತ್ಯಕ್ಷರಾಗಿ ರಾಮನೊಡನೆ ಹೀಗೆಂದರು. ॥೧-೨॥

" ಎಲೈ ರಾಮನೇ, ಗಯಾಕ್ಷೇತ್ರಕ್ಕಿಂತಲೂ ಅತಿಶ್ರೇಷ್ಠವೆನಿಸಿದ ಈ ಕ್ಷೇತ್ರದಲ್ಲಿ ನಮ್ಮನ್ನುದ್ದೇಶಿಸಿ, ಪಿಂಡದಾನಮಾಡಿದೆಯಲ್ಲವೆ? ಇಲ್ಲಿರುವ ಪ್ಲಕ್ಷಮೂಲವು

ಗಯಾಚ್ಛತಗುಣಂ ಚಾತ್ರ ಪಿಂಡದಾನಂ ಚ ತರ್ಪಣಂ ।
ಅತ್ರ ರಾಮಗಯಾಸ್ಥಾನೇ ಕುರ್ವತಾಂ ಪುತ್ರಿತಾ ಭವೇತ್ ॥೪॥

॥ ಪಿತರ ಊಚುಃ ॥

ಕಾಶೀವಲ್ಮೀಕಮುತ್ಕೃಷ್ಟಂ ಗಯಾ ಶೀರ್ಷಮಿದಂ ತದಾ ।
ಪ್ರಯಾಗಂ ಚ ತ್ರಿಭಂಗಾಖ್ಯಂ ತತ್ತೀರ್ಥಂ ತತ್ತ್ರಿವೇಣಿಕಾ ॥೫॥

ತದಾಪಿ ತದ್ವಚಶ್ಶ್ರುತ್ವಾ ತುಷ್ಟೋ ನ ತ್ವಾಥ ಶಂಕರಂ ।
ಸಂಪೂಜ್ಯ ತತ್ರ ದೇವೇಶಂ ರಾಮೋ ರಾಮಗಯೇಶ್ವರಂ ॥೬॥

ಶ್ರೀರಾಮ ಉವಾಚ ॥

ನಮೋ ದೇವಾಧಿದೇವಾಯ ಭಕ್ತಾಭೀಷ್ಟಪ್ರದಾಯಕ ।
ಪಾಹಿ ಮಾಂ ಕೃಪಯಾ ಶಂಭೋ ಮಾಮುದ್ಧರ ಮಹೇಶ್ವರ ॥೭॥

ತತ್ರ ರಾಮಾಯ ದೇವೇಶಃ ಪ್ರಸಾದಂ ಕೃತವಾಂಸ್ತದಾ ।
ತಪ್ಪಾಯಮ್ಯಾಂ ತ್ರಿಭಂಗಾಖ್ಯಂ ಪ್ರಯಾಗಸದೃಶಂ ಸ್ಥಲಂ ॥೮॥

---

ಗಯೆಯಲ್ಲಿರುವ ಆಲದ ಮರಕ್ಕಿಂತಲೂ ಅತಿಶ್ರೇಷ್ಠವಾದುದು. ಒಟ್ಟಿನಲ್ಲಿ ಈ ರಾಮಗಯಾಕ್ಷೇತ್ರವು ಪ್ರಸಿದ್ಧವಾದ ಗಯಾಕ್ಷೇತ್ರಕ್ಕಿಂತಲೂ ನೂರರಷ್ಟು ಮಹಿಮೆಯುಳ್ಳದ್ದು. ಇಲ್ಲಿಗೆ ಬಂದು ಪಿಂಡಪ್ರದಾನಮಾಡುವವರಿಗೆ ಪುತ್ರಸಂತಾನವು ಅಭಿವೃದ್ಧವಾಗುವುದು. ||೩-೪||

ವಲ್ಮೀಕಕ್ಷೇತ್ರವು ಮಹಿಮೆಯಲ್ಲಿ ಕಾಶಿಗಿಂತಲೂ ಉತ್ಕೃಷ್ಟವಾದುದು. ಈ ರಾಮಗಯೆಯೇ ಗದಾಧರನಿರುವ ಗಯೆ, ತ್ರಿಭಂಗಕ್ಷೇತ್ರವೇ ಪ್ರಯಾಗ, ಅಲ್ಲಿರುವ ತೀರ್ಥವೇ ತ್ರಿವೇಣೀಕ್ಷೇತ್ರ'' ಎಂದು ರಾಮನ ಪಿತೃದೇವತೆಗಳು ಹೇಳಿದ್ದನ್ನು ರಾಮನು ಕೇಳಿ ಸಂತೋಷಪಟ್ಟು, ರಾಮಗಯೇಶ್ವರನೆಂಬ ಹೆಸರಿನಿಂದ ಅಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠಿಸಿ, ಅದನ್ನು ಭಕ್ತಿಯಿಂದ ಪೂಜಿಸಿದನು. ||೫-೬||

ಮತ್ತೂ ಹೀಗೆ ಪ್ರಾರ್ಥಿಸಿದನು. "ದೇವದೇವನೆನಿಸಿದ ಮಹಾದೇವನೇ, ಭಕ್ತಜನರಿಗೆ ಸಕಲ ಇಷ್ಟಾರ್ಥಗಳನ್ನೂ ಕರುಣಿಸುವವನೇ, ಮಹೇಶ್ವರನೇ, ನನ್ನನ್ನು ದಯೆಯಿಂದ ಉದ್ಧರಿಸು.'' ಹೀಗೆಂದು ಪ್ರಾರ್ಥಿಸಲು ಪರಶಿವನು ರಾಮನಿಗೆ

ತತ್ರ ಗತ್ವಾ ನರಸ್ಸ್ನಾತ್ವಾ ವೇಣೀತೀರ್ಥಂ ಚ ಮಾಧವಂ ।
ವೈಶಾಖಮಾಸೇ ದೇವೇಶಮುಮಾಧವಪದಾರ್ಚಕಂ ॥೯॥

ವಿಷ್ಣುರಾರಾಧ್ಯ ಶ್ರೀವಾಂಛೀಂ ಪುರಾಧೀಶಪ್ರಸಾದತಃ ।
ತತ್ರ ತ್ರಿಮಂಗಕೇ ಸ್ಥಾನೇ ಶ್ರಿಯಾಃ ಪಾಣಿಮುಪಾಗ್ರಹೀತ್ ॥೧೦॥

ಸನ್ನಿಧೌ ಸ ಮಹೇಶಸ್ಯ ಶ್ರಿಯಾ ಭೂಮ್ಯಾ ಪರಿಗ್ರಹಂ ।
ತುಷ್ಟಾವ ದೇವದೇವೇಶಂ ಪೂಜ್ಯ ತತ್ಪಶ್ಚಿಮೇ ಸ್ಥಿತಂ ॥೧೧॥

ಕರವೀರಪುರೇಶಾನಂ ಹರಿಸ್ತತ್ರ ಸಮರ್ಚಯೇತ್ ॥೧೨॥

ಶಂಭೋ ಭರ್ಗ ವಿಭೋ ಪ್ರಸೀದ ಭಗವನ್ ತ್ವಾಂ ವೈ ಸಮುಚ್ಯಾರ್ದರಾ
ದ್ವಲ್ಮೀಕೇ ನಿವಸಾಮಿ ಚಾತ್ರ ವಿಹಿತೇ ಸ್ಥಾನೇ ಮದೀಯೇ ಶ್ರಿಯಾ ।
ತತ್ಕ್ಷೇತ್ರೇಶರ್ಷತತಾಪಿ ಲಿಂಗಂ ಸ್ವಮೀಶಾಃ ಮತ್ವಾದನೀಕ್ಷೇತ್ವತಃ (?)
ತ್ವದ್ದೇಹೋ ಭವಿತಾ ಮಹಾನ್ ಪಶುಪತೇ ತಸ್ಮಾದ್ವಹಾಮ್ಯತ್ರ ವೈ ॥೧೩॥

ಪ್ರಸನ್ನನಾಗಿ ಪ್ರಸಾದವಿತ್ತನು. ಈ ರಾಮಗಯೆಯ ವಾಯುವ್ಯಭಾಗದಲ್ಲಿ ತ್ರಿಭಂಗಾಖ್ಯವಾದ ಕ್ಷೇತ್ರವೊಂದಿರುವುದು. ಅದು ಪ್ರಯಾಗಕ್ಕೆ ಸಮನೆನಿಸಿರುವುದು. ॥೭-೮॥

ವೈಶಾಖಮಾಸದಲ್ಲಿ ಅಲ್ಲಿರುವ ತೀರ್ಥದಲ್ಲಿ ಮುಳುಗಿ, ವೇಣೀತೀರ್ಥವನ್ನೂ, ಪರಶಿವನ ಪಾದಾರ್ಚಕನಾದ ಮಾಧವನನ್ನೂ ಪೂಜಿಸಿದವರಿಗೆ ಅತಿಶಯವಾದ ಪುಣ್ಯವು ಲಭಿಸುವುದು. ಈ ಕ್ಷೇತ್ರದಲ್ಲಿಯೇ ವಿಷ್ಣುವು ಲಕ್ಷ್ಮಿಯನ್ನು ಬಯಸಿ, ಈ ಪರಶಿವನ ಅನುಗ್ರಹದಿಂದಲೇ ತ್ರಿಮಂಗಕವೆಂಬ ಆ ಕ್ಷೇತ್ರದಲ್ಲಿ ಲಕ್ಷ್ಮಿಯನ್ನು ವಿವಾಹಮಾಡಿಕೊಂಡನು. ॥೯-೧೦॥

ಹಾಗೆಯೇ ಅದೇ ಶಿವಲಿಂಗದ ಸನ್ನಿಧಿಯಲ್ಲಿಯೇ ಭೂದೇವಿಯನ್ನೂ ಮದುವೆಯಾಗಿ ವಿಷ್ಣುವು ಪತ್ನಿಯರೊಡಗೂಡಿ ತತ್ಪಶ್ಚಿಮಪ್ರದೇಶದಲ್ಲಿರುವ ಕರವೀರಪುರದಲ್ಲಿರುವ ಮಹಾದೇವನನ್ನು ಬಹಳವಾಗಿ ಈ ರೀತಿ ಸ್ತುತಿಸಿದನು. ॥೧೧-೧೨॥

"ಮಹಾದೇವನೇ, ನೀನು ಸರ್ವವ್ಯಾಪಕನು. ನಿನ್ನನ್ನು ನಾನು ಸದಾ ಪೂಜಿಸುತ್ತಾ ಈ ವಲ್ಮೀಕಕ್ಷೇತ್ರದಲ್ಲಿಯೇ ವಾಸಿಸಬಯಸುವೆನು. ನನ್ನ ಪತ್ನಿಯ

ಶ್ರೀವಲ್ಮೀಕಾತ್ತತಃ ಪ್ರಾಚ್ಯಾಂ ಬದರೀವನಸಂಜ್ಞಕಂ ।
ಸ್ಥಾನಂ ತತ್ಪಾವನಂ ಪುಣ್ಯಂ ವಸತಾಂ ಪುಣ್ಯದಂ ನೃಣಾಂ ॥೧೪॥

ತತ್ರಪಾವನತೀರ್ಥಂ ಚ ಶಿವಾಗ್ರೇ ಪಾಪನಾಶನಂ ।
ತತ್ರ ತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾಽಕ್ಷಯ್ಯಂ ಮಹೇಶ್ವರಂ ॥೧೫॥

ವನಮೂಲಸ್ಥಿತಾಂ ದೇವೀಂ ಭದ್ರಕಲ್ಯಾಣ(?)ಮರ್ಚಿತಾಂ ।
ಸಂಪೂಜ್ಯಾಕ್ಷಯಲಿಂಗಂ ಚ ಹ್ಯೇನಸಾನ್ಮುಚ್ಯತೇ ನರಃ ॥೧೬॥

ಪುರಾ ಸುಭದ್ರೋ ರಾಜರ್ಷಿಶ್ಚಕ್ರೇಽಕ್ಷಯ್ಯೇಶ್ವರಸ್ಯ ಹಿ ।
ಪ್ರಾಕಾರಂ ಗೋಪುರಂ ತತ್ರ ಮಂಡಪಾಶ್ಚ ತದಾಶ್ಮನಾ ॥೧೭॥

ಸಂಪೂಜ್ಯ ಪೂಜಾದಿ ಭಕ್ತ್ಯೈಸ್ತುಷ್ಟಾವಾಘವಿನಾಶಕಂ ॥೧೮॥

---

ರಿಂದ ಕೂಡಿ, ನಿನ್ನ ಕ್ಷೇತ್ರದಲ್ಲಿಯೇ ವಾಸಮಾಡುತ್ತಾ, ನಿನ್ನ ಶಿವಲಿಂಗವನ್ನೇ ಅರ್ಚಿಸುತ್ತಾ, ನಿನ್ನ ಅನುಗ್ರಹವನ್ನು ಪಡೆದವರಿಗೆ ನಿನ್ನ ಸಾರೂಪ್ಯವು ದೊರೆಯುವು ದೆಂಬುದನ್ನು ನಾನು ತಿಳಿದಿರುವೆ." ॥೧೩॥

ಶ್ರೀ ವಲ್ಮೀಕಕ್ಷೇತ್ರಕ್ಕೆ ಪೂರ್ವದಿಕ್ಕಿನಲ್ಲಿ ಬದರೀವನವೆಂಬ ಹೆಸರುಳ್ಳ ಕ್ಷೇತ್ರ ವಿರುವುದು. ಅದು ಬಹಳ ಪವಿತ್ರವಾದದ್ದು ಮತ್ತು ಮನುಷ್ಯರಿಗೆ ಬಹಳವಾಗಿ ಸುಕೃತಪ್ರಾಪಕವಾದದ್ದು. ಅಲ್ಲಿಯೇ ಶಿವಲಿಂಗದ ಮುಂದೆ ಪಾಪನಾಶಕವಾದ ಪಾವನತೀರ್ಥವೊಂದಿರುವುದು. ಆ ತೀರ್ಥದಲ್ಲಿ ಸ್ನಾನಮಾಡಿ ಮಾನವನು ಅಲ್ಲಿರುವ ಅಕ್ಷಯಲಿಂಗವನ್ನು ದರ್ಶನಮಾಡುವುದರಿಂದ ಅತಿಶಯವಾದ ಸುಕೃತವು ಪ್ರಾಪ್ತ ವಾಗುವುದು. ॥೧೪-೧೫॥

ಹಾಗೆಯೇ ವನಮೂಲದಲ್ಲಿ ಮಂಗಳರೂಪದಿಂದಿರುವ ದೇವಿಯನ್ನೂ ದರ್ಶನಮಾಡಿದವರು ಸಕಲ ಪಾಪಮುಕ್ತರಾಗುವರು. ಹಿಂದೆ ಸುಭದ್ರನೆಂಬ ರಾಜರ್ಷಿಯು ಈ ಅಕ್ಷಯಲಿಂಗಕ್ಕೆ ದೊಡ್ಡ ಗೋಪುರವನ್ನೂ, ಪ್ರಾಕಾರವನ್ನೂ ನಿರ್ಮಿಸಿ, ವಿಶಾಲವಾದ ಒಂದು ಕಲ್ಲುಮಂಟಪವನ್ನು ಕಟ್ಟಿಸಿರುವನು. ಮತ್ತು ಸಕಲ ಪೂಜಾಸಾಮಗ್ರಿಗಳಿಂದಲೂ ಪರಶಿವನನ್ನು ಅರ್ಚಿಸಿ, ತನ್ನ ಪಾಪರಾಶಿ ಯನ್ನೆಲ್ಲಾ ಕಳೆದುಕೊಂಡಿರುವನು. ॥೧೬-೧೭-೧೮॥

॥ ಸುಭದ್ರ ಉವಾಚ ॥

ತ್ರ್ಯಕ್ಷಾಕ್ಷಯ್ಯ ಫಲಪ್ರದಾಕ್ಷಯವಿಭೋ ಪಕ್ಷೀಶವಾಹಪ್ರಿಯ
ಲಕ್ಷ್ಮೀಶಾಕ್ಷಿ ಸರೋರುಹಾರ್ಚಿತಪದ ಸ್ವಾಮಿನ್ ಮೃಡಾನೀಪತೇ ।
ತ್ವದ್ಭಕ್ತೇಷ್ವಖಿಲಾದಿ ದಾನನಿಪುಣಸ್ತ್ವಂ ಶರ್ವ ಸರ್ವಾಂತರ
ಸ್ತ್ವಂ ತ್ರೈಲೋಕ್ಯಗುರುಃ ಸಮಸ್ತಸುಖದಃ ಕಸ್ತೇ ಸಮಸ್ತೇ ನಮಃ ॥೧೯॥

॥ ನಾಗಾ ಊಚುಃ ॥

ಸುಭದ್ರಾಯ ಹರೋಮುಕ್ತಿಂ ಸ್ಪ್ರಾದಾದಕ್ಷಯ್ಯನಾಯಕಃ ।
ತದೀಶಾನ್ಯಾಂ ತು ನಾಗೇಶೈರ್ನಾಗೇಶಃ ಪೂಜಿತಸ್ತದಾ ॥೨೦॥

ನಾಗಾ ನಾಗಾಜಿನಾಹಾರವಾಸ ಶಂಭೋ
ಪ್ರಣಾಮಾತ್ರೈಕವಿಮೃಗ್ಯ ಪಾದಪದ್ಮ ।
ದ್ವಿಜರಾಜಕಲಾಧರಪ್ರಪನ್ನ
ತವ ನಾಗಾನ್ ಪ್ರಣತೋಽಸ್ಮಿ ಶಂಕರಂ ತ್ವಾಂ ॥೨೧॥

---

ಆಗ ಆತನು ಈರೀತಿ ಪ್ರಾರ್ಥಿಸಿದನು. ಪರಶಿವನೇ, ನೀನು ಮೂರು ಕಣ್ಣುಗಳುಳ್ಳವನು. ಮತ್ತು ಅಕ್ಷಯವಾದ ಫಲವನ್ನು ಕೊಡುವವನು. ಸಕಲ ಸ್ಥಳಗಳಲ್ಲಿಯೂ ನೆಲಸಿರುವವನು. ಪಕ್ಷಿವಾಹನನೂ, ಲಕ್ಷ್ಮೀಪತಿಯೂ ಆದ ಮಹಾವಿಷ್ಣುವಿನ ನೇತ್ರಕಮಲದಿಂದ ಅರ್ಚಿತವಾದ ಪಾದಪದ್ಮವುಳ್ಳವನು. ಗೌರೀಪತಿಯಾದ ಮಹಾದೇವನೇ, ನೀನು ನಿನ್ನ ಭಕ್ತರಲ್ಲನೇಕರಿಗೆ ಅನೇಕ ಭೋಗ್ಯವಸ್ತುಗಳನ್ನಿತ್ತು ದಾನನಿಪುಣನೆನಿಸಿಕೊಂಡಿರುವೆ. ನೀನು ಸಕಲರಿಗೂ ಸುಖಕರನು. ಸರ್ವಾಂತರ್ಯಾಮಿಯು. ಮೂರುಲೋಕಗಳಿಗೂ ನೀನು ಗುರುವೆನಿಸಿಕೊಂಡಿರುವೆ. ಸಕಲ ಸೌಖ್ಯವನ್ನೂ ಅನುಗ್ರಹಿಸುವ ನಿನಗೆ ಸದಾ ನಮಸ್ಕರಿಸುವೆನು. ॥೧೯॥

ಹೀಗೆ ಪ್ರಾರ್ಥಿಸಿದ ಸುಭದ್ರನಿಗೆ ಶಂಕರನು ಮುಕ್ತಿಯನ್ನಿತ್ತು ರಕ್ಷಿಸಿದನು. ಆ ಕ್ಷೇತ್ರದ ಈಶಾನ್ಯಭಾಗದಲ್ಲಿ ನಾಗದೇವತೆಗಳಿಂದ ಪೂಜಿತವಾದ ನಾಗೇಶಕ್ಷೇತ್ರವಿರುವುದು. “ ಗಜಚರ್ಮಾಂಬರಧಾರಿಯೇ, ನೀನು ಭಕ್ತರಿಗೆ ಮಾತ್ರ ದೊರೆಯುವವನು, ಚಂದ್ರನಿಂದ ಅಲಂಕೃತವಾದ ಶಿರೋಭಾಗವುಳ್ಳವನು. ಲೋಕಸುಖಕರನು, ಪರಮೇಶ್ವರನೇ, ಇಂತಹ ನಿನಗೆ ನಮಸ್ಕಾರ” ಹೀಗೆಂದು ನಾಗದೇವತೆಗಳು ಅಲ್ಲಿ ಶಿವನನ್ನು ಧ್ಯಾನಿಸಿರುವರು. ॥೨೦-೨೧॥

ತತ್ಪ್ರಾಚ್ಯಾಂ ಚಿಲ್ಕಲೀಶಾಸಃ ವಾಸವೇನ ಸಮರ್ಚಿತಃ ।
ತೀರ್ಥಂ ವಾಸವಸಂಜ್ಞಂ ತು ಶಂಭೋರಗ್ರೇ ಸುಪಾವನಂ ॥೨೨॥

ವಾಸವೋತ್ರ ಸಮಭ್ಯರ್ಚ್ಯ ಸ್ವಯಮೇವ ಮಹೇಶ್ವರಂ ।
ದೇವದೇವ ಪ್ರಸನ್ನೋ ಮಾಂ ಭವ ಶ್ರೀಪಾರ್ವತೀಪತೇ ॥೨೩॥

ತಸ್ಮೈ ಪ್ರಸನ್ನೋ ದೇವೇಶೋ ವಾಸವಾಯ ಪುರಾ ಮುನೇ ।
ತತಃ ಪ್ರಾಚ್ಯಾಂ ಶಿವಸ್ಥಾನಂ ಕಾಯಾರೋಹಣಸಂಜ್ಞಿತಂ ॥೨೪॥

ಪ್ರಾಕ್ಸಾಗರತಟೇ ಪುಣ್ಯೇ ದರ್ಶನಾತ್ಪಾಪನಾಶನಂ ।
ಕಾಯಾವರೋಹಣಂ ತೀರ್ಥಂ ಮನೋ ದೇಹಸ್ಯ ಪಾಪಹಂ ॥೨೫॥

ತತ್ರ ಸ್ನಾತ್ವಾ ನರೋ ದೃಷ್ಟ್ವಾ ದೇವಂ ಕಾಯಾವರೋಹಣಂ ।
ಸಂಪೂಜ್ಯ ಸ್ತುವತಾಂ ತತ್ರ ಮುಕ್ತಿರೇಕೇನ ಜನ್ಮನಾ ॥೨೬॥

ಹುಂಡೋ ನಾಮ್ನಾ ಗಣಪತಿರ್ದೇವಂ ಕಾಯಾವರೋಹಣಂ ।
ಸಂಪೂಜ್ಯ ತತ್ರ ತುಷ್ಟಾವ ಭಕ್ತಿಯುಕ್ತೇನ ಚೇತಸಾ ॥೨೭॥

---

ಅದರ ಪೂರ್ವಭಾಗದಲ್ಲಿ ಚಿಲ್ಕಲೀಶ್ವರವೆಂಬ ಶಿವಲಿಂಗವೂ, ವಾಸವತೀರ್ಥವೆಂಬ ಒಂದು ದೊಡ್ಡಕೊಳವೂ ಇರುವುದು. ಅದನ್ನು ಸಾಕ್ಷಾದಿಂದ್ರನೇ ಪ್ರತಿಷ್ಠಿಸಿ ಪೂಜಿಸಿರುವನು. ಆಗ ನಾನಾರೀತಿಯಲ್ಲಿ ಮಹೇಶ್ವರನನ್ನು ಸ್ತುತಿಸಿರುವನು. ||೨೨-೨೩||

ಆಗ ಮಹೇಶ್ವರನು ತೃಪ್ತನಾಗಿ ಇಂದ್ರನಿಗೆ ಸಕಲ ಇಷ್ಟಾರ್ಥಗಳನ್ನೂ ಅನುಗ್ರಹಿಸಿರುವನು. ಅದಕ್ಕೆ ಪೂರ್ವಭಾಗದಲ್ಲಿ ಕಾಯಾರೋಹಣ ಸಂಜ್ಞಕವಾದ ಶಿವಸ್ಥಾನವೊಂದಿರುವುದು. ಅದು ಪೂರ್ವಸಮುದ್ರದ ದಡದಲ್ಲಿದ್ದು ಪುಣ್ಯಕ್ಷೇತ್ರವೆನಿಸಿಕೊಂಡಿದೆ. ಅದರ ದರ್ಶನದಿಂದಲೇ ಸಕಲ ಪಾಪವೂ ನಾಶವಾಗುವುದು. ಆ ಕಾಯಾರೋಹಣತೀರ್ಥವೆಂಬುದು ಮನಸ್ಸಿನ ಮತ್ತು ದೇಹದ ಪರಿಶುದ್ಧತೆಯನ್ನು ಒದಗಿಸುವುದು. ||೨೪-೨೫||

ಅಲ್ಲಿ ಸ್ನಾನಮಾಡಿ, ಕಾಯಾವರೋಹಣನಾಮಕನಾದ ಶಿವಲಿಂಗವನ್ನು ದರ್ಶನಮಾಡುವುದರಿಂದ ಒಂದೇ ಜನ್ಮನಲ್ಲಿ ಮುಕ್ತಿಪ್ರಾಪ್ತಿಯಾಗುವುದು. ಅದನ್ನು

॥ ತುಹುಂಡ ಉವಾಚ ॥

ಕಾಯಾವರೋಹಣ ವಿಭೋ ಧೃತಶೂಲಪಾಣೇ
ಪ್ರೋದ್ದಂಡದಂಡಧರ ದರ್ಪವಿನಾಶಕಾರಿನ್ ।
ಮಾಲಾವಲೀಕಲಿತಪನ್ನಗ ಏಣಧಾರಿನ್
ಪಾಹೀಶ ಮಾಮವ ನಿಶೇಂದ್ರಕಲಾವಧಾರಿನ್ ॥೨೮॥

ತುಹುಂಡಾಯ ಪ್ರಸನ್ನೇಶೋ ಗಾಣಾಪತ್ಯಂ ದದೌ ಹರಃ ।
ತದ್ದಕ್ಷಿಣೇ ಪುಣ್ಯವನಂ ಪುಣ್ಯೇಶಂ ಪುಣ್ಯತೀರ್ಥಕಂ ॥೨೯॥

ತತ್ರ ಪುಣ್ಯವನಾಧೀಶಂ ಮುನಯಃ ಪೂಜ್ಯ ತುಷ್ಟುವುಃ ॥೩೦॥

॥ ಮುನಯ ಊಚುಃ ॥

ಕಲಧೌತನಗಾಗ್ರವಾಸ ಶಂಭೋ
ಧೃತಹಾರಮಹೋರಗೇಂದ್ರ ಪಾಹಿ ।

ತುಹುಂಡನಾಮಕನಾದ ಗಣಪತಿಯು ಸ್ವಯಂ ಭಕ್ತಿಯಿಂದ ಪೂಜಿಸಿ ತೃಪ್ತಿಪಡಿಸಿರುವನು. ॥೨೬-೨೭॥

ಎಲೈ ಕಾಯಾವರೋಹಸ್ವಾಮಿಯೇ. ತ್ರಿಶೂಲಧಾರಿಯೇ, ನೀನು ಯಮದಂಡವನ್ನು ಧರಿಸಿ ಬಂದ ಅಂತಕನ ದರ್ಪವನ್ನು ನಾಶಗೊಳಿಸಿರುವೆಯಲ್ಲವೆ! ಸರ್ಪಮಾಲೆಯಿಂದಲೂ, ಮೃಗಧಾರಣೆಯಿಂದಲೂ, ಚಂದ್ರಕಲೆಯನ್ನು ಪಡೆದಿರುವುದರಿಂದಲೂ ನೀನು ಮಹಾದೇವನೆನಿಸಿರುವೆ. ಇಂತಹ ನೀನು ನಮ್ಮನ್ನು ಸದಾ ರಕ್ಷಿಸು. ಎಂದು ಪ್ರಾರ್ಥಿಸಿದನು. ॥೨೮॥

ಆಗ ಮಹೇಶ್ವರನು ಆ ತುಹುಂಡನಿಗೆ ಪ್ರಸನ್ನನಾಗಿ ಗಾಣಾಪತ್ಯಪದವಿಯನ್ನಿತ್ತನು. ಅದರ ದಕ್ಷಿಣಭಾಗದಲ್ಲಿ ಪುಣ್ಯವನವೆಂಬ ಕ್ಷೇತ್ರದಲ್ಲಿ ಪುಣ್ಯತೀರ್ಥವೊಂದಿರುವುದು. ಅಲ್ಲಿ ಸಕಲ ಮುನಿಗಳೂ ಪರಶಿವನನ್ನು ಬಹಳವಾಗಿ ಸ್ತುತಿಸಿರುವರು. ॥೨೯-೩೦॥

ಅತ್ಯಂತ ಶುಭ್ರವಾಗಿರುವ ಕೈಲಾಸಪರ್ವತದ ಅಗ್ರಭಾಗದಲ್ಲಿ ವಾಸಮಾಡುವ ಶಂಕರನೇ, ಸರ್ಪಹಾರಗಳಿಂದ ಅಲಂಕೃತವಾಗಿರುವ ಮಹಾದೇವನೇ, ಶರಣಾಗತರಾಗಿ ಬಂದಿರುವ ನಮ್ಮನ್ನು ಮರೆಯದೆ ರಕ್ಷಿಸು. ಸದಾ ನಮ್ಮ ಬುದ್ಧಿಯು ನಿನ್ನ

ಅವ ನಃ ಶರಣಪ್ರಪನ್ನಭಾವಾತ್
ವಿಭವೇಸ್ಯೈವ ಭವೇನ್ಮತಿಃ ಸದಾ ನಃ ॥೩೧॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಏಕೋನಚತ್ವಾರಿಂಶೋಽಧ್ಯಾಯಃ

---

ವೈಭವವನ್ನು ಸ್ಮರಿಸುವುದರಲ್ಲಿಯೇ ಸಮರ್ಥವಾಗಿರಲಿ ಎಂದು ಸಕಲ ಮಹರ್ಷಿಗಳೂ ಮಹಾದೇವನನ್ನು ಸ್ತುತಿಸಿರುವರು. ಎಂದು ಕುಮಾರಸ್ವಾಮಿಯು ಜೈಗೀಷವ್ಯ ಮಹರ್ಷಿಗೆ ತಿಳಿಯಪಡಿಸಿದನು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶಿವಸ್ಥಾನವೈಭವವನ್ನು ವಿವರಿಸುವ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಚತ್ವಾರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತತ್ಪಶ್ಚಾತ್ಸ್ಥಾನಮಸ್ತೀಹ ಹಿಡಿಂಬವನಸಂಜ್ಞಿತಂ ।
ಹಿಡಿಂಬೇನಾರ್ಚಿತೋ ದೇವಃ ಬಲಂ ಪ್ರಾದಾಚ್ಚ ತಸ್ಯ ಹಿ ॥೧॥

ಬಲಪ್ರಮಥನ ಪ್ರಭೋ ಬಲಬಲಾರಿದೇವಾರ್ಚಿತ
ಪ್ರಸೀದ ದಯಯಾಧುನಾ ಮಮ ಸದೈವ ಬಾಹೋರ್ವಿಭೋ ।
ಗಿರೀಶ ತವ ಪೂಜನೇ ತವ ಸುಲಿಂಗಸಂದರ್ಶನೇ
ಪ್ರದೇಹಿ ಮತಿಮುತ್ತಮಾಂ ಪುರಹರಾವ ಶಂಭೋ ನಮಃ ॥೨॥

---

## ನಲವತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಶಿವಸ್ಥಾನವೈಭವವನ್ನು ಜೈಗೀಷವ್ಯಾದಿಗಳಿಗೆ ವಿವರಿಸುತ್ತಾ ಹೀಗೆಂದನು.—ತುಹುಂಡಕ್ಷೇತ್ರದ ಪಶ್ಚಿಮ ಭಾಗದಲ್ಲಿ ಹಿಡಿಂಬವನವೆಂಬ ಪ್ರದೇಶವೊಂದಿರುವುದು. ಅಲ್ಲಿ ಹಿಡಿಂಬಾಸುರನು ಈಶ್ವರನನ್ನು ಪೂಜಿಸಿ ಸರ್ವಶಕ್ತಿಯನ್ನೂ ಪಡೆದಿರುವನು. ಮತ್ತು ಅವನು ಈ ರೀತಿ ಪರಶಿವನನ್ನು ಸ್ತುತಿಸಿರುವನು. ॥೧॥

ಬಲಾಸುರನನ್ನು ನಾಶಮಾಡಿದ ದೇವೇಂದ್ರನಿಗೆ ಯಜಮಾನನಾದವನೇ, ಬಲ ಮತ್ತು ಬಲಾರಿಯಾದ ದೇವೇಂದ್ರನೇ ಮೊದಲಾದವರಿಂದ ಪೂಜಿಸಲ್ಪಟ್ಟವನೇ, ನನಗೆ ಯಾವಾಗಲೂ ನಿನ್ನ ಪೂಜೆಯಲ್ಲಿಯೂ, ಪೂಜಿತವಾದ ಶಿವಲಿಂಗದರ್ಶನದಲ್ಲಿಯೂ ಸದ್ಬುದ್ಧಿಯನ್ನು ಕೊಟ್ಟು ಸರ್ವದಾ ರಕ್ಷಿಸು. ನಿನಗೆ ನಮಸ್ಕರಿಸುವೆನು. ಎಂದು ಹಿಡಿಂಬನು ಸರ್ವೇಶ್ವರನನ್ನು ಪ್ರಾರ್ಥಿಸಿರುವನು. ॥೨॥

ತತ್ಪಶ್ಚಿಮೇ ಕಾಂಚನಾಖ್ಯಸ್ಥಾನಂ ಪುಣ್ಯಂ ನೃಮುಕ್ತಿದಂ ।
ಕಾಂಚನಂ ತೀರ್ಥಮಸ್ತ್ಯೇಕಂ ಕಾಂಚನೇಶೋದ್ಧೃತಃ ಪುರಾ ॥೩॥

ತತ್ರ ವಿಪ್ರಸ್ತ್ರಿಧಾವಾಹಃ ಸಂಪೂಜ್ಯೇಶಮಥಾಸ್ತುವತ್ ॥೪॥

॥ ತ್ರಿಧಾವಾಹೋವಾಚ ॥

ಹೇ ಶಂಭೋ ತ್ರಿಪುರಘ್ನ ಕಾಂಚನಗಿರೇಃ ಸದ್ವಂದನೇ ಪಾಹಿ ಮಾಂ ।
ಉಗ್ರೇಶಾನಕ ಪಾಹಿ ನಸ್ತ್ರಿನಯನಾಪಾರಾಯ ಪಾರಾಯ ತೇ
ವ್ಯೋಮಾಯ ಕ್ಷಿತಿದಿಗ್ವಸಾಯ ಮಹಸೇ ಭೂಯೋಽಥ ಸೀಮ್ನೇ ನಮಃ
ಸಾಮಸ್ತೋಮಗತಿಪ್ರಿಯಾಯ ಭವತೇ ಕುಧ್ರೇಡ್ಜನೀಜಾನಯೇ ॥೫॥

ತ್ರಿಪುಂಡರೀಕಂ ತತ್ಪಶ್ಚಾತ್ಸ್ಥಾನಂ ಭಕ್ತಭಯಾಪಹಂ ।
ಪುಂಡರೀಕೇಶ್ವರಸ್ತತ್ರ ಪುಂಡರೀಕಂ ಸುತೀರ್ಥಕಂ ॥೬॥

ತತ್ರ ದೇವಗಜೋ ನಾಮ್ನಾ ಪುಂಡರೀಕೋಽರ್ಚಯನ್ ಸ್ತುವನ್ ॥೭॥

---

ಆ ಹಿಡಿಂಬಕ್ಷೇತ್ರದ ಪಶ್ಚಿಮಭಾಗದಲ್ಲಿ ಕಾಂಚನೇಶವೆಂಬ ಶಿವಲಿಂಗವೂ, ಕಾಂಚನತೀರ್ಥವೆಂಬ ತೀರ್ಥವಿಶೇಷವೂ ಇರುವುದು. ಈ ಶಿವಲಿಂಗವನ್ನು ತ್ರಿಧಾವಾಹನೆಂಬ ಬ್ರಾಹ್ಮಣನು ಈ ರೀತಿ ಸ್ತುತಿಸಿರುವನು. ||೩-೪||

ತ್ರಿಪುರಗಳನ್ನು ನಾಶಮಾಡಿದಂತಹ ಪರಶಿವನೇ, ಕಾಂಚನಕ್ಷೇತ್ರವೆಂಬ ಇಲ್ಲಿ ನೀನು ಸ್ಥಿರವಾಗಿ ನೆಲಸಿ ನಮ್ಮನ್ನು ರಕ್ಷಿಸುವವನಾಗು. ಉಗ್ರೇಶ್ವರನೇ, ತ್ರಿನಯನನೇ, ವ್ಯೋಮಕೇಶನೇ, ದಿಗಂಬರನೇ, ನಿನಗೆ ನಮಸ್ಕಾರ. ನೀನು ಕೇವಲ ತೇಜೋಮೂರ್ತಿಯು. ಸಾಮವೇದಸ್ವರೂಪನು, ಭೂಧರರಾಜಪುತ್ರಿಗೆ ಪತಿಯೆನಿಸಿದವನು, ಇಂತಹ ನಿನಗೆ ಶಿರಸಾ ವಂದಿಸುವೆನು. ||೫-೬||

ಅಲ್ಲಿಂದ ಮುಂದೆ ಹೊರಟರೆ ಪುಂಡರೀಕೇಶ್ವರವೆಂಬ ದಿವ್ಯಕ್ಷೇತ್ರವೂ ತ್ರಿಪುಂಡರೀಕತೀರ್ಥವೂ ವಿರಾಜಿಸುತ್ತಿರುವುದು. ಅಲ್ಲಿ ದೇವಗಜವೆನಿಸಿದ ಪುಂಡರೀಕನು ಶಂಕರನನ್ನು ಈರೀತಿ ಸ್ತುತಿಸಿರುವನು. ||೭||

॥ ಪುಂಡರೀಕ ಉವಾಚ ॥

ಹೇ ಪುಂಡರೀಕಾಕ್ಷಸಮರ್ಚಿತಾಂಘ್ರೇ
ಕರ್ಪೂರಪುಂಜಾಮಲದೇಹ ಶಂಭೋ ।
ತ್ರಿಪುಂಡರೀಕೇ ಮುನಿಭಿಸ್ಸಮರ್ಚಿತ
ಪ್ರಸೀದ ವಿಶ್ವೇಶ್ವರ ಮಾಮಮಾದ್ಯ ॥೮॥

ತದ್ದಕ್ಷಿಣೇ ಸ್ಥಾನವರಂ ತ್ರಿಪಾಂಡರಸಮಾಹ್ವಯಂ ।
ತ್ರಿಪಾವನಂ ತತ್ರ ತೀರ್ಥಂ ಲಿಂಗಂ ತತ್ರ ತ್ರಿಪಾಂಡರಂ ॥೯॥

ತ್ರಿಪಾವನೇಶಂ ಸ್ವತೀರ್ಥೇ ಸ್ನಾತ್ವಾ ದೃಷ್ಟ್ವೇಶ್ವರಂ ಮುನಿಃ ।
ಜಾಜಲಿಃ ಪೂಜಯಚ್ಛಂಭುಂ ಪ್ರಾಂಜಲಿಃ ಸ್ತೌತಿ ಶಂಕರಂ ॥೧೦॥

॥ ಜಾಜಲಿರುವಾಚ ॥

ಶಂಭೋ (ತ್ರಿ ವಾ) ದ್ಯ ವಾ ಪ್ರವರ ಪಾಹಿ ಮಹೇಶ ಶಶ್ವತ್
ವಿಶ್ವಾಧಿಕೇಶ ತವ ತಾಂಡವದತ್ತದೃಷ್ಟಿಃ ।
ನಾನ್ಯಂ ಸ್ಮರಾಮಿ ಜಗದಂಡಕಥಾಮಕಾಂಡೇ
ದೇವಾದ್ಯ ದಂಡಕಹರಾವ್ಯಯ ಪಾಹಿ ದೇವ ॥೧೧॥

---

ಸ್ವಾಮಿನ್, ನೀನು ಪುಂಡರೀಕದಂತೆ ಕಣ್ಣುಗಳುಳ್ಳ ಮಹಾವಿಷ್ಣುವಿನಿಂದ ಪೂಜಿತವಾದ ಪಾದಪದ್ಮವುಳ್ಳವನು. ಕರ್ಪೂರರಾಶಿಯಂತೆ ಶುಭ್ರವಾದ ದೇಹವುಳ್ಳವನು. ಸಕಲ ಮುನಿಗಳೂ ನಿನ್ನನ್ನು ಬಹುವಾಗಿ ಪೂಜಿಸುತ್ತಿರುವರು. ಮಹೇಶ್ವರನೇ, ನನ್ನನ್ನು ಸದಾ ರಕ್ಷಿಸು.” ॥೮॥

ಈ ಪುಂಡರೀಕಕ್ಷೇತ್ರದ ದಕ್ಷಿಣಭಾಗದಲ್ಲಿ ತ್ರಿಪಾಂಡರಕ್ಷೇತ್ರವಿರುವುದು. ಅಲ್ಲಿಯೇ ತ್ರಿಪಾವನವೆಂಬ ಹೆಸರಿನ ತೀರ್ಥವೊಂದಿರುವುದು. ಅಲ್ಲಿ ಸ್ನಾನಮಾಡಿ, ತ್ರಿಪಾವನೇಶ್ವರಲಿಂಗವನ್ನು ದರ್ಶನಮಾಡಿ ಜಾಜಲಿಯೆಂಬ ಮುನಿಯು ಶಂಕರನನ್ನು ಈರೀತಿ ಅಂಜಲಿಬದ್ಧನಾಗಿ ಸ್ತುತಿಸಿರುವನು. ।೯-೧೦॥

“ ಪರ ಶಂಭುವೇ, ಮಹೇಶ್ವರನೇ, ವಿಶ್ವಾಧಿಕನೇ, ನಿನ್ನ ಕೃಪಾಪೂರಿತವಾದ ಚಂಚಲಾಪಾಂಗವು ನನ್ನ ಮೇಲೆ ಬೀಳಲಿ. ತಾಂಡವೇಶನೇ, ಬ್ರಹ್ಮಾಂಡದಲ್ಲಿ ನಾನು

ತತ್ಪ್ರಾಚ್ಯಾಂ ಸ್ಥಾನಮುಸ್ತ್ಯೇಕಂ ದೃಷ್ಟಂ ಜ್ಞಾನಪ್ರದಾಯಕಂ ।
ಸರೋ ದೇವಪ್ರಿಯಂ ನಾಮ ಪಾವನಂ ಪಾಪನಾಶನಂ ॥೧೨॥

ಚಂದ್ರಭಾಗಾಸರಿತ್ತತ್ರ ದಕ್ಷವಾತಪುರೀಶ್ವರಃ ।
ದೇವಸ್ತತ್ರಾರ್ಚಿತೋ ದೇವೈರ್ದಕ್ಷಯಕ್ಷಾನ್ವಿತೈಃ ಪುರಾ ॥೧೩॥

ವಿಶ್ವೇದೇವಾಶ್ವಿನಸ್ಸೂರ್ಯಾವಸವೋಽಥಾರ್ಚಯನ್ (?) ಶಿವಂ ।
ದಕ್ಷವಾತಪುರೀಶಾನಂ ದೇವದೇವಂ ಸಮಾಹ್ವಯನ್ ॥೧೪॥

ದಕ್ಷಪಕ್ಷಶ್ಚ ಯಾಗೋ ವೈ ತಸ್ಮಿನ್ ಸ್ಥಾನೇ ಕ್ಷಮಾಪಯತ್ ॥೧೫॥

ನಮಸ್ತೇ ಮಹಾದೇವ ದಕ್ಷಾಧ್ವರಾತ್ಮನ್
ಪ್ರಸೀದೇಶ ವಿಶ್ವೇಶ ಶ್ರೀ ವ್ಯೋಮಕೇಶ ।
ಜಗತ್ಕಾರಣಾಶಾಸ್ಯ ದೇವೇಶ ಪಾಹಿ
ಪ್ರಸೀದೇತಿ ಚಾಗಃ ಕ್ಷಮಸ್ವೇತಿ ತೇ ಪ್ರಾರ್ಥಯಂತಿ ॥೧೬॥

---

ಮತ್ತಾವವಸ್ತುವನ್ನಾಗಲಿ, ಇತರ ಯಾರ ಚರಿತೆಯನ್ನಾಗಲಿ ಲಕ್ಷಿಸುವುದಿಲ್ಲ. ಮಹಾದೇವನೇ, ನಾಶರಹಿತನೇ, ನನ್ನನ್ನು ಸರ್ವದಾ ರಕ್ಷಿಸುತ್ತಿರು."

ಅದರ ಪಶ್ಚಿಮ ಭಾಗದಲ್ಲಿ ಸುಜ್ಞಾನದಾಯಕವಾದ ದೇವಪ್ರಿಯವೆಂಬ ಸರಸ್ಸೊಂದಿರುವುದು. ಅದು ಬಹು ಪವಿತ್ರವೂ ಪಾಪನಾಶಕವೂ ಎನಿಸಿದೆ. ಅಲ್ಲಿಯೇ ಚಂದ್ರಭಾಗಾನದಿಯೂ, ದಕ್ಷಪಾತಪುರೀಶ್ವರವೆಂಬ ಶಿವಲಿಂಗವೂ ಇರುವುದು. ಅಲ್ಲಿ ದಕ್ಷ, ಯಕ್ಷ ಮೊದಲಾದ ದೇವತೆಗಳು ಪರಶಿವನನ್ನು ಬಹುವಾಗಿ ಪೂಜಿಸಿರುವರು. ||೧೨-೧೩||

ಈ ದಕ್ಷವಾತಪುರೀಶ್ವರಲಿಂಗವನ್ನು, ವಿಶ್ವೇದೇವತೆಗಳೂ, ಅಶ್ವಿನೀದೇವತೆಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ, ಬಹುವಾಗಿ ಪೂಜಿಸಿ ಸ್ತುತಿಸಿರುವರು. ಇಲ್ಲಿಯೇ ಪರಶಿವನು ದಕ್ಷಬ್ರಹ್ಮಾದಿಗಳು ಯಾಗದಲ್ಲಿ ನಡೆಸಿದ ಶಿವಾಪರಾಧವನ್ನು ಕ್ಷಮಿಸಿದುದು. ||೧೪-೧೫||

ಆಗ ದೇವತೆಗಳು ಈರೀತಿ ಪ್ರಾರ್ಥಿಸಿದರು. ಮಹಾದೇವನೇ, ದಕ್ಷಯಜ್ಞಸ್ವರೂಪನೇ, ನಮಗೆ ಪ್ರಸನ್ನನಾಗು. ಲೋಕಕ್ಕೆ ಒಡೆಯನೂ, ವ್ಯೋಮಕೇಶನೂ, ಜಗತ್ಕಾರಣನೂ, ಭಕ್ತರಕ್ಷಕನೂ ಆದ ಪರಶಿವನೇ, ನಮ್ಮ ಸರ್ವಾಪರಾಧವನ್ನೂ ಮನ್ನಿಸಿ ನಮ್ಮನ್ನು ಸಲಹು. ||೧೬||

ದೇವೋಽಪಿ ತತ್ರ ದೇವಾನಾಂ ಪ್ರಾರ್ಥನಾಪರಿತೋಷಿತಃ ।
ತುಷ್ಟಸ್ತದಾ ಗೋದ್ವಿಶತಂ ವೃಷವಾಹಃ ಕ್ಷಮಾಂ ದಧೌ ॥೧೭॥

ತತ್ಪ್ರಾಚ್ಯಾಂ ವಾಟನಾರಣ್ಯಂ ಸ್ಥಾನಂ ಶಂಭೋಃ ಪ್ರಿಯಂಕರಂ ।
ತತ್ರ ದೇವೀಂ ಸಮಾರಾಧ್ಯ ಶ್ರೀಪಾಟೀನಸಸಮಾಹ್ವಯಾಂ ॥೧೮॥

ಋಷಯಃ ಪೂಜಯಾಮಾಸುಸ್ತತ್ರ ಶ್ರೀವಾಟಕೇಶ್ವರಂ ।
ತುಷ್ಟುವುಃ ಪರಯಾ ಭಕ್ತ್ಯಾ ದೇವಂ ಚಂದ್ರಕಲಾಧರಂ ॥೧೯॥

॥ ಮುನಯ ಊಚುಃ ॥

ನಮಸ್ತೇ ದೇವೇಶ ತ್ರಿಪುರಹರ ಶಂಭೋ ತ್ರಿನಯನ
ಪ್ರಭೋ ವಿಶ್ವಾಧೀಶಾಮರವರ ತ್ರಿಶೂಲಿನ್ ಭವಹರ ।
ಪ್ರಸಾದಂ ಸದ್ಯೋ ನಃ ಪ್ರಬಲತರದುಃಖಂ ಹರ ವಿಭೋ
ಗಿರಾಂ ನಾಥಾರ್ಚಿತಪದಕಮಲಾನೋದಭ್ರಮರತಃ ॥೨೦॥

ತದುತ್ತರೇ ತ್ರಿನಯನಂ ಸ್ಥಾನಂ ಶಂಭೋಃ ಪ್ರಿಯಂ ಸದಾ ।
ತತ್ರ ವಹ್ನ್ಯರ್ಕಸೋಮಾದ್ಯಾಸ್ತಪಶ್ಚಕ್ರುರ್ಮಹತ್ತರಂ ॥೨೧॥

---

ಹೀಗೆ ಪ್ರಾರ್ಥಿಸಿದ ದೇವತೆಗಳಿಗೆ ಮೆಚ್ಚಿ ಮಹಾದೇವನು ಅವರ ವಿಷಯದಲ್ಲಿ ತಾಳ್ಮೆಯನ್ನು ಹೊಂದಿದನು. ಅಲ್ಲಿಂದ ಮುಂದೆ ಪೂರ್ವಕ್ಕೆ ಹೋದರೆ ವಾಟಕಕ್ಷೇತ್ರವೊಂದಿರುವುದು. ಅದು ಶಂಕರನಿಗೆ ಅತಿ ಪ್ರಿಯವಾದುದು. ಅಲ್ಲಿ ಪಾಟೀನಸದೇವಿಯೆಂಬ ದೇವತೆಯೂ, ವಾಟಣಕೇಶ್ವರನೆಂಬ ಶಿವಲಿಂಗವೂ ಇರುವುದು. ಇವರನ್ನು ಸಕಲ ಋಷಿಗಳೂ ಭಯಭಕ್ತಿಯಿಂದ ಪೂಜಿಸಿ ಧ್ಯಾನಿಸಿರುವವರು. ॥೧೭-೧೮-೧೯॥

"ದೇವದೇವನೇ, ತ್ರಿಪುರನಾಶಕನೇ, ತ್ರಿನಯನನೇ, ಸಕಲಲೋಕಕ್ಕೂ ಒಡೆಯನೆನಿಸಿದವನೇ, ನೀನು ಸಕಲ ಸಾಂಸಾರಿಕದುಃಖವನ್ನೂ ಪರಿಹರಿಸುವವನಲ್ಲವೆ! ಮಹಾದೇವನೇ, ನಮಗೆ ಒದಗಿರುವ ಸಮಸ್ತ ದುಃಖಗಳನ್ನೂ ನಿವಾರಣೆ ಮಾಡಿ ನನ್ನನ್ನು ರಕ್ಷಿಸುವವನಾಗು. ಬೃಹಸ್ಪತ್ಯಾಚಾರ್ಯರಿಂದ ಅರ್ಚಿತನಾದ ನಿನ್ನ ಪಾದಪದ್ಮದಲ್ಲಿ ಭ್ರಮರರೂಪವನ್ನು ನಮಗೆ ಅನುಗ್ರಹಿಸು." ॥೨೦॥

ವಾಟಣಕೇಶ್ವರಕ್ಷೇತ್ರದ ಉತ್ತರಭಾಗದಲ್ಲಿ ಪರಶಿವನಿಗೆ ಪ್ರೀತಿಕರವಾದ ತ್ರಿನಯನಕ್ಷೇತ್ರವಿರುವುದು. ಅಲ್ಲಿ ಅಗ್ನಿ, ಸೂರ್ಯ, ಚಂದ್ರ ಇವರೇ ಮೊದಲಾ

ಶಿವಃ ಫಾಲಾಕ್ಷಸಿದ್ಧ್ಯರ್ಥಂ ದೇವಂ ತ್ರಿನಯನೇಶ್ವರಂ ।
ಸಂಪೂಜ್ಯ ತುಷ್ಟುವುರ್ದೇವಂ ಸೋಮಸೂರ್ಯಾನಲಾಸ್ತದಾ ॥೨೨॥

॥ ಸೋಮಸೂರ್ಯಾನಲಾ ಊಚುಃ ॥

ಪ್ರಪದ್ಯಾಮ ಶಂಭೋ ಪದಾಬ್ಜಂ ತವಾದ್ಯಂ
ಭವೇಶಾನ ಉಗ್ರೇಶ್ವರಾವ ಪ್ರಭೋ ವಿಶ್ವನಾಥ ।
ಉಮಾನಾಥ ಹೇ ಮನ್ಮಥಾರೇ ಪುರಾರೇ
ಭವತ್ಫಾಲನೇತ್ರೇ ವಸಾಮೋ ಸುಖಾಯ ॥೨೩॥

ತತ್ರ ತ್ರಿನಯನೇಶಾನಃ ಸೋಮಸೂರ್ಯಾನಲಾಕ್ಷಕಾನ್ ।
ತಾಂಶ್ಚಕಾರ ತದಾ ತುಷ್ಟಃ ಶಿಪಿವಿಷ್ಟೋಂಬಿಕಾಸಖಃ ॥೨೪॥

ತಸ್ಮಾತ್ಪಶ್ಚಾನ್ಮಹತ್ಸ್ಥಾನಂ ಶ್ರೀಮದ್ವಾತಪುರೀತಿ ಚ ।
ಆತ್ಮೇಶೋ ಭಗವಾನ್ ದೇವೋ ದೇವೀ ಯೋಗಾಂಬಿಕಾತ್ರಹಿ ॥೨೫॥

---

ದವರು ತಪಸ್ಸನ್ನಾಚರಿಸಿರುವರು. ಅವರು ಮೂವರೂ ಸ್ವಾಮಿಗೆ ಕಣ್ಣುಗಳಾಗಿರಲು ವರಬೇಡಿ ಆದರಿಂದ ಶಂಕರನಿಗೆ ಫಾಲಾಕ್ಷತ್ವವನ್ನು ಸಿದ್ಧಿಸಿದರು. ಆ ಸಮಯದಲ್ಲಿ ಈ ಮೂವರೂ ಈರೀತಿ ಶಂಕರನನ್ನು ಸ್ತುತಿಸಿದರು. ||೨೧-೨೨||

"ಮಹಾದೇವನೇ, ಸರ್ವಕ್ಕೂ ಆದಿಭೂತವಾದ ನಿನ್ನ ಪಾದಕಮಲವನ್ನು ನಾವು ಆಶ್ರಯಿಸಿರುವೆವು. ಭವ, ಈಶಾನ, ಉಗ್ರ, ಪುರಾರಿ, ಮನ್ಮಥಾರಿ ಮುಂತಾದ ನಾಮಾಂತರಗಳಿಂದ ಪ್ರಕಾಶಿಸುವ ಪರಮೇಶ್ವರನೇ, ನಾವು ಯಾವಾಗಲೂ ನಿನ್ನ ಫಾಲನೇತ್ರಗಳಲ್ಲಿ ವಾಸಮಾಡುವಂತೆ ಅನುಗ್ರಹಿಸಿ ಕಾಪಾಡು." ||೨೩||

ಅಲ್ಲಿಯೇ ಪರಶಿವನು ಸೂರ್ಯ, ಅಗ್ನಿ, ಚಂದ್ರ ಇವರಿಗೆ ವರವಿತ್ತು ಅವರನ್ನು ತನ್ನ ಮೂರು ಕಣ್ಣುಗಳನ್ನಾಗಿ ಮಾಡಿಕೊಂಡನು. ಅದೇ ಕ್ಷೇತ್ರದ ಪಶ್ಚಿಮದಲ್ಲಿ ವಾತಪುರಿಯೆಂಬ ಕ್ಷೇತ್ರವಿರುವುದು. ಅಲ್ಲಿ ಆತ್ಮೇಶ್ವರವೆಂಬ ಶಿವಲಿಂಗವೂ, ಯೋಗಾಂಬಿಕೆಯೆಂಬ ದೇವಿಯ ವಿಗ್ರಹವೂ ಪ್ರಕಾಶಿಸುತ್ತಿರುವುದು. ||೨೪-೨೫||

ತತ್ರಾಗಸ್ತ್ಯಾರ್ಕರುದ್ರಾದ್ಯಾಃ ಸಂಪೂಜ್ಯಾಥ ಪ್ರಸುಸ್ರುವುಃ ।
ಸ್ನಾತ್ವಾ ಭೇ ಸೂರ್ಯಸರಸಿ ಪಾಪನಾಶೋ ತದಂಭಸಿ ॥೨೬॥

ತಸ್ಮಿನ್ಮುಕ್ತಿಪ್ರದೇ ಸ್ಥಾನೇ ದೇವಾ ವಾತಪುರೀಶ್ವರಂ ।
ಮಾಣಿಕ್ಯವಾಚಕೋ ನಾಮ್ನಾ ಭಕ್ತವರ್ಯೋ ಮಹೇಶ್ವರಂ ॥೨೭॥

ಕದಂಬವನನಾಥಸ್ಯ ಪಾಂಡ್ಯೇಶಸ್ಯ ಧನೇನ ಹಿ ।
ಪ್ರಾಕಾರಮಂಡಪಂ ತತ್ರ ಗೋಪುರಾಣ್ಯಪ್ಯಕಾರಯತ್ ॥೨೮॥

॥ ಶ್ರೀ ಸ್ಕಂದ ಉವಾಚ ॥

ಸಾಧಕೇಶವಿನಾಶಾಯ ಯತ್ರ ದೇವೋ ನಿರಂಜನಃ ।
ಭಕ್ತಸಿದ್ಧ್ಯರ್ಥಮತ್ರೈವ ಪಾಂಡ್ಯಾಯಾಶ್ವಾನದರ್ಶಯತ್ ॥೨೯॥

ಭಕ್ತವಶ್ಯೋ ಮಹಾದೇವೋ ಹಸ್ತಿನಾಥೋಮಹೇಶ್ವರಂ ।
ಮಾಣಿಕ್ಯವಾಚಕೇನೇತ್ಥಂ ಪೂಜಿತೋ ಸಂಸ್ತುತಸ್ತದಾ ॥೩೦॥

---

ಅಲ್ಲಿ ಅಗಸ್ತ್ಯ, ಸೂರ್ಯ, ರುದ್ರ ಮುಂತಾದವರು ಪರಶಿವನನ್ನು ಬಹಳವಾಗಿ ಪೂಜಿಸಿರುವರು. ಅಲ್ಲಿರುವ ಸೂರ್ಯಸರೋವರದಲ್ಲಿ ಸ್ನಾನಮಾಡುವುದು ಸಕಲ ಪಾಪನಾಶಕವಾದುದು. ಅಂತಹ ಮುಕ್ತಿಪ್ರದವಾದ ಸ್ಥಳದಲ್ಲಿ ಮಾಣಿಕ್ಯವಾಚಕ ನೆಂಬ ಭಕ್ತನೊಬ್ಬನು ವಾತಪುರೀಶ್ವರಸ್ವಾಮಿಯನ್ನು ಬಹಳವಾಗಿ ಪೂಜಿಸಿದನು. ॥೨೬-೨೭॥

ಅಲ್ಲಿಯೇ ಕದಂಬವನವಿರುವುದು. ಅಲ್ಲಿರುವ ಕದಂಬನಾಥೇಶ್ವರನಿಗೆ ಪಾಂಡ್ಯರಾಜನು ಅನೇಕ ಧನಕನಕಾದಿಗಳನ್ನು ವ್ಯಯಮಾಡಿ, ಒಂದು ಪ್ರಾಕಾರ, ಗೋಪುರ ಇವುಗಳಿಂದ ಕೂಡಿದ ದಿವ್ಯದೇವಾಲಯವನ್ನು ಕಟ್ಟಿಸಿ, ಸರ್ವಪಾಪ ನಾಶಕನಾದ ಮಹಾದೇವನನ್ನು ಅಲ್ಲಿ ಪ್ರತಿಷ್ಠೆಮಾಡಿಸಿದನು. ಭಕ್ತರ ಇಷ್ಟಾರ್ಥ ಗಳನ್ನು ನೆರವೇರಿಸುವುದಕ್ಕಾಗಿ ಸ್ವಾಮಿಯು ಅಲ್ಲಿ ನೆಲಸಿರುವನು. ಮತ್ತು ಆ ಪಾಂಡ್ಯರಾಜನಿಗೆ ಅನೇಕ ದಿವ್ಯಾಶ್ವಗಳನ್ನು ಮಹಾದೇವನು ಅನುಗ್ರಹಿಸಿದನು. ಅಂತಹ ಭಕ್ತವಶ್ಯನೂ, ಹಸ್ತಿನಾಥನೂ ಆದ ಮಹಾದೇವನನ್ನು ಮಾಣಿಕ್ಯವಾಚಕನು ಈ ರೀತಿ ಪ್ರಾರ್ಥಿಸಿದನು. ॥೨೯-೩೦॥

**ಅಂಭೋಜೋದ್ಭವಲೋಚನ ಪ್ರಭೃತಿಭಿಃ ಸಂಸೇವ್ಯಪಾದಾಂಬುಜಂ**
**ದೇವಂ ತ್ವಾಂ ತು ನಿರಂಜನಂ ಸುಖಕರಂ ಯೋಗಾಂಬಿಕಾನಾಯಕಂ ।**
**ವಿಶ್ವೋತ್ಪತ್ತಿವಿಧಾನ ಪಾಲನಪರಂ ಗಂಗಾಧರಂ ಶಂಕರಂ**
**ವಿಶ್ವಾಶಾಸ್ಯಮುಮಾಸಖಂ ಭವಹರಂ ತ್ವಾಂ ನೋನುಮಃ ಶಂಕರಂ ॥೩೧॥**

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ**
**ಚತ್ವಾರಿಂಶೋಽಧ್ಯಾಯಃ**

---

"ಕಮಲಜ ಮತ್ತು ಕಮಲನೇತ್ರರೆನಿಸಿದ ಬ್ರಹ್ಮವಿಷ್ಣುಗಳಿಂದ ಪೂಜಿತವಾದ ಪಾದಪದ್ಮವುಳ್ಳವನೂ, ಪಾಪವನ್ನು ನಾಶಮಾಡಿ, ಭಕ್ತರಿಗೆ ಸಕಲ ಸುಖವನ್ನೂ ಅನುಗ್ರಹಿಸುವ ಯೋಗಾಂಬಿಕಾಪತಿಯೇ, ನಿನಗೆ ವಂದಿಸುವೆವು. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಮೂಲಕಾರಣನೆನಿಸಿ, ಉಮಾ, ಗಂಗಾ ಇವರನ್ನು ದೇಹದಲ್ಲಿರಿಸಿಕೊಂಡಿರುವ ದಿಗಂಬರನೇ, ಹರನೇ, ನಿನ್ನನ್ನು ನಾವು ಸದಾ ಧ್ಯಾನಿಸುವೆವು" ಎಂದು ಮಾಣಿಕ್ಯವಾಚಕನೇ ಮೊದಲಾದ ಸಕಲ ದೇವಮಹರ್ಷಿಗಳೂ ಸಹ ಪರಮೇಶ್ವರನನ್ನು ನಾನಾವಿಧವಾಗಿ ಧ್ಯಾನಿಸಿದರೆಂದು ಕುಮಾರ ಸ್ವಾಮಿಯು ಜೈಗೀಷವ್ಯಾದಿಮಹರ್ಷಿವೃಂದಕ್ಕೆ ಹೇಳಿದನು. ॥೩೧॥

ಇಲ್ಲಿಗೆ ಶ್ರೀಶಿವರಹಸ್ಯದ ಉತ್ತರಾರ್ಧದಲ್ಲಿ ನಲವತ್ತನೆಯ ಅಧ್ಯಾಯವು
ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಏಕಚತ್ವಾರಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ತದ್ದಕ್ಷಿಣೇ ಪಾಂಡ್ಯಪುರೀನಾಥಃ ಸುಂದರನಾಯಕಃ ।
ತಲ್ಲಿಂಗಂ ಸುಂದರೇಶಾಖ್ಯಂ ಪಾಂಡ್ಯಸುಂದರಪೂಜಿತಂ ॥೧॥

ಸ್ತುತಂ ಚ ಸರ್ವಭಾವೇನ ತತ್ಸ್ಥಾನಂ ಸರ್ವಕಾಮದಂ ।
ಪಾಂಡ್ಯತೀರ್ಥೇ ನರಃ ಸ್ನಾತ್ವಾ ದೃಷ್ಟ್ವಾ ಸುಂದರಲಿಂಗಕಂ ॥೨॥

|| ಪಾಂಡ್ಯ ಉವಾಚ ||

ಸುಂದರೇಶಂ ನಮಸ್ಕೃತ್ಯ ಸ್ತುವನ್ಪಾಂಡ್ಯಸ್ತವೈರ್ನರಃ ।
ಸರ್ವಾನ್ಕಾಮಾನವಾಪ್ನೋತಿ ಪಾಪೈಸ್ಸರ್ವೈಃ ಪ್ರಮುಚ್ಯತೇ ॥೩॥

---

## ನಲವತ್ತೊಂದನೆಯ ಅಧ್ಯಾಯ

ವಾತಾಪುರೀಕ್ಷೇತ್ರದ ದಕ್ಷಿಣಭಾಗದಲ್ಲಿ ಪಾಂಡ್ಯಪುರಿಯೆಂಬ ದಿವ್ಯಶಿವಕ್ಷೇತ್ರವೊಂದಿರುವುದು. ಅಲ್ಲಿ ಸುಂದರೇಶ್ವರನೆಂಬ ಹೆಸರಿನ ಶಿವಲಿಂಗವಿರುವುದು. ಅದನ್ನು ಪಾಂಡ್ಯದೇಶದ ರಾಜನಾದ ಸುಂದರನಾಯಕನು ಬಹಳವಾಗಿ ಪೂಜಿಸಿ ಸ್ತುತಿಸಿರುವನು. ಅಲ್ಲಿರುವ ಪಾಂಡ್ಯತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ ಸರ್ವಕಾಮಪ್ರದವಾದ ಸುಂದರೇಶ್ವರಲಿಂಗವನ್ನು ದರ್ಶನಮಾಡುವುದರಿಂದ ಪಾಪಮುಕ್ತನಾಗುವನು. ಪರಶಿವನು ಅವನಿಗೆ ಸಕಲ ಇಷ್ಟಾರ್ಥಗಳನ್ನೂ ಒದಗಿಸಿ ಕೊನೆಯಲ್ಲಿ ಮುಕ್ತಿಯನ್ನನುಗ್ರಹಿಸುವನು. ||೧-೨||

ಪಾಂಡ್ಯದೇಶದ ರಾಜನು ಆಗ ಈರೀತಿ ಸ್ತುತಿಸಿರುವನು. “ ಸುಂದರೇಶ್ವರನೇ,

ಸುಂದರ ಶಂಕರ ಪುರಹರ ಭವಹರ ಗರಧರ ಮೃಗಕರ ಪಾಹಿ ವಿಭೋ ।
ತವ ಸ್ತುತಿ ನತಿ ಮತಿಂ ಮಮ ಶಿವ ಧೇಹಿ ತ್ವದೀಯ ಸುಭಕ್ತಿಂನಿತ್ಯ
ಮಹೋ ॥೪॥

ತೇನ ಭವಾರ್ಣವತಾರಣಮೇವಾ ತನುವ್ಯಯತೋ ಭವ ದೇಹಿ ।
ಶಿವ ಮುನಿ ಮಾನಸವಾಸ ಸದಾವ ಸದಾಶಿವ ಶಂಕರ ಪಾಹಿ ವಿಭೋ ॥೫॥

ತತ್ಪ್ರತೀಚ್ಯಾಂ ಶಿವಸ್ಥಾನಂ ಪಾವನಂ ಪಾಪಭೇದನಂ ।
ಖ್ಯಾತಂ ಹೃನ್ಮುನಿಕೋಶಾಖ್ಯಂ ಹೃತ್ಕೋಶಾಂತರ್ಭವಂ ಮುನೇ ॥೬॥

ತತ್ರ ಮಂಗಳತೀರ್ಥಂ ಚ ಸ್ನಾಸ್ಯತಾಂ ಮಂಗಳಪ್ರದಂ ।
ಮಂಗಳಾಂಬಾ ಮಂಗಲೇಶೋ ಭಕ್ತಮಂಗಳದಾಯಕೌ ॥೭॥

ದೃಷ್ಟೌ ಮಂಗಳದೌ ದೇವೌ ನರಾಣಾಂ ತತ್ರ ವಾಸಿನಾಂ ।
ರಹಸ್ಯಂ ತಾಂಡವಂ ಚಕ್ರೇ ಶಂಭುರಾದಿಚಿದಂಬರೇ ॥೮॥

ತತ್ರ ನಿತ್ಯಂ ಮಹೇಶೋತ್ರ ದೃಷ್ಟ್ವಾ ಸಂಪೂಜ್ಯ ಶಂಕರಂ ।
ಮಂಗಳಾಂಬಾಂ ಮಂಗಲೇಶಂ ಶಂಭುಂ ರತ್ನಸಭಾನಟಂ ॥೯॥

---

ನೀನು ತ್ರಿಪುರಗಳನ್ನು ನಾಶಮಾಡಿದವನು. ವಿಷವನ್ನು ಕಂಠದಲ್ಲಿ ಧರಿಸಿದವನು, ಮೃಗವನ್ನು ಪಾಣಿಯಲ್ಲಿ ಹಿಡಿದಿರುವವನು, ನಿನ್ನ ಅನುಗ್ರಹದಿಂದ ನನ್ನಲ್ಲಿ ಸದಾ ನಿನ್ನ ಪಾದಭಕ್ತಿಯು ದೃಢವಾಗಿರುವಂತೆ ವರಕೊಡು. ಆದರಿಂದ ನಾನು ಸಂಸಾರ ವೆಂಬ ಸಾಗರವನ್ನು ದಾಟಿ ನಾನಾ ಜನ್ಮಾಂತರಗಳನ್ನು ಕಳೆದುಕೊಳ್ಳುವೆನು. ಸಕಲ ಮುನಿಗಳ ಹೃದಯದಲ್ಲಿ ನೆಲಸಿರುವ ಮಹಾದೇವನೇ, ನೀನು ನನ್ನ ಹೃದಯ ಕಮಲದಲ್ಲಿಯೂ ನೆಲಸುವವನಾಗು. ಶಿವಶಂಕರನೇ ನಮ್ಮನ್ನು ರಕ್ಷಿಸು" ಎಂದು ಹೀಗೆ ಪಾಂಡ್ಯರಾಜನು ಸ್ತುತಿಸಿರುವನು. ||೩-೪-೫||

ಅದರ ಪಶ್ಚಿಮದಿಕ್ಕಿನಲ್ಲಿ ಪಾಪನಾಶಕವಾದ ಪವಿತ್ರಶಿವಕ್ಷೇತ್ರವಿರುವುದು. ಅದಕ್ಕೆ ಹೃನ್ಮುನಿಕೋಶವೆಂದು ಹೆಸರಿರುವುದು. ಅಲ್ಲಿ ಮಂಗಳತೀರ್ಥವೆಂಬ ದಿವ್ಯ ಸರಸ್ಸೊಂದಿರುವುದು. ಅಲ್ಲಿ ಸ್ನಾನಮಾಡಿ ಮಂಗಳಾಂಬಾ ಮಂಗಲೇಶನನ್ನು ದರ್ಶನ ಮಾಡುವುದರಿಂದ ಮನುಷ್ಯನು ಸಕಲ ಪಾಪಮುಕ್ತನಾಗುವನು. ||೬-೭||

ಅಲ್ಲಿ ವಾಸಿಸುತ್ತಾ ಶಿವದರ್ಶನಮಾಡುವ ಮನುಷ್ಯರಿಗೆ ಮಂಗಳೇಶನು ಸರ್ವ ಇಷ್ಟಾರ್ಥವನ್ನೂ ಅನುಗ್ರಹಿಸುವನು. ಹಾಗೆಯೇ ಆದಿಚಿದಂಬರವೆಂಬ ದಿವ್ಯ

॥ ಮುನಯ ಊಚುಃ ॥

ನಮೋಽಸ್ತು ಬ್ರಹ್ಮಾಂಡಸ್ಫುಟನಟನನೃತ್ತಾದಿ ದಿಮಿದಿ
ಮಿದ್ರಣತ್ಪಾದಾಬ್ಜೋಽಥ ಪ್ರತಿಹತಭುವಸ್ತಾಂಡವಪರಾಃ ।
ಸ್ತುವಂತೇ ತೇ ದೇವಾಃ ಪ್ರಣವಗತಸಾರಾರ್ಥಮಹಿತಾ
ಸ್ತವೇಶಾನಾಃ ಪ್ರಾಸ್ಯಂ ವಚನಮನಸಾ ಹಂಸಪ್ರವರಾಃ ॥೧೧॥

ನಾಗಾನಾಗನಗಾಸ್ಸುತಪ್ತಕನಕಪ್ರೋದ್ಭಾಸಿ ದಿವ್ಯಾಂಶುಕಾಃ
ಮಹೀಭಾಗನ್ಯಸ್ತಪ್ರಶಿಥಿಲ ಭಯಾಂದೋಲಶಿರಸಃ ।
ಅಹೋ ದೃಷ್ಟ್ವಾ ಧನ್ಯಾಸ್ತವಸು ಪದವೀಕ್ಷಾನುಸರಣಾಃ
ಶರಣ್ಯಂ ಪಾದಾಬ್ಜಂ ಶಿವಭವದರಣ್ಯಂ ಭವತು ನಃ ॥೧೨॥

---

ಶಿವಕ್ಷೇತ್ರದಲ್ಲಿ ಮಹೇಶ್ವರನೇ ರತ್ನಮಯವಾದ ಮಂಟಪದಲ್ಲಿ ರಹಸ್ಯವಾಗಿ ನಾಟ್ಯ ಮಾಡಿರುವನು. ಅಂತಹ ಮಹಾದೇವನನ್ನು ಸಕಲ ಮುನಿಗಳೂ ಭಯಭಕ್ತಿಯಿಂದ ಅಲ್ಲಿ ದರ್ಶನಮಾಡಿ ಹೀಗೆ ಸ್ತುತಿಸಿರುವರು. ಮಂಗಳಾಂಬಾ, ಮಂಗಲೇಶನಾಮಕ ರಾದಪಾರ್ವತೀಪರಶಿವರನ್ನು ದೇವತೆಗಳೂ, ಮುನಿಗಳೂ ಸಂತೋಷದಿಂದ ದರ್ಶನ ಮಾಡಿ ಈ ರೀತಿಯಾಗಿ ಶ್ಲಾಘಿಸಿರುವರು. ॥೮-೯-೧೦॥

"ಮಹಾದೇವನೇ, ನಾಟ್ಯಕಾಲದಲ್ಲಿ ನಿನ್ನ ಪಾದಕಮಲವು ಬ್ರಹ್ಮಾಂಡವ ನ್ನೆಲ್ಲಾ ವ್ಯಾಪಿಸಿ ನಿಲ್ಲುವುದು. ನಾಟ್ಯದಲ್ಲಿ ಆಸಕ್ತವಾಗಿ ದಿಮಿದಿಮಿ ಶಬ್ದವನ್ನುಂಟು ಮಾಡುವ ನಿನ್ನ ಪಾದಕಮಲಗಳನ್ನು ಸಕಲ ಮುನಿಗಳೂ ಸದಾ ಸೇವಿಸುತ್ತಾ ಸ್ತುತಿಸುತ್ತಿರುವರು. ಓಂಕಾರಪದವಾಚ್ಯವಾದ ನಿನ್ನ ಸ್ವರೂಪವನ್ನು ಜ್ಞಾನಿಗಳಲ್ಲಿ ಶ್ರೇಷ್ಠರಾದ ಶಾಂಭವರು ಇಸಿಮಾತಿನಿಂದಲೂ, ಮನಸ್ಸಿನಿಂದಲೂ ಸರ್ವದಾ ಧ್ಯಾನಮಾಡುತ್ತಿರುವರು. ॥೧೧॥

ಮಹೇಶ್ವರನೇ, ನಿನ್ನ ಮುಂಭಾಗದಲ್ಲಿ ದಿವ್ಯಪೀತಾಂಬರಧಾರಿಗಳಾಗಿ ನಾಗ ದೇವತೆಗಳೂ, ಪರ್ವತಗಳೂ ನಿನ್ನ ಅದ್ಭುತವಾದ ನಾಟ್ಯವನ್ನೇ ನೋಡುತ್ತಾ, ಭಯಭಕ್ತಿಭರಿತರಾಗಿ, ಶಿರಸ್ಸನ್ನಲ್ಲಾಡಿಸುತ್ತಾ ನಿನ್ನನ್ನು ಸೇವಿಸುತ್ತಿರುವರು. ಪರಮೇಶ್ವರನೇ, ಹೀಗೆ ನಿನ್ನ ನಾಟ್ಯವನ್ನು ನೋಡಿ ಆನಂದಿಸುವವರೇ ಧನ್ಯರು. ನಿನ್ನ ಪಾದಪದ್ಮದ ದರ್ಶನ ಪಡೆದವರೇ ಕೃತಾರ್ಥರು. ಪರಶಿವನೇ, ಅಂತಹ ನಿನ್ನ

ಶಂಭೋ ಮಂಗಳ ಮಂಗಳಾಸಖ ವಿಭೋ ತ್ವಾಂ ನೋ ಸುಮುಕ್ಷ್ಯಂಕರಂ
ತ್ವತ್ಪಾದಾಬ್ಜವಿಲೋಕಿನಾಂ ಪ್ರತಿಪದಂ ಸ್ಯಾನ್ಮಂಗಳಂ ಸರ್ವದಾ ।
ತಸ್ಮಾನ್ನಃ ಕರುಣಾಲಯಾವ ಭಗವನ್ ಹೃತ್ಕೋಶಮಧ್ಯಾಂತರೇ
ಮಾರಾಶೇ ನ ಶಶಾಕರಣ್ಯಸ್ಕರಸ್ತಂ ಶಾಂಕರಾ ವಾಸಿನಃ (?) ॥೧೩॥

ತತ್ಪ್ರತೀಚ್ಯಾಂ ಮತಂಗೇಶಂ ಮತಂಗಮುನಿನಾರ್ಚಿತಂ ।
ಮತಂಗತೀರ್ಥಂ ತತ್ರೈವ ಪಾವನಾನಂ ಚ ಸ್ನಾಸ್ಯತಾಂ ॥೧೪॥

ನೃಣಾಂ ಪೂಜ್ಯೋ ಮತಂಗಸ್ತು ತುಷ್ಟಾವಾಥ ಪ್ರಣಮ್ಯ ಚ ॥೧೫॥

॥ ಮತಂಗ ಉವಾಚ ॥

ನಮಸ್ತೇ ಮಾತಂಗತ್ವಚವಿಹಿತವಾಸಃ ಪಶುಪತೇ
ಕೃಪಾರಾಶೇ ಶಂಭೋ ಸುರನಿಕರವಂದ್ಯೇಶ ಭಗವನ್ ।
ತವ ಸ್ನಿಗ್ಧಾಂ ದೃಷ್ಟಿಂ ವಿತರ ಹರಪಾಪಂ ಮೃಗಧರ
ತ್ವದೀಯಂ ಲಿಂಗಂ ಮೇ ಹೃದಯಕಮಲೇ ತಿಷ್ಠತು ಚಿರಂ ॥೧೬॥

---

ಪಾದಪದ್ಮವು ನಮ್ಮ ಘೋರವಾದ ಸಂಸಾರವೆಂಬ ಅರಣ್ಯದಲ್ಲಿ ರಕ್ಷಕವಾಗಿ ನಿಂತಿರಲಿ. ಇದೇ ನಮ್ಮ ಪ್ರಾರ್ಥನೆ." ॥೧೨॥

ಶಂಭುವೇ, ಮಂಗಳಪ್ರದನೇ, ಪಾರ್ವತೀಪತಿಯೇ, ನಿನ್ನ ಪಾದದರ್ಶನ ಮಾಡಿದವರಿಗೆ ಸರ್ವದಾ ಮಂಗಳವು ಲಭಿಸುತ್ತದೆಯಲ್ಲವೆ? ಭಗವಂತನಾದ ಮಹಾದೇವನೇ, ಕರುಣಾಸಮುದ್ರನೇ, ನನ್ನ ಹೃದಯಕೋಶದಲ್ಲಿ ಅಡಗಿ ನೀನು ಸರ್ವದಾ ನನ್ನನ್ನು ರಕ್ಷಿಸುತ್ತಿರು. ನಿನ್ನ ಭಕ್ತರಾದ ಈ ಜನರು ಯಾವಾಗಲೂ ಮನ್ಮಥನನ್ನೂ ಲಕ್ಷ್ಯಮಾಡುವುದಿಲ್ಲವಷ್ಟೆ! ॥೧೩॥

ಅದರ ಪಶ್ಚಿಮಭಾಗದಲ್ಲಿ ಮತಂಗಮುನಿಯಿಂದ ಪೂಜಿತವಾದ ಮತಂಗೇಶ ಲಿಂಗವೂ, ಸ್ನಾನಮಾಡುವವರನ್ನು ಪರಿಶುದ್ಧಿಗೊಳಿಸುವ ಮತಂಗತೀರ್ಥವೂ ಇರುವುದು. ಸರ್ವಮಾನವರಿಗೂ ಪೂಜ್ಯನಾದ ಮತಂಗಮುನಿಯು ಸ್ವಾಮಿಯನ್ನು ಈರೀತಿ ಸ್ತೋತ್ರಮಾಡಿರುವನು. ॥೧೪-೧೫॥

"ಗಜಚರ್ಮಾಂಬರಧಾರಿಯೇ, ಪಶುಪತಿಯೇ, ದಯಾಸಾಗರನೇ, ನೀನು ದೇವತೆಗಳ ಗುಂಪಿನಿಂದ ಸ್ತುತ್ಯನಾದವನಲ್ಲವೆ! ಮೃಗಧರನೇ, ನಿನ್ನ ಕೃಪಾದೃಷ್ಟಿ

ಮತಂಗೇಶೋ ಮತಂಗಾಯ ತಸ್ಮಿನ್ ಸ್ಥಾನೇ ಪ್ರಸಾದಕೃತ್ ।
ತದುತ್ತರೇ ವಸಂತೇಶೋ ವಸಂತೇನ ಸಮರ್ಚಿತಃ ॥೧೭॥

ಸಂಸ್ತುತಃ ಕಾಮಹರಣಃ ವಸಂತೇ ತೀರ್ಥತೀರಕೇ ॥೧೮॥

॥ ವಸಂತ ಉವಾಚ ॥

ವಸಂತೇಶ ಸಂತೋ ಹೃದಿ ತ್ವಾಂ ಮಹೇಶಂ
ಸದಾ ಶಾಂತಮಾರಾಧಮಾಕಾಂತಮೀಶಂ ।
ನಿತಾಂತಂ ಪ್ರಕಾಶಂ ಜಗತ್ಸಾರಭೂತಂ
ನಮಸ್ತೇ ಪ್ರಪದ್ಯೇ ಮುದಾದ್ಯೈವ ಶಂಭೋ ॥೧೯॥

ತದ್ದಕ್ಷಿಣೇ ಚ ಗೋಕರ್ಣಂ ದಕ್ಷಿಣಂ ಪಾವನಂ ಪರಂ ।
ಗಿರಿಶೋ ಗಿರಿಮೌಳಿಸ್ಥ ಅಥೋ ಗೋಕರ್ಣನಾಯಕಃ ॥೨೦॥

ಕರಂಜೇನ ತಪಸ್ತಪ್ತಂ ತಸ್ಮೈ ಪ್ರಾದುರ್ಭವತ್ತದಾ ।
ತತ್ರ ಲಿಂಗಂ ಕರಂಜೋಽಪಿ ದೃಷ್ಟ್ವಾ ಗಿರಿಶಿರೋಗತಂ ॥೨೧॥

ಗೋಕರ್ಣೇಶಮಥ ಸ್ನಾತೋ ಸಂಪೂಜ್ಯಾಥ ಸ್ತುವನ್ಮುನಿಃ ॥೨೨॥

---

ಯನ್ನು ನನ್ನ ಮೇಲೆ ಬೀರಿ ನನ್ನ ಸಮಸ್ತ ಪಾಪರಾಶಿಯನ್ನೂ ನಿವಾರಣೆಮಾಡು. ಸರ್ವದಾ ನಿನ್ನ ಲಿಂಗಸ್ಮರಣೆಯು ನನ್ನ ಹೃದಯಾಂತರಾಳದಲ್ಲಿರುವಂತೆ ಅನುಗ್ರಹಿಸು. ॥೧೬॥

ಎಂದು ಪ್ರಾರ್ಥಿಸಿದ ಮತಂಗಮುನಿಗೆ ಮತಂಗೇಶನು ಅನುಗ್ರಹಮಾಡಿದನು. ಅದರ ಉತ್ತರಭಾಗದಲ್ಲಿ ವಸಂತನಿಂದ ಪೂಜಿತವಾದ ವಸಂತೇಶಲಿಂಗವೂ, ವಸಂತ ತೀರ್ಥವೂ ಇರುವುದು. ಆ ವಸಂತೇಶನನ್ನು ಈ ರೀತಿ ಬಹಳವಾಗಿ ಸ್ತುತಿಸಿರುವನು. ॥೧೭-೧೮॥

ವಸಂತೇಶ್ವರನೇ, ಶಾಂತನೂ, ಜಗತ್ಪ್ರಕಾಶಕನೂ, ಜಗತ್ತಿಗೆ ಸಾರಭೂತನಾದವನೂ ಆದ ನಿನ್ನನ್ನು ಸತ್ಪುರುಷರಾದವರು ಸರ್ವದಾ ಪೂಜಿಸುತ್ತಿರುವರು. ಇಂತಹ ಮಹಾಮಹಿಮನಾದ ನಿನ್ನನ್ನು ನಾನು ಸರ್ವದಾ ಶರಣುಹೊಂದುವೆನು. ॥೧೯॥

ಈ ವಸಂತೇಶಕ್ಷೇತ್ರದ ದಕ್ಷಿಣದಲ್ಲಿ ಗೋಕರ್ಣಕ್ಷೇತ್ರವಿರುವುದು. ಅದು ಬಹು ಪವಿತ್ರವಾದುದು. ಗೋಕರ್ಣೇಶಲಿಂಗವು ಒಂದು ಗಿರಿಯ ಶಿರೋಭಾಗದಲ್ಲಿ

ಗಿರೀಶ ಗೋಕರ್ಣನಿವಾಸ ಶಂಭೋ
ದಕ್ಷಾಧ್ವರಧ್ವಂಸಕ ದೇವದೇವ ।
ಸಂಸ್ತೌಮಿ ಹರಿಣಾಜಿನವಾಸಗೋನಗೋ
ಭರ್ಗಗಭಸ್ಥಿತಂ ಪಾಹಿ ಮಾಂ ಹರ (?) ॥೨೩॥

ತತ್ರ ದಕ್ಷಿಣಗೋಕರ್ಣೇ ಕರಂಜೇನಾರ್ಚಿತಶ್ಶಿವಃ ।
ತದ್ದಕ್ಷಿಣೇ ಮರುದೀಶೋ ಮರುದ್ಭಿಃ ಪೂಜಿತೋ ಹರಃ ॥೨೪॥

ಮಾರುತಂ ಪರಮಂ ತೀರ್ಥಂ ಪಾಪಖಂಡಹರಂ ನೃಣಾಂ ॥೨೫॥

॥ ಮಾರುತ ಊಚುಃ ॥

ನಮಸ್ತೇ ಮರುದೀಶರೂಪ ಶಂಭೋ
ಸಂಪ್ರಸೀದ ಪ್ರಸಾದಂ ಕುರುಷ್ವಾತ್ರ
ಸಂವಾಸಿಕಾಮಾನಸಪ್ರಪೂಜ್ಯಾಧುನಾ ಮೋಕ್ಷಂ । (?)

ರುವುದು. ಕರಂಜನೆಂಬ ಮಹಾಮಹಿಮನು ಅಲ್ಲಿ ಬಹುಕಾಲ ತಪಸ್ಸುಮಾಡಿ, ಕೊನೆಗೆ ಗಿರಿಶಿರೋಭಾಗದಲ್ಲಿರುವ ಗೋಕರ್ಣೇಶಲಿಂಗವನ್ನು ದರ್ಶನಮಾಡಿ ಅದನ್ನು ಹೀಗೆ ಸ್ತುತಿಸಿದನು. ॥೨೦-೨೧-೨೨॥

ಗಿರೀಶ್ವರನೇ, ಗೋಕರ್ಣಕ್ಷೇತ್ರವಾಸಿಯಾದ ಶಂಭುವೇ, ನೀನು ದಕ್ಷಯಜ್ಞವನ್ನು ನಾಶಗೊಳಿಸಿದವನಲ್ಲವೆ! ದೇವದೇವನೇ, ಕೃಷ್ಣಾಜಿನವನ್ನು ಹೊದ್ದಿರುವವನೇ, ನಿನ್ನ ಗರ್ಭವಾಸದಿಂದಿರುವ ನನ್ನನ್ನು ಸರ್ವದಾ ರಕ್ಷಿಸುವವನಾಗು. ॥೨೩॥

ದಕ್ಷಿಣಗೋಕರ್ಣದಲ್ಲಿ ಕರಂಜೇಶಲಿಂಗವಿರುವುದು. ಅದಕ್ಕೆ ದಕ್ಷಿಣಭಾಗದಲ್ಲಿ ಮರುದ್ಗಣಗಳಿಂದ ಪೂಜಿತವಾದ ಮರುದೀಶನೆಂಬ ಶಿವಲಿಂಗವೊಂದಿರುವುದು. ಅಲ್ಲಿಯೇ ಸರ್ವಪಾಪನಿವಾರಕವಾದ ಮಾರುತತೀರ್ಥವೂ ವಿರಾಜಿಸುತ್ತಿರುವುದು. ॥೨೪-೨೫॥

ಮರುದೀಶನೇ, ಶಂಭೋ ನನ್ನನ್ನು ಅನುಗ್ರಹಿಸು. ಜಿತೇಂದ್ರಿಯರಿಂದ ಸದಾ ಪೂಜಿತನಾದ ಮಹಾದೇವನೇ, ನನಗೆ ಮೋಕ್ಷವನ್ನು ಕೊಡು. ನಿನ್ನ ಪಾದ

ಮಹ್ಯಂ ದೇಹಿ ತವಾಂಘ್ರಿಪ್ರಪನ್ನೋ
ನ ಸೀದೇಜ್ಜನೋ ಹಿ ಮರುತಾಂ ದೇವ
ದೇವೇಶಃ ಪ್ರಸಾದಂ ತತ್ರ ಚಾಕರೋತ್ ॥೨೬॥

॥ ದುಂದುಭಿರುವಾಚ ॥

ತತ್ಪ್ರಾಚ್ಯಾಂ ದುಂದುಭೀಶಾನಸ್ತೀರ್ಥಂ ದುಂದುಭಿನಾಮಕಂ ।
ದುಂದುಭಿರ್ಗಣಪಸ್ತತ್ರ ಸಂಪೂಜ್ಯಾಸ್ತುವದೀಶ್ವರಂ ॥೨೭॥

ನಮೋ ದುಂದುಭ್ಯಾಯ ಕ್ಷಿತಿರಥ ಶಿರಸ್ಥಾಯ ಮಹತೇ
ಅಪರ್ಣಾನಾಥಾಯ ಪ್ರಮಥಪತಯೇ ಚಾಂತಕಭಿದೇ ।
ಭಜಾಮೀಶಾನಂ ತ್ವಾಂ ಶ್ರುತಿಶಿಖರವೇದ್ಯಂ ತವ ಪದಂ
ಭಜನ್ಮೂಲೇ ಭೂಯಾಚ್ಛಿವತರ ಶಿವಾರ್ಧಾಂಕ ಬಿಭೃತೇ ॥೨೮॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶಿವಸ್ಥಾನವೈಭವೇ
ಏಕಚತ್ವಾರಿಂಶೋಽಧ್ಯಾಯಃ

---

ಪದ್ಮಾರಾಧನೆಯಲ್ಲಿ ನಿರತನಾದ ನನಗೂ ನಿನ್ನಾರಾಧನೆಯಲ್ಲಿ ತೊಡಗಿರುವ ಸಕಲ ಭಕ್ತರಿಗೂ ಅನುಗ್ರಹಮಾಡು. ॥೨೬॥

ಮರುತ್ತೀರ್ಥದ ಪೂರ್ವಭಾಗದಲ್ಲಿ ದುಂದುಭೀಶ್ವರನೆಂಬ ಶಿವಲಿಂಗವಿರುವುದು. ಅವನ್ನು ದುಂದುಭಿನಾಮಕನಾದ ಗಣಪನೊಬ್ಬನು ಪೂಜಿಸಿ ಹೀಗೆ ಸ್ತುತಿಸಿರುವನು. "ಮಹಾದೇವನೇ, ನೀನು ನಗಾರಿಯಿಂದ ಜನಿಸುವ ಧ್ವನಿರೂಪಿಯು. ನಿನಗೆ ಈ ಭೂಮಿಯೇ ರಥವಾಗಿರುವುದು. ನೀನು ತೇಜೋರೂಪಿಯು. ಪಾರ್ವತಿಗೂ, ಪ್ರಮಥಗಣಗಳಿಗೂ ಪತಿಯೆನಿಸಿದ ನಿನಗೆ ವಂದನೆ. ನೀನು ಸಕಲ ವೇದ ಮತ್ತು ವೇದಾಂತಗಳಿಂದಲೂ ಸಂಸ್ತುತನಾಗಿರುವೆ. ಸರ್ವದಾ ಭಕ್ತರಿಗೆ ಮಂಗಳಪ್ರದನಾಗಿ ಪಾರ್ವತಿಯನ್ನೇ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡಿರುವೆ. ಮಹಾದೇವನೇ ನಿನಗೆ ವಂದನೆ." ಎಂದು ದುಂದುಭಿಗಣಪತಿಯು ಸ್ತುತಿಸಿರುವನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು. ॥೨೭-೨೮॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶಿವಸ್ಥಾನವೈಭವವನ್ನು ತಿಳಿಸುವ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ದ್ವಿಚತ್ವಾರಿಂಶೋಽಧ್ಯಾಯಃ

||ಸ್ಕಂದ ಉವಾಚ ||

ತತ್ಪ್ರಾಚ್ಯಾಂ ಸೋಮನಾಥಾಖ್ಯಂ ಸ್ಥಾನಂ ತೀರ್ಥಂ ತದಾಖ್ಯಕಂ ।
ತತ್ರ ಸ್ನಾತ್ವಾ ನರೋ ದೃಷ್ಟ್ವಾ ಸೋಮಂ ಸೋಮೇಶ್ವರಾಭಿಧಂ ॥೧॥

ಸೋಮವಾರೇ ವಿಶೇಷೇಣ ಕಾರ್ತಿಕೇ ಶಿವಲೋಕಭಾಕ್ ।
ಸೋಮಸ್ತತ್ರಾರ್ಚಯಾಮಾಸ ತುಷ್ಟಾವೇಶಂ ಮಹೇಶ್ವರಂ ॥೨॥

|| ಸೋಮ ಉವಾಚ ||

ನಮಸ್ತೇ ಸೋಮೇಶ ತ್ರಿಪುರಹರ ಶಂಭೋ ತ್ರಿನಯನ
ಪ್ರಸೀದೇಶಾನಾದ್ಯ ಶಶಧರಕಲಾಚೂಡ ಭಗವನ್ ।

---

## ನಲವತ್ತೆರಡನೆಯ ಅಧ್ಯಾಯ

ದುಂದುಭಿಗಣಪಕ್ಷೇತ್ರದ ಪೂರ್ವಭಾಗದಲ್ಲಿ ಸೋಮನಾಥವೆಂಬ ತೀರ್ಥವೂ, ಸೋಮನಾಥೇಶ್ವರಲಿಂಗವೂ ಇರುವುದು. ಕಾರ್ತಿಕಸೋಮವಾರದ ದಿನ ಆ ತೀರ್ಥದಲ್ಲಿ ಸ್ನಾನಮಾಡಿ, ಆ ದೇವರನ್ನು ದರ್ಶನಮಾಡುವುದರಿಂದ ಶಿವಲೋಕಪ್ರಾಪ್ತಿಯಾಗುವುದು. ಅದನ್ನು ಸೋಮನು ನೆರವೇರಿಸಿ ಮಹೇಶ್ವರನನ್ನು ಈ ರೀತಿ ಸ್ತೋತ್ರಮಾಡಿರುವನು. ||೧-೨||

ಸೋಮೇಶ್ವರನೇ, ತ್ರಿಪುರಾಸುರನಾಶಕನೇ, ಶಂಕರನೇ, ತ್ರಿನಯನನೇ, ಚಂದ್ರಕಲೆಯನ್ನು ಧರಿಸಿದವನೇ ಪ್ರಸನ್ನನಾಗು. ನಿನ್ನಿಂದಲೇ ಈ ಚರಾಚರಾತ್ಮಕ

ತ್ವಯ್ಯೇವೇತ್ಥಂ ವಿಶ್ವಂ ಸುರನರಸುತ್ವರ್ಯಕ್ತಾಕ್ಸ್ಥಿತಂ (?)
ಭವಜ್ಞಾತಂ ವಿಶ್ವಂ ಸ್ಥಿತಮಿದಮಖಂಡೇ ತ್ವಯಿ ಶಿವೇ ॥೩॥

ಯಥಾ ರಾಜ್ಯೇ ಸರ್ವಾಕೃತಿವದಖಿಲಂ ಭಾತಿ ಚ ವಿಭೋ ॥೪॥

ತತ್ಪ್ರಾಚ್ಯಾಂ ದೇವತೀರ್ಥಾಖ್ಯಂ ದೇವೇಂದ್ರೇಶ್ವರಮುತ್ತಮಂ ।
ತತ್ರ ಸಂಪೂಜ್ಯ ದೇವೇಶಂ ಸ್ನಾತ್ವಾ ಸರಸಿ ಪಾವನೇ ॥೫॥

ಮರುತ್ಕೃಂತನಪಾಪೇಭ್ಯೋ ಮುಕ್ತಸ್ತತ್ರಾಭವದ್ಧರಿಃ ।
ದೇವೇಂದ್ರೇಶಂ ಸ್ತುವನ್ ಭಕ್ತ್ಯಾ ಕೃತಾಂಜಲಿಪುಟೋ ಹರಿಃ ॥೬॥

॥ ಇಂದ್ರ ಉವಾಚ ॥

ನಮಸ್ತೇ ರುದ್ರೇಶ ತ್ರಿಪುರಹರ ಮನ್ಯೋ ಪಶುಪತೇ
ಪಿನಾಕಂ ಹಸ್ತೇ ತೇ ಹರಿಶರಮಹಾದೇವ ಭಗವನ್ ।
ಪ್ರಸಾದಂ ಮೇ ಶಂಭೋ ಕುರು ಹರಕೃಪಾಧಿದೃಢತರಂ
ಮೃಡಸ್ತ್ವಂ ನಾಥಸ್ತ್ವಂ ಮೃಡಯ ತವ ಭದ್ರಸ್ತುತಿವಚಃ ॥೭॥

---

ವಾದ ಜಗತ್ತು ಉದ್ಭವಿಸಿರುವುದು. ಜಗತ್ತು ನಿನ್ನಲ್ಲಿಯೇ ಲಯಹೊಂದುವುದು. ಸರ್ವವ್ಯಾಪಿಯಾದ ನೀನೇ ಪ್ರಪಂಚರೂಪನಲ್ಲಿ ಪ್ರಕಾಶಿಸುತ್ತಿರುವೆ. ॥೩-೪॥

ಈ ಕ್ಷೇತ್ರದ ಪೂರ್ವದಿಕ್ಕಿನಲ್ಲಿ ದೇವೇಂದ್ರನಿಂದ ಪೂಜಿತವಾದ ದೇವತೀರ್ಥವೂ ದೇವೇಂದ್ರೇಶ್ವರವಿಗ್ರಹವೂ ಇರುವುದು. ಆ ಈಶ್ವರಲಿಂಗವನ್ನು ಪೂಜಿಸಿ ಗರ್ಭಸ್ಥನಾದ ಮರುದ್ಗಣವನ್ನು ಕತ್ತರಿಸಿದ ಪಾಪಧಿಂದ ಇಂದ್ರನು ಮುಕ್ತನಾದನು. ಆ ಸಮಯದಲ್ಲಿ ಅಂಜಲಿಬದ್ಧನಾಗಿ ದೇವೇಂದ್ರನು ಈ ರೀತಿ ಸ್ತುತಿಸಿದನು. ॥೫-೬॥

ರುದ್ರೇಶ್ವರನೇ, ನೀನು ತ್ರಿಪುರದಹನಮಾಡಿದವನಲ್ಲವೆ! ಪಶುಪತಿಯೇ, ನಿನ್ನ ಕೈಯಲ್ಲಿ ಪಿನಾಕವೂ, ಬಾಣರೂಪಿಯಾದ ವಿಷ್ಣುವೂ ಶೋಭಿಸುತ್ತಿರುವರಲ್ಲವೆ! ಮಹಾದೇವನೇ, ಮೃಡನೇ, ಪಶುಪತಿಯೇ, ದಯೆಯಿಂದ ನನ್ನ ಮೇಲೆ ಅನುಗ್ರಹಿಸು. ನೀನು ಸರ್ವರಕ್ಷಕನಾಗಿರುವುದರಿಂದ ನನ್ನನ್ನೂ ಸಾಂತ್ವೋಕ್ತಿಗಳಿಂದ ಅನುಗ್ರಹಿಸು. ॥೭॥

ಇತ್ಥಂ ದೇವಂ ಸ್ತುವನ್ ಶಕ್ರಃ ಪ್ರಸಾದಂ ಲಬ್ಧವಾನ್ ಹರಾತ್ ।
ತದಾಗ್ನೇಯ್ಯಾಂ ಚ ಕೃಸರಂ ದೇವಸ್ಥಾನಂ ತು ಪಾವನಂ ॥೮॥

ಯತ್ರ ದೇವ್ಯಾ ಸ ನಿಹತೋ ಮಹಿಷೋ ದೇವಕಂಟಕಃ ।
ನವಪಾಷಾಣಮೂಲಾತ್ತು ಸೇತೋಸ್ತೀರೇ ಮುನೀಶ್ವರಾಃ ॥೯॥

ತ್ರಿಷಷ್ಟಿಸಪ್ತಸ್ಥಾನಾನಿ ಮುನಿಭಿಶ್ಚಾರ್ಚಿತೋ ಹರಃ ।
ಶಂಭೋಃ ಪ್ರಿಯಕರಾಣ್ಯೇವ ಅನಂತಶಯನಾವಧಿ ॥೧೦॥

ನರನಾರಾಯಣಸ್ಥಾನಪ್ರಭಾವೋ ಮಧುರಾವಧಿ ।
ಮಾನಭೂತಂ ದಕ್ಷಿಣತೋ ರತ್ನಾರೇಶ್ವರದಕ್ಷಿಣೇ ॥೧೧॥

ಸ್ಥಾನಾನಿ ದೇವ ದೇವಸ್ಯ ಹಾಲಾಸ್ಯೋತ್ತರತಃ ಶತಂ ।
ಪೂಜಿತಾನಿ ಸುರೈಸ್ತತ್ರ ಮುನಿಭಿಸ್ಸಂಸ್ತುತಾನಿ ಚ ॥೧೨॥

ನರೈರ್ದೃಷ್ಟಾನಿ ಪಾಂಡ್ಯೇ ವೈ ಸದ್ಯಃ ಸಿದ್ಧಿಪ್ರದಾನಿ ಚ ।
ಹಾಲಾಸ್ಯಪಶ್ಚಿಮೇ ಕನ್ಯಾತೀರ್ಥಾವಧಿ ಮುನೀಶ್ವರ ॥೧೩॥

---

ಹಾಗೆ ದೇವೇಂದ್ರನು ಶಂಕರನನ್ನು ಸ್ತುತಿಸಿ ಮಹಾದೇವನನ್ನು ತೃಪ್ತಿಪಡಿಸಿ ಸಕಲ ಇಷ್ಟಾರ್ಥಗಳನ್ನೂ ಪಡೆದನು. ದೇವೇಂದ್ರತೀರ್ಥದ ಆಗ್ನೇಯಭಾಗದಲ್ಲಿ ದೇವತೆಗಳಿಗೆ ಮುಳ್ಳಿನಂತಿದ್ದ ಮಹಿಷಾಸುರನನ್ನು ದೇವಿಯು ಸಂಹಾರಮಾಡಿದ ಕೃಸರ (?) ದೇವಾಲಯವಿರುವುದು. ಅದು ಬಹಳ ಪವಿತ್ರವಾದುದು. ನವಪಾಷಾಣವೆಂಬ ಕ್ಷೇತ್ರದಿಂದ ಹಿಡಿದು ಸೇತುವಿನ ತೀರದ ಪರ್ಯಂತವಾಗಿ ಎಪ್ಪತ್ತು ಸ್ಥಾನಗಳು ಶಿವಪ್ರೀತಿಕರಗಳಾದ ಶಿವಕ್ಷೇತ್ರಗಳು. ಅವು ಅನಂತಶಯನಪರ್ಯಂತವಾಗಿಯೂ ಇರುವುದರಿಂದ ಆ ಪ್ರದೇಶವೆಲ್ಲವೂ ಈಶ್ವರನ ಪ್ರೀತಿಕರವಾದುದೇ. ||೮-೯-೧೦||

ಮಧುರಾಕ್ಷೇತ್ರದ ಪರ್ಯಂತವಾಗಿರುವ ಭೂಭಾಗವು ನರನಾರಾಯಣಕ್ಷೇತ್ರವೆನಿಸಿರುವುದು. ರತ್ನಾರೇಶ್ವರಕ್ಷೇತ್ರದ ದಕ್ಷಿಣಕ್ಕೂ, ಹಾಲಾಸ್ಯಕ್ಷೇತ್ರದ ಉತ್ತರಕ್ಕೂ ಇರುವ ಪ್ರದೇಶವು ದೇವತೆಗಳಿಂದಲೂ, ಋಷಿಜನರಿಂದಲೂ ಪೂಜಿತವಾದ ಶಿವಕ್ಷೇತ್ರಗಳಿಂದ ವಿರಾಜಿಸುತ್ತಿರುವುದು. ||೧೧-೧೨||

ಹಾಲಾಸ್ಯಕ್ಷೇತ್ರದ ಪಶ್ಚಿಮಕ್ಕೆ ಕನ್ಯಾಕುಮಾರೀಕ್ಷೇತ್ರದ ಪರ್ಯಂತವಾಗಿರುವ ಕ್ಷೇತ್ರವು ಪಾಂಡ್ಯದೇಶಕ್ಕೆ ಸಂಬಂಧಿಸಿದುದು. ಅಲ್ಲಿರುವ ಶಿವಲಿಂಗಗಳನ್ನು ದರ್ಶನ

ಸ್ಥಾನಾನಿ ಚ ತ್ರಿಷಷ್ಟೀನಿ ಅನಂತಶಯನಾವಧಿ ।
ದೇವಾಸುರಮುನಿಶ್ರೇಷ್ಠೈಃ ಪೂಜಿತಾನಿ ಸ್ತುತಾನಿ ಚ ॥೧೪॥

ಕೇರಳೇ ಸಪ್ತ ಶಂಭೋಶ್ಚ ಸ್ಥಾನಾನಿ ಮುನಿಸತ್ತಮ ।
ವೈನಾಯಕಾನ್ಯಥಾಷ್ಟೌ ಚ ಸ್ಥಾನಾನಿ ಸುಮಹಾಂತ್ಯಪಿ ॥೧೫॥

ಭಗವತ್ಯಾಸ್ತಥಾಪೀದಂ ಸುರಾಸುರ ಸಮರ್ಚಿತಂ ।
ಶಾಸ್ತುಸ್ತತ್ಪಶ್ಚಿಮೇ ಸ್ಥಾನಂ ಗಜಶೈಲಸ್ಯ ಪಶ್ಚಿಮೇ ॥೧೬॥

ಕಲಾ ಭಗವತೀ ಶಾಸ್ತಾ ಕೇರಲೇ ಚಿದ್ವಿದೋ ಮುನೇ ।
ಮಹೇಂದ್ರಮೂಲಾದಾಸಹ್ಯಂ ಸಪ್ತತ್ರಿಂಶಚ್ಛಿವಸ್ಥಲಂ ॥೧೭॥

ತದುತ್ತರೇ ಚ ಗೋಕರ್ಣಸ್ತತ್ಪ್ರಾಚ್ಯಾಂ ಮುಂಡಪಸ್ಥಲಂ ।
ಸುಬ್ರಹ್ಮಣ್ಯಂ ಮಮಸ್ಥಾನಂ ಸರ್ವೇಷಾಂ ಕಾಮದಾಯಕಂ ॥೧೮॥

ತತ್ಪ್ರಾಚ್ಯಾಂ ಸಪ್ತಷಷ್ಟೀನಿ ಶಿವಸ್ಥಾನಾನಿ ಸತ್ತಮ ।
ಮುನಿದೇವಾರ್ಚಿತಾನ್ಯೇವಂ ಆಗಂಗಾಧರರಂಗಕೇ ॥೧೯॥

---

ಮಾಡಿದವರಿಗೆ ಒಡನೆಯೇ ಸಿದ್ಧಿಯು ದೊರಕುವುದು. ಹಾಗೆಯೇ ಅನಂತಶಯನದ ಪರ್ಯಂತವಾಗಿರುವ ಅರುವತ್ಮೂರು ಕ್ಷೇತ್ರಗಳಲ್ಲಿ ದೇವಾಸುರರೂ, ಮುನಿಜನರೂ ಪರಶಿವನನ್ನು ಸ್ತುತಿಸಿ ಪೂಜಿಸಿರುವರು. ಹಾಗೆಯೇ ಕೇರಳದೇಶದಲ್ಲಿ ಏಳು ಶಿವ ಸ್ಥಾನಗಳಿರುವುವು. ಅಲ್ಲಿಯೇ ವಿನಾಯಕಕ್ಷೇತ್ರವೆನಿಸಿದ ಎಂಟು ಪ್ರದೇಶಗಳು ಮಹಾಮಹಿಮೆಯುಳ್ಳದ್ದಾಗಿರುವುವು. ||೧೩-೧೪-೧೫||

ಶಾಸ್ತ್ರ (?) ಕ್ಷೇತ್ರದ ಪಶ್ಚಿಮದಲ್ಲಿರುವ ಗಜಶೈಲದ ಪಶ್ಚಿಮಭಾಗದಲ್ಲಿ ಭಗವತಿಯ ಕಲಾಕ್ಷೇತ್ರವಿರುವುದು. ಅದು ಕೇರಳ ದೇಶಕ್ಕೆ ಸಂಬಂಧಿಸಿರುವುದು. ಅದನ್ನು ದೇವಾಸುರರು ಬಹಳವಾಗಿ ಪೂಜಿಸಿರುವರು. ಮಹೇಂದ್ರ ಮೂಲದಿಂದ ಸಹ್ಯಾದ್ರಿಯ ವರೆಗೆ ಒಟ್ಟು ಮೂವತ್ತೇಳು ಶಿವಸ್ಥಲಗಳಿರುವುವು. ಅದರ ಉತ್ತರಕ್ಕೆ ಗೋಕರ್ಣವೂ, ಪಶ್ಚಿಮಕ್ಕೆ ಮುಂಡಪಸ್ಥಲವೆನಿಸಿದ ಸುಬ್ರಹ್ಮಣ್ಯಕ್ಷೇತ್ರವೂ ಶಿವನಿಗೆ ಆಶ್ರಯಸ್ಥಾನವಾದ ಪವಿತ್ರ ಕ್ಷೇತ್ರವೆನಿಸಿರುವುದು. ಅದು ಸರ್ವರಿಗೂ ಇಷ್ಟಾರ್ಥಪ್ರದ ವೆನಿಸಿರುವುದು. ||೧೬-೧೭-೧೮||

ಅದರ ಪಶ್ಚಿಮಭಾಗದಲ್ಲಿ ಮುನಿಗಳಿಂದಲೂ ದೇವತೆಗಳಿಂದಲೂ ಅರ್ಚಿತವಾದ

ಶೃಂಗೇರಕೇ ಸರಸ್ವತ್ಯಾಃ ಪೀಠಂ ತಸ್ಮಾಚ್ಚ ಪೂರ್ವತಃ ।
ಪಶ್ಚಿಮೇ ದಕ್ಷಿಣೋದಕ್ಚ ಸ್ಥಾನಾನಾಂಚ ಚತುಶ್ಶತಂ ॥೨೦॥

ದೇವರ್ಷಿಪೂಜಿತಾನ್ಯೇವ ಶಂಭೋಃ ಸ್ವಾಯಂಭುವಾನಿ ಚ ।
ಸ್ಕಂದಸ್ಥಾನಂ ಚ ತತ್ರಾಸೀತ್ಸವಾಸಫಲನೀಸ್ಥಲಂ ॥೨೧॥

ದರ್ಶನಾತ್ಕಾಮುದಂ ಮೇಧ್ಯ ಮದ್ಭಕ್ತಾನಾಂ ವಿಶೇಷತಃ ।
ಯಃ ಸ್ನಾತಿ ಮನುಜಸ್ತಸ್ಯ ನ ಸ್ಯುಃ ಪಾಪಭಯಾದಯಃ ॥೨೨॥

ಸ್ನಾತಾನಾಂ ಚೈವ ನೋ ಪಾಪಂ ತೇಷಾಂ ತೀರೇಷು ಸತ್ತಮ ।
ಶತತ್ರಯಾಧಿಕಾನ್ಯೇವಂ ಶಂಭೋಃ ಸ್ಥಾನಾನಿ ವೈ ಮುನೇ ॥೨೩॥

ಶಿವಾರ್ಚನಾಗತಸ್ಯೈವ ಬಿಲ್ವಸ್ಥಾನಂ ತು ವಿಂಶತಿಃ ।
ಚಿತ್ರಚಿತ್ರಾಗ್ರಪರ್ಣಾ ಚ ಪುಣ್ಯಾ ವೇಗವತೀ ನದೀ ॥೨೪॥

---

ಅರುವತ್ತೇಳು ಶಿವಸ್ಥಾನಗಳು ಗಂಗಾಧರರಂಗ (?) ದ ವರೆಗೂ ಹರಡಿರುವುವು. ಶೃಂಗೇರಕ (ಶೃಂಗೇರಿ) ವೆಂಬುದು ಸರಸ್ವತಿಯ ಪೀಠವೆನಿಸಿರುವುದು. ಅದರ ನಾಲ್ಕು ದಿಕ್ಕುಗಳಲ್ಲಿಯೂ, ನಾನೂರು ಶಿವಸ್ಥಾನಗಳಿರುವುವು. ||೧೯-೨೦||

ಶಂಭುವಿನ ಮೇಲೆ ಹೇಳಿದ ಕ್ಷೇತ್ರಗಳೆಲ್ಲವೂ ದೇವರ್ಷಿಗಳಿಂದ ಪೂಜಿತವಾದುದು. ಹಾಗೆಯೇ ಪಳನೀಕ್ಷೇತ್ರವೆಂದು ಪ್ರಸಿದ್ಧವಾಗಿರುವ ಪ್ರದೇಶವು ಕುಮಾರ ಸ್ವಾಮಿಯಕ್ಷೇತ್ರವೆಂದು ಪ್ರಸಿದ್ಧಿಗೊಂಡಿರುವುದು. ಅದರ ದರ್ಶನದಿಂದಲೂ ಅಲ್ಲಿರುವ ಸ್ಕಂದತೀರ್ಥದಲ್ಲಿ ಸ್ನಾನ ಮಾಡುವುದರಿಂದಲೂ, ನನ್ನ (ಕುಮಾರಸ್ವಾಮಿಯ) ಭಕ್ತರಿಗೆ ಪಾಪಭಯವೇ ಇರುವುದಿಲ್ಲ. ||೨೧-೨೨||

ಅಲ್ಲಿ ವಾಸಮಾಡುವವರಿಗಂತೂ ಪಾಪಭಯವೇ ಕಾಣುವುದಿಲ್ಲ ಅದೇ ತೀರದಲ್ಲಿ ಮುನ್ನೂರಕ್ಕಿಂತ ಹೆಚ್ಚಾಗಿ ಶಿವಕ್ಷೇತ್ರಗಳಿರುವುವು. ಶಿವಾರ್ಚನೆಯಲ್ಲಿ ತೊಡಗಿದವರಿಗೆ ಅಲ್ಲಿಯೇ ಇಪ್ಪತ್ತು ಬಿಲ್ವಸ್ಥಾನಗಳಿರುವುವು. ಚಿತ್ರಾವತೀ, ವೇಗವತೀ ಈ ನದಿಗಳು ಬಹು ಪುಣ್ಯಕರಗಳು. ಸಾಗರವನ್ನು ಕುರಿತು ಹೊರಡುವ ಪುಣ್ಯಕರವಾದ ಒಂದು ಸರೋವರದಿಂದ ಈ ನದಿಯು ಉದ್ಭವಿಸಿ ಹೊರಟಿರುವುದು. ಹಾಗೆಯೇ ತಾಮ್ರಪರ್ಣೀ, ಚಿತ್ರಾವತೀ ನದಿಗಳು ಸಾಗರವನ್ನು ಸೇರುವ ಸಂಗಮ ಸ್ಥಾನದಲ್ಲಿ ,ಮಾರ್ಗಶೀರ್ಷಮಾಸದಲ್ಲಿ ಸ್ನಾನಮಾಡುವುದರಿಂದ ಪಾಪನಾಶಕವಾದ

ಪುಣ್ಯಂ ಪಾಪಹರಂ ಸದ್ಯಃ ಸ್ನಾಸ್ಯತಾಂ ಮಾರ್ಗಶೀರ್ಷಕೇ ।
ತಾಮ್ರಪರ್ಣ್ಯಾಂ ತ್ರಿಧಾಸ್ನಾನಂ ಪಾಪಸಂಘನಿವಾರಣಂ ॥೨೫॥

ಹಾಲಾಸ್ಯಂ ವೇಣುವಿಪಿನಂ ಶುಚೀಂದ್ರಂ ಪಾಪನಾಶನಂ ।
ಕುಂತಾಲಂ ತ್ರಿಮುಹತ್ಸ್ಥಾನಂ ಮೋಥತ್ಪುಣ್ಯಸಮಾಹ್ವಯಂ ॥೨೬॥

ಗುರವ್ಯಾಂತೇ ತನೀತೀರೆ(?) ಸ ಶಿವಸ್ಥಾನವೈಭವಂ ।
ತೋತಾದ್ರಿವಾಸೀ ವಿಷ್ಣುಶ್ಚ ಅನಘಾಖ್ಯಮುನೀಶ್ವರಾಃ ॥೨೭॥

॥ ಸ್ಕಂದ ಉವಾಚ ॥

ಏಷು ಸ್ಥಾನವರೇಷು ದೇವಮುನಿಭಿರ್ಗಂಧರ್ವಯಕ್ಷೋರಗೈ ।
ರ್ಭಕ್ತ್ಯಾ ಪೂಜಿತ ಏವ ಶಂಕರಮಹಾದೇವೋತ್ಥಲಿಂಗೇಷು ವೈ ॥೨೮॥

ತೇಷಾಂ ಮುಕ್ತಿಮಭೀಷ್ಟಮರ್ಥಮಖಿಲಂ ಪ್ರಾದಾತ್ಕೃಪಾಂಭೋನಿಧಿಃ ।
ಪ್ರತ್ಯೇಕಂ ನ ಚ ವಕ್ತುಮುತ್ಸ್ಕಲಮಹೋ ಮಾಹಾತ್ಮ್ಯಮೀಶಸ್ಯ ಹಿ ॥೨೯॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಶಿವಸ್ಥಾನವರ್ಣನಂ
ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

ಸುಕೃತವು ಲಭಿಸುವುದು. ತಾಮ್ರಪರ್ಣೀನದಿಯಲ್ಲಿ ಮೂರಾವೃತ್ತಿ ಸ್ನಾನಮಾಡುವುದರಿಂದಲೂ ಸಕಲ ಪಾಪವು ನಾಶವಾಗುವುದು. ॥೨೩-೨೪॥

ಅಲ್ಲಿಯೇ ಬಿದಿರುವನ (ವೇಣುವನ) ವೆಂದು ಪ್ರಸಿದ್ಧವಾಗಿರುವ ಹಾಲಾಸ್ಯ ಕ್ಷೇತ್ರವಿರುವುದು. ಅದೂ ಸಹ ಪುಣ್ಯಪ್ರದವಾಗಿ ಪಾಪನಾಶಕವೆನಿಸಿಕೊಂಡಿದೆ. ಕುಂತಾಲ, ಗುರವ್ಯ(?) ತನೀತೀರ(?) ಮುಂತಾದ ಈ ಮೂರು ಸ್ಥಾನಗಳೂ ಶಿವಕ್ಷೇತ್ರಗಳು. ತೋತಾದ್ರಿವಾಸಿಯಾದ ಮಹಾವಿಷ್ಣುವೂ ಅಲ್ಲಿಯೇ ಅನರ್ಘ್ಯವಾದ ಪುಣ್ಯವನ್ನು ಭಕ್ತರಿಗೆ ಒದಗಿಸುತ್ತಿರುವನು. ॥೨೫-೨೬-೨೭॥

ಎಲೈ ಜೈಗೀಷವ್ಯನೇ, ನಾನು ಹಿಂದೆ ಹೇಳಿದ ಎಲ್ಲಾ ಶಿವಸ್ಥಾನಗಳಲ್ಲಿಯೂ, ಶಿವಲಿಂಗಗಳಿರುವುವು ಅವುಗಳಲ್ಲಿ ಮೂರ್ತಿಮತ್ತಾಗಿ ನೆಲಸಿರುವ ಮಹಾದೇವನನ್ನು ದೇವತೆಗಳು, ಮುನಿಗಳು, ಗಂಧರ್ವಾದಿಗಳು, ಎಲ್ಲರೂ ಬಹುಭಕ್ತಿಯಿಂದ ಪೂಜಿಸುತ್ತಿರುವರು. ದಯಾಸಮುದ್ರನಾದ ಮಹಾದೇವನು ಅದರಿಂದ ತೃಪ್ತನಾಗಿ ಅವರೆಲ್ಲ

ರಿಗೂ ಶಾಶ್ವತವಾದ ಮುಕ್ತಿಯನ್ನು ಕರುಣಿಸಿರುವನು. ಈ ವಿಷಯದಲ್ಲಿ ಶಿವ ಮಹಿಮೆಯನ್ನು ಇನ್ನೂ ಅತಿಯಾಗಿ ವರ್ಣಿಸಲು ನನ್ನಿಂದ ಸಾಧ್ಯವಿಲ್ಲ. ಆದ್ಯಂತ ವಿಲ್ಲದ ಶಿವನ ಮಹಾಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಲು ಯಾರಿಂದ ತಾನೇ ಸಾಧ್ಯವಾದೀತು ? ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹಾಮುನಿಗೆ ಶಿವಸ್ಥಾನವೈಭವವನ್ನು ವಿವರಿಸಿದನು. ||೨೮-೨೯||

ಇಲ್ಲಿಗೆ ಶ್ರೀಶಿವರಹಸ್ಯದ ಉತ್ತರಾರ್ಧದಲ್ಲಿ ಶಿವಸ್ಥಾನವರ್ಣನೆಯೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ತ್ರಿಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಹಾಲಾಸ್ಯಂ ಲಾಸ್ಯಸದನಂ ಮದನಾಂತಕಶಂಕರಪ್ರಿಯಂ ।
ಇತಿ ಶ್ರುತಂ ಮಯಾ ಪೂರ್ವಂ ತಸ್ಮೈ ಕಥಯ ಸತ್ತಮ ॥೧॥

ಸಹೈಭಿರ್ಮುನಿಭಿರ್ದೇವೈರ್ಗಣೈಸ್ತಾರಕನಾಶನ ।
ಹಾಲಾಸ್ಯಮಹಿಮಾಂ ಶ್ರೋತುಂ ಸಮುತ್ಕಂಠತಿ ಮೇ ಮನಃ ॥೨॥

ನೀಲಕಂಠಕಥಾಹರ್ಷೈರ್ಹರ್ಷಯಾಸ್ಮಾನ್ ಷಡಾನನ ।
ಮುನಿರಾಲಿಂ ವಿನಾ ದೃಷ್ಟ್ವಾ ನೀಲಕಂಠೇತು ಕಾಮಿತಾ ॥೩॥

---

## ನಲವತ್ತುಮೂರನೆಯ ಅಧ್ಯಾಯ

ಜೈಗೀಷವ್ಯಮಹರ್ಷಿಯು "ಶ್ರೀ ಪರಶಿವನ ನಾಟ್ಯಸದನದಂತಿರುವುದು ಹಾಲಾಸ್ಯಕ್ಷೇತ್ರವೆಂದು ಕೇಳಿರುವೆನು." ಎಂದು ಕುಮಾರಸ್ವಾಮಿಯೊಡನೆ ಹೇಳುತ್ತಾ ಆ ಕ್ಷೇತ್ರದ ಮಹಿಮೆಯನ್ನು ಕೇಳಲು ಈ ಋಷಿಜನರೂ, ದೇವಗಣಗಳೂ, ನಾನೂ ಸಹ ಅತ್ಯುತ್ಸಾಹಭರಿತರಾಗಿರುವೆವು. ದಯೆಯಿಂದ ಅದನ್ನು ವಿವರಿಸಬೇಕೆಂದು ಸ್ಕಂದಸ್ವಾಮಿಯನ್ನು ಪ್ರಾರ್ಥಿಸುತ್ತಾ, ॥೧-೨॥

"ಪರಶಿವಪುತ್ರನಾದ ಸ್ಕಂದಮುನಿಯೇ, ಪರಮೇಶ್ವರನ ಹರ್ಷಪ್ರದವಾದ ಕಥೆಯನ್ನು ನಮಗೆ ವಿಸ್ತರಿಸಿ ಹೇಳುತ್ತಾ ನಮ್ಮನ್ನು ಆನಂದಸಾಗರದಲ್ಲಿ ಮುಳುಗಿಸು" ಎಂದು ಹೇಳಿದ ಜೈಗೀಷವ್ಯನ ಮಾತಿನಿಂದಲೂ, ನಂದೀಶ್ವರನ ಪ್ರೇರಣೆ

ಸ ತಸ್ಯ ಜೈಗೀಷವ್ಯಸ್ಯ ವಚಸಾ ನಂದಿತಾಂತರಃ ।
ಉವಾಚ ಷಣ್ಮುಖೋ ವೀಕ್ಷ್ಯ ಹಾಲಾಸ್ಯಕ್ಷೇತ್ರವೈಭವಂ ॥೪॥

॥ ಶ್ರೀಸ್ಕಂದ ಉವಾಚ ॥

ಶೃಣು ಪಾಂಡ್ಯೇಷು ಪುಣ್ಯಂ ತದ್ಧಾಲಾಸ್ಯಂ ಕ್ಷೇತ್ರಮುತ್ತಮಂ ।
ಕ್ಷೇತ್ರಂ ಗಜಮಿತಿ ಪ್ರೋಕ್ತಂ ಶಿವೇನ ಮನಸಾ ತತಂ ॥೫॥

ವೇಗವತ್ಯಪಿ ಚಾನೀತಾ ನದೀ ಪಾಪಭಯಾಪಹಾ ।
ಭೂಲೋಕೇ ಶಿವಲೋಕೇ ತಾಂ ಮಧುರಾಪುರಮಿತ್ಯಪಿ ॥೬॥

ಚತುಃ ಪಂಡಪುರಂ ಚೇತಿ ಕದಂಬವಿಪಿನಂ ಕ್ಷಿತಿ ।
ಮನಸಾ ಮಾನಸಪ್ರಖ್ಯಂ ಸರಶ್ಶಿವವಿನಿರ್ಮಿತಂ ॥೭॥

ಹೇಮಪದ್ಮಾಕರಂ ನಾಮ್ನಾ ತೀರ್ಥಂ ತಿಷ್ಠತಿ ಪುಣ್ಯದಂ ।
ತತ್ತೀರೇಷ್ಟಗಜೈರ್ಯುಕ್ತಂ ಗರ್ಭಗೇಹಂ ಮಹೇಶಿತುಃ ॥೮॥

ವಿಶ್ವಕರ್ಮಾ ಸ್ವಶಿಲ್ಪೇನ ವಿನಿರ್ಮಾಯ ದದೌ ಶಿವೇ ।
ಮಂಟಪಾನಾಂ ಚ ದಿವ್ಯಾನಾಂ ಪ್ರಾಕಾರಾಣಾಂತು ಗೋಪುರಂ ॥೯॥

---

ಯಿಂದಲೂ ಕುಮಾರಸ್ವಾಮಿಯು ಪ್ರಚೋದಿತನಾಗಿ ಹಾಲಾಸ್ಯಕ್ಷೇತ್ರಮಹಿಮೆಯನ್ನು ಹೀಗೆ ಹೇಳತೊಡಗಿದನು. ॥೩-೪॥

"ಜೈಗೀಷವ್ಯಾದಿಗಳೇ, ಪಾಂಡ್ಯದೇಶದಲ್ಲಿ ಹಾಲಾಸ್ಯವೆಂಬ ಕ್ಷೇತ್ರವೊಂದಿರುವುದು. ಅದನ್ನು ಗಜಕ್ಷೇತ್ರವೆನ್ನುವರು. ಅದನ್ನು ಈಶ್ವರನೇ ಮನಸಾ ನಿರ್ಮಿಸಿರುವನು. ಸಮಸ್ತಪಾಪವನ್ನೂ ನಾಶಗೊಳಿಸುವ ಮತ್ತು ಭೂಲೋಕ, ಶಿವಲೋಕಗಳನ್ನು ಪಾವನಗೊಳಿಸುವ ವೇಗವತೀ ನದಿಯನ್ನೂ ಶಂಕರನೇ ಸಾಕ್ಷಾನ್ನಿರ್ಮಾಣ ಮಾಡಿರುವನು. ॥೫-೬॥

ಮಧುರಾ, ಪಂಡರೀಪುರ, ಕದಂಬವನ, ಹೇಮಪದ್ಮಾಕರವೆಂಬ ಸರೋವರ ಈ ನಾಲ್ಕು ಕ್ಷೇತ್ರಗಳನ್ನೂ ಪರಶಿವನು ನಿರ್ಮಾಣಮಾಡಿರುವನು. ಅದೇ ಹೇಮಪದ್ಮಾಕರದ ತೀರಭಾಗದಲ್ಲಿ ಅಷ್ಟಗಜಗಳಿಂದಲೂ ಮಾಡಿದ ಈಶ್ವರನ ಗರ್ಭಗೃಹವೊಂದಿರುವುದು. ॥೭-೮॥

ಆ ಶಿವಾಲಯವನ್ನೂ, ಅದರ ಮುಂದೆ ಅನೇಕ ಪ್ರಾಕಾರಗಳನ್ನೂ ಮಂಟಪ

ರಾರಾಜದ್ವೃಷಭೈರ್ದೇವ್ಯಾಮೀನಾಕ್ಷ್ಯಾಶ್ಚಾಲಯಂ ವ್ಯಧಾತ್ ।
ಕಲಧೌತಸಭಾಂ ತತ್ರ ಚಕಾರ ಸ ಸಭಾಪತೇಃ ॥೧೦॥

ಯತ್ರಾಥ ನೃತ್ಯಮಕರೋತ್ತದಾ ದೇವಃ ಸಭಾಪತಿಃ ।
ಹಾಲಾಸ್ಯಸುಂದರೋ ದೇವಃ ಲಿಂಗರಾಜೋತ್ರಸುಸ್ಥಿತಃ ॥೧೧॥

ತತ್ರ ವಾಸಂ ಮುನಿಶ್ರೇಷ್ಠಾಃ ರೋಚಯಂತಿ ತಪಸ್ವಿನಃ ।
ಭೃಗುರ್ಮರೀಚಿಃ ಕಣ್ವೋಥ ಗೌತಮೋಗಸ್ತ್ಯ ಏವ ಚ ॥೧೨॥

ವಸಿಷ್ಠೋ ವಿಷ್ಣುರತ್ರಿಶ್ಚ ಜಮದಗ್ನಿಸ್ತಥಾಂಗಿರಾಃ ।
ಹೇಮಪದ್ಮಾಕರೇಸ್ನಾತ್ವಾ ಭಸ್ಮದೀಪ್ತಾಸ್ತ್ರಿಪುಂಡ್ರಕಾಃ ॥೧೩॥

ರುದ್ರಾಕ್ಷಮಾಲಾಭರಣಾಃ ರುದ್ರಪಂಚಾಕ್ಷರಾದರಾಃ ।
ಕದಂಬಸುಂದರಂ ಲಿಂಗಂ ಪೂಜಯಂತಿ ತಪಸ್ವಿನಃ ॥೧೪॥

ತ್ರಿಕಾಲಂ ಬಿಲ್ವಪತ್ರೈಶ್ಚ ಫಲಮೂಲನಿವೇದನೈಃ ।
ಸ್ತುವಂತಿ ಭಕ್ತಿಭರಿತಾಸ್ತತ್ರಶ್ರೀಸುಂದರೇಶ್ವರಂ ॥೧೫॥

---

ಗಳನ್ನೂ, ಗೋಪುರಗಳನ್ನೂ ತಾನೇ ಮನಸಾ ನಿರ್ಮಿಸಿ, ಅದರಲ್ಲಿ ಸುಂದರವಾದ ವೃಷಭವಿಗ್ರಹಗಳನ್ನೂ ಸೃಷ್ಟಿಸಿದನು. ಹಾಗೆಯೇ ಸುಂದರವಾದ ಮೀನಾಕ್ಷೀದೇವಾಲಯವನ್ನು ಕಲ್ಪಿಸಿದನು. ಅಲ್ಲಿಯೇ ಸಭಾಪತಿಯೆನಿಸಿದ ಪರಮೇಶ್ವರನಿಗೆ ಸುವರ್ಣಮಯವಾದ ಸಭಾಗೃಹವೊಂದನ್ನೂ ರಚಿಸಿದನು. ॥೯-೧೦॥

ಸಭಾಪತಿಯಾದ ಮಹೇಶ್ವರನು ಹಾಲಾಸ್ಯಸುಂದರನೆಂಬ ಹೆಸರಿನಿಂದ ಅಲ್ಲಿ ನಾಟ್ಯವಾಡಿದನು. ಅದೇ ಕ್ಷೇತ್ರದಲ್ಲಿ ವಾಸಮಾಡಬೇಕೆಂದು ಸಕಲ ಮಹರ್ಷಿಗಳೂ ಅಪೇಕ್ಷಿಸುವರು. ಅದರಂತೆಯೇ, ಭೃಗು, ಮರೀಚಿ, ಕಣ್ವ, ಗೌತಮ, ಅಗಸ್ತ್ಯ, ವಸಿಷ್ಠ, ವಿಷ್ಣು, ಅತ್ರಿ, ಜಮದಗ್ನಿ, ಅಂಗಿರಸ್ಸು ಮೊದಲಾದ ಮಹರ್ಷಿಗಳೆಲ್ಲರೂ, ಹೇಮಪದ್ಮಾಕರ ಸರಸ್ಸಿನಲ್ಲಿ ಸ್ನಾನಮಾಡಿ ಭಸ್ಮತ್ರಿಪುಂಡ್ರದಿಂದ ಪ್ರಕಾಶಿಸಿದರು. ॥೧೧-೧೨-೧೩॥

ಆ ಮಹರ್ಷಿಗಳು ರುದ್ರಾಕ್ಷಿಯ ಮಾಲೆಗಳನ್ನು ಧರಿಸಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ ತ್ರಿಕಾಲಗಳಲ್ಲಿಯೂ ಬಿಲ್ವದಳಗಳಿಂದಲೂ ಫಲಮೂಲಾದಿ

॥ ಮುನಯ ಊಚುಃ ॥

ಸಾನಂದಮಿಂದುಶಕಲಾಭರಣಂ ಭಕ್ತತೋಷಣಂ ॥೧೬॥

ಹಾಲಾಸ್ಯ ಸುಂದರವಿಭೋ ಶಶಿಧಾಮಚೂಡ
ಹೇಮಾಬ್ಜಿನೀತಟಗತೋರುಸಹೇಮಕುಂಭ ।
ಮಧ್ಯಸ್ಥಸೌಧವಿಲಸಚ್ಛಿವಮೂಲಲಿಂಗಂ
ಗಂಗೋತ್ತಮಾಂಗಧೃತ ಹಾರಭುಜಂಗ ಶಂಭೋ ॥೧೭॥

ನಃ ಪಾಲಯಾಶು ಸುದೃಶಾ ಭಗವನ್ನತಾಸ್ಸ್ಮೇ
ಬ್ರಹ್ಮಾದಿತ್ರಿದಶನತಾಂಘ್ರಿಕಮಲಂ ಪಾಪೌಘಮೂಲಾನಲಂ ।
ತ್ವಾಂ ಶಂಭುಂ ಧೃತಹಸ್ತಶೂಲಮಗಜಾಕಾಂತಂ ಚ ಕಾಲಾನಲಂ
ತ್ವಾಂ ಗಂಗಾಧರ ಮಾನತಾಃ ಸ್ಮ ಮುನಯೋ ಹಾಲಾಸ್ಯಲಿಂಗಂ ಸದಾ ॥೧೮॥

ಧನ್ಯೇನಾಕ್ಷಿಯುಗೇನ ಸೇವನಪರಾಂಸ್ತ್ವಂ ಸುಂದರಾಲೋಕಯಾ ॥೧೯॥

---

ನೈವೇದ್ಯಗಳಿಂದಲೂ ಮಹಾದೇವನನ್ನು ಭಕ್ತಿಪೂರ್ವಕವಾಗಿ ಪೂಜಿಸುತ್ತಾ ಕಾಲ ಕಳೆದರು. ॥೧೪-೧೫॥

ಮತ್ತು ಸದಾ ಚಂದ್ರಚೂಡನೂ, ಭಕ್ತಪರಿಪೋಷಕನೂ ಆದ ಶಂಕರನನ್ನು ಹೀಗೆ ಪ್ರಾರ್ಥಿಸಿದರು. " ಮಹಾದೇವನೇ, ಹಾಲಾಸ್ಯಸುಂದರನೇ, ಚಂದ್ರಶೇಖರನೇ ಪದ್ಮಾಕರಸರೋವರದ ದಡದಲ್ಲಿ ಸುವರ್ಣ ಕಲಶಗಳಿಂದ ಶೋಭಿಸುವ ಮೂರ್ತಿಯೇ, ನಿನ್ನ ಈ ಶಿವಲಿಂಗವು ಈ ದಿವ್ಯಸೌಧದ ಮಧ್ಯಭಾಗದಲ್ಲಿ ವಿರಾಜಿಸುತ್ತಿರುವುದಲ್ಲವೆ? ನಿನ್ನ ಶಿರಸ್ಸಿನಲ್ಲಿ ಗಂಗಾನದಿಯೂ, ನಾಗಾಭರಣವೂ ಶೋಭಿಸುತ್ತಿರುವುವು.॥೧೬-೧೭॥

ಬ್ರಹ್ಮಾದಿದೇವತೆಗಳಿಂದಲೂ ಪೂಜಿತವಾದ ಮತ್ತು ಪಾಪಮೂಲಕ್ಕೆ ಅಗ್ನಿಪ್ರಾಯವಾದ ನಿನ್ನ ಪಾದಗಳಿಗೆ ನಾವು ವಂದಿಸುತ್ತಿರುವೆವು. ತ್ರಿಶೂಲವನ್ನು ಕೈಯಲ್ಲಿ ಧರಿಸಿ, ಪಾರ್ವತಿಯೊಡಗೂಡಿ ಕಾಲಾನಲಸ್ವರೂಪಿಯಾದ ಮತ್ತು ಗಂಗಾಧರನೆನಿಸಿದ ನಿನ್ನ ಹಾಲಾಸ್ಯಲಿಂಗಕ್ಕೆ ಸರ್ವದಾ ನಮಸ್ಕರಿಸುತ್ತಿರುವೆವು. ಇಂತಹ ನಮ್ಮನ್ನು ನಿನ್ನ ಕರುಣಾಕಟಾಕ್ಷದಿಂದ ಪಲಹುತ್ತಿರು. ॥೧೮॥

ಸದಾ ನಿನ್ನ ಸೇವೆಯಲ್ಲಿಯೇ ನಿರತರಾಗಿರುವ ನಮ್ಮನ್ನು ನಿನ್ನ ನೇತ್ರಯುಗಳದಿಂದ ನೋಡಿ ಸಂರಕ್ಷಿಸು " ಎಂದು ಸಕಲ ಮುನಿಗಳೂ ಆ ಹಾಲಾಸ್ಯೇಶ್ವರನನ್ನು

ಇತ್ಥಂ ಸ್ತುವಂತಿ ಮುನಯಸ್ತತ್ರ ಹಾಲಾಸ್ಯಸುಂದರಂ ।
ಅಗಸ್ತ್ಯಸ್ತತ್ರ ನಿಗಮಾ ತಪಸಾ ತೋಷ್ಯ ಶಂಕರಂ ॥೨೦॥

ಕರ್ಪೂರಸುಂದರಂ ದೇವಂ ತದ್ವಿವಾಹಾವಲೋಕನಂ ।
ಕರ್ತುಂ ತತ್ರ ಸ್ತುವನ್ನೀಶಮುವಾಚೇತ್ಥಂ ಮುನೀಶ್ವರಃ ॥೨೧॥

॥ ಅಗಸ್ತ್ಯ ಉವಾಚ ॥

ಲೀಲಾರ್ಧಾಂಜಲಿಮೇಕಮೇವ ಕುಸುಮಂ ಸಾಮ್ರಾಜ್ಯಲಕ್ಷ್ಮೀಪ್ರದಂ
ಫುಲ್ಲಾಶೇಷ ಚರಾಚರಾತ್ಮಕಜಗತ್ಸ್ಥಾನೇಷು ಮೂರ್ತೇ ವಿಭೋ ।
ಫಾಲಾಕ್ಷಾನಲದಗ್ಧಮನ್ಮಥಗುರೋಃ . . . . . ಸ್ಯತಾಂ ಸಂತತಂ
ಹಾಲಾಸ್ಯೇಶ ಕೃಪಾಕಟಾಕ್ಷಲಹರೀಂ ಮಾಮೀಶ್ವರಾವ್ಯಾದ್ದ್ರುತಂ ॥೨೨॥

ಸಂಫುಲ್ಲಾಮಲಪದ್ಮಹಸ್ತವರದ ತ್ರಾಯಸ್ವ ಮಾಂ ಸಂತತಂ
ಲೀಲಾನಾರದಗೀತತುಷ್ಟಹೃದಯಂ ಶ್ರೀಮತ್ಕದಂಬಾಧಿಪಂ ।
ಶ್ರೀಮತ್ಕದಂಬ ತತೀನಾಥಂ ಶರಣ್ಯಂ ಸತಾಂ
ವಂದೇ ಯಂ ಚ ತತೋಮಿತಂ ಪಶುಪತಿಂ ಪಂಚತ್ವನಾಶಂ ಭಜೇ ॥೨೩॥

---

ಸ್ತುತಿಸುವರು. ಅಗಸ್ತ್ಯಮಹರ್ಷಿಯಾದರೋ ಅಲ್ಲಿ ಘೋರವಾದ ತಪಸ್ಸನ್ನಾಚರಿಸಿ, ಮಹಾದೇವನ ವಿವಾಹವನ್ನು ನೋಡುವ ಕುತೂಹಲವುಳ್ಳವನಾಗಿ ಮಹಾದೇವನನ್ನೇ ಸ್ತುತಿಸುತ್ತಾ ಹೀಗೆಂದನು. ॥೧೯-೨೦-೨೧॥

ಸಕಲ ಜಗನ್ಮಂಗಳಸ್ವರೂಪನಾದ ನಿನಗೆ ಒಂದು ಬೊಗಸೆ ಪುಷ್ಪಗಳನ್ನು ಸಮರ್ಪಿಸುವುದರಿಂದಲೇ ಸಾಮ್ರಾಜ್ಯಸಂಪತ್ತು ದೊರಕುವಾಗ ಭಕ್ತಿಯಿಂದ ಸಂಪೂರ್ಣವಾಗಿ ಪೂಜಿಸುವುದರಿಂದ ಹೇಳುವುದೇನಿದೆ? ಚರಾಚರಾತ್ಮಕವಾದ ಜಗತ್ತಿಗೇ ನೀನು ಸ್ವಾಮಿಯಂತಿರುವಾಗ ನಿನ್ನನ್ನಲ್ಲದೆ ಮತ್ತಾರನ್ನು ನಾನು ಮೊರೆಹೊಂದುವೆನು. ಹಣೆಗಣ್ಣಿಂದಲೇ ನಾಶಮಾಡಿದ ಮನ್ಮಥನುಳ್ಳವನೇ, ಹಾಲಾಸ್ಯೇಶ್ವರನೇ, ನಿನ್ನ ಕೃಪಾಕಟಾಕ್ಷದಿಂದ ನನ್ನನ್ನು ಸಲಹುವವನಾಗು. ॥೨೨॥

ಅರಳಿದ ಕಮಲದಂತೆ ಕೈಯುಳ್ಳ ಮಹಾದೇವನೇ, ವಿಲಾಸಯುಕ್ತವಾದ ನಾರದ ಮಹರ್ಷಿಯ ಗಾನದಿಂದ ತುಷ್ಟವಾದ ಮನಸ್ಸುಳ್ಳವನೇ, ಕದಂಬವನಕ್ಕೆ

॥ ಸ್ಕಂದ ಉವಾಚ ॥

**ಹಾಲಾಸ್ಯೇಶೋಽಪಿ ತುಷ್ಟೋ ಮುದಿರನಿಭಕಲಸ್ತಂ ತದಾ ಪ್ರಾಹ ದೇವೋ**
**ಗಸ್ತ್ಯಂ ಭಕ್ತತಮಂ ಮದೀಯ ವಿವಿಧಾಲೀಲಾಪ್ರಪಂಚಂ ಕುರು ।**
**ಅತ್ರೈವಾಸುಗಿರೀಂದ್ರಜಾಪರಿಣಯಂ ದೃಷ್ಟ್ವೋಽಸಿ ನೃತ್ತಂ ಮಮ**
**ನೃತ್ಯಸ್ತಂ ಕಲಧೌತಸಾರಸದಸಿ ಧನ್ಯಃ ಸುಖಂ ಚಾಪ್ನುಹಿ ॥೨೪॥**

**ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಹಾಲಾಸ್ಯವೈಭವೇ ತ್ರಿಚತ್ವಾರಿಂಶೋಽಧ್ಯಾಯಃ**

---

ಒಡೆಯನೆನಿಸಿ ಸತ್ಪುರುಷರನ್ನು ರಕ್ಷಿಸುವ ಸ್ವಭಾವದವನೇ, ಅಜ್ಞಾನಿಗಳಾದ ನಮಗೆ ಒಡೆಯರೆನಿಸಿ ಭಕ್ತರ ವಿಷಯದಲ್ಲಿ ಮೃತ್ಯುದೇವತೆಯನ್ನೇ ನಾಶಪಡಿಸುವ ಮಹಾ ಮಹಿಮನೇ, ನಾವು ನಿನ್ನನ್ನು ಶರಣುಹೊಂದುವೆವು.'' ॥೨೩॥

ಎಂದು ಅಗಸ್ತ್ಯಮಹರ್ಷಿಯು ವಿಧವಿಧವಾಗಿ ಹೊಗಳಲು ಹಾಲಾಸ್ಯೇಶನು ಸಂತೋಷಹೊಂದಿ, ತನ್ನ ಅತ್ಯಂತ ಭಕ್ತನೆನಿಸಿದ ಅಗಸ್ತ್ಯಮಹಾಮುನಿಯನ್ನು ಕುರಿತು, ಅಯ್ಯಾ ಭಕ್ತವರ್ಯನೇ, ನೀನು ನನ್ನ ಲೀಲಾಪ್ರಪಂಚವನ್ನು ನೋಡುವೆ. ಇಲ್ಲಿಯೇ ನಡೆಯುವ ನನ್ನ ಮತ್ತು ಪಾರ್ವತಿಯ ವಿವಾಹವರ್ಣನೆಯನ್ನೂ ಹಾಗೆಯೇ ಸುವರ್ಣಮಂಟಪದಲ್ಲಿ ನಾನು ನಡೆಸುವ ನಾಟ್ಯಕಲೆಯನ್ನೂ ನೋಡಿ ಸಂತುಷ್ಟನಾಗು. ಮತ್ತು ಶಾಶ್ವತ ಸುಖವನ್ನು ಪಡೆ'' ಎಂದು ಅನುಗ್ರಹಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗಳಿಗೆ ವಿವರಿಸಿ ಹೇಳಿದನು. ॥೨೪॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಹಾಲಾಸ್ಯ ವೈಭವವನ್ನು ತಿಳಿಸುವ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಮುನಿರ್ಹಾಲಾಸ್ಯನಾಥಸ್ಯ ಲೀಲಾಸಾರಕಥಾರಸೈಃ ।
ಲೋಕಂ ಪಾಪೈಕಬಹುಲಂ ಮುಕ್ತಯೇ ಸಮಚೀಕರತ್ ॥೧॥

ಮಲಯಧ್ವಜಕನ್ಯಾಯಾಃ ಜಯಂ ದತ್ವಾಲಕೇಷು ಚ ।
ಪಾಣಿಗ್ರಹಂ ಸುರೈಸ್ತತ್ರಾಪಶ್ಯತ್ಕುಂಭಭೂಸ್ತದಾ ॥೨॥

ಕಲಧೌತಸಭಾಮಧ್ಯೇ ವ್ಯತ್ಯಸ್ತಂ ಚಾನನಂ ವಿಭೋಃ ।
ದೃಷ್ಟ್ವಾ ಸಹಸ್ರನಾಮ್ನೇಶಂ ತುಷ್ಟಾವ ಘಟಜೋ ಮುನಿಃ ॥೩॥

---

## ನಲವತ್ತುನಾಲ್ಕನೆಯ ಅಧ್ಯಾಯ

ಅಗಸ್ತ್ಯಮಹಾಮುನಿಯು ಹಾಲಾಸ್ಯನಾಥನ ದಿವ್ಯಕಥಾಮೃತವನ್ನು ಪಾಪ ಭೂಯಿಷ್ಠವಾದ ಲೋಕಕ್ಕೆ ಹರಡಿ, ಅದರಿಂದ ಸರ್ವರೂ ಮುಕ್ತರಾಗುವಂತೆ ಅನುಗ್ರಹಿಸಿದನು. ಮತ್ತು ಮಲಯಧ್ವಜನೆನಿಸಿದ ಮಹಾರಾಜನ ಪುತ್ರಿಯಾದ ಪಾರ್ವತಿಯ ಮುಂಗುರುಳಿನ ಸೌಂದರ್ಯದ ಉತ್ಕೃಷ್ಟತೆಯನ್ನು ಬೀರುತ್ತಾ ನಡೆದ ಗಿರಿಜಾಕಲ್ಯಾಣದ ಉತ್ಸವವನ್ನು ದೇವತೆಗಳೊಡನೆ ಅಗಸ್ತ್ಯನು ಸಂಪೂರ್ಣ ಭಕ್ತಿಯಿಂದ ನೋಡತೊಡಗಿದನು. ॥೧-೨॥

ಕನಕಸಭೆಯ ಮಧ್ಯದಲ್ಲಿ ಮುಖವಿಕಾರದಿಂದ ಕುಳಿತಿದ್ದ ಸ್ವಾಮಿಯನ್ನು ಅಗಸ್ತ್ಯಮುನಿಯು ಸಹಸ್ರನಾಮಗಳಿಂದ ಸ್ತುತಿಸಿದನು. ಜೈಗೀಷವ್ಯನೇ, ಮತ್ತೊಂದು

ತತ್ರ ಮುನೇ ಪ್ರವಕ್ಷ್ಯಾಮಿ ಹಾಲಾಸ್ಯೇಶಸ್ಯ ತಚ್ಛೃಣು ।
ವಿಧಾಂಕವಂಶಸಂಭೂತೋ ಘೃತೇನ ಪರಿಪೂಜಕಃ ॥೪॥

ಚಂಡಾಂಶುರಿವ ವೈ ಕ್ರೋಧೇ ಖಂಡಿತಾರಾತಿಮಂಡಲಃ ।
ಸುಧಾಕರ ಇವಾಲಾಪೈಃ ಸಜ್ಜನಾನಾಂ ಮುದಂ ವ್ಯಧಾತ್ ॥೫॥

ಉದಧೀರಿವ ಗಾಂಭೀರ್ಯೇ ಧೈರ್ಯೇಣ ನಗರಾಡಿವ
ಕ್ಷಮಾತುಲ್ಯಃ ಕ್ಷಮಾಸಾರೋ ವಿಶ್ರಾಣೇ ಮುದಿರೋ ಯಮಃ ॥೬॥

ಮಲಯಧ್ವಜಇತ್ಯಾಖ್ಯಾಂ ಸಂದಧೇ ಪಾಂಡ್ಯಭೂಪತಿಃ ।
ಅಕ್ಷೌಹಿಣೀಪತಿಃ ಕ್ಷೋಣೀಮಂಡಲೇ ಚಕ್ರೇ ಸ್ವವೀರ್ಯತಃ ॥೭॥

ತಸ್ಯೈವಂ ಶಾಸತೋ ರಾಜ್ಞೋ ಮಧುರಾನಗರಾಂ ನೃಪಸ್ಯ ವೈ ।
ಷಷ್ಟಿವರ್ಷಾಂತಿಮೇ ಶಂಭುರಶ್ವಮೇಧೇನ ತೋಷಿತಃ ॥೮॥

ಪ್ರಸಾದಿತಸ್ಸಭೂಪೇನ ಕನ್ಯಕಾ ಸಮಜಾಯತ ।
ಕಲಾ ಚಾಂದ್ರಮಸೀವೇತ್ಥಂ ಪ್ರಾವರ್ಧತ ಪಿತುರ್ಗೃಹೇ ॥೯॥

ಹಾಲಾಸ್ಯೇಶನ ಮಹಿಮೆಯನ್ನು ಹೇಳುವೆನು ಕೇಳುವವನಾಗು. ಚಂದ್ರವಂಶದಲ್ಲಿ ಅತ್ಯಂತ ಶ್ರೇಷ್ಠನೆನಿಸಿದ ಪಾಂಡ್ಯರಾಜನೊಬ್ಬನಿದ್ದನು. ||೩-೪||

ಆತನು ಕೋಪಿಷ್ಠನಾದಾಗ ಸೂರ್ಯನಂತೆ ಜ್ವಲಿಸಿ ಶತ್ರುಮಂಡಲವನ್ನೇ ನಾಶಗೊಳಿಸಿದ್ದನು. ಸತ್ಪುರುಷರಿಗೆ ಚಂದ್ರನಂತೆ ಆಹ್ಲಾದಿಸುತ್ತಾ ಮೃದುವಾಕ್ಯಗಳಿಂದ ಅವರನ್ನು ಸಂತೈಸುವನು. ಸಮುದ್ರದಂತೆ ಗಂಭೀರನಾಗಿಯೂ ಹಿಮಾಲಯದಂತೆ ಧೈರ್ಯಶಾಲಿಯಾಗಿಯೂ, ಭೂದೇವಿಯಂತೆ ತಾಳ್ಮೆಯುಳ್ಳವನಾಗಿಯೂ, ದಾನಮಾಡುವುದರಲ್ಲಿ ಮೇಘರಾಶಿಯಂತೆಯೂ ಜಿತೇಂದ್ರಿಯನೆನಿಸಿಯೂ ಇದ್ದನು. ||೫-೭||

ಮಲಯಧ್ವಜನೆಂಬ ಹೆಸರುಳ್ಳ ಆ ಪಾಂಡ್ಯರಾಜನು, ಅನೇಕ ಅಕ್ಷೌಹಿಣೀ ಸೈನ್ಯಗಳಿಗೆ ಒಡೆಯನಾಗಿದ್ದು ಅಖಂಡ ಭೂಮಂಡಲಕ್ಕೇ ಚಕ್ರವರ್ತಿಯಾದನು. ಹೀಗೆ ಆಳುತ್ತಿದ್ದ ಆ ರಾಜನಿಗೆ ಅರುವತ್ತು ವರ್ಷಗಳು ಕಳೆದುವು. ಆ ಸಮಯದಲ್ಲಿ ರಾಜನು ಅಶ್ವಮೇಧಯಾಗವನ್ನಾಚರಿಸಿ ಈಶ್ವರನನ್ನು ತೃಪ್ತಿಗೊಳಿಸಿದನು. ||೭-೮||

ಈಶ್ವರಾನುಗ್ರಹದಿಂದ ಈತನಿಗೆ ಆಗ ಒಬ್ಬ ಮಗಳು ಜನಿಸಿದಳು. ಅವಳು ಚಂದ್ರಕಲೆಯಂತೆ ಶೋಭಿಸುತ್ತಾ ತಂದೆಯ ಮನೆಯಲ್ಲಿ ಬೆಳೆಯುತ್ತಾ ತಟಾತಕೆ

ತಟಾತಕೇತಿ ವಿಖ್ಯಾತಾ ಪೂರ್ಣಚಂದ್ರಸಮಾನನಾ ।
ತಾಂ ದೃಷ್ಟ್ವಾ ಕನ್ಯಕಾಂ ರಾಜಾ ತ್ರಿಸ್ತನೀಂ ಯೌವನಾಗತಾಂ ॥೧೦॥

ದೇವೀಂ ಮೂರ್ತಿಮಯೀಂ ತತ್ರ ಚಿಂತಯಾಮಾಸ ಕಾತ್ರಿಯಂ ।
ತಸ್ಯೈ ದೇಯಾ ಮಯಾ ಕನ್ಯಾ ಸುಕುಮಾರೀ ತಟಾತಕಾ ॥೧೧॥

ತ್ರಿಸ್ತನೀಂ ಸುಮತೀಂ ಬಾಲಾಂ ದೃಷ್ಟ್ವಾನ್ಯೇ ರಾಜಸೂನವಃ ।
ಭಿಯಾ ಯಾಂತಿ ದಿಶೋ ದೃಷ್ಟ್ವಾ ಸಿಂಹತ್ರಸ್ತಾಗಜಾ ಇವ ॥೧೨॥

ತದಾಹ ವಾಕ್ಯಂ ವಿತತಂ ನಾರದಸ್ತತ್ರ ಸಂಸದಿ ॥೧೩॥

॥ನಾರದ ಉವಾಚ ॥

ಇತ್ಥಂ ಸ್ವಾಭವಿ ತಂದ್ರಾಕಂ(?) ಕನ್ಯಾಂಶೋ ನಾಭವತ್ತದಾ ।
ಅನಯಾ ಸೈನ್ಯಭಾರೇಣ ಜನ್ಯೇ ಜಹಿ ಸುರಾನ್ ನೃಪಾನ್ ॥೧೪॥

ಯಸ್ಯಾಸ್ಯಾ ದೃಷ್ಟಿಪಾತೇನ ಕಸ್ಯಚಿದ್ವಾ ಸುರಸ್ಯ ಹಿ ।
ನಿಮಜ್ಜತ್ಯೇವ ಹೃದಯೇ ಸ್ತನೋಽಸ್ಯಾಶ್ಚ ತೃತೀಯಕಃ ॥೧೫॥

---

ಯೆಂಬ ಹೆಸರಿನಿಂದ ಚಂದ್ರಮುಖಿಯಾಗಿ ವಿರಾಜಿಸುತ್ತಿದ್ದಳು. ಕ್ರಮಕ್ರಮವಾಗಿ ಯೌವನವು ಆಕೆಗೆ ಒದಗಲು ಇತರ ಸ್ತ್ರೀಯರಂತಲ್ಲದೆ ಆ ಮಗಳಿಗೆ ಮೂರು ಸ್ತನಗಳುಂಟಾದುವು. ॥೯-೧೦॥

ಮೂರ್ತಿಮತ್ತಾಗಿರುವ ಪಾರ್ವತೀದೇವಿಯಂತೆ ಅತ್ಯಂತ ಸುಂದರಳಾದ ತನ್ನ ಮಗಳನ್ನು ನೋಡಿ ಆ ರಾಜನು ತನ್ನ ಪುತ್ರಿಯನ್ನು ಯಾರಿಗೆ ಕೊಟ್ಟು ಮದುವೆಮಾಡಬೇಕು ಎಂದು ಚಿಂತಿಸತೊಡಗಿದನು. ಮೂರು ಸ್ತನಗಳಿಂದ ಕೂಡಿ ಅತಿ ತೇಜಸ್ಸಿನಿಂದ ಉರಿಯುತ್ತಿರುವ ತನ್ನ ಮಗಳನ್ನು ನೋಡಿ ಎಲ್ಲಾ ರಾಜಪುತ್ರರೂ ಸಿಂಹಕ್ಕೆ ಹೆದರಿ ಓಡುವ ಆನೆಗಳಂತೆ ಹಿಮ್ಮೆಟ್ಟುವರು. ಏನು ಮಾಡಲಿ? ಎಂದು ಚಿಂತಿಸುತ್ತಿರುವಾಗ ನಾರದಮಹರ್ಷಿಯು ಬಂದು ಸಭೆಯಲ್ಲಿ ಹೀಗೆಂದನು. ॥೧೧-೧೨-೧೩॥

' ಪಾಂಡ್ಯರಾಜನೇ, ದುಃಖಿಸಬೇಡ. ಈ ನಿನ್ನ ಮಗಳು ಸಾಮಾನ್ಯ ಸ್ತ್ರೀಯಲ್ಲ. ದೇವ್ಯಂಶಸಂಭೂತಳು. ಇವನೊಡಗೂಡಿ ನೀನು ಸೇನಾಸಮೇತನಾಗಿ ಯುದ್ಧಕ್ಕೆ ಹೊರಡು. ಆದರಿಂದ ಎಲ್ಲಾ ದೇವತೆಗಳನ್ನೂ ರಾಜರನ್ನೂ ನೀನು ಅನಾಯಾಸ

ಸ ಜಾಮಾತಾ ತವ ಭವೇದ್ಭವ ಏವ ನ ಚಾಪರಃ ।
ಮಹೇಶೇನೈವ ಮೀನಾಕ್ಷ್ಯಾಂ ಸುಂದರಾಖ್ಯೇನ ಪಾಂಡ್ಯಪ ॥೧೬॥

ರಾಜಂಸ್ತೇ ದುಹಿತುರ್ವಂಶಃ ಪಾಂಡ್ಯಾನ್ಪಾತಿ ಸ ಕೇರಳಾನ್ ।
ಇತ್ಯುಕ್ತೋ ನಾರದೇನಾಗಾತ್ಸಂಪೂಜ್ಯ ರಥಸೇನಯಾ ॥೧೭॥

ಗಜವಾಜಿಪದಾತ್ಯೌಘೈರ್ಮಲಯಧ್ವಜಭೂಪತಿಃ ।
ಶರಕೋದಂಡಶೂಲಾದಿಗದಾಖೇಟಕಧಾರಿಭಿಃ ॥೧೮॥

ಆತಾಡ್ಯ ದುಂದುಭೀನ್ ಸರ್ವಾನ್ ಸ್ವಸ್ವಶಂಖಂ ಸ ಪಾಂಡ್ಯಪಃ ।
ಸ ಷಟ್ಪಂಚಾಶದ್ದೇಶಸ್ಥಾನ್ ನೃಪತೀನಜಯತ್ಕ್ಷಿತೌ ॥೧೯॥

ಕ್ಷಯದ್ವೀರಪದಾರ್ಚಾತೋ ಜಯಸ್ತಸ್ಯಾಭವತ್ತದಾ ।
ತಟಾತಕಾಂ ಪುರಸ್ಕೃತ್ಯ ಸೈನ್ಯಾಭರಣಪಾಂಡ್ಯಪಃ ॥೨೦॥

---

ವಾಗಿ ಗೆಲ್ಲುವೆ. ಆದರೆ ಯಾವ ದೇವತೆಯನ್ನು ಈಕೆಯು ನೋಡಿದೊಡನೆಯೇ ಈಕೆಯ ಮೂರನೆಯ ಸ್ತನವು ಇಂಗಿಹೋಗುವುದೋ, ಆ ದೇವತೆಯೇ ನಿನಗೆ ಅಳಿಯನಾಗುವನು. ಹೆಚ್ಚೇನು, ಸಾಕ್ಷಾತ್ಪರಮೇಶ್ವರನೇ ಈಕೆಯ ದೃಷ್ಟಿಗೋಚರನಾಗಿ, ಮೀನಾಕ್ಷಿಯೆಂಬ ಹೆಸರುಳ್ಳ ಈಕೆಯನ್ನು ಸುಂದರನೆಂಬ ಹೆಸರನ್ನು ಪಡೆದು ತಾನೇ ಮದುವೆಯಾಗುವನು. ಮತ್ತಾರೂ ನಿನ್ನ ಪುತ್ರಿಗೆ ಪತಿಯಾಗರು. ||೧೪-೧೫-೧೬||

ರಾಜನೇ, ನಿನ್ನ ಮಗಳ ವಂಶದವರೇ ಪಾಂಡ್ಯ ಮತ್ತು ಕೇರಳದೇಶದವರನ್ನು ರಕ್ಷಿಸುವರು. ನೀನು ಯೋಚಿಸಬೇಡ'' ಎಂದು ಹೇಳಿ ರಾಜನಿಂದ ಪೂಜಿತನಾಗಿ ನಾರದಮಹರ್ಷಿಯು ಪ್ರಯಾಣಮಾಡಲು, ಒಡನೆಯೇ ಮಲಯಧ್ವಜನು ರಥಗಜಾಶ್ವಾದಿಗಳೊಡಗೂಡಿ, ಧನುಸ್ಸು, ಬಾಣ, ಬಿಲ್ಲು, ಗುರಾಣಿ ಮುಂತಾದ ಆಯುಧಗಳನ್ನು ಧರಿಸಿರುವ ಶೂರ ಸೈನಿಕರಿಂದ ಕೂಡಿ ಮಗಳೊಡನೆ ವಿಜಯಯಾತ್ರೆಗಾಗಿ ಪ್ರಯಾಣಮಾಡಿದನು. ಮತ್ತು ಭೂಲೋಕದಲ್ಲಿದ್ದ ಐವತ್ತಾರು ದೇಶಗಳ ರಾಜರನ್ನೆಲ್ಲಾ ಅನಾಯಾಸವಾಗಿ ಜಯಿಸಿಬಿಟ್ಟನು. ||೧೭-೧೮-೧೯||

ಪರಮೇಶ್ವರನ ಅನುಗ್ರಹಬಲದಿಂದ ಎಲ್ಲರನ್ನೂ ಗೆದ್ದು ಪಾಂಡ್ಯರಾಜನು ಅದೇ ಸೈನ್ಯದೊಡನೆಯೂ ಮಗಳೊಡನೆಯೂ ದೇವೇಂದ್ರನನ್ನು ಎದುರಿಸಿ ಯುದ್ಧಕ್ಕೆ

ದೇವೇಂದ್ರಾಭಿಮುಖಃ ಪ್ರಾಯಾತ್ಪ್ರಾಚ್ಯಾಮಿಂದ್ರೇಣ ಭೂಪತಿಃ ।
ಜನ್ಯಂ ಪರ್ಜನ್ಯವಚ್ಚಕ್ರೇ ಕನ್ಯಯಾ ಸ್ವಪುರಸ್ಥಯಾ ॥೨೧॥

ಇಂದ್ರೋಽಪಿ ನಿರಗಾತ್ಕ್ರೋಧಃ ಶ್ವಸನ್ನುರಗರಾಡಿವ ।
ಐರಾವತಂ ಸಮಾರುಹ್ಯ ದೇವವೃಂದಪರೀವೃತಃ ॥೨೨॥

ಮಲಯಧ್ವಜಪಾಂಡ್ಯೇನ ಮುತ್ಪಸ್ಯ(?) ಕ್ರೋಧಕನ್ಯಯಾ ।
ಭಟೈರಶ್ವೈರ್ಗಜೈರ್ಮತ್ತೈಃ ಸ್ಯಂದನಸ್ಥೈಸ್ಸುದರ್ಶನೈಃ ॥೨೩॥

ಅನ್ಯೋನ್ಯಂ ಯುಯುಧುರ್ದೇವೈರ್ನರಾಃ ಪ್ರಾಸಾಸಿಪಾಣಯಃ ।
ಚಿಚ್ಛಿದುರ್ಬಿಭಿದುರ್ದೇವಾನ್ನರಾ ನೃಪಭಟಾಸ್ತದಾ ॥೨೪॥

ಗಜಕುಂಭಾಶ್ವಕಂಠೇಷು ರಥಚಕ್ರೇಷು ಧನ್ವಿನಃ ।
ಶರಾಸಾರೈರ್ಧನುರ್ಮುಕ್ತೈಸ್ತಿಲಶಶ್ಚಕ್ರುರುದ್ಧತಾಃ ॥೨೫॥

ನದೀಃ ಪ್ರವರ್ತಯಾಮಾಸುರ್ಮಾಂಸಶೋಣಿತಕರ್ದಮಾಃ ।
ಪ್ರಾಭಜ್ಯತ ಬಲಂ ಸರ್ವಂ ದೇವಾನಾಂ ಸ ತಟಾತಕಾ ॥೨೬॥

---

ನಿಂತನು. ಮೇಘಮಂಡಲವು ಇಂದ್ರನ ಮೇಲೆ ಮೇಘದಂತೆ ಬಿರುಸಿನಿಂದ ಬಾಣ ವೃಷ್ಟಿಯನ್ನು ಸುರಿಸಿದನು. ಇದರಿಂದ ಕುಪಿತನಾದ ಇಂದ್ರನು ಐರಾವತದ ಮೇಲೆ ಕುಳಿತು ದೇವತೆಗಳಿಂದ ಪರಿವೃತನಾಗಿ ಪಾಂಡ್ಯರಾಜನಮೇಲೆ ಯುದ್ಧಕ್ಕೆ ಬಂದನು. ||೨೦-೨೧||

ಮಲಯಧ್ವಜನೂ ಸಹ ತನ್ನ ಕುಪಿತಳಾದ ಮಗಳೊಡಗೂಡಿ ಘೋರವಾಗಿ ಯುದ್ಧಮಾಡಿದನು. ಸೈನಿಕರು, ಕುದುರೆಗಳು, ಆನೆಗಳು, ರಥಗಳು ಪರಸ್ಪರವಾಗಿ ಹೋರಾಡಿದರು. ಕೊನೆಗೆ ಕತ್ತಿ ಕಠಾರಿಗಳನ್ನು ಹಿಡಿದು ಯುದ್ಧಮಾಡುತ್ತಿದ್ದ ಮಾನವರೇ ದೇವತೆಗಳನ್ನು ಸದೆಬಡಿದು ಚೂರುಚೂರಾಗಿ ಕತ್ತರಿಸಿಹಾಕಿದರು. ||೨೩-೨೪||

ಪಾಂಡ್ಯಸೈನಿಕರು ತಮ್ಮ ಧನುಸ್ಸುಗಳಿಂದ ಬಾಣಪ್ರಯೋಗಮಾಡಿ, ದೇವ ಲೋಕದ ಆನೆ, ಕುದುರೆ, ರಥ, ಚಕ್ರ ಮುಂತಾದ ಸೈನಿಕರ ಸಾಮಗ್ರಿಗಳನ್ನೆಲ್ಲಾ ಚೂರುಚೂರಾಗಿ ಕತ್ತರಿಸಿಹಾಕಿದರು. ಮಾಂಸ, ರಕ್ತ ಇವುಗಳಿಂದ ಕದಡಿ ಕೆಸರಾದ

ಇಂದ್ರೋ ಯಯೌ ತತಸ್ತಸ್ಯಾ ಸ್ವಬಲೇನಾಂಬಿಕಾ ತದಾ ।
ಅಗ್ನಿಶ್ಚ ಯುಯುಧೇ ಸೈನ್ಯೈರ್ನಿರ್ಗಾನಾಕ್ನ್ಯಾ ಚ ಪರಾಜಿತಃ ॥೨೭॥

ಯಮೋಽಪಿ ಸ್ವಭಟೈಸ್ಸಾರ್ಧಂ ಲುಲಾಯಸ್ಥೋಽಪ್ಯಯುಧ್ಯತ ।
ಪಾಶೀ ಪಾಶಾಕ್ಷಲಗುಡೈಃ ಪ್ರಾಯುಧ್ಯತ ತದಾ ಮುದಾ ॥೨೮॥

ತಟಾತಕಾಶರಾಸಾರೈರ್ನಿರಸ್ತೋಽಪ್ಯಗಮತ್ಪುರೀಂ ।
ನಿಋತಿರ್ಯುಯುಧೇ ದೇವ್ಯಾ ಮೀನಾಕ್ಷ್ಯಾ ನೃಪಸೈನಿಕೈಃ ॥೨೯॥

ಪಂಚ ವಿವ್ಯಾಧ ನಾರಾಚಾನ್ ಕ್ರೂರಸ್ರಾಂಜಲಕೈಶ್ಶಿವಾ ।
ನಿರಸ್ಯ ನಿಋತಿಂ ದೇವೀ ಶಂಖಂ ದಧ್ಮೌ ನೃಪೇಣ ಸಾ ॥೩೦॥

ವರುಣಂ ಸಾ ಜಯುಜ್ಜನ್ಯೇ ಏಕರಾತ್ರೇಣ ಸಾ ತದಾ ।
ಕಾಂದಿಶೀಕೋಽಪ್ಯಸಾಂ ನಾಥೋ ವಾಯುರ್ದೇವ್ಯಾತದಾ ಜಿತಃ॥೩೧॥

ಕುಬೇರಮೇವಮೀಶಾನಮುಜಯತ್ಸತಟಾತಕಾ ।
ಕೈಲಾಸಮಾಯಯೌ ತತ್ರ ಗಣವೃಂದೈರ್ವಿರಾಜಿತಂ ॥೩೨॥

---

ನದಿಯನ್ನೇ ಹರಿಸಿಬಿಟ್ಟರು. ಒಟ್ಟಿನಲ್ಲಿ ಈ ಪಾಂಡ್ಯ ಸೈನಿಕರಿಂದ ದೇವತೆಗಳ ಬಲವೆಲ್ಲಾ ನಿರ್ಮೂಲವಾಯಿತು. ||೨೫-೨೬||

ಆದರಿಂದ ಇಂದ್ರನು ಪರಾಜಿತನಾಗಿ ಹಿಂದಿರುಗಿದನು. ಅನಂತರ ತಟಾತಕೆ ಯೆಂಬ ಹೆಸರಿನ ದೇವಿಯು ಸೇನಾಸಮೇತಳಾಗಿ ಮುಂದುವರಿದು, ಅಗ್ನಿಯನ್ನೂ, ಮಹಿಷವಾಹನನಾಗಿ ಬಂದ ಯಮನನ್ನೂ, ಪಾಶಾಯುಧದಿಂದಲೂ ಲಗುಡಾಯುಧ ದಿಂದಲೂ ಬಂದ ವರುಣನನ್ನೂ ಯುದ್ಧದಲ್ಲಿ ಸೋಲಿಸಿ ಹಿಮ್ಮೆಟ್ಟಿಸಿದಳು. ||೨೭-೨೮||

ಮುಂದೆ ತಟಾತಕೆಯು ನಿಋತಿಯೊಡನೆ ಯುದ್ಧಮಾಡಿದಳು. ನಿಋತಿಯು ಮೊದಲು ಸೋತರೂ ಮತ್ತೆ ರಾಜಭಟರೊಡನೆ ಯುದ್ಧಕ್ಕೆ ನಿಂತನು. ಆಗ ದೇವಿಯು ಕತ್ತಿಯಿಂದ ಕೂಡಿದ ತನ್ನ ಕೈಗಳಿಂದಲೇ ಐದು ಕ್ರೂರಬಾಣ ಗಳನ್ನು ಪ್ರಯೋಗಿಸಲು, ಅದರಿಂದ ಪೀಡಿತನಾದ ನಿಋತಿಯು ಓಡಿಹೋದನು. ಆಗ ದೇವಿಯು ಜಯಧ್ವನಿಗೊಡುವ ಶಂಖವನ್ನೂದಿ ಮುಂದುವರಿದಳು. ||೨೯-೩೦||

ಅಲ್ಲಿ ಸಿಕ್ಕಿದ ಜಲಾಧಿಪತಿಯಾದ ವರುಣನನ್ನು ಒಂದೇ ದಿನದಲ್ಲಿ ದಿಕ್ಕು ಗೆಟ್ಟೋಡಿಸಿ, ವಾಯುವನ್ನೂ, ಕುಬೇರನನ್ನೂ, ಈಶಾನನನ್ನೂ ಸುಲಭವಾಗಿ ಗೆದ್ದು

ನಂದಿಭೃಂಗಿಮಹಾಕಾಲೈರ್ಯುಯುಧೇ ಶೂಲಮುದ್ಗರೈಃ ।
ಅಟ್ಟಹಾಸಂ ವಿಮುಂಚಂತೀಂ ದೃಷ್ಟ್ವಾ ದೇವಸ್ತಟಾತಕಾಂ ॥೩೩॥

ಶಿವಸ್ಯ ದೀರ್ಘಾಪಾಂಗೋತ್ಥವರ್ಷತಾಮೃತಸಾದರಃ ।
ತಟಾತಕಾ ಹೃದಿಸ್ಥಶ್ಚ ಸ್ತನಸ್ತನ್ವಾಂ ವ್ಯಲೀಯತ ।೩೪॥

ಕುಚೌ ದೃಷ್ಟ್ವಾ ನಮ್ರಮುಖೀ ಮಹೇಶಂ ಸಮುದೈಕ್ಷತ ।
ವವೃಷುಃ ಕುಸುಮಾಸಾರಂ ದೇವಾ ವೇದ್ಯಾನ್ಯನಾದಯನ್ ॥೩೫॥

ತಟಾತಕಾ ಶಿವೌ ತತ್ರ ಪಾಂಡ್ಯೇಶಶ್ಚ ಪ್ರಪೂಜಯತ್ ॥೩೬॥

ಧನ್ಯಾಃ ಸ್ಮ ನೃಪಪುಂಗವಃ ಶ್ರುತಿಶಿರೋವಾಕ್ಯಾರ್ಥಸಾರೌ ಯುವಾಂ
ಮೀನಾಕ್ಷೀಹರ ಸುಂದರೇಶ್ವರ ವಿಭೋಃ ಧಾತುಶ್ಚ ವಿಷ್ಣೋಸ್ಸದಾ ।

---

ಹಾಗೆಯೇ ಅನೇಕ ಶಿವಗಣಗಳಿಂದ ಪರಿವೃತವಾದ ಕೈಲಾಸಕ್ಕೂ ಬಂದಳು. ॥೩೧-೩೨॥

ಅಲ್ಲಿಯೂ ನಂದಿ, ಭೃಂಗಿ, ಮಹಾಕಾಲ ಮುಂತಾದ ಶಿವಗಣಗಳು ಶೂಲ ಮುದ್ಗರ ಮುಂತಾದ ಆಯುಧಗಳಿಂದ ಕೂಡಿ ಈ ದೇವಿಯ ಮೇಲೆ ಯುದ್ಧಕ್ಕೆ ಬಂದರು. ಆಗಲೂ ತಟಾತಕೆಯು ಎಡಬಿಡದೆ ಅಟ್ಟಹಾಸದಿಂದ ಬಾಣಪ್ರಯೋಗ ಮಾಡುತ್ತಿದ್ದಳು. ಇದರಿಂದ ಆಶ್ಚರ್ಯಗೊಂಡ ಮಹಾದೇವನು ತನ್ನ ಕರುಣಾಮೃತವನ್ನು ತಟಾತಕೆಯ ಮೇಲೆರಚುತ್ತಾ, ಒಂದುಸಾರಿ ದೃಷ್ಟಿಸಿ ನೋಡಿದನು. ಒಡನೆಯೇ ತಟಾತಕೆಯ ಮೂರನೆಯ ಸ್ತನವು ಅವಳ ಹೃದಯದಲ್ಲಿಯೇ ಇಂಗಿ ಹೋಯಿತು. ॥೩೩-೩೪॥

ದೇವಿಯು ಹಾಗೆ ತನಗುಳಿದ ಎರಡು ಸ್ತನಗಳನ್ನು ನೋಡಿ, ಈತನೇ ತನ್ನ ಪತಿಯೆಂದರಿತು, ನಾಚಿಕೆಯಿಂದ ತಲೆಬಾಗಿದವಳಾಗಿ, ಪರಶಿವನನ್ನೇ ನೋಡುತ್ತಾ ನಿಂತುಬಿಟ್ಟಳು. ಕೂಡಲೇ ದೇವತೆಗಳು ಹೂಮಳೆಗರೆದರು. ಪಾಂಡ್ಯರಾಜನು ಇವರಿಬ್ಬರನ್ನೂ ಆನಂದದಿಂದ ನೋಡುತ್ತಾ, ಅವರಿಬ್ಬರಿಗೂ ವಿಧಿವತ್ತಾಗಿ ಪೂಜೆಯನ್ನು ಸಲ್ಲಿಸಿದನು. ಆಗ ದೇವತೆಗಳು ತಮ್ಮ ಆನಂದವನ್ನು ಈ ರೀತಿ ವ್ಯಕ್ತಪಡಿಸಿದರು. ॥೩೫-೩೬॥

|| ದೇವಾ ಊಚುಃ ||

ಪೂಜ್ಯೈಃ ಸರ್ವಸುರಾಧಿಪೈಶ್ಚ ಯುವಯೋರುದ್ವಾಹಜಂ ಮಂಗಳಂ
ವೀಕ್ಷ್ಯಾಪ್ಯಸ್ವಪದಾವನೇಷು ನಿರತಾಃ ಯಾಮೋದ್ಯ ಹಾಲಾಸ್ಯಕಂ ॥೩೭॥

|| ಶ್ರೀ ಸ್ಕಂದ ಉವಾಚ ||

ಇತ್ಥಂ ಸರ್ವಸುರಾಸುರೈರ್ನೃಪತಿನಾ ಪಾಂಡ್ಯೇಶ್ವರೇಣೇಶ್ವರೋ
ಭಕ್ತ್ಯಾ ಪ್ರಾರ್ಥಿತ ಏವ ಸತ್ರಿಜಗತಾಮಾಧಾರಭೂತೋ ಹರಃ ।
ನಂದ್ಯಾದ್ಯೈರ್ಗಣಪೈರ್ವೃತೋ ವೃಷವರೇಣಾಗಾಚ್ಚ ಹಾಲಾಸ್ಯಕಂ
ತತ್ರೈವಾದಿಮುದಂಪತೀ ಅಭವತಾಂ ದೇವ್ಯೈಸ್ಸುರಾರಾಧಿತೈಃ ॥೩೮॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಚತುಶ್ಚತ್ವಾರಿಂಶೋಧ್ಯಾಯಃ

---

ಎಲೈ ರಾಜರೇ, ನೀವೇ ಧನ್ಯರು. ಈ ಮೀನಾಕ್ಷಿ ಮತ್ತು ಸುಂದರೇಶ್ವರರು ಸಾಕ್ಷಾದುಪನಿಷದ್ವಾಕ್ಯಗಳಿಂದ ಸ್ತುತಿಸಲ್ಪಟ್ಟರು. ಬ್ರಹ್ಮ, ವಿಷ್ಣು, ದೇವೇಂದ್ರ ಮುಂತಾದವರಿಂದಲೂ ಪೂಜಿಸಲ್ಪಟ್ಟವರು. ಇಂತಹವರಿಗೆ ಈಗ ನಡೆಯುವ ವಿವಾಹ ಮಂಗಳವನ್ನು ನೋಡಿ ನಾವು ಧನ್ಯರಾಗುವೆವು. ಅದಕ್ಕಾಗಿ ಈಗ ವಿವಾಹವು ನಡೆಯುವ ಹಾಲಾಸ್ಯಕ್ಷೇತ್ರಕ್ಕೆ ಹೋಗಲು ಸಿದ್ಧರಾಗಿರುವೆವು. ||೩೭||

ಹೀಗೆ ಪಾಂಡ್ಯರಾಜನೂ, ದೇವತೆಗಳೂ ಜಗತ್ರಯಗಳಿಗೆ ಆಧಾರಭೂತನೆನಿಸಿದ ಮಹಾದೇವನನ್ನು ಭಕ್ತಿಯಿಂದ ಪ್ರಾರ್ಥಿಸಿದಮೇಲೆ ಮಹಾದೇವನು ನಂದೀಶ್ವರನೇ ಮೊದಲಾದ ತನ್ನ ಗಣನಾಯಕರೊಡಗೂಡಿ ತನಗೆ ಅತ್ಯಂತ ಪ್ರೀತಿಪಾತ್ರವಾದ ಹಾಲಾಸ್ಯಕ್ಷೇತ್ರಕ್ಕೆ ಬಿಜಯಮಾಡಿಸಿ, ಅಲ್ಲಿ ದೇವಿಯೊಡನೆ ವಿವಾಹೋತ್ಸವವನ್ನು ನಡೆಸಿ ಜಗತ್ತಿಗೇ ಆದಿದಂಪತಿಗಳೆನಿಸಿಕೊಂಡರು ಎಂದು ಸ್ಕಂದಸ್ವಾಮಿಯು ಜೈಗೀಷವ್ಯಾದಿ ಮಹಾಮುನಿಗಳಿಗೆ ವಿವರಿಸಿದನು. ||೩೮||

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಪಂಚಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಮಲಯಧ್ವಜಪಾಂಡ್ಯೇಶಃ ಸ್ವಕನ್ಯಾಯಾಃ ಪುರಸ್ಯ ಚ ।
ಮಧುರಾಂ ಮಂಡಯಾಮಾಸ ಗಂಧೋದಕಸುಶೋಭಿತಾಂ ॥೧॥

ಪತಾಕಾಧ್ವಜಸಂಯುಕ್ತಾಂ ಪೂರ್ಣಕುಂಭಸಮುಜ್ಜ್ವಲಾಂ ।
ರಂಗವಲ್ಲೀವಿತಾನಾಢ್ಯಾಂ ಕದಲೀಸ್ತಂಭಶೋಭಿತಾಂ ॥೨॥

ಸಮುತ್ಕೀರ್ಣರಸೈರಥ್ಯಾಂ ಪ್ರತೋಳೀ ತೋರಣೈರ್ವೃತಾಂ ।
ಭಕ್ಷ್ಯಭೋಜ್ಯಾನ್ನಗಿರಿಭಿಸ್ತಾಂಬೂಲನಗಶೋಭಿತಾಂ ॥೩॥

---

## ನಲವತ್ತೈದನೆಯ ಅಧ್ಯಾಯ

ಅನಂತರ ಮಲಯಧ್ವಜರಾಜನು ತನ್ನ ಮಗಳನ್ನೂ, ತನ್ನ ಪಟ್ಟಣವನ್ನೂ ವಿಧವಿಧವಾಗಿ ಶೃಂಗಾರಮಾಡಿಸಿದನು. ತನ್ನ ನಗರವನ್ನೆಲ್ಲಾ ಗಂಧೋದಕದಿಂದ ನೆನೆಸಿದನು. ಪೂರ್ಣಕಲಶಗಳನ್ನೂ ದೊಡ್ಡ ಚಿಕ್ಕ ಬಾವುಟಗಳನ್ನೂ ಅಲ್ಲಲ್ಲಿ ಕಟ್ಟಿಸಿದನು ರಂಗವಲ್ಲಿ, ಮೇಲ್ಕಟ್ಟು, ಬಾಳೆಯ ಕಂಬ ಇವುಗಳಿಂದ ಅಲ್ಲಲ್ಲಿ ಅಲಂಕಾರಗೊಳಿಸಿದನು. ॥೧-೨॥

ತನ್ನ ನಗರದ ಎಲ್ಲಾ ಬೀದಿಗಳನ್ನೂ ವಿಧವಿಧವಾದ ಸುಗಂಧರಸಗಳಿಂದ ಚಿಮುಕಿಸಿ, ದೊಡ್ಡ ದೊಡ್ಡ ತೋರಣಗಳನ್ನು ಕಟ್ಟಿಸಿ, ಪರ್ವತಾಕಾರದಲ್ಲಿ ಭಕ್ಷ್ಯ ಭೋಜ್ಯಾದಿಗಳನ್ನೂ, ತಾಂಬೂಲರಾಶಿಗಳನ್ನೂ ಇರಿಸಿ, ಧೂಪದ ಸುವಾಸನೆ

ಧೂಪಾನೋದ್ಯೈಕಬಕುಲಾಂ ದೀಪಮಾಲಾವಿರಾಜಿತಾಂ ।
ಲಾಜಾನೋದಕಹಸ್ತೈಶ್ಚ ನರೈಃ ಕನ್ಯಾಸಮಾವೃತಾಂ ॥೪॥

ಮೃದಂಗಮುರಜೋದ್ಘುಷ್ಟಾಂ ವೀಣಾದುಂದುಭಿನಾದಿತಾಂ ।
ಹಾಲಾಸ್ಯೇಶಮಹಾಧಾಮಶೋಭಮಾನಾಂ ಚ ತಾಂಪುರೀಂ ॥೫॥

ದೇವಸಂಘೈಃ ಪರಿವೃತೋ ವಿಷ್ಣುನಾ ಬ್ರಹ್ಮಣಾ ಸಹ ।
ದಿಶಾಂಪಾಲೈರ್ಮುನೀಂದ್ರೈಶ್ಚ ಯಕ್ಷಗಂಧರ್ವಕಿನ್ನರೈಃ ॥೬॥

ನೃತ್ಯದ್ಭಿರಪ್ಸರೋ ವೃಂದೈರ್ಗಾಯದ್ಗಂಧರ್ವಕಿನ್ನರೈಃ ।
ಶಂಖಕಾಹಳಭೇರೀಣಾಮಾರಾವೈರ್ಮುನಿಸಂಸ್ತವೈಃ ॥೭॥

ಜಯೇತಿ ವಂದ್ಯಸ್ತುತಿಭಿರ್ಗಣೇಂದ್ರೈಶ್ಚ ಪ್ರತಿಷ್ಠಿತಾಂ ।
ಆತಪತ್ರಕರೇಣೈವ ಭೃಂಗಿಣಾ ಚಂಡಿನಾ ತಥಾ ॥೮॥

---

ಯಿಂದಲೂ, ದೀಪಮಾಲಿಗಳಿಂದಲೂ ಶೃಂಗಾರವಮಾಡಿಸಿದನು. ಮತ್ತು ಅರಳು, ಕಡುಬು ಮುಂತಾದುವುಗಳನ್ನು ಸ್ತ್ರೀಪುರುಷರಿಗೆಲ್ಲಾ ಸ್ವೇಚ್ಛೆಯಿಂದ ಕೊಡಿಸುತ್ತಿದ್ದನು. ||೩-೪||

ಆ ಊರಿನಲ್ಲಿ ಎಲ್ಲೆಲ್ಲಿಯೂ, ಮೃದಂಗ, ಮುರಜ (ವಾದ್ಯವಿಶೇಷ) ಇವುಗಳ ಧ್ವನಿಯಿಂದ ಕೂಡಿದ ವೀಣಾನಾದವೂ, ಒಂದೊಂದುಕಡೆ ನಗಾರಿಗಳ ಶಬ್ದವೂ ಕೇಳಿಬರುತ್ತಿದ್ದಿತು. ಹಾಲಾಸ್ಯೇಶ್ವರನ ದೇವಾಲಯದ ಕಾಂತಿಯುಂತೂ ಆ ನಗರದಲ್ಲೆಲ್ಲಾ ಹರಡಿದ್ದಿತು. ಅಂತಹ ನಗರಕ್ಕೆ ದೇವತೆಗಳಿಂದೊಡಗೂಡಿದ ವಿಷ್ಣು, ಬ್ರಹ್ಮ, ದಿಕ್ಪಾಲಕರು, ಮುನೀಂದ್ರರೂ, ಯಕ್ಷಗಂಧರ್ವಕಿನ್ನರರು ಇವರೆಲ್ಲರೂ ಸಾಲುಸಾಲಾಗಿ ಬಂದು ಸೇರುತ್ತಿದ್ದರು. ||೫-೬||

ಅನೇಕ ಅಪ್ಸರಸ್ತ್ರೀಯರು ನರ್ತನಮಾಡುತ್ತಿದ್ದರು. ಗಂಧರ್ವರೂ ಕಿನ್ನರರೂ ಹಾಡುತ್ತಿದ್ದರು. ಶಂಖ, ತುತ್ತೂರಿ, ಭೇರಿ ಮುಂತಾದ ವಾದ್ಯಗಳು ಭೋರ್ಗರೆಯುತ್ತಿದ್ದುವು. ಮುನಿಗಳ ಗುಂಪೂ ಗಣಗಳ ಗುಂಪೂ ಜಯಕಾರದಿಂದ ಧ್ವನಿಮಾಡುತ್ತಿದ್ದಿತು. ಆಗ ಭೃಂಗಿ, ಚಂಡಿ ಇವರಿಬ್ಬರೂ ಸ್ವಾಮಿಗೆ ಛತ್ರಿಯನ್ನು ಹಿಡಿದು ಮಹಾದೇವನನ್ನು ಹಿಂಬಾಲಿಸಿ ಬಂದರು. ||೭-೮||

ವೀರಭದ್ರೇಣ ಚ ತದಾ ಪಾರ್ಶ್ವವೀಜಿತಚಾಮರೈಃ ।
ಪ್ರವಿಶ್ಯ ತಾಂ ತದಾ ದೇವೋ ಮಧುರಾಂ ಮಧುರಾಪುರೀಂ ॥೯॥

ತಟಾತಕಾಂ ಪುರಸ್ಕೃತ್ಯ ಮಲಯಧ್ವಜಪೂಜಿತಾಂ ।
ಪ್ರಕ್ಷಾಳ್ಯಾಂಘ್ರಿಯುಗಂ ಶಂಭೋಃ ಸಾರ್ವತೀ ಶಂಗೃಹಾನ್ನೃಪಃ ॥೧೦॥

ಸಭಾಯಾಂ ಮಣಿಕಾಖ್ಯಾಯಾಂ ಸಿಂಹಾಸನವರೇ ಹರಂ ।
ಸಂಸ್ಥಾಪ್ಯ ಪೂಜಯಾಮಾಸ ಮಧುರಾಭರಣಾಂಬರೈಃ ॥೧೧॥

ಗಂಧೈಃ ಕುಸುಮಹಾರೈಶ್ಚ ಹಾರೈರಾಭರಣೈರ್ವರೈಃ ।
ಸಂಪೂಜ್ಯ ವಿಷ್ಣುಬ್ರಹ್ಮಾದೀನ್ ಸುರಾಸುರಗಣಾನ್ನರಾನ್ ॥೧೨॥

ಗಂಧೈಃಪುಷ್ಪೈಶ್ಚ ತಾಂಬೂಲೈರ್ವಾಸೋಽಲಂಕಾರಭೂಷಣೈಃ ।
ಶುಭೇ ಮುಹೂರ್ತೇ ಮೀನಾಕ್ಷೀ ಸ ಸರ್ವೈರ್ಭೂಷಣೈರ್ವೃತಾಂ ॥೧೩॥

ಭೃಂಗಾರಧಾರಯಾ ಹಸ್ತೇ ದತ್ತವಾನ್ ಕೃತ್ತಿವಾಸಸೇ ।
ನಿಕಾಂತೇ ಕಮಲಾದೇವೀಂ ನೃಪೋದಾಯ ತಟಾತಕಾಂ ॥೧೪॥

---

ಪರಶಿವನ ಮುಂಭಾಗದಲ್ಲಿ ವೀರಭದ್ರನು ಬರುತ್ತಿದ್ದನು. ಅಕ್ಕಪಕ್ಕಗಳಲ್ಲಿ ಚಾಮರವನ್ನು ಬೀಸುತ್ತಿದ್ದರು. ಇಂತಹ ವೈಭವದಿಂದ ಪರಮೇಶ್ವರನು ಸುಂದರವಾದ ಮಧುರಾನಗರಿಯನ್ನು ಪ್ರವೇಶಿಸಿದನು. ಅಲ್ಲಿ ಮಲಯಧ್ವಜನು ತನ್ನ ಪುತ್ರಿಯಾದ ತಟಾತಕೆಯನ್ನು ಮುಂದುಮಾಡಿಕೊಂಡು ಪರಶಿವನ ಪಾದಗಳನ್ನು ತೊಳೆದು ಮನೆಗೆ ಕರೆತಂದನು. ॥೯-೧೦॥

ಮಣಿನಾಮಕವಾದ ಸಭೆಯಲ್ಲಿ ದಿವ್ಯಸಿಂಹಾಸನವನ್ನಿರಿಸಿ, ಅದರಲ್ಲಿ ಮಹಾದೇವನನ್ನು ಕುಳ್ಳಿರಿಸಿ, ಮನೋಹರವಾದ ಆಭರಣಗಳಿಂದಲೂ ವಸ್ತ್ರಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಪೂಜಿಸಿದನು. ಹಾಗೆಯೇ ಪರಶಿವನ ಜೊತೆಯಲ್ಲಿ ಬಂದಿದ್ದ ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳನ್ನೂ ವಿಧವಿಧವಾದ ಪೂಜಾಸಾಮಗ್ರಿಗಳಿಂದ ಸತ್ಕರಿಸಿದನು. ॥೧೧-೧೨॥

ಹಾಗೆಯೇ ತಟಾತಕಾದೇವಿಯನ್ನು ಗಂಧಪುಷ್ಪಾದಿಗಳಿಂದ ಅಲಂಕರಿಸಿ, ಒಳಭಾಗದಲ್ಲಿ ಲಕ್ಷ್ಮೀದೇವಿಯಿಂದ ಸೇವಿತಳಾಗಿದ್ದ ಆ ತನ್ನ ಮಗಳನ್ನು ರಾಜನು

ಮಧುಪೂರವಲ್ಲಭೇ ನೃಕಾಂತೇ (?) ನಾಥಿಮೀನಾಕ್ಷೀದಾತೇ ।
ಕುಚಯುಗಮವಿಭಿನ್ನ ಚಕ್ರವಾಕೇ ಕೃಪಯಾ ಪಾಲಿತಸರ್ವಜೀವಲೋಕೇ ॥೧೫॥

ನತಪ್ರುಮಾಲಯಧ್ವಜಾಕ್ಷಂ ತಮಯಿಪ್ರೋತೇ ।
ಕಲಕೀಕೃತನಾದಕಕ್ಷೇ ಕಲಿತಾನೇಕಜಗನ್ನಿವಾಸಕುಕ್ಷೇ ॥೧೬॥

ಮದಾತಾ ಶುಭಹಲ್ಲಕಾಂತಪಾಪೋ ಮಯಿ ಶೋಣೇ
ತಪನೀಯಪಯೋಧಿನೀಮುಖೀದ್ರುಮಂ ದದಾಸೇ ।
ಮದೃಸಂಭರಚಾರೀಂದ್ರಖಿಲೇಸ್ತೇಮಮಿಂದಾ
ನೋಪತತಾನುನಿಶಂ ಪ್ರಭಾತಕಾಲೇ ॥೧೭॥

ಮಣಿಮಾಲಾಷ್ಟಕಭೂತಿದಾಜ್ಞಾಘಟಿಕಾಶತ ಚಾತುರೀಂ ವಿದಧ್ಯಾತ್ ।
ಕರುಣಾತ್ಕರುಣಾಪೂರ್ಣ ಕಟಾಕ್ಷಮಂನಿವೇಶಾತ್ ॥೧೮॥

ತದಸ್ಥೋ ತುಹಿನಪ್ರಾಪಮಹೀಧರೌದಸ್ಥೋ
ಮದನಾರಿಪರಿಗ್ರಹೇ ಧೃತಾರ್ಥಾ ಪಾಹಿಂ ಸ್ತಥೋ ।
ವಿಧಿವಾಹವಿಚಿತ್ರ ಕೇಳಿಧಾತೇ ವ ಮತ್ತಾ
ಮೋದೇನ ಪೂಜಿತ ಪಾವನೇ ॥೧೯॥

---

ಶುಭಮುಹೂರ್ತದಲ್ಲಿ ಕರೆದು ತಂದು ಧಾರಾಪೂರ್ವಕವಾಗಿ ಮಹೇಶ್ವರನಿಗೆ ಸಮರ್ಪಿಸಿದಳು. ॥೧೩-೧೪॥

(ವಿ. ಸೂ: ಮೂಲಗ್ರಂಥದಲ್ಲಿ, ೧೫-೧೬-೧೭-೧೮-೧೯ ನೇ ಶ್ಲೋಕಗಳು ಮೇಲೆ ಕೊಟ್ಟಿರುವಂತೆಯೇ ಕಂಡುಬರುತ್ತಿವೆ. ಈ ಶ್ಲೋಕಗಳಲ್ಲಿ ಭಾಷಾಶುದ್ಧಿಯಾಗಲಿ, ಅರ್ಥದ ಹೊಂದಿಕೆಯಾಗಲಿ ಕಂಡುಬರುವುದಿಲ್ಲ. ವಾಚಕರ ಅವಗಾಹನೆಗಾಗಿ ಮೂಲಶ್ಲೋಕವನ್ನು ಮಾತ್ರ ಅಚ್ಚುಹಾಕಿಸಿ, ಪರಿವರ್ತನೆ ಮಾಡಲು ಸಾಧ್ಯವಿಲ್ಲದೆ ಬಿಟ್ಟಿಡಲಾಗಿದೆ. ಈ ಅಂಶದಲ್ಲಿ ಅನೇಕ ಶ್ಲೋಕಗಳು ಹೀಗೆಯೇ ದುರ್ಬೋಧಗಳಾಗಿರುವುದರಿಂದ ಅಲ್ಲಲ್ಲಿ ವಿಶೇಷ ಗುರುತುಗಳೊಂದಿಗೆ ಮೂಲವನ್ನು ಇದ್ದದ್ದ ಹಾಗೆಯೇ ಕೊಡಲಾಗಿದೆ.)

ಮಧುರೇಕ್ಷಣಭಾವಪೂತಮೀನೇ
ಮಯಿ ದೀನೇ ಮಧುವೈರಿವಿರಿಂಚಿ ಮುಖ್ಯಸೇವ್ಯೇ ।
ಮನಸಾ ಭಾವಿತ ಚಂದ್ರಮೌಳಿಭಾವ್ಯೇ
ಮನಸಾ ವಿನಿಹಿತ ಯದಾರುಣ್ಯೇ ಮದಂಬಭವ್ಯೇ (?) ॥೨೦॥

ಜಗದಂಬಾ ಕದಂಬಮೂಲವಾಸೇ ।
ಕಮಲಾನೋದ್ಯೈರ್ಮಂತ್ರಪುರಸ್ಸರಂ ॥೨೧॥

ಸುಂದರಾಯ ವರಾಯಾಥ ಹರಾಯ ಶಶಿಮೌಳಯೇ ।
ಮಲಯಧ್ವಜಪಾಂಡ್ಯೇಶೋ ಭಾರ್ಯಯಾ ಸಹಹೃಷ್ಟಧೀಃ ॥೨೨॥

ತದಾ ದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ।
ಸಮುದ್ಗಾಯಂತಿ ಗಂಧರ್ವಾ ದೇವಾಶ್ಚಕ್ರುಃ ಸಮಾಕ್ಷತಾನ್ ॥೨೩॥

ಜಯೇಶೇತಿ ಚ ತತ್ರಾಸನ್ ವಾಚೋ ಮುನಿಗಣೇರಿತಾಃ ।
ನನರ್ತಾನಂದಭರಿತೋ ಘಟಜೋದ್ವಾಹಮಂಗಳಂ ॥೨೪॥

---

ಮೀನಾಕ್ಷಿಯೇ, ನಿನ್ನ ಮಧುರವಾದ ದೃಷ್ಟಿಯಿಂದ ಎಲ್ಲರನ್ನೂ ಪರಿಶುದ್ಧರನ್ನಾಗಿ ಮಾಡುವೆ. ಹಾಗೆಯೇ ನೀನು ಬ್ರಹ್ಮ, ವಿಷ್ಣು, ಈಶ್ವರ ಇವರಿಂದಲೂ ಸೇವಿತಳಾಗಿರುವೆ. ಚಂದ್ರಶೇಖರನೆನಿಸಿದ ಮಹಾದೇವನ ಮನಸ್ಸಿನಲ್ಲಿ ಸರ್ವದಾ ವಿಹರಿಸುತ್ತಿರುವೆ. ಅಂತಹ ಮಹಾಮಹಿಮಳಾದ ನೀನು ಸದಾ ನನ್ನ ಮನಸ್ಸನ್ನು ಆನಂದಗೊಳಿಸುತ್ತಿರು. ॥೨೦॥

ಕದಂಬವೃಕ್ಷದ ಮೂಲಭಾಗದಲ್ಲಿ ಬ್ರಹ್ಮನೇ ಮೊದಲಾದವರು ಸ್ವಸ್ತಿಮಂತ್ರ ಪುರಶ್ಚರಣೆ ಮಾಡುತ್ತಿರುವಾಗಲೇ, ಮಲಯಧ್ವಜನಾಮಕನಾದ ಪಾಂಡ್ಯರಾಜನು, ಸುಂದರನೂ, ಚಂದ್ರಶೇಖರನೂ, ಪಾಪನಾಶಕನೂ ಆದ ಮಹೇಶ್ವರನಿಗೆ ತನ್ನ ಪತ್ನಿಯೊಡಗೂಡಿ ಮಗಳನ್ನು ಧಾರೆಯೆರೆದು ಕೊಟ್ಟನು. ॥೨೧-೨೨॥

ಆಗ ದೇವದುಂದುಭಿಗಳು ಧ್ವನಿಮಾಡಿದುವು. ಅಪ್ಸರಸ್ತ್ರೀಯರು ನರ್ತನ ಮಾಡಿದರು. ಗಂಧರ್ವರೂ, ದೇವತೆಗಳೂ ಅಕ್ಷತೆಗಳನ್ನು ಎರಚಿದರು. ಮುನಿಗಣಗಳೆಲ್ಲಾ ಜಯ, ಶಿವ, ಎಂದು ಜಯಕಾರಮಾಡಿದರು. ಅಗಸ್ತ್ಯಮಹರ್ಷಿಯು ಆಗ ಇವರ ವಿವಾಹಮಂಗಳದ ಉತ್ಸವವನ್ನು ನೋಡಿ ಆನಂದಭರಿತನಾದನು. ॥೨೩-೨೪॥

ದೃಷ್ಟ್ವಾ ಶ್ರೀ ಸುಂದರೇಶಸ್ಯ ಮೀನಾಕ್ಷ್ಯಾಶ್ಚ ತದಾದ್ಭುತಂ ।
ಶಿವಾದೇಶಾದ್ದಕ್ಷಿಣಾಶಾಗಮನೇ ದುಃಖಮುತ್ಸೃಜತ್ ॥೨೫॥

ಅಸ್ತುವತ್ ಪದಯಾ ಭಕ್ತ್ಯಾ ಮೀನಾಕ್ಷೀ ಸುಂದರೇಶ್ವರಂ ॥೨೬॥

ಶಾಂತಂ ಶಾರದಚಂದ್ರಬಿಂಬವದನಂ ಕಾಂತಂ ಕಪೋಲಂ ತದಾ
ದಾಂತಂ ದಾರಿತದಾನವಂ ಮೃಗಕರಂ ತ್ವಾಂ ತಂ ಪ್ರಭಾದಂತುರಂ ।
ಕಾಂತಾಕುಂಡಲಕಾಂತವಾಮಮಲಸತ್ಸ್ವಾಂತಾಂತಹೀನಂ ಭಜೇ
ಶಾಂತಂ ಶಾಂತಜನಂ ಭವಂತಮಧುನಾ ವಾಂತಂ ಕೃತಾಂತಾಂತಕಂ ॥೨೭॥

ಕದಂಬವನಾವನೀವಿಹಾರಿಣೀ ಜಗತ್ಕಾರಿಣೀ
ಫಣಾಭರಣಧಾರಿಣೀ ವರತ್ರಿಶೂಲಸಂಹಾರಿಣೀ
ಪಾಂಡ್ಯರಾಜಕನ್ಯೇ ಮಯಿ ಮೀನಾಕ್ಷಿ
ಕೃಪಾಂ ನಿಧೇಹಿ ಧನ್ಯೇ ॥೨೮॥

---

ಹೀಗೆ ಶ್ರೀ ಸುಂದರೇಶ್ವರ ಮತ್ತು ಮೀನಾಕ್ಷೀದೇವಿಯರ ದರ್ಶನಲಾಭದಿಂದ ಸಂತೃಪ್ತನಾದ ಅಗಸ್ತ್ಯಮಹಾಮುನಿಯು ಆಗ ತಾನು ದಕ್ಷಿಣದಿಕ್ಕಿಗೆ ಬಂದಿದ್ದರಿಂದ ಉಂಟಾದ ದುಃಖವನ್ನು ಕಳೆದುಕೊಂಡನು. ಮತ್ತು ಆನಂದತುಂದಿಲನಾಗಿ ಈ ರೀತಿ ಮೀನಾಕ್ಷೀಸುಂದರೇಶ್ವರರನ್ನು ಪ್ರಾರ್ಥಿಸಿದನು. ॥೨೫-೨೬॥

"ಮಹಾದೇವನೇ, ನೀನು ಶಾಂತಸ್ವರೂಪನು. ನಿನ್ನ ವದನವು ಚಂದ್ರಮಂಡಲಕ್ಕೆ ಸದೃಶವಾಗಿರುವುದು. ಕಪೋಲವಾದರೋ ಅತಿಮನೋಹರವಾಗಿರುವುದು. ಭಕ್ತರಿಗೆ ಸಕಲ ವರಗಳನ್ನು ಕೊಡುವುದರಲ್ಲಿಯೂ, ದುಷ್ಟದಾನವರನ್ನು ನಾಶಗೊಳಿಸುವುದರಲ್ಲಿಯೂ ನೀನು ಸಮರ್ಥನಾಗಿರುವೆ. ನಿನ್ನ ಹಸ್ತದಲ್ಲಿ ಸದಾ ಜಿಂಕೆಯನ್ನು ಧರಿಸಿರುವೆ. ನೀನು ಕಾಂತಿರಾಶಿಯಂತೆ ತೋರುತ್ತಿರುವೆ. ಪತ್ನಿಯಾದ ಪಾರ್ವತಿಯು ಕೇಶಪಾಶದಿಂದ ನಿನ್ನ ಎಡಭಾಗವೇ ಶೋಭಿಸುತ್ತಿರುವುದು. ನಿರ್ದುಷ್ಟ ಸ್ವಭಾವವುಳ್ಳವನೂ, ಶಾಂತಜನರಿಗೆ ಶಾಂತಸ್ವಭಾವದಿಂದಿರುವವನೂ, ಯಮನಿಗೆ ಯಮನಾಗಿರುವವನೂ ಆದ ನಿನ್ನನ್ನು ನಾನು ಸದಾ ಧ್ಯಾನಿಸುತ್ತಿರುವೆನು. ॥೨೭॥

ತ್ರಿಶೂಲಧಾರಿಣಿಯೂ, ಕದಂಬವನದಲ್ಲಿ ವಿಹರಿಸುವವಳೂ, ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣಳಾದವಳೂ, ನಾಗಾಭರಣಭೂಷಿತಳೂ ಆಗಿರುವ ಪಾಂಡ್ಯ ರಾಜಪುತ್ರಿಯೇ, ಮೀನಾಕ್ಷೀದೇವಿಯೇ, ಕರುಣೆಯಿಂದ ನಮ್ಮನ್ನು ರಕ್ಷಿಸು. ಎಲೌ

ವಾಚಾ ವಾ ಮನಸಾಥವಾ ಗಿರಿಸುತೇ ಕಾಯೇನ ವಾ ಸಂತತಂ
ಮೀನಾಕ್ಷೀತಿ ಕದಾಚಿದಂಬ ಕುರುತೇ ತ್ವನ್ನಾಮಸಂಕೀರ್ತನಂ ।
ಲಕ್ಷ್ಮೀಸ್ತಸ್ಯ ಗೃಹೇ ವಸತ್ಯನುದಿನಂ ವಾಣೀ ಚ ವಕ್ತ್ರಾಂಬುಜೇ
ಧರ್ಮಾದ್ಯರ್ಥಚತುಷ್ಟಯಂ ಕರತಲಪ್ರಾಪ್ತಂ ಭವೇನ್ನಿಶ್ಚಯಃ ॥೨೯॥

ಕದಂಬವನ್ಯಾಂ ಗಿರಿರಾಜಕನ್ಯಾಂ
ಪಾಂಡ್ಯೇಂದ್ರಕನ್ಯಾಮವಲೋಕಿನೋ ಯೇ ।
ತೇ ಸರ್ವಮಾನ್ಯಾಕ್ಷಿಯುಗೇನ ಧನ್ಯಾ
ವನ್ಯಾಶ್ಚ ಸಾ ಮಾನ್ಯನರಾಸ್ತಥಾನ್ಯೇ ॥೩೦॥

ತದಾಗಸ್ತ್ಯೋ ಮುನಿಶ್ರೇಷ್ಠಃ ಪತಂಜಲಿಸಮನ್ವಿತಃ ।
ನಿನಾಯ ಪಾಂಡ್ಯಭೂಪೇನ ವಿಷ್ಣುಬ್ರಹ್ಮಾದಿಭಿಸ್ಸುರೈಃ ॥೩೧॥

ಸ್ನಾತ್ವಾ ಸುವರ್ಣಪದ್ಮಿನ್ಯಾಂ ದೃಷ್ಟ್ವಾ ಶ್ರೀಸುಂದರೇಶ್ವರಂ ।
ಸಂಪೂಜ್ಯ ಕೃತವರ್ಷಾಣಸ್ತ್ರಿಪುಂಡ್ರಾವಲಿಭೂಷಿತಃ ॥೩೨॥

---

ಮೀನಾಕ್ಷೀದೇವಿಯೇ, ಮಾತಿನಲ್ಲಾಗಲಿ, ಮನಸ್ಸಿನಲ್ಲಾಗಲಿ, ದೈಹಿಕವಾದ ಯಾವ ಇಂದ್ರಿಯದಿಂದಲೇ ಆಗಲಿ, ಒಂದುಸಾರಿಯಾದರೂ ನಿನ್ನನ್ನು ಮೀನಾಕ್ಷಿ ಎಂಬ ಹೆಸರಿನಿಂದ ಯಾರು ಧ್ಯಾನಿಸುವರೋ, ಅವರು ನಿಜವಾಗಿಯೂ ಲಕ್ಷ್ಮೀಪುತ್ರರಾಗುವರು. ಸರಸ್ವತಿಯೇ ಅವರ ವದನಕಮಲದಲ್ಲಿ ನೆಲಸುವಳು. ಅವರಿಗೆ ಧರ್ಮಾದಿ ಚತುರ್ವಿಧಪುರುಷಾರ್ಥಗಳೂ ಅನಾಯಾಸವಾಗಿ ಲಭಿಸುವುವು. ಇದು ನಿಶ್ಚಯ. ॥೨೮-೨೯॥

ಕದಂಬವನದಲ್ಲಿ ನೆಲಸಿ ಗಿರಿರಾಜನಿಗೂ ಪಾಂಡ್ಯರಾಜನಿಗೂ ಪುತ್ರಿಯೆನಿಸಿದ ನಿನ್ನನ್ನು ಯಾರು ಸರ್ವದಾ ದರ್ಶನಮಾಡುತ್ತಿರುವರೋ ಅವರೇ ಸರ್ವರಿಗೂ ಮಾನ್ಯರೆನಿಸುವರು ; ಮತ್ತು ನಿನ್ನ ದರ್ಶನಮಾಡದವರು ಯಾರೇ ಆಗಲಿ ಅವರನ್ನು ಕಾಡುಮನುಷ್ಯರೆಂದೂ, ಸಾಮಾನ್ಯ ಮಾನವರೆಂದೂ ತಿಳಿಯಬೇಕು ” ॥೩೦॥

ಎಂದು ಪ್ರಾರ್ಥಿಸಿ ಅಗಸ್ತ್ಯಮಹಾಮುನಿಯು ಪತಂಜಲಿಮಹರ್ಷಿಯೊಡನೆಯೂ, ಬ್ರಹ್ಮವಿಷ್ಣ್ವಾದಿಗಳೊಡನೆಯೂ ಕೂಡಿದವನಾಗಿ, ಸುವರ್ಣಪದ್ಮಕೊಳದಲ್ಲಿ ಸ್ನಾನಮಾಡಿ ಭಸ್ಮತ್ರಿಪುಂಡ್ರಧಾರಿಯಾಗಿ ಸುಂದರೇಶ್ವರ ಮೂರ್ತಿಯನ್ನು ಪೂಜಿಸಲು ದೇವಾಲಯಕ್ಕೆ ಬಂದು ಸೇರಿದನು ॥೩೧-೩೨॥

ಶಿವಲಿಂಗಾರ್ಚನಂ ಕೃತ್ವಾ ಬಿಲ್ವಪತ್ರೈರ್ಮಹೇಶ್ವರಂ ।
ಶಿವನೈವೇದ್ಯಶೇಷೇಣ ಭೋಕ್ತುಂ ಸರ್ವಸುರಾನ್ಮುನೀನ್ ॥೩೩॥

ನ್ಯಮಂತ್ರಯತ್ಪಾಂಡ್ಯಭೂಪೋ ವಿಷ್ಣುಬ್ರಹ್ಮಾದಿಕಾನ್ ಗಣಾನ್ ।
ತದಾ ಪತಂಜಲಿಃ ಪ್ರಾಹ ಭಗವಂತಂ ಚ ಸುಂದರಂ ॥೩೪॥

॥ ಪತಂಜಲಿರುವಾಚ ॥

ನಿಯಮಾತ್ತವ ಪಾದಪಂಕಜಂ ಸತತಂ ಹೇಮಸಭಾನಿಭಾವಿತಂ ।
ಸುರಸಿದ್ಧಮಹರ್ಷಿಸೇವಿತಂ ಭೋಕ್ಷ್ಯೇ ವಿಲೋಕ್ಯ ನೃತ್ಯೇಶಂ ॥೩೫॥

ತತ್ರ ಹೇಮಸಭಾನಟಃ ಪತಂಜಲಿವಚಃ
ಶ್ರುತ್ವಾ ದೇವಃ ಸುಂದರನಾಯಕಃ ।
ಕಲಧೌತಸಭಾಮಧ್ಯೇ ನನರ್ತಾಗ್ರೇ ಪತಂಜಲೇಃ ॥೩೬॥

ವಾದಯನ್ ಡಮರುಂ ಹಸ್ತೇ ವಹ್ನಿಂ ಸಂಧಾರಯನ್ಹರಃ ।
ವ್ಯತ್ಯಸ್ತಪಾದಾಂಬುಜಧೃಗಪಸ್ಮಾರೋಲ್ಲಸತ್ಪದಃ ॥೩೭॥

---

ಅವನ ಜೊತೆಯಲ್ಲಿ ಸರ್ವರೂ ಬಂದು ಅಲ್ಲಿ ಮಹೇಶ್ವರನನ್ನು ಬಿಲ್ವಪತ್ರಾದಿಗಳಿಂದ ಪೂಜಿಸಿದರು. ಆಗ ಪಾಂಡ್ಯರಾಜನು ಶಿವನೈವೇದ್ಯಶೇಷವನ್ನು ಭುಜಿಸಲು ವಿಷ್ಣ್ವಾದಿ ಸಕಲ ದೇವತೆಗಳನ್ನೂ ಆಹ್ವಾನಿಸಿದನು. ಆ ಸಮಯದಲ್ಲಿ ಪತಂಜಲಿ ಮಹರ್ಷಿಯು ಭಗವಂತನಾದ ಸುಂದರೇಶ್ವರನನ್ನು ವಿನಯಪುರಸ್ಸರವಾಗಿ ಹೀಗೆ ಪ್ರಾರ್ಥಿಸಿದನು. ॥೩೩-೩೪॥

'ಮಹಾದೇವನೇ, ನೀನು ಈ ಸುವರ್ಣಸಭೆಯಲ್ಲಿ ನಿನ್ನ ಮನೋಹರವಾದ ಪಾದಕಮಲಗಳಿಂದ ನಾಟ್ಯವಾಡಿದ್ದನ್ನು ನೋಡುತ್ತಾ, ಅಂತಹ ದೇವಋಷಿಗಳಿಂದಲೂ ಸೇವಿತವಾದ ನಿನ್ನ ನಾಟ್ಯಮೂರ್ತಿಯನ್ನು ಅನುಸಂಧಾನಮಾಡುತ್ತಾ ಈ ನಿನ್ನ ಪ್ರಸಾದವನ್ನು ಆನಂದದಿಂದ ಭಕ್ಷಿಸುವೆನು' ಎಂದು ಭಕ್ತಿಯಿಂದ ಪ್ರಾರ್ಥಿಸಿಕೊಂಡನು. ॥೩೫॥

ಆಗ ಸುವರ್ಣಸಭೆಯಲ್ಲಿ ನಾಟ್ಯಮಾಡಲಿಚ್ಛೆಯುಳ್ಳ ಮಹಾದೇವನು ಪತಂಜಲಿಯ ಪ್ರಾರ್ಥನೆಯಂತೆ ಅದೇ ಸಭಾಮಧ್ಯದಲ್ಲಿ ನರ್ತನಮಾಡಿದನು. ಕೈಯ್ಯಲ್ಲಿ ಡಮರುಗವನ್ನು ಬಾರಿಸುತ್ತಾ ಮತ್ತೊಂದು ಕೈಯಲ್ಲಿ ಅಗ್ನಿಯನ್ನು

ಬ್ರಹ್ಮಮಂಡಲಸದ್ಧಾರೋ ಜಟಾವೃಂದೇಂದುಶೇಖರಃ ।
ಮಂದಸ್ಮಿತ ಇವ ವದನೋ ಮುನೀಂದ್ರಸ್ತತ್ರ ಸುರಾಸುರಾನ್ ॥೩೮॥

ವಿಲೋಕ್ಯ ಕರುಣಾದೃಷ್ಟ್ಯಾ ಕಲಧೌತಸಭಾಪತಿಃ ।
ಫುಲ್ಲಹಲ್ಲಕಧಾರಿಣ್ಯಾ ದೇವ್ಯಾ ಪಾರ್ಶ್ವಸ್ಥಯಾ ಮುದಾ ॥೩೯॥

ವವರ್ಷುಃ ಕುಸುಮಾನ್ಯೇವ ಜಯೇಶೇತಿ ಚ ವಾದಿನಃ ।
ಸುರಾಶ್ಚ ಮುನಯಸ್ಸರ್ವೇ ವಿಷ್ಣುಬ್ರಹ್ಮಾದಯೋ ಗಣಾಃ ॥೪೦॥

|| ಮುನಯ ಊಚುಃ ||

ಅಸ್ತುವನ್ಮುನಯಸ್ಸರ್ವೇ ಸ ಪತಂಜಲಿಕುಂಭಭೂಃ ।
ದೇವತೂರ್ಯಾಣ್ಯವಾದ್ಯಂತ ತತ್ರ ನೃತ್ಯತಿ ಶಂಕರಃ ॥೪೧॥

ಕಲಧೌತಸಭಾ ವಿಭಾತಿ ಶಂಭೋ
ತವ ನೃತ್ಯಂ ಸುಖದಂ ಜಗನ್ನೃಷು ।
ಪರಿಲೋಕಯತಾಂ ನ ಜನ್ಮದುಃಖಂ
ಮರಣಾದಾಲಭತೇ ಭವಾದ್ಯಹೃದ್ಯ ॥೪೨॥

---

ಹಿಡಿದು ತನ್ನ ಕಾಲುಗಳನ್ನೂ, ಕಮಲದಂತಿರುವ ಹೆಜ್ಜೆಗಳನ್ನೂ ಅಲ್ಲಲ್ಲಿ ಇರಿಸುತ್ತಾ ನಾಟ್ಯವಾಡಿದನು. ||೩೬-೩೭||

ಶಿರಸ್ಸಿನಮೇಲಿರುವ ಗಂಗಾಪ್ರವಾಹವು ಬ್ರಹ್ಮಮಂಡಲಪರ್ಯಂತವಾಗಿ ವ್ಯಾಪಿಸುತ್ತಿದ್ದಿತು. ಜಟಾಮಂಡಲದಲ್ಲಿ ಚಂದ್ರನೂ, ಮುಖದಲ್ಲಿ ಮುಗುಳ್ನಗೆಯೂ ಹೊಳೆಯುತ್ತಿದ್ದುವು. ಇಂತಹ ಆಕಾರದಿಂದ ಕೂಡಿದ ಮಹಾದೇವನು ಹತ್ತಿರದಲ್ಲಿದ್ದ ದೇವಾಸುರರನ್ನು ನೋಡುತ್ತಾ ಹೇಮಸಭೆಯಲ್ಲಿ ನಾಟ್ಯವಾಡಿದನು. ಅಲ್ಲಿಯೇ ಪಕ್ಕದಲ್ಲಿ ಅರಳಿದ ಕಲ್ಹಾರಪುಷ್ಪಗಳ ಮಾಲೆಯನ್ನು ಧರಿಸಿ ದೇವಿಯು ವಿರಾಜಿಸುತ್ತಿದ್ದಳು ಇಂತಹ ಸುಸಮಯದಲ್ಲಿ ವಿಷ್ಣ್ವಾದಿ ಸಕಲ ದೇವತೆಗಳೂ ಪರಶಿವನನ್ನು ಜಯಕಾರಗಳಿಂದ ಶ್ಲಾಘಿಸುತ್ತಿರಲು ಅಂತರಿಕ್ಷದಿಂದ ಪುಷ್ಪವೃಷ್ಟಿಯಾಗುತ್ತಿದ್ದಿತು. ||೩೮-೩೯-೪೦||

ಅಲ್ಲಿದ್ದ ಮಹರ್ಷಿಗಳೆಲ್ಲರೂ ಪತಂಜಲಿ ಮತ್ತು ಅಗಸ್ತ್ಯಮಹರ್ಷಿಗಳೊಡನೆ ದೇವಲೋಕದ ತುತ್ತೂರಿಗಳನ್ನು ಬಾರಿಸುತ್ತಾ ಶಂಕರನ ನರ್ತನವನ್ನು ನೋಡು

**ಹರಹರ ಶಂಕರ ದೇವದಯಾಕರ**
**ಶಶಧರ ಶೇಖರ ತುಂಗಜಟಾಧರ ಪಾಹಿ ವಿಭೋ ।**
**ಗಂಗಾತರಂಗ ವಿಲಾಸಕಪರ್ದಕ**
**ಬ್ರಹ್ಮಕರಂ ಕಥಕರೋರುಕರಂ (?)** ॥೪೩॥

**ರೂಕ್ಷವರಕ್ಷಿತಕುಕ್ಷಿಗತಾಖಿಲ**
**ಲೋಕವಿಲೋಕನ ಪಾಹಿ ವಿಭೋ**
**ಹಾರವಿರಾಜಿತಕಾಕೋದರವರ**
**ಸದ್ವೃತಪುರವರ ಪಾಹಿ ವಿಭೋ** ॥೪೪॥

॥ ಸ್ಕಂದ ಉವಾಚ ॥

**ದೇವದಯಾ ಸದ್ವಶಾದ್ಯದಶಾಂ ।**
**ಪಾಹಿ ಮಹೇಶ ಮಹೇಶವಿಲಾಸ** ॥೪೫॥

---

ತ್ತಿದ್ದರು. ಮತ್ತು ಮುನಿಗಳು ಈ ರೀತಿ ಪ್ರಾರ್ಥಿಸಿದರು. ಪರಶಿವನೇ, ಜಗತ್ತಿಗೇ ಸುಖವನ್ನುಂಟುಮಾಡುವ ಈ ನಿನ್ನ ನರ್ತನದಿಂದ ಈ ಸುವರ್ಣ ಸಭೆಯೇ ಕಂಗೊಳಿಸುತ್ತಿರುವುದು. ನಿನ್ನ ಈ ನಾಟ್ಯವೈಭವವನ್ನು ನೋಡುವವರಿಗೆ ಮರಣ ಪರ್ಯಂತವಾಗಿ ಯಾವ ವಿಧವಾದ ದುಃಖವೂ ಉಂಟಾಗಲಾರದು. ಮಹಾದೇವನೇ ನಮ್ಮನ್ನು ಸದಾ ರಕ್ಷಿಸು. ॥೪೧-೪೨॥

ಲೋಕಸುಖಕರನೇ, ದಯಾನಿಧಿಯೇ, ಚಂದ್ರಶೇಖರನೇ, ಉನ್ನತಗಳಾದ ಜಟೆಗಳಿಂದ ಶೋಭಿಸುವವನೇ, ನಿನ್ನ ಜಟಾಕಲಾಪದಲ್ಲಿ ಗಂಗಾತರಂಗಗಳು ತುಳುಕುತ್ತಿವೆ. ಬ್ರಹ್ಮನ ತಲೆಯ ಬುರುಡೆಯು ನಿನ್ನ ಕೈಯ್ಯಲ್ಲಿ ಪ್ರಕಾಶಿಸುತ್ತಿರುವುದಲ್ಲವೆ! ಮಹಾದೇವನೇ, ನನ್ನನ್ನು ರಕ್ಷಿಸು. ॥೪೩॥

ಪ್ರಪಂಚವನ್ನೇ ತನ್ನ ನಾಭಿಯಲ್ಲಿಟ್ಟು, ಸರ್ವದಾ ಕೃಪಾಕಟಾಕ್ಷದಿಂದ ನೋಡುತ್ತಿರುವ ಮಹಾದೇವನೇ, ನಿನ್ನ ವಕ್ಷಃಸ್ಥಳದಲ್ಲಿ ದಿವ್ಯವಾದ ಸರ್ಪವೇ ಹಾರರೂಪದಲ್ಲಿ ತೋರುತ್ತಿರುವುದಲ್ಲವೆ! ತ್ರಿಪುರಗಳಲ್ಲಿದ್ದ ಜನರಿಗೆ ಅಭಯ ಪ್ರದಾನಮಾಡಿ ರಕ್ಷಿಸಿದ ಮಹಾತ್ಮನೇ, ನಮ್ಮನ್ನು ರಕ್ಷಿಸು. ॥೪೪॥

ದೇವದೇವನೇ, ಮಹೇಶ್ವರನೇ, ವಿಲಾಸರೂಪಿಯೇ, ನಮ್ಮನ್ನು ಸರ್ವದಶೆಯಲ್ಲಿಯೂ ರಕ್ಷಿಸಿ ಕಾಪಾಡು ಎಂದು ಪತಂಜಲಿ, ಅಗಸ್ತ್ಯ, ವಿಷ್ಣು, ಬ್ರಹ್ಮ, ಇಂದ್ರ,

ಇತ್ಥಂ ಪತಂಜಲಿಘಟೋದ್ಭವ ವಿಷ್ಣುಬ್ರಹ್ಮೇಂದ್ರ
ಪಾಂಡ್ಯಮುನೀಂದ್ರವರ್ಯೈಃ ಸ್ತುತಾಂಘ್ರಿಃ ।
ರಾರಾಜಿತೇ ರಜತಗೋಷ್ಠನಿವಿಷ್ಟಪಾದ
ಪದ್ಮಪ್ರಭಾವಿಜಿತ ಸರ್ವಜನಾದ್ಯಮೋಹಃ ॥೪೬॥

ದೇವಸ್ತತ್ರ ಮುನೀಶ್ವರೈಸ್ಸುರಗಣೈರ್ಬ್ರಹ್ಮೇಂದ್ರನಾರಾಯಣೈ
ರ್ಭೋಕ್ತುಂ ತತ್ರ ಸ ಪಾಂಡ್ಯಪೇನ ಮುದಿತಂ ಸಂಪೂಜಿತಂ ಶಂಕರಂ ।
ಅಧಾಯಂಕಿ (?) ಗತಸ್ಯ ಕುಂಡಕ ಗಣಸ್ಯಾಬ್ಧಾಡಬಂ
ಕುಕ್ಷಿಗಂ ತೇನಾಪಾದಿತಮನ್ನಮತ್ರ ಬುಭುಜೇ ಕುಂಡೋದರೋ ವಾಮನಃ
॥೪೭॥

ಹಾ ಹಾ ಕ್ಷುದ್ಭವತೇ ನ ತೃಪ್ತಿರಧುನಾ ಸಂಜಾಯತೇ ಶಂಕರ
ಸ್ತಸ್ಮೈ ಪಾತುಮಥಾಜುಹಾವ ಸರಿತಂ ದೇವೋಽಪಿ ತಾಂ ವೇಗಿನೀಂ ।
ಪೀತ್ವಾ ರತ್ನೋತ್ತಮ ಚಾರುಮುಷ್ಯಘಹರಂ
ಚುಕ್ರೋಶ ಕುಂಡೋದರಃ ॥೪೮॥

---

ಪಾಂಡ್ಯರಾಜ ಮುಂತಾದವರು ಮಹಾದೇವನನ್ನು ಧ್ಯಾನಿಸುತ್ತಾ ಅವನ ಪಾದಪದ್ಮವನ್ನು ಪೂಜಿಸಿದರು. ಆ ಮಹಾದೇವನ ಪಾದವಾದರೋ ಶುಭ್ರವಾದ ಬೆಳ್ಳಿಯ ಪೀಠದಮೇಲೆ ಶೋಭಿಸುತ್ತಾ, ತನ್ನ ಕಾಂತಿಯ ಪ್ರಸಾರದಿಂದ ಭಕ್ತರ ಮೋಹವನ್ನೆಲ್ಲಾ ದೂರಮಾಡುತ್ತಿದ್ದಿತು ಎಂದು ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ತಿಳಿಸಿದನು. ॥೪೫-೪೬॥

ಹಾಗೆ ದೇವರ್ಷಿಗಳಿಂದಲೂ, ಬ್ರಹ್ಮಾದಿಗಳಿಂದಲೂ ಪೂಜಿತನಾಗಿ ಪರಮೇಶ್ವರನು ಪಾಂಡ್ಯರಾಜನಿಗೂ, ಅವನ ಪರಿವಾರಕ್ಕೂ ಭೋಜನಮಾಡಲು ಅಪ್ಪಣೆಯಿತ್ತನು. ಅಷ್ಟರಲ್ಲಿಯೇ ವಾಮನನಾಗಿ ಬಂದ ಕುಂಡೋದರನೆಂಬ ಗಣಾಧೀಶನು ತನ್ನ ಹೃದಯದಲ್ಲಿ ಬಡಬಾಗ್ನಿಯನ್ನಿಟ್ಟು ಹಸಿವಿನಿಂದ ಪೀಡಿತನಾದವನಂತೆ ತೋರುತ್ತಾ ಊಟಮಾಡಲು ತಾನೂ ಅನ್ನವನ್ನು ಬೇಡಿದನು. ॥೪೭॥

ಅಲ್ಲಿದ್ದ ಆಹಾರವನ್ನೆಲ್ಲಾ ಭಕ್ಷಿಸಿಯೂ, ಕುಂಡೋದರನು ಮತ್ತೆ ಶಂಕರನ ಸಮೀಪಕ್ಕೆ ಬಂದು, ಮಹಾದೇವನೇ, ನನಗೆ ಹಸಿವುಬಾಯಾರಿಕೆಗಳು ಇಂಗಲಿಲ್ಲ. ಮುಂದೇನುಮಾಡಲಿ? ಎಂದು ಮಹಾದೇವನನ್ನು ಪ್ರಾರ್ಥಿಸಲು, ಮಹಾದೇವನು ಅವನು ಕುಡಿಯಲು ದೊಡ್ಡ ನದಿಯನ್ನೇ ತರಿಸಿಕೊಟ್ಟನು. ಅದನ್ನೆಲ್ಲಾ ಕುಡಿದು

ಶಂಭೋ ಶಶಾಂಕಶಿರಸಾ ಪರಿಶೋಭಮಾನ
ಪಾಂಡ್ಯೇಶಸದ್ಮನಿ ಯುಕ್ಷಿಗೆ(?) ತ್ವಮಾಮುವೇಶ ।
ದೇವಾ ಮುನೀಶ್ವರಗಣಾ ಅಪಿ ಚಂದ್ರಮೌಳಿಂ
ವೀಕ್ಷ್ಯೈವ ವಿಸ್ಮಿತಧಿಯೋ ಮಲಯಧ್ವಜೇನ ॥೪೯॥

ತಜ್ಜಾಠರೇವ ಪರಿಗತಯು ಊರ್ವಾನಲಂ ತಂ ಸಂಜಹಿ ।
ವಹ್ನೀಶ ಬುಭುಜಸ್ತದಾನಂತರಂ ತೇ (?) ॥೫೦॥

ಏವಂ ವಿಚಿಂತ್ಯ ವಿವಿಧಾಃ ಸ್ಮ ಚಕಾರ ಲೀಲಾಃ
ಪಾಂಡ್ಯೇಶ್ವರೋಽಪಿ ಶಿವಸತ್ಕರರಾಜ್ಯಭಾರಃ ।
ಲೇಭೇ ಪದಂ ಜನನಹೀನಮಥೋ ಶಿವಸ್ಯ
ಕೈಲಾಸಗಶ್ಚ ಗಣಪುಂಗವತಾಮವಾಪ ॥೫೧॥

---

ಅವನು ಮತ್ತೂ ತರಿಸಿಕೊಟ್ಟ ಆಹಾರವನ್ನೆಲ್ಲಾ ತಿಂದರೂ ಮತ್ತೂ ಹಸಿವಿನಿಂದ ಪೀಡಿತನಾಗಿರುವೆನೆಂದು ಹೇಳುತ್ತಾ ಕೋಪಿಸಿಕೊಳ್ಳುತ್ತಿದ್ದನು. ॥೪೮॥

ಶಂಭುವೇ, ಚಂದ್ರಕಲೆಯಿಂದ ಶೋಭಿಸುವ ಶಿರೋಭಾಗವುಳ್ಳವನೇ, ಪಾಂಡ್ಯ ರಾಜನ ಗೃಹದಲ್ಲಿ ನೆಲಸಿರುವ ಮಹಾದೇವನೇ, ನನ್ನ ಉದರಗತವಾದ ಕ್ಷುದ್ಬಾಧೆಯನ್ನು ತಪ್ಪಿಸಿ ಕಾಪಾಡು ಎಂದು ಕುಂಡೋದರನು ಮತ್ತೆ ಮತ್ತೆ ಪ್ರಾರ್ಥಿಸಿಕೊಳ್ಳುತ್ತಿರಲು, ಅಲ್ಲಿದ್ದ ದೇವತೆಗಳೂ, ಮುನಿಜನರೂ, ಮಲಯಧ್ವಜನೂ ಅತ್ಯಾಶ್ಚರ್ಯ ಭರಿತನಾದರು. ॥೪೯॥

ಮತ್ತು ಅವರು ಹೀಗೆ ಪ್ರಾರ್ಥಿಸುತ್ತಿದ್ದರು. ' ಸ್ವಾಮಿಯೇ, ಇವನ ಹೃದಯದಲ್ಲಿ ಬಡಬಾಗ್ನಿಯು ನೆಲಸಿರುವುದು. ಈಗ ಇವನಿಗೆ ಬಂದಿರುವ ಕ್ಷುತ್ಪೀಡೆಯನ್ನು ತಪ್ಪಿಸಿ ' ಎಂದು ಪ್ರಾರ್ಥಿಸಲು ಒಡನೆಯೇ ಪರಶಿವನು ಅದು ತನ್ನದೇ ಆದ ಒಂದು ಲೀಲೆಯೆಂದು ಹೇಳುತ್ತಾ ಆ ಮೂರ್ತಿಯು ಒಡನೆಯೇ ಮಾಯವಾಗುವಂತೆ ಮಾಡಿದನು. ಹೀಗೆ ಪರಶಿವನು ಅನೇಕ ಲೀಲೆಗಳಿಂದ ಅವರನ್ನೆಲ್ಲಾ ಮುಗ್ಧಗೊಳಿಸಿ, ಕೊನೆಗೆ ಪಾಂಡ್ಯರಾಜನಿಗೆ ದಿವ್ಯವಾಗಿ ರಾಜ್ಯಭಾರಮಾಡುವ ಶಕ್ತಿಯನ್ನೊದಗಿಸಿ, ಜನ್ಮಾಂತರದಲ್ಲಿ ಮತ್ತೆ ಜನನವು ದೊರೆಯದ ಶಾಶ್ವತವಾದ ಮುಕ್ತಿಯನ್ನು ಅನುಗ್ರಹಿಸಿದನು. ಪಾಂಡ್ಯರಾಜನಾದರೋ, ಆದರಂತೆಯೇ ಬಾಳಿ ಬದುಕಿ, ಕೊನೆಗೆ ಶಿವಗಾಣಾಪತ್ಯವನ್ನು ಪಡೆದು ಕ್ರಮವಾಗಿ ಶಿವಸನ್ನಿಧಿಗೈದಿದನು.॥೫೦-೫೧॥

ಮೀನಾಕ್ಷ್ಯಾ ಮುಮುದೇ ತದಾ ಸ ಭಗವಾಂಸ್ತ್ರ್ಯಕ್ಷೋಂಬಿಕಾಯಾಃ ಪತಿ
ರ್ದೇನಾಖ್ಯಾಂ ವರಪಾಂಡ್ಯಪತ್ತನಮನಯತ್ತದ್ವಂಶಪಾರಂಪರೀಂ ।
ದ್ವಾತ್ರಿಂಶದ್ವರಪಾಂಡ್ಯಯಾಚಿತಮಹಾಲಿಂಗಂ ಸದಾ ಸುಂದರಂ
ವಂದೇ ತಾಂ ಶಫರಾಕ್ಷಿಣೀಮಪಿಮಹಾರಾಜನ್ಯ ಧೌರಂಧರೀಂ(?) ॥೫೨॥

ಹಾಲಾಸ್ಯೇ ಲಾಸ್ಯಸದನಾನ್ಯಥ ಶಿವಕೃಪಯಾ ಪೂರ್ಣಯಾ ಪಾಂಡ್ಯಸೀಮ
ನ್ಯಾಯೇನಾನಂತಲೀಲಾಃ ಪರಶಿವ ಶಿವಾನಾಯಕೋನಂತಶಕ್ತಿಃ ।
ನಾಮ್ನಾ ಸಹಸ್ರೇಣ ಸಭಾಪತಿಂ ಸುರಾಃ ಕುಂಡೋದರಾಯಾತ್ಮಮುದಾತ್
॥೫೩॥

॥ ಶ್ರೀ ಸ್ಕಂದ ಉವಾಚ ॥

ಏವಂ ಚತುಷ್ಷಷ್ಟಿಮಹೇಶಲೀಲಾ
ಹಾಲಾಸ್ಯನಾಥಃ ಶಫರಾಕ್ಷಿಣೀಪತಿಃ ।
ಚಕಾರ ವಿಸ್ತಾರ್ಯ ಚ ಕುಂಭಸಂಭವಾತ್
ಸ್ಕಾಂದೇ ಪುರಾಣೇ ಸ್ವಕಸಂಹಿತಾಯಾಂ ॥೫೪॥

---

ಪರಶಿವನಾದರೋ ಮೀನಾಕ್ಷೀದೇವಿಯೊಡಗೂಡಿ ಅಲ್ಲಿಯೇ ವಿಹರಿಸುತ್ತಾ, ಅಲ್ಲಿಯೇ ನೆಲಸಿ, ಆ ಪಾಂಡ್ಯರಾಜನ ವಂಶವನ್ನೇ ರಕ್ಷಿಸುತ್ತಿದ್ದರು. ಹಾಗೆಯೇ ಪಾಂಡ್ಯರಾಜನ ಪ್ರಾರ್ಥನೆಯಂತೆ ಅಲ್ಲಿ ಮೂವತ್ತೆರಡು ಶಿವಲಿಂಗಗಳನ್ನು ಪ್ರಕಾಶಗೊಳಿಸಿ, ಮಹಾದೇವಿಯೆನಿಸಿದ ಮೀನಾಕ್ಷೀದೇವಿಯು ಆ ಕ್ಷೇತ್ರದಲ್ಲಿ ದುಷ್ಟರಾಜರನ್ನೆಲ್ಲಾ ಶಿಕ್ಷಿಸುತ್ತಾ, ಶಿಷ್ಟರನ್ನು ರಕ್ಷಿಸುತ್ತಾ ನೆಲಸಿದಳು. ॥೫೨॥

ಪಾಂಡ್ಯದೇಶದಲ್ಲಿ ಹಾಲಾಸ್ಯಕ್ಷೇತ್ರವೆನಿಸಿದ ಶಿವನಾಟ್ಯಪ್ರದೇಶವು, ಮೀನಾಕ್ಷೀಸುಂದರರ ಪೂರ್ಣಕಟಾಕ್ಷದಿಂದ ಅಭಿವೃದ್ಧಿಹೊಂದುತ್ತಿರುವುದು. ಮತ್ತು ಆ ಸ್ಥಳದಲ್ಲಿ ಪರಶಿವನ ಅನಂತಲೀಲೆಗಳೂ, ಅನಂತಶಕ್ತಿಗಳೂ ವಿವೃತವಾದುವು. ಅಂತಹ ಮಹಾದೇವನನ್ನು ಸಕಲ ದೇವತೆಗಳೂ ಅಲ್ಲಿ ಸಭಾಪತಿಯೆಂದು ಭಾವಿಸಿ ಸದಾ ಸಹಸ್ರನಾಮಾರ್ಚನೆಯಿಂದ ಪೂಜಿಸಿದರು. ಮತ್ತು ಕುಂಡೋದರನನ್ನು ಸೃಷ್ಟಿಸಿದ್ದ ಮಹಾದೇವನನ್ನು ವಿಧವಿಧವಾಗಿ ಸ್ತುತಿಸಿದರು. ॥೫೩॥

ಹಾಲಾಸ್ಯೇಶ್ವರನು ಆ ಕ್ಷೇತ್ರದಲ್ಲಿ ಮೀನಾಕ್ಷಿದೇವಿಯೊಡನೆ ತನ್ನ ಅರುವತ್ತು ನಾಲ್ಕು ಶಿವಲೀಲೆಗಳನ್ನು ನಡೆಸಿದನು. ಅದನ್ನೆಲ್ಲಾ ಪ್ರತ್ಯಕ್ಷವಾಗಿ ನೋಡಿದ ಅಗಸ್ತ್ಯಮಹರ್ಷಿಯು ತನ್ನ ಅಗಸ್ತ್ಯಸಂಹಿತೆಯೆಂಬ ಸ್ಕಾಂದಪುರಾಣದ ಭಾಗದಲ್ಲಿ

ಸಂಶ್ರುಣ್ವತಾಂ ಪುಣ್ಯಮನುಕ್ಷಣಂ ಭವೇ
ದ್ಧಾಲಾಸ್ಯನಾಥಸ್ಯ ಕೃಪಾಕಟಾಕ್ಷತಃ ।
ಹಾಸ್ಯಂ ಭವೇದನ್ಯಕಥಾಸು ಸಜ್ಜತಾಂ ॥೫೫॥

**ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ಹಾಲಾಸ್ಯನಾಥಲೀಲಾ ಚತುಷ್ಷಷ್ಟಿವರ್ಣನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ**

---

ಶಿವಲೀಲೆಗಳನ್ನು ವಿಸ್ತಾರವಾಗಿ ಬರೆದಿರುವವನು. (ಹಾಲಾಸ್ಯಮಾಹಾತ್ಮ್ಯ ಎಂಬ ಸ್ಕಾಂದಪುರಾಣದ ಭಾಗದಲ್ಲಿ ಪರಶಿವನ ಅರುವತ್ತುನಾಲ್ಕು ಲೀಲೆಗಳೂ ವಿಸ್ತಾರವಾಗಿ ವರ್ಣಿತವಾಗಿವೆ.) ||೫೪||

ಈ ಶಿವಲೀಲೆಗಳನ್ನು ಭಕ್ತಿಯಿಂದ ಕೇಳಿದವರಿಗೆ ಮಹಾದೇವನು ತನ್ನ ಕೃಪಾಕಟಾಕ್ಷವನ್ನು ಬೀರಿ, ಅವರೆಲ್ಲರಿಗೂ ಸುಕೃತವನ್ನು ಅಭಿವೃದ್ಧಿಗೊಳಿಸುವನು. ಇದನ್ನು ಕೇಳಿದವರಂತೂ, ಮತ್ತಿತರ ದೇವತೆಗಳ ಲೀಲಾವಿಲಾಸಗಳ ಸ್ವರೂಪವನ್ನು ಕೇಳಿದರೆ ಹಾಸ್ಯಪೂರ್ವಕವಾಗಿ ನಗುವರು. ಎಂದು ಕುಮಾರಸ್ವಾಮಿಯು, ಜೈಗೀಷವ್ಯಾದಿಮಹಾಮುನಿಗಳಿಗೂ ದೇವಗಣಗಳಿಗೂ, ಶಿವಲೀಲಾಮಹಿಮೆಯನ್ನು ವಿವರಿಸಿದನು. ||೫೫||

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಹಾಲಾಸ್ಯೇಶ್ವರನ
ಅರುವತ್ತುನಾಲ್ಕು ಲೀಲೆಗಳನ್ನು ವಿವರಿಸುವ
ನಲವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಷಟ್ ಚತ್ವಾರಿಂಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

**ಪುರಾ ಕೈಲಾಸಶಿಖರೇ ಸುಖಾಸೀನಂ ಮಹೇಶ್ವರಂ ।**
**ಪ್ರಣಮ್ಯ ವಿಷ್ಣುಃ ಪ್ರೋವಾಚ ಕೃತಾಂಜಲಿಪುಟಸ್ತದಾ ||೧||**

**ಸರ್ವಾರ್ಥಸಿದ್ಧಿಯೋಗಸ್ಯ ಮಂತ್ರಮೇಕಂ ಮಮಾದಿಶ ।**
**ಇತಿ ಸಂಪ್ರಾರ್ಥಿತಸ್ತೇನ ಮಾಧವೇನಾಹ ಚಾಂಬಿಕಾಂ ||೨||**

**ಸಂಚಿಂತ್ಯ ತು ಸ್ತುವನ್ ಸ್ತೋತ್ರಂ ಸರ್ವೇಷಾಂ ಸರ್ವಸಿದ್ಧಿದಂ ।**
**ನಟೇಶನಾಮ ಸಾಹಸ್ರಮುಕ್ತವಾನಸ್ಮಿ ವಿಷ್ಣವೇ ||೩||**

---

## ನಲವತ್ತಾರನೆಯ ಅಧ್ಯಾಯ

ಹಿಂದೆ ಒಂದುಸಾರಿ ಮಹಾದೇವನು ಸುಖಾಸನದಲ್ಲಿ ಸಂತೋಷದಿಂದ ಕುಳಿತಿರುವಾಗ ವಿಷ್ಣುವು ಬಂದು ಮಹಾದೇವನಿಗೆ ವಂದಿಸಿ, ಅಂಜಲಿಬದ್ಧನಾಗಿ ನಿಂತು, "ಸ್ವಾಮಿಯೇ, ಸರ್ವಸಿದ್ಧಿಪ್ರದವಾದ ಮಂತ್ರವಾವುದು ? ಅದನ್ನು ನನಗೆ ಉಪದೇಶಿಸು" ಎಂದು ಪ್ರಾರ್ಥಿಸಿದನು. ಆಗ ಮಹಾದೇವನು ಪಾರ್ವತಿಯನ್ನು ನೋಡುತ್ತಾ ಹೇಳಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೀಗೆ ಬೋಧಿಸತೊಡಗಿದನು. ||೧-೨||

"ಎಲೌ ಪಾರ್ವತಿಯೇ, ಹಾಗೆ ಪ್ರಾರ್ಥನೆಮಾಡಿದ ಮಹಾವಿಷ್ಣುವಿಗೆ ಸರ್ವಸಿದ್ಧಿಪ್ರದವಾದ. ನಟೇಶಸಹಸ್ರನಾಮಗಳನ್ನು ತಿಳಿಸಿಕೊಟ್ಟೆನು. ಅದನ್ನು

ತೇನ ಜಿತ್ವಾ ಸುರಾನ್ ಸರ್ವಾನ್ ರರಕ್ಷ ಸಕಲಂ ಜಗತ್ ।
ಸರ್ವಾರ್ಥಸಿದ್ಧಿಯೋಗಂ ಚ ಪ್ರಾಪ್ತವಾನಂಬುಜೇಕ್ಷಣಃ ॥೪॥

ತದೇವ ಪ್ರಾರ್ಥಯತ್ಯದ್ಯ ಪಠನಾನ್ಮನನಾದಸೌ ।
ನೃತ್ಯಂ ದರ್ಶಯತಿ ಪ್ರಭುರ್ನಾಮಸಾಹಸ್ರಮಂಬಿಕೇ ॥೫॥

ಸರ್ವಪಾಪಹರಂ ಪುಣ್ಯಂ ಸರ್ವರಕ್ಷಾಕರಂ ನೃಣಾಂ ।
ಸರ್ವೈಶ್ವರ್ಯಪ್ರದಂ ಸರ್ವಸಿದ್ಧಿದಂ ಮುಕ್ತಿದಂ ಪರಂ ॥೬॥

ವಕ್ಷ್ಯಾಮಿ ಶೃಣು ತೇ ದೇವಿ ನಾಮಸಾಹಸ್ರಮುತ್ತಮಂ ॥೭॥

॥ ಶ್ರೀಶಿವ ಉವಾಚ ॥

ಶ್ರೀ ಶಿವಃ ಶ್ರೀ ಶಿವಾನಾಥಃ ಶ್ರೀಮಾನ್ ಶ್ರೀಪತಿಪೂಜಿತಃ ।
ಶಿವಂಕರಃ ಶಿವತರಃ ಶಿಷ್ಟದೃಷ್ಟಃ ಶಿವಾಗಮಃ ॥೮॥

ಅಖಂಡಾನಂತ ಚಿದ್ರೂಪಃ ಪರಮಾನಂದತಾಂಡವಃ ।
ಅಪಸ್ಮೃಶನ್ಯಸ್ತಪಾದಃ ಕೃತ್ತಿವಾಸಾಃ ಕೃಪಾಕರಃ ॥೯॥

---

ಜಪಿಸಿ, ಆ ವಿಷ್ಣುವು ಸಕಲ ರಾಕ್ಷಸರನ್ನೂ ಗೆದ್ದು, ಸಮಸ್ತ ಪ್ರಪಂಚವನ್ನೂ ರಕ್ಷಿಸಿದನು. ಮತ್ತು ತನ್ನ ಸಕಲ ಕಾರ್ಯಗಳಲ್ಲಿಯೂ ಸಿದ್ಧಿಯನ್ನೂ ಪಡೆದನು. ||೩-೪||

ಈಗಲೂ ವಿಷ್ಣುವು ಅದೇ ನನ್ನ ಸ್ತೋತ್ರವನ್ನೇ ಪಠಿಸುತ್ತಲೂ ಧ್ಯಾನಿಸುತ್ತಲೂ ನಾಟ್ಯವಾಡುವನು. ಅದು ಸಕಲ ಪಾಪನಿವಾರಕವಾದದ್ದು. ಮತ್ತು ಸರ್ವೈಶ್ವರ್ಯಪ್ರದವಾದುದು. ಅದನ್ನು ಪಠಿಸಿದವರಿಗೆ ಮುಕ್ತಿಯೇ ಪ್ರಾಪ್ತವಾಗುವುದು. ಎಲೌ ದೇವಿಯೇ, ಅಂತಹ ದಿವ್ಯಮಂತ್ರವನ್ನು ಈಗ ನಿನಗೆ ಬೋಧಿಸುವೆನು ಕೇಳು, ಎಂದು ಪರಶಿವನು ನಟೇಶಸಹಸ್ರನಾಮಸ್ತೋತ್ರವನ್ನು ವಿವರಿಸತೊಡಗಿದನು. ||೫-೬-೭||

ಸಂಪದ್ಯುಕ್ತನಾದ ಶಿವನು ಸರ್ವಮಂಗಳೆಗೆ ಪತಿಯಾದವನು, ಸಂಪದ್ಭರಿತನು, ಲಕ್ಷ್ಮೀಪತಿಯಿಂದ ಪೂಜಿತನಾದವನು, ಭಕ್ತರಿಗೆ ಮಂಗಳಪ್ರದನು, ಮಂಗಳಸ್ವರೂಪಿ, ಶಿಷ್ಟರಿಗೆ ಮಾತ್ರ ಕಾಣುವವನು, ಪಾರ್ವತಿಗೆ ಸುಲಭವಾಗಿ ದೊರೆಯು

ಕಲಿನಾದಾಧಿಪಃ ಕಾಲಃ ಕಾಲಾತೀತಃ ಕಲಾಕರಃ
ಕಾಲನಾಥಃ ಕಾಲಹಂತಾ ಕಾಲಶತ್ರುಪ್ರವರ್ತಕಃ ॥೧೦॥

ಕಾಲಜಃ ಕಾಮಜಃ ಕಾಂತಃ ಕಾಮಾರೀ ಕಾಮಪಾಲಕಃ ।
ಕಲ್ಯಾಣಮೂರ್ತಿಃ ಕಲ್ಯಾಣೀ ರಮಣಃ ಕಮಲೇಕ್ಷಣಃ ॥೧೧॥

ಕಾಲಕಂಠಃ ಕಾಲಕಾಲಃ ಕಾಲಕೂಟನಿಷಾದನಃ ।
ಕೃತಜ್ಞಃ ಕ್ರತುಸಾರಜ್ಞಃ ಕ್ರತುಜಃ ಕೃಷ್ಣಪಿಂಗಳಃ ॥೧೨॥

ಕರಿಚರ್ಮಾಂಬರಧರಃ ಕಪಾಲೀ ಕಲಭಾಪಹಃ ।
ಕಪಾಲಮಾಲಾಭರಣಃ ಕಂಕಾಲಃ ಕಾಲನಾಶನಃ ॥೧೩॥

---

ವವನು. ಅಖಂಡವೂ, ಅನಂತವೂ ಆದ ಜ್ಞಾನರಾಶಿಯಂತಿರುವವನು. ಆನಂದ ರಸಾವಿರ್ಭಾವದಿಂದ ನಾಟ್ಯವಾಡುವವನು, ಪಾಪಿಷ್ಠರನ್ನು ಕಾಲಿನಿಂದ ತುಳಿಯುವವನು, ಗಜಚರ್ಮಾಂಬರನು, ದಯಾಶಾಲಿಯು. ॥೮-೯॥

ಕ್ರೂರವಾದ ಮಾತುಗಳಿಗೆ ಅಧಿಪತಿಯೆನಿಸಿದವನು, ಕಾಲಸ್ವರೂಪನು, ಆದರೆ ಕಾಲಕ್ಕೆ ಸಿಕ್ಕದವನು, ಚಂದ್ರಕಲೆಯ ಕಿರಣಗಳಿಂದ ಕೂಡಿದವನು, ಯಮನಿಗೂ ಒಡೆಯನು, ಯಮನನ್ನು ಸೋಲಿಸಿದವನು, ಯಮನಿಗೆ ಶತ್ರುವಾಗಿ ತಿರುಗಿದವನು. ಕಾಲಕ್ಕೆ ಆಶ್ರಯವಿತ್ತವನು, ಕಾಮನನ್ನು ಸೃಷ್ಟಿಸಿದವನು, ಮನೋಹರನು, ಕಾಮಾರಿಯು, ಮನ್ಮಥನನ್ನು ಬದುಕಿಸಿದವನು, ಮಂಗಳಮೂರ್ತಿಯು, ಮಂಗಳಾಪತಿಯು, ಕಮಲದಂತೆ ದೃಷ್ಟಿಯುಳ್ಳವನು. ॥೧೦-೧೧॥

ಕಪ್ಪಾದ ಕಂಠಭಾಗವುಳ್ಳವನು, ಯಮನಿಗೂ ಯಮನು, ಕಾಲಕೂಟವೆಂಬ ವಿಷವನ್ನು ಭಕ್ಷಿಸಿದವನು, ಕೃತಕವಾದ ಉತ್ಪತ್ತಿಯುಳ್ಳವನು, ಯಾಗದ ಸಾರವನ್ನು ತಿಳಿದವನು, ಯಾಗಪುರುಷನು, ಉಮಾಭಾಗದಲ್ಲಿ ಪಿಂಗಳವರ್ಣದಿಂದಲೂ ಮಹೇಶ್ವರಭಾಗದಲ್ಲಿ ಕೃಷ್ಣವರ್ಣದಿಂದಲೂ ತೋರುವವನು, ಆನೆಯ ಚರ್ಮವನ್ನು ಧರಿಸಿದವನು, ಕಪಾಲವನ್ನು ಹಿಡಿದಿರುವನು, ಗಜಾಸುರನನ್ನು ನಾಶಮಾಡಿದವನು, ರುಂಡಗಳ ಮಾಲೆಯನ್ನು ಧರಿಸಿದವನು, ಕಪಾಲರೂಪಿಯು, ಯಮನನ್ನು ನಾಶಗೈದವನು. ॥೧೨-೧೩॥

ಕೈಲಾಸವಾಸೀ ಕಾಮೇಶಃ ಕಾಲೀ ಕಪಟವರ್ಜಿತಃ ।
ಕಮನೀಯ ಕಲಾನಾಥ ಶಿಖರಃ ಕಂಬುಕಂಧರಃ ॥೧೪॥

ಕಂದರ್ಪಕೋಟಿಸದೃಶಃ ಕಪರ್ದೀ ಕಮಲಾಸನಃ ।
ಕರಾಬ್ಜಧೃತದಾವಾಗ್ನಿಃ ಕದಂಬಕುಸುಮಾರುಣಃ ॥೧೫॥

ಕಮನೀಯನಿಜಾನಂದಮುದಂಚಿತಕರಾಂಬುಜಃ ।
ಸ್ಫುರಡ್ಡಮರುನಿಧ್ವಾನ ನಿರ್ಜಿತಾಂಭೋಧಿನಿಃಸ್ವನಃ ॥೧೬॥

ಪ್ರಚಂಡತಾಂಡವಶ್ಚಂಡ ಊರ್ಧ್ವತಾಂಡವಪಂಡಿತಃ ।
ಸವ್ಯತಾಂಡವಸಂಪನ್ನ ಭದ್ರತಾಂಡವಭೈರವಃ ॥೧೭॥

ಬ್ರಹ್ಮತಾಂಡವವಿಸ್ಫೋಟಿ ಮಹಾಪ್ರಲಯತಾಂಡವಃ ।
ನಂದಿನಂದ್ಯಾಪ್ರಿಯೋ ನಂದೀ ನಟೇಶೋ ನಟವೇಷಧೃಕ್ ॥೧೮॥

---

ಕೈಲಾಸದಲ್ಲಿ ನೆಲಸಿರುವವನು, ಕಾಮನಿಗೆ ಪ್ರಾಣದಾತನು, ಕಾಲನಿಯಮಕ್ಕೆ ಒಳಪಟ್ಟವನು, ಮೋಸಗುಣಗಳಿಗೆ ದೂರನಾದವನು, ಮನೋಹರವಾದ ಚಂದ್ರಕಲೆಯನ್ನೇ ಶಿರಸ್ಸಿನಲ್ಲಿ ಉಳ್ಳವನು, ಶಂಖದಂತೆ ಕಂಠವುಳ್ಳವನು, ಕೋಟಿಮನ್ಮಥರಿಗೆ ಸಮವಾದ ಕಾಂತಿಯುಳ್ಳವನು, ಜಟಾಕಲಾಪವುಳ್ಳವನು, ಕಮಲವನ್ನೇ ಆಸನವನ್ನಾಗಿ ಉಳ್ಳವನು, ಕೈಯಲ್ಲಿ ಅಗ್ನಿಯನ್ನು ಹಿಡಿದಿರುವವನು, ಕದಂಬಪುಷ್ಪದಿಂದ ಕೆಂಪಾಗಿ ಕಾಣುವವನು. ॥೧೪-೧೫॥

ಸುಂದರವಾದ ಬ್ರಹ್ಮಾನಂದವನ್ನು ಆನಂದಮುದ್ರೆಯಿಂದ ತಿಳಿಯಪಡಿಸುವವನು. ತನ್ನ ಡಮರುಗಧ್ವನಿಯಿಂದ ಮೇಘಧ್ವನಿಯನ್ನು ತಿರಸ್ಕರಿಸುವವನು, ಪ್ರಚಂಡವಾದ ನಾಟ್ಯವುಳ್ಳವನು, ಹಾಗೆಯೇ ಉಗ್ರವಾದ ಮತ್ತು ಊರ್ಧ್ವಮುಖವಾದ ನಾಟ್ಯವುಳ್ಳವನು. ॥೧೬-೧೭॥

ಬ್ರಹ್ಮನಾಟ್ಯವುಳ್ಳವನು. ಪ್ರಳಯನಾಟ್ಯವುಳ್ಳವನು. ನಂದಿಗೂ ನಂದಾದೇವಿಗೂ ಪ್ರಿಯನಾದವನು. ನಾಟ್ಯವಿದ್ಯೆಗೆ ಅಧಿಪತಿಯು. ನಟವೇಷಧಾರಿಯು. ಕಾಲಿಕಾನಾಟ್ಯಕ್ಕೆ ಆಶ್ರಯವಿತ್ತವನು. ರಾತ್ರಿಯಲ್ಲಿ ಸಂಚರಿಸುವವನು. ಚಂಚಲಮನಸ್ಸಿಲ್ಲದವನು. ಭೃಂಗಿಯಿಂದ ಕೂಡಿ ನಾಟ್ಯವಾಡುವವನು ದಿಕ್ಕುಗಳ ಕೊನೆಯನ್ನು ಕಂಡವನು. ಸಕಲರಿಂದಲೂ ಆರಾಧಿಸಲ್ಪಟ್ಟ ನಾಟ್ಯವುಳ್ಳವನು. ಆಕಾಶವೇ

ಕಾಲಿಕಾ ನಾಟ್ಯರಸಿಕೋ ನಿಶಾನಟನನಿಶ್ಚಲಃ ।
ಭೃಂಗಿನಾಟ್ಯಪ್ರಮಾಣ್ಯಾಶಃ ಭೂಮಾರಾಧಿತ ನಾಟ್ಯಕೃತ್ ॥೧೯॥

ವಿಯದಾದಿ ಜಗತ್ಸ್ರಷ್ಟಾ ವಿವಿಧಾನಂದದಾಯಕಃ ।
ವಿಕಾರರಹಿತೋ ವಿಷ್ಣುರ್ವಿರಾಡೀಶೋ ವಿರಾಣ್ಮಯಃ ॥೨೦॥

ವಿರಾಡಾದಯಪತ್ರಸ್ಥೋ ವಿಧಿರ್ವಿಶ್ವಾಧಿಕೋ ವಿಭುಃ ।
ವೀರಭದ್ರೋ ವಿಶಾಲಾಕ್ಷೋ ವಿಷ್ಣುಬಾಣೋ ವಿಶಾಂಪತಿಃ ॥೨೧॥

ವಿದ್ಯಾನಿಧಿರ್ವಿರೂಪಾಕ್ಷೋ ವಿಶ್ವಯೋನಿರ್ವೃಷಧ್ವಜಃ ।
ವಿರೂಪೋ ವಿಶ್ವದೃಗ್ವ್ಯಾಪೀ ವೀತಶೋಕೋ ವಿರೋಚನಃ ॥೨೨॥

ವ್ಯಾಕೃತೋಽವ್ಯಾಕೃತೋವ್ಯಾಪೀ ವ್ಯಾಪ್ಯಸಾರ್ಥವಿಶಾರದಃ ।
ವ್ಯಾಮೋಹನಾಶಕೋ ವ್ಯಾಸಃ ಸವ್ಯಮುದ್ರಾಲಸತ್ಕರಃ ॥೨೩॥

---

ಮೊದಲಾದ ಸಕಲ ವಸ್ತುಗಳನ್ನೂ ಸೃಷ್ಟಿಸಿದವನು. ಮಾನುಷವೇ ಮೊದಲಾದ ಸಕಲಾನಂದಗಳನ್ನೂ ಭಕ್ತರಿಗೆ ಅನುಗ್ರಹಿಸಿದವನು. ವಿಕಾರವಿಲ್ಲದವನು. ವ್ಯಾಪಕನು. ವಿರಾಡೀಶನು. ಪ್ರಪಂಚಸ್ವರೂಪನು. ||೧೮-೧೯-೨೦||

ವಿರಾಟ್ಸ್ವರೂಪನು. ಸರ್ವನಿಯಾಮಕನು. ಜಗತ್ತನ್ನು ಮೀರಿರುವವನು. ಸರ್ವವ್ಯಾಪಿಯು. ವೀರಭದ್ರಾವತಾರಮಾಡಿದವನು. ವಿಶಾಲವಾದ ಕಣ್ಣುಗಳುಳ್ಳವನು. ವಿಷ್ಣುವನ್ನೇ ಬಾಣವನ್ನಾಗಿ ಮಾಡಿಕೊಂಡಿರುವವನು. ಸರ್ವತೇಜಸ್ಸಿಗೂ ಒಡೆಯನು. ಸಕಲ ವಿದ್ಯೆಗೂ ಅಧಿಪತಿಯು. ವಿಕಾರವಾದ ತೃತೀಯನೇತ್ರವುಳ್ಳವನು. ಪ್ರಪಂಚಕ್ಕೆ ಮೂಲಭೂತನು. ವೃಷಭಧ್ವಜನು. ವಿಗತವಾದ ಆಕಾರವುಳ್ಳವನು. ಪ್ರಪಂಚವನ್ನೇ ದೃಷ್ಟಿಯಿಟ್ಟು ನೋಡುವವನು. ವ್ಯಾಪಕನು. ಶೋಕರಹಿತನು. ಎಲ್ಲವನ್ನೂ ರುಚಿಗೊಳಿಸುವವನು. ||೨೧-೨೨||

ವಿಕಾರದಿಂದ ವಸ್ತುರೂಪವಾಗಿ ತೋರುವವನು. ವಾಸ್ತವವಾಗಿಯೂ ವಿಕಾರರಹಿತನಾದವನು. ಸರ್ವವ್ಯಾಪಿಯು. ತನಗೆ ಅಧೀನವಾಗಿರುವ ಸಕಲ ವಸ್ತುಗಳನ್ನೂ ಏಕದಾ ತಿಳಿಯುವುದರಲ್ಲಿ ಪಂಡಿತನಾದವನು. ಮೋಹನಾಶಕನು. ಪ್ರಪಂಚವನ್ನೇ ವಿಭಾಗಗೊಳಿಸಿದವನು. ಬಲಗೈಯಿಂದ ಅಭಯಮುದ್ರೆಯನ್ನು ತೋರಿಸುವವನು. ವರಪ್ರದನು ವಾಮನಾವತಾರಮಾಡಿದವನು. ಪೂಜ್ಯನು.

ವರದೋ ವಾಮನೋ ವಂದ್ಯೋ ವರಿಷ್ಠೋ ಕಂಜವಾಮಭೃತ್ ।
ವೇದವೇದ್ಯೋ ವೇದರೂಪೋ ವೇದವೇದಾಂತವಿತ್ತಮಃ ॥೨೪॥

ವೇದಾಂತವಿದ್ವೇದಯೋನಿರ್ವೇದಾಂಗೋ ವೇದವಿತ್ಸ್ತುತಃ ।
ವೈಕುಂಠೋ ವಲ್ಲಭೋ ವೈದ್ಯೋ ವೈಶ್ವಾನರವಿಲೋಚನಃ ॥೨೫॥

ಸಮಸ್ತ ಭುವನವ್ಯಾಪೀ ಸಮುದ್ರಃ ಸತತೋದಿತಃ ।
ಸೂಕ್ಷ್ಮಾತ್ಸೂಕ್ಷ್ಮತರಃ ಸೂರ್ಯಃ ಸೂಕ್ಷ್ಮಸ್ಥೂಲತ್ವವರ್ಜಿತಃ ॥೨೬॥

ಸುರರೂಪಃ ಸುರಾಧ್ಯಕ್ಷಃ ಸಭೂಃ ಸುಖಧನಸ್ಸುಧಾ ।
ಭದ್ರೋ ಭದ್ರಪ್ರಿಯೋ ಭದ್ರವಾಹನೋ ಭಕ್ತವತ್ಸಲಃ ॥೨೭॥

ಭಗನೇತ್ರಹರೋ ಭರ್ಗೋ ಭವೇಡ್ಯೋ ಭಕ್ತಿಮಾನ್ನಿಧಿಃ ।
ಅರುಣಃ ಶರಣಂ ಶರ್ವಃ ಶರಣ್ಯಂ ಶರ್ಮದಃ ಶಿವಃ ॥೨೮॥

---

ಅತ್ಯಂತಶ್ರೇಷ್ಠನು. ಎಡಗೈಯ್ಯಲ್ಲಿ ಕಮಲವನ್ನು ಹಿಡಿದಿರುವನು. ವೇದಗಳಿಂದ ತಿಳಿಯಲ್ಪಡುವವನು. ವೇದರೂಪಿಯು. ವೇದ ಮತ್ತು ವೇದಾಂತಗಳನ್ನು ಪೂರ್ಣವಾಗಿ ತಿಳಿದಿರುವವನು. ॥೨೩-೨೪॥

ವೇದ ಮತ್ತು ಆತ್ಮಸ್ವರೂಪ ಇವುಗಳನ್ನು ಪೂರ್ಣವಾಗಿ ತಿಳಿದಿರುವವನು. ವೇದಕ್ಕೆ ಮೂಲಭೂತನಾದವನು. ವೇದಾಂಗಗಳಾದ ಶಾಸ್ತ್ರಸ್ವರೂಪನು. ವೇದಜ್ಞರಿಂದ ಸ್ತುತ್ಯನಾದವನು. ವೈಕುಂಠರೂಪಿಯಾದ ವಿಷ್ಣುವು. ಸಕಲ ಲೋಕಕ್ಕೂ ಒಡೆಯನು. ಭವರೋಗವೈದ್ಯನು. ಅಗ್ನಿನೇತ್ರನು. ಸಕಲ ಭೂಮಂಡಲದಲ್ಲಿ ವ್ಯಾಪಿಸಿರುವವನು. ಸಮುದ್ರರೂಪಿಯು. ಯಾವಾಗಲೂ ಪ್ರಕಾಶಿಸುತ್ತಿರುವವನು. ಸೂಕ್ಷ್ಮವಸ್ತುಗಳೆಲ್ಲಕ್ಕೂ ಸೂಕ್ಷ್ಮರೂಪಿಯಾದವನು. ಕಾಂತಿಯನ್ನು ಬೀರುವವನು. ವಸ್ತುತಃ ಸ್ಥೂಲ, ಸೂಕ್ಷ್ಮ ಎಂಬ ವ್ಯವಹಾರಕ್ಕೆ ಸಿಲುಕದವನು. ॥೨೫-೨೬॥

ಸಕಲ ದೇವತಾರೂಪಿಯು, ದೇವತೆಗಳಿಗೆ ಒಡೆಯನು, ಭೂದೇವೀ ಸಹಿತನಾದವನು, ಆನಂದವನ್ನೇ ಧನವನ್ನಾಗಿ ಉಳ್ಳವನು, ಅಮೃತರೂಪಿಯು, ಮಂಗಳಕರನು, ಮಂಗಳಕಾರ್ಯಗಳಿಗೆ ಆಶ್ರಯನು, ಮಂಗಳಕರವಾದ ವಾಹನವುಳ್ಳವನು, ಭಕ್ತರಲ್ಲಿ ವಿಶ್ವಾಸವುಳ್ಳವನು, ದಕ್ಷಯಜ್ಞದಲ್ಲಿ ಭಗದೇವತೆಯ ಕಣ್ಣನ್ನು ಅಪಹರಿಸಿದವನು, ಲೋಕವನ್ನೆಲ್ಲಾ ರಕ್ಷಿಸುವವನು, ಬ್ರಹ್ಮನಿಂದಲೂ ಪೂಜಿತನಾದವನು,

ಪವಿತ್ರಃ ಪರಮೋದಾರಃ ಪರಮಾಪನ್ನಿವಾರಕಃ ।
ಸನಾತನಸಮಸ್ಸತ್ಯಃ ಸತ್ಯವಾದೀ ಸಮೃದ್ಧಿದಃ ॥೨೯॥

ಧನ್ವೀ ಧನಾಧಿಕೋ ಧನ್ಯೋ ಧರ್ಮನೇತಾ ಧರಾಧಿಪಃ ।
ತರುಣಸ್ತಾರಕಸ್ತಾಮ್ರಸ್ತರಿಷ್ಣುಸ್ತತ್ತ್ವಬೋಧಕಃ ॥೩೦॥

ರಾಜರಾಜೇಶ್ವರೋ ರಾಜಾ ರಾತ್ರಿಂಚರವಿನಾಶಿನಃ ।
ಗಹ್ವರೇಷ್ಟೋ ಗಣಾಧೀಶೋ ಗಣೇಶೋ ಗತಿವರ್ಜಿತಃ ॥೩೧॥

ಪತಂಜಲಿಪ್ರಜಾನಾಥಃ ಪರಾಪರವಿವರ್ಜಿತಃ ।
ಪರಪಾಟಪರಂಜ್ಯೋತಿಃ ಪರಮೇಷ್ಠೀ ಪರಾತ್ಪರಃ ॥೩೨॥

---

ಭಕ್ತಿಯುಳ್ಳವನು, ಸರ್ವರಿಗೂ ನಿಧಿಯಂತಿರುವವನು, ಕೆಂಪು ವರ್ಣದಿಂದ ಶೋಭಿಸುವವನು, ರಕ್ಷಕನು, ಸುಖಕರನು, ರಕ್ಷಣೆಯನ್ನು ಕೊಡುವವನು, ಸುಖವನ್ನು ಒದಗಿಸುವವನು, ಮಂಗಳಸ್ವರೂಪಿಯು. ॥೨೭-೨೮॥

ಪವಿತ್ರನಾದವನು, ಉದಾರಸ್ವಭಾವದವನು, ಸರ್ವವಿಧವಾದ ಆಪತ್ತನ್ನೂ ನಿವಾರಿಸುವವನು, ಆದಿಪುರುಷನು, ಸತ್ಯಸ್ವರೂಪಿಯು, ಸತ್ಯವಾದ ಮಾತನ್ನಾಡುವವನು, ಸಂಪತ್ತನ್ನು ಕೊಡುವವನು, ಧನುರ್ಧಾರಿಯು, ಧನದಿಂದ ಅಧಿಕನಾದವನು, ಧನ್ಯನು, ಧರ್ಮವನ್ನು ರಕ್ಷಿಸುವವನು, ಭೂಪತಿಯು, ತರುಣನು, ದುಃಖದಿಂದ ಉದ್ಧರಿಸುವವನು, ರಕ್ತವರ್ಣಾತ್ಮಕನು, ಭಕ್ತರನ್ನು ದಾಟಿಸಲು ಇಚ್ಛೆಯುಳ್ಳವನು, ತತ್ತ್ವವನ್ನು ತಿಳಿದಿರುವವನು. ॥೨೯-೩೦॥

ಕುಬೇರನಿಗೂ ಐಶ್ವರ್ಯವನ್ನು ಕೊಡುವವನು, ಜನರನ್ನು ಆನಂದಗೊಳಿಸುವವನು, ರಾಕ್ಷಸ ವಿನಾಶಕನು, ಗುಹೆಯಲ್ಲಿ ವಾಸಿಸುವವನು, ಸಕಲ ಗಣಗಳಿಗೂ ಒಡೆಯನು ಮತ್ತು ನಿಯಾಮಕನು, ಗಮನಶೂನ್ಯನು, ಪತಂಜಲಿಯೇ ಮೊದಲಾದ ಪ್ರಜೆಗಳಿಗೆ ಅಧಿಪತಿಯು. ದೊಡ್ಡದು, ಚಿಕ್ಕದು ಎಂಬ ಭಾವನೆಯಿಲ್ಲದವನು, ಶತ್ರುಗಣವನ್ನೇ ಧ್ವಂಸಮಾಡುವಂತಹ ಜ್ಯೋತಿಸ್ಸ್ವರೂಪನು, ಪರಮ ಪೂಜ್ಯವಾದ ಸ್ಥಾನದಲ್ಲಿ ನಿಲ್ಲತಕ್ಕವನು, ದೊಡ್ಡ ವಸ್ತುಗಳೆಲ್ಲಕ್ಕೂ ದೊಡ್ಡವನೆನಿಸಿದವನು ॥೩೧-೩೨॥

ನಾರಸಿಂಹೋ ನಗಾಧ್ಯಕ್ಷೋ ನಾದಾಂತೋ ನಾದವರ್ಜಿತಃ ।
ನಮನಾನಂದದೋ ನವ್ಯೋ ನಟರಾಜನಿಕೇತನಃ ॥೩೩॥

ದೇವ್ಯೋ ಭಿಷಕ್ಪತಿರ್ಬ್ರಹ್ಮಾ ಬ್ರಹ್ಮಣ್ಯೋ ಬ್ರಾಹ್ಮಣಾತ್ಮಕಃ ।
ಕೃತಾಕೃತಃ ಕುಶಃ ಕಲ್ಪಃ ಶಾಂತಿದಃ ಶರಭಾಕೃತಿಃ ॥೩೪॥

ಬ್ರಹ್ಮವಿದ್ಯಾಪ್ರದೋ ಬ್ರಹ್ಮಾ ಬೃಹದ್ಗರ್ಭೋ ಬೃಹಸ್ಪತಿಃ ।
ಸದ್ಯೋಜಾತಃ ಸದಾರಾಧ್ಯಃ ಸಾಮಗಸ್ಸಾಮಸಂಸ್ತುತಃ ॥೩೫॥

ಅಘೋರೋಽದ್ಭುತಚಾರಿತ್ರ ಅನಂತಪುರರಕ್ಷಕಃ ।
ಈಶಾನಸ್ಸರ್ವಭೂತಾನಾಮೀಶ್ವರಾಣಾಮಧೀಶ್ವರಃ ॥೩೬॥

ಸರ್ವಾರ್ಥಸ್ಸರ್ವದಾ ತುಷ್ಟಃ ಸರ್ವಶಾಸ್ತ್ರಾರ್ಥಸಂಮತಃ ।
ಸರ್ವದಸ್ಸರ್ವಗಸ್ಸ್ಥಾಣುಃ ಸರ್ವೇಶಃ ಸಮರಪ್ರಿಯಃ ॥೩೭॥

---

ನರಸಿಂಹಾವತಾರ ಮಾಡಿದವನು, ಕೈಲಾಸಾಧೀಶ್ವರನು, ನಾಶರಹಿತನು, ಧ್ವನಿ ವಿವರ್ಜಿತನು, ನಮಸ್ಕಾರಮಾಡಿದ ಜನರಿಗೆ ಆನಂದವನ್ನು ಕೊಡುವವನು, ನೂತನವಾಗಿ ಕಾಣುವವನು, ನಟರಾಜರಿಗೆ ಆಶ್ರಯವಿತ್ತವನು, ಜಯಶಾಲಿಯು, ವೈದ್ಯನಾಥನು, ಬ್ರಹ್ಮರೂಪಿಯು, ಬ್ರಹ್ಮಜ್ಞಾನವನ್ನರಿತವನು, ಬ್ರಾಹ್ಮಣಕರ್ಮದಲ್ಲಿರುವವನು, ಕೃತ ಮತ್ತು ಅಕೃತಸ್ವರೂಪನು, (ಸಗುಣ ನಿರ್ಗುಣ ಏತದುಭಯಾತ್ಮಕನು) ಗರ್ಭಸ್ವರೂಪಿಯು, ಕಲ್ಪಕೋಟಿವಿಸ್ತರನು, ಶಾಂತಿಯನ್ನು ಒದಗಿಸುವವನು, ಶರಭಾಕಾರವನ್ನು ಹೊಂದಿದವನು. ॥೩೩-೩೪॥

ಬ್ರಹ್ಮವಿದ್ಯೆಯನ್ನು ಕೊಡುವವನು, ಬ್ರಹ್ಮಸ್ವರೂಪಿಯು, ಬೃಹತ್ತಾದ ಉದರವುಳ್ಳವನು, ಬೃಹಸ್ಪತಿಯೆನಿಸಿಕೊಂಡಿರುವವನು, ಸದ್ಯೋಜಾತನು, (ಇಚ್ಛಾಮಾತ್ರದಿಂದ ಜನಿಸುವವನು) ಯಾವಾಗಲೂ ಪೂಜ್ಯನೆನಿಸಿದವನು, ಸಾಮವೇದದಿಂದ ಸ್ತುತ್ಯನಾದವನು, ಶಾಂತಮೂರ್ತಿಯು, ಆಶ್ಚರ್ಯಕರವಾದ ನಡತೆಯುಳ್ಳವನು, ಅತಿಶಯವಾದ ದೇಹವುಳ್ಳವನು, ಮುಂದಾಳಾದವನು, ಈಶಾನದಿಗಧಿಪತಿಯು, ಸರ್ವಭೂತಗಳಿಗೂ ಒಡೆಯನೆನಿಸಿದವನು, ಸರ್ವರಿಗೂ ಐಶ್ವರ್ಯಪ್ರದನು. ॥೩೫-೩೬॥

ಸರ್ವದ್ರವ್ಯಸ್ವರೂಪನು, ಯಾವಾಗಲೂ ಸಂತೋಷದಲ್ಲಿರುವವನು, ಎಲ್ಲ ಶಾಸ್ತ್ರಗಳಿಂದಲೂ ಸ್ತುತ್ಯನಾದವನು, ಸರ್ವವನ್ನೂ ದಾನಮಾಡುವವನು, ಸರ್ವ

ಜನಾರ್ದನೋ ಜಗತ್ಸ್ವಾಮೀ ಜನ್ಮಕರ್ಮನಿವಾರಕಃ ।
ಮೋಹಕೋ ಮೋಹವಿಚ್ಛೇತ್ತಾ ಮೋಹನೀಯೋ ಮಹಾಪ್ರಭುಃ ॥೩೮॥

ವಿಯತ್ಕೇಶೋ ವಿವಿಶದೋ ವಿಶ್ವಕ್ಸೇನೋ ವಿಶೋಧಕಃ ।
ಸಹಸ್ರಾಕ್ಷಃ ಸಹಸ್ರಾಪ್ತಃ ಸಹಸ್ರವದನಾಂಬುಜಃ ॥೩೯॥

ಸಹಸ್ರಾಕ್ಷಾರ್ಚಿತಃ ಸಮ್ರಾಟ್ ಸಂಘಾತಾಸುರಘಾತಕಃ ।
ಸಹಸ್ರಭೂಷಣವಿಧಿರ್ಬಲಪ್ರಮಥನೋ ಬಲೀ ॥೪೦॥

ಮನೋ ಭರ್ತಾ ಮನೋಗಂಧೋ ಮನನೈಕಪರಾಯಣಃ ।
ಉದಾಸೀನೋ ಉಪದ್ರಷ್ಟಾ ಮೌನಗಮ್ಯೋ ಮುನೀಶ್ವರಃ ॥೪೧॥

ಅಮಾನೀ ಮದನೋ ಮನ್ಮುರ್ಮನನೀಮಾನದೋ ಮನುಃ ।
ಯಶಸ್ವೀ ಯಜಮಾನಾಖ್ಯೋ ಯಶೋ ವಂದ್ಯೋ ಮುನಿಪ್ರಿಯಃ ॥೪೨॥

---

ವ್ಯಾಪಿಯು, ಸ್ಥಾಣುರೂಪದಲ್ಲಿರುವವನು, ಸರ್ವಕ್ಕೂ ಒಡೆಯನು, ಯುದ್ಧಪ್ರಿಯನು, ದುಷ್ಟಜನರನ್ನು ಹಿಂಸಿಸುವವನು, ಜಗತ್ತಿಗೆ ಯಜಮಾನನು, ಜನ್ಮಾಂತರದ ಪಾಪಗಳನ್ನು ನಿವಾರಿಸುವವನು, ಮೋಹರೂಪದಿಂದಿರುವವನು, ಆದರೆ ಮೋಹವನ್ನು ನಾಶಗೊಳಿಸುವವನು, ಮೋಹಿಸುವಂತಹ ಸೌಂದರ್ಯವುಳ್ಳವನು, ಮಹಾಪ್ರಭುವು. ॥೩೭-೩೮॥

ವ್ಯೋಮಕೇಶನು, ಸರ್ವರಲ್ಲಿಯೂ ಪ್ರವೇಶಿಸುವವನು, ಸರ್ವತ್ರವ್ಯಾಪಿಸುವ ಸೈನ್ಯವುಳ್ಳವನು, ಶೋಧಿಸುವವನು, ಸಾವಿರ ಕಣ್ಣುಗಳುಳ್ಳವನು, ಇಂದ್ರನಿಂದಲೂ ಪೂಜಿತನಾದವನು, ಸಹಸ್ರಾರು ಭಕ್ತರಿಗೆ ಆಪ್ತನಾದವನು, ಸಾವಿರ ಮುಖಕಮಲಗಳುಳ್ಳವನು, ಚಕ್ರವರ್ತಿಯು, ಸಕಲ ರಾಕ್ಷಸರನ್ನೂ ಧ್ವಂಸಮಾಡುವವನು, ಸಾವಿರ ಫಣಗಳಿಂದ ಅಲಂಕೃತನಾದವನು, ಬಲಾಸುರನನ್ನು ಧ್ವಂಸಮಾಡುವವನು, ಬಲಿಷ್ಠನು. ॥೩೯-೪೦॥

ಮನಸ್ಸಿಗೆ ನಿಯಾಮಕನು, ಮನಸ್ಸಿನಿಂದ ತಿಳಿಯಲ್ಪಡುವವನು, ಮನನದಿಂದ ತಿಳಿಯಬಹುದಾದವನು, ಉದಾಸೀನರೂಪಿಯು, ಸರ್ವವನ್ನೂ ಪ್ರತ್ಯಕ್ಷದಲ್ಲಿ ನೋಡುವವನು, ಮೌನದಿಂದ ಊಹಿಸಲ್ಪಡುವವನು, ಮುನೀಶ್ವರನು, ಮಾನರಹಿತನು, ಮನ್ಮಥರೂಪಿಯು, ಮಜ್ಞಸ್ವರೂಪನು, ಮಮಕಾರದಿಂದ ದೂರನಾದ

ಮೀಢುಷ್ಟಮೋ ಮೃಗಧರೋ ಮೃಕಂಡುತನಯಪ್ರಿಯಃ ।
ಪುರುಹೂತಪುರದ್ವೇಷೀ ಪುರತ್ರಯವಿದಾರವಿತ್ ॥೪೩॥

ಪುಣ್ಯಃ ಪುಮಾನ್ ಪುರಿಶಯಃ ಪುಷ್ಪಪೂರ್ಣಃ ಪುರಾತನಃ ।
ಶಯಾನಶ್ಶಂತಮಶ್ಶಾಂತಃ ಶಾಸಕಶ್ಶಮನಪ್ರಿಯಃ ॥೪೪॥

ಭಾವದ್ವೇಷ್ಯಘವಿಚ್ಛೇತ್ತಾ ಭಾವಾತೀತೋ ಭಯಂಕರಃ ।
ಮನುಜೋ ಮಾನವಾಧೀಶೋ ಮಿಥ್ಯಾಪ್ರತ್ಯಯನಾಶನಃ ॥೪೫॥

ನಿರಂಜನೋ ನಿರ್ವಿಭದ್ರೋ ನಿತ್ಯಬುದ್ಧೋ ನಿರಾಶ್ರಯಃ ।
ನಿರ್ವಿಕಲ್ಪೋ ನಿರಾಲಂಬೋ ನಿರ್ವಿಕಾರೋ ನಿರಾಮಯಃ ॥೪೬॥

---

ವನು, ಮನುರೂಪಿಯು, ಕೀರ್ತಿಶಾಲಿಯು, ಯಾಗದಲ್ಲಿ ಯಜಮಾನರೂಪವನ್ನು ತಾಳುವವನು, ಯಶೋರೂಪಿಯು, ಪೂಜ್ಯನು, ಮುನಿಗಳಿಗೆ ಅತ್ಯಂತ ಪ್ರಿಯನಾದವನು. ||೪೧-೪೨||

ಕಿರಣರೂಪದಿಂದ ಪ್ರವೇಶಿಸುವವನು, ಮೃಗ (ಜಿಂಕೆ) ವನ್ನು ಧರಿಸಿರುವವನು, ಮೃಕಂಡುಪುತ್ರನಾದ ಮಾರ್ಕಂಡೇಯನಿಗೆ ಪ್ರಿಯವನ್ನುಂಟುಮಾಡಿದವನು ಇಂದ್ರನ ನಗರವನ್ನೂ ನಾಶಮಾಡುವ ಸಾಮರ್ಥ್ಯವುಳ್ಳವನು, ತ್ರಿಪುರಗಳನ್ನು ನಾಶಗೈದವನು, ಪುಣ್ಯರೂಪಿಯು, ಪುರುಷಾಕಾರದಿಂದಿರುವವನು, ದೇಹಾಂತರ್ವರ್ತಿಯು, ಪುಷ್ಪಗಳಿಂದ ಪೂರ್ಣನಾಗುವವನು, ಅನಾದಿಪುರುಷನು, ಸರ್ವದಾ ಆನಂದಮಯತೆಯಲ್ಲಿರುವವನು, ಶಾಂತರೂಪಿಯು, ಶಿಕ್ಷಕನು, ಯಮನಿಗೆ ಪ್ರಿಯನೆನಿಸಿದವನು. ||೪೩-೪೪||

ನಿರ್ಗುಣೋಪಾಸನೆಯಲ್ಲಿ ಒಂದು ಆಕಾರವನ್ನು ದ್ವೇಷಿಸುವವನು, ಪಾಪವಿನಾಶಕನು, ಭಾವನೆಗೆ ಮೀರಿದವನು, ಭಯಂಕರನು, ಮನುಷ್ಯರೂಪದಲ್ಲಿರುವವನು, ಮಾನವರಿಗೆ ಒಡೆಯನು, ಅಜ್ಞಾನನಾಶಕನು, ಪಾಪರಹಿತನು, ವೀರಭದ್ರಾವತಾರ ಮಾಡಿದವನು, ನಿತ್ಯಜ್ಞಾನಿಯು, ಆಶ್ರಯರಹಿತನು, ವಿಕಲ್ಪವಿಲ್ಲದವನು, ಅಲಂಬನವನ್ನು ಅಪೇಕ್ಷಿಸದವನು, ವಿಕಾರರಹಿತನು, ರೋಗಾದಿವರ್ಜಿತನು. ||೪೫-೪೬||

ನಿರಂಕುಶೋ ನಿರಾಧಾರೋ ನಿರಪಾಯೋ ನಿರತ್ಯಯಃ ।
ಶುಭಾಶಯೋ ಗುಣಾತೀತೋ ಗುಣಮೂರ್ತಿಃ ಗುರುಪ್ರಿಯಃ ॥೪೭॥

ಪ್ರಮಾಣಂ ಪ್ರಣವಃ ಪ್ರಾಣಃ ಪ್ರಾಣದಃ ಪ್ರಾಣನಾಯಕಃ ।
ಕಪಾಲಮಾಲಾಲಂಕಾರೋ ಬ್ರಧ್ನಸ್ಸತ್ತಪಸಾಂ ನಿಧಿಃ ॥೪೮॥

ಅಕ್ಷರಸ್ತ್ರ್ಯಕ್ಷರ ಸ್ತ್ರ್ಯಕ್ಷಃ ಪಕ್ಷಪಾತವಿವರ್ಜಿತಃ ।
ಮಣಿಭದ್ರೋರ್ಚಿರೋಮಾಡ್ಯೋ ಮಾಧವೀ ಮಂತ್ರಕೋ ಮಹಾನ್॥೪೯॥

ಕುಠಾರಹೃತ್ಕುಲಾದ್ರೀಶಃ ಕುಚಿತ್ತೈಕಪದಾಂಬುಜಃ ।
ಮಂದ್ರರಾಜ್ಯಸ್ಯ ಫಲದೋ ಯಶೋಮೂರ್ತಿರ್ಯಶಸ್ಕರಃ ॥೫೦॥

ವಿಪ್ರೇಶಸಿದ್ಧಿಜನಕಃ ಸಿದ್ಧಾಢಃ ಸಿದ್ಧವೈಭವಃ ।
ರವಿಮಂಡಲಮಧ್ಯಸ್ಥೋ ದ್ವಿಜೋ ಗುಣವಿನಾಶನಃ ॥೫೧॥

---

ಅಧೀನಕ್ಕೆ ಸಿಕ್ಕದವನು, ಆಧಾರವಿಲ್ಲದಿರುವವನು, ಕಷ್ಟವನ್ನೇ ಕಾಣದವನು, ನಾಶರಹಿತನು, ಮಂಗಳಕರವಾದ ಅಭಿಪ್ರಾಯವುಳ್ಳವನು, ಸಕಲ ಗುಣಾತೀತನು, ಗುಣಸ್ವರೂಪನು, ಗುರುಗಳಿಗೆ ಪ್ರಿಯನಾದವನು, ಪ್ರಮಾಣಸ್ವರೂಪನು, ಪ್ರಣವಾತ್ಮಕನು, ಪ್ರಾಣರೂಪಿಯು, ಪ್ರಾಣವನ್ನು ಕೊಡುವವನು, ಪ್ರಾಣಕ್ಕೆ ಒಡೆಯನು, ಕಪಾಲಮಾಲಾಲಂಕಾರನು, ಸೂರ್ಯರೂಪದಿಂದಿರುವವನು, ತಪೋನಿಧಿಯು. ||೪೭-೪೮||

ನಾಶರಹಿತನು, ಮೂರು ಅಕ್ಷರಗಳುಳ್ಳ ಓಂಕಾರರೂಪಿಯು, ಮೂರು ಕಣ್ಣುಗಳುಳ್ಳವನು, ಭಕ್ತರಲ್ಲಿ ಸಮದೃಷ್ಟಿಯುಳ್ಳವನು, ಮಂಗಳವಾದ ರತ್ನಪ್ರಾಯನು, ಸದಾ ಪ್ರಕಾಶಿಸುವ ರೋಮವುಳ್ಳವನು, ಮಾಧವೀಮಂತ್ರಸ್ವರೂಪನು ? (ಪಂಚಾಕ್ಷರ, ಷಡಕ್ಷರಾತ್ಮಕ ಮಂತ್ರಸ್ವರೂಪನು) ಮಹತ್ಪರಿಮಾಣವುಳ್ಳವನು, ಕುಠಾರವೆಂಬ ಆಯುಧವನ್ನು ಧರಿಸಿದವನು, ಕುಲಪರ್ವತಗಳಿಗೆ ಯಜಮಾನನು, ಚಂಚಲವಾದ ಚಿತ್ತವಿಲ್ಲದಿರುವವರಿಗೆ ಆಶ್ರಯವಿತ್ತ ಪಾದಕಮಲವುಳ್ಳವನು, ರಾಜ್ಯವನ್ನು ಕಳೆದುಕೊಂಡಿರುವವನಿಗೆ ಫಲವನ್ನು ಕೊಡುವವನು, ಕೀರ್ತಿಯ ಮೂರ್ತಿಯಂತಿರುವವನು, ಕೀರ್ತಿಯನ್ನು ಹೆಚ್ಚಿಸುವವನು. ||೪೯-೫೦||

ವಿಶೇಷವಾಗಿ ತಿಳಿದವರಿಗೆ ಒಡೆಯನು. ಸರ್ವಸಿದ್ಧಿಯನ್ನುಂಟುಮಾಡುವವನು. ಸಿದ್ಧವಾದ ಐಶ್ವರ್ಯವುಳ್ಳವನು. ಸೂರ್ಯಮಂಡಲ ಮಧ್ಯದಲ್ಲಿ ನೆಲಸು

ವಹ್ನಿಮಂಡಲಮಧ್ಯಸ್ಥೋ ವರ್ಷೀಯಾನ್ವರುಣೇಶ್ವರಃ ।
ಸೋಮಮಂಡಲಮಧ್ಯಸ್ಥಃ ಸೋಮಧನ್ಯಶುಚೋದರಃ ॥೫೨॥

ದಕ್ಷಿಣಾಗ್ನಿರ್ಗಾರ್ಹಪತ್ಯೋ ದಮನೋ ದಾನವಾಂತಕಃ ।
ಚಾರುವಕ್ತ್ರಶ್ಚೈತ್ರಧರಃ ಪಂಚವಕ್ತ್ರಃ ಪರಂತಪಃ ॥೫೩॥

ವಿಶ್ವಸ್ಯಾವತತೋವರ್ಯಃ ವಂದಾರುಜನವತ್ಸಲಃ ।
ಗಾಯತ್ರೀವಲ್ಲಭೋ ಭಾಗ್ಯೋ ಗಾಯಕಾನುಗ್ರಹೋನ್ಮುಖಃ ॥೫೪॥

ಅನುರೂಪಃ ಸುಪಾವನಾತ್ಮಾ ಗಾಯತ್ರೀ ವ್ಯಾಹೃತಿಃ ಸುಪಾತ್ ।
ದುರಾರಾಧ್ಯೋ ಧುರಾಧರ್ಷೋ ದುರಾರೋಹೋ ದುರಾಸದಃ ॥೫೫॥

ದುರ್ನಿರ್ಜ್ಞೇಯೋ ದುರಾಚಾರನಾಶನೋ ದುರ್ಜನಾಂತಕಃ ।
ಸರ್ವೇಶ್ವರಸ್ಸರ್ವಸಾಕ್ಷೀ ಸರ್ವಾತ್ಮಾ ಸಾಕ್ಷಿವರ್ಜಿತಃ ॥೫೬॥

---

ವವನು. ಎರಡುಸಾರಿ ಜನ್ಮವನ್ನು ಪಡೆಯುವವನು. ಗುಣನಾಶಕನು. ಅಗ್ನಿಮಂಡಲದಲ್ಲಿ ವಾಸಿಸುವವನು. ಅಧಿಕವಯಸ್ಸಿನವನು. ವರುಣನಿಗೂ ಒಡೆಯನು. ಚಂದ್ರಮಂಡಲಮಧ್ಯವರ್ತಿಯು. ಸೋಮರಸದಿಂದ ಶುಚಿಯಾದ ಉದರವುಳ್ಳವನು. ॥೫೧-೫೨॥

ಅಗ್ನಿತ್ರಯಗಳಾದ, ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಏತತ್ಸ್ವರೂಪನು. ಸರ್ವಶಕ್ತಿಯನ್ನೂ ಅಡಗಿಸಿಕೊಳ್ಳುವವನು. ರಾಕ್ಷಸರಿಗೆ ಯಮನಂತಿರುವವನು. ಸುಂದರವಾದ ಮುಖವುಳ್ಳವನು. ಚೈತ್ರರಥನೆಂಬ ಉದ್ಯಾನದಲ್ಲಿಯೂ ನೆಲಸಿರುವವನು. ಐದು ಮುಖಗಳುಳ್ಳವನು. ಅತಿಶಯವಾದ ತಪೋರೂಪಿಯು. ವಿಶ್ವರಕ್ಷಕನು. ಪಾಪದಿಂದ ದಾಟಿಸುವವನು. ಭಕ್ತಜನರಲ್ಲಿ ಪ್ರೀತಿಯಿಡುವವನು. ಗಾಯತ್ರೀದೇವಿಗೆ ಪೂಜ್ಯನು. ಭಾಗ್ಯಶಾಲಿ. ತನ್ನ ನಾಮಗಳನ್ನು ಗಾನಮಾಡುವವರನ್ನು ರಕ್ಷಿಸುವುದರಲ್ಲಿ ಉದ್ಯುಕ್ತನಾಗುವವನು. ॥೫೩-೫೪॥

ಯೋಗ್ಯವಾದ ರೂಪವನ್ನು ಹೊಂದುವವನು. ವಿರುದ್ಧಸ್ವಭಾವದವನು. ಗಾಯತ್ರಿಯ ವ್ಯಾಹೃತಿರೂಪದಿಂದಿರುವವನು. ಪವಿತ್ರವಾದ ಪಾದಗಳುಳ್ಳವನು. ಕಷ್ಟದಿಂದ ಆರಾಧಿಸಲು ಯೋಗ್ಯನಾದವನು. ಸುಲಭವಾಗಿ ವಶನಾಗದಿರುವವನು. ಕಷ್ಟದಿಂದ ಹೊಂದಲು ಸಾಧ್ಯನಾದವನು. ಕಷ್ಟದಿಂದ ಸೇವಿಸಲು ದೊರೆಯುವವನು.

ಸರ್ವದ್ವಂದ್ವಕ್ಷಯಕರಃ ಸರ್ವಪಾಪನಿವಾರಣಃ ।
ಸರ್ವಪ್ರಿಯತಮಃ ಸರ್ವದಾರಿದ್ರ್ಯಕ್ಲೇಶನಾಶನಃ ॥೫೭॥

ದ್ರಷ್ಟಾ ದರ್ಶಯಿತಾ ದಾಂತೋ ದಕ್ಷಿಣಾಮೂರ್ತಿರೂಪಧೃಕ್ ।
ದಕ್ಷಾಧ್ವರಹರೋ ದಕ್ಷೋ ದಹರಸ್ಥೋ ದಯಾನಿಧಿಃ ॥೫೮॥

ಸಮದೃಷ್ಟಿಸ್ಸತ್ಯಕಾಮಃ ಸನಕಾದಿ ಮುನಿಪ್ರಿಯಃ ।
ಕೋಶಪಂಚಕನಿರ್ಮುಕ್ತಃ ಪಂಚಕೃತ್ಯಪರಾಯಣಃ ॥೫೯॥

ಪಂಚಯಜ್ಞಪ್ರಿಯಃ ಪಂಚಪ್ರಾಣಧೀಃ ಪತಿರವ್ಯಯಃ ।
ಪಂಚಭೂತಃ ಪ್ರಭುಃ ಪಂಚಪೂತಃ ಸಂತುಷ್ಟಮಾನಸಃ ॥೬೦॥

---

ತನ್ನ ವಿಷಯಗಳನ್ನು ಸುಲಭವಾಗಿ ತಿಳಿಸದಿರುವವನು. ದುರಾಚಾರಗಳನ್ನು ನಾಶಪಡಿಸುವವನು. ದುಷ್ಟರನ್ನು ನಾಶಮಾಡುವವನು. ಸರ್ವರಿಗೂ ಒಡೆಯನಾದವನು. ಎಲ್ಲವನ್ನೂ ತಾನು ಪ್ರತ್ಯಕ್ಷವಾಗಿ ಕಾಣುವವನು. ಸರ್ವವಸ್ತುರೂಪದಲ್ಲಿರುವವನು. ತನ್ನ ಸ್ವರೂಪವನ್ನು ಸರಿಯಾಗಿ ತಿಳಿದ ಮತ್ತೊಂದು ಪ್ರಾಣಿಯಿಲ್ಲದವನು. ||೫೫-೫೬||

ಸುಖದುಃಖ, ಶೀತೋಷ್ಣಾದಿ ದ್ವಂದ್ವಗುಣಗಳನ್ನೂ ನಾಶಪಡಿಸುವವನು. ಸಕಲಪಾಪನಿವಾರಕನು. ಎಲ್ಲರಿಗೂ ಅತ್ಯಂತ ಪ್ರಿಯನಾದವನು. ಸಕಲವಾದ ದಾರಿದ್ರ್ಯದುಃಖವನ್ನು ನಾಶಗೊಳಿಸುವವನು. ಸರ್ವವನ್ನೂ ನೋಡುವವನು. ಸಕಲ ವಸ್ತುಗಳನ್ನೂ ಪ್ರದರ್ಶಿಸುವವನು. ದಾನಮಾಡುವ ಸ್ವಭಾವದವನು. ದಕ್ಷಿಣಾಮೂರ್ತಿರೂಪಿಯು. ದಕ್ಷಯಜ್ಞವನ್ನು ಧ್ವಂಸಮಾಡಿದವನು. ಸರ್ವಕಾರ್ಯಸಮರ್ಥನು. ದಹರಾಕಾಶದಲ್ಲಿ ನಿಲ್ಲತಕ್ಕವನು. ದಯಾನಿಧಿಯು. ||೫೭-೫೮||

ಭಕ್ತರಲ್ಲಿ ಸಮದೃಷ್ಟಿಯಿಡುವವನು. ಸತ್ಯವನ್ನು ಬಯಸುವವನು. ಸನಕಾದಿ ಮುನಿಗಳಿಂದ ವಂದಿತನಾದವನು. ಅನ್ನಮಯಾದಿಪಂಚಕೋಶಗಳಿಂದ ನಿರ್ಮುಕ್ತನಾದವನು. ಅನ್ನಮಯಾದಿ ಪಂಚಕೋಶಗಳಿಂದ ಆಶ್ರಯಿಸಲ್ಪಟ್ಟವನು. ಪಂಚೀಕರಣಕಾರ್ಯದಲ್ಲಿ ಆಸಕ್ತನಾದವನು. ಬ್ರಹ್ಮಯಜ್ಞವೇ ಮೊದಲಾದ ಪಂಚಯಜ್ಞಗಳಲ್ಲಿ ಪ್ರಿಯನಾದವನು. ಪ್ರಾಣಾಪಾನಾದಿ ಪಂಚಪ್ರಾಣರೂಪದಿಂದಿರುವವನು. ನಾಶರಹಿತನಾದವನು. ಸರ್ವಕ್ಕೂ ಒಡೆಯನು. ಪೃಥಿವ್ಯಾದಿಪಂಚಭೂತಸ್ವರೂಪ

ವಿಘ್ನೇಶ್ವರೋ ವಿಘ್ನಹರೋ ಶಕ್ತಿಪಾಣಿಃ ಶರೋದ್ಭವಃ ।
ಗೂಢೋ ಗುಹ್ಯತಮೋ ಗೋಪ್ತಾ ಗೋರಕ್ಷಾಗಣಸೇವಿತಃ ॥೬೧॥

ಸತ್ಯದಸ್ಸತ್ಯಸಂಕಲ್ಪಃ ಸುಖವೇತ್ತಾ ಸುಖಾವಹಃ ।
ಯೋಗಗಮ್ಯೋ ಯೋಗಇಷ್ಟೋ ಯೋಗಮಂತ್ರೋ ಯುಧಿಷ್ಠಿರಃ ॥೬೨॥

ತತ್ತ್ವಾವಬೋಧಸ್ತತ್ತ್ವೇಶೋ ವಜ್ರಭೂರ್ವಾರುಣಾತ್ಮಕಃ ।
ಚೈತನ್ಯಭೃಚ್ಚಿದ್ವಿದೀಶಶ್ಚಿನ್ಮಾತ್ರಶ್ಚಿತ್ಸಭಾಪತಿಃ ॥೬೩॥

ಭೂಪತಿರ್ಭವ್ಯಭೂರ್ಭರ್ಗಃ ಹವ್ಯಕವ್ಯಾಹುತಿಪ್ರಿಯಃ ।
ವಾಚ್ಯವಾಚಕನಿರ್ಮುಕ್ತೋ ವಾಗೀಶೋ ವಾಗಗೋಚರಃ ॥೬೪॥

---

ನಾಗಿರುವನು. ಪಂಚಯಜ್ಞಾದಿಗಳಿಂದ ಪರಿಶುದ್ಧನಾಗುವವನು. ಸದಾ ಸಂತೋಷ ಯುಕ್ತವಾದ ಮನಸ್ಸುಳ್ಳವನು. ॥೫೯-೬೦॥

ಸಕಲ ವಿಘ್ನಗಳಿಗೂ ಒಡೆಯನಾದವನು. ಸಕಲ ವಿಘ್ನಗಳನ್ನೂ ನಾಶ ಮಾಡುವವನು. ಶಕ್ತಿಯೆಂಬ ಆಯುಧವನ್ನು ಧರಿಸಿರುವವನು. ಬಾಣಗಳನ್ನು ಧರಿಸಿರುವವನು. ಗೂಢನಾದವನು. ಅತ್ಯಂತ ಗೋಪ್ಯಸ್ಥಿತಿಯಲ್ಲಿರುವವನು. ಸಕಲರನ್ನೂ ರಕ್ಷಿಸುವವನು. ಗೋವುಗಳನ್ನು ರಕ್ಷಿಸುವ ಗಣಗಳಿಂದ ಸೇವಿತನಾದವನು. ಸತ್ಯಮಾರ್ಗವನ್ನು ಅನುಗ್ರಹಿಸುವವನು. ಸತ್ಯದಿಂದ ಕೂಡಿದ ಸಂಕಲ್ಪವುಳ್ಳವನು. ಸುಖದಸ್ವರೂಪವನ್ನರಿತವನು. ಸುಖವನ್ನು ಅನುಗ್ರಹಿಸುವವನು. ಅಷ್ಟಾಂಗ ಯೋಗಗಳಿಂದ ತಿಳಿಯಬಹುದಾದವನು. ಯೋಗಾಭ್ಯಾಸದಲ್ಲಿ ನಿರತನಾದವನು. ಯೋಗಶಾಸ್ತ್ರಸಂಬಂಧವಾದ ಮಂತ್ರದಿಂದ ಆವೃತನಾದವನು. ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವವನು. ॥೬೧-೬೨॥

ತತ್ತ್ವವನ್ನು ಪೂರ್ಣವಾಗಿ ತಿಳಿದಿರುವವನು. ತತ್ತ್ವಗಳಿಗೆಲ್ಲಾ ಒಡೆಯನು. ವಜ್ರಾಯುಧದಿಂದ ಜನಿಸಿದವನು. ವಾರುಣಾತ್ಮಕನು (ಜಲಸ್ವರೂಪಿಯು) ಚೈತನ್ಯವನ್ನು ಧರಿಸಿದವನು. ಜ್ಞಾನಸ್ವರೂಪನು. ಕೇವಲ ಚಿತ್ಸ್ವರೂಪನು. ಜ್ಞಾನಸಭಾಪತಿಯು. ಭೂತಗಳಿಗೆಲ್ಲಾ ಒಡೆಯನು. ಹುಟ್ಟಿದ ವಸ್ತುಗಳಿಗೆಲ್ಲಾ ಉತ್ಪತ್ತಿಸ್ಥಾನನಾದವನು. ಹವ್ಯಕವ್ಯಾಹುತಿಗಳಿಂದ ಪ್ರೀತನಾಗುವವನು. ಹೇಳುವ ಮತ್ತು ಹೇಳಿಸಿಕೊಳ್ಳುವ ಪದಗಳಿಲ್ಲದವನು. ಸಕಲ ವಾಕ್ಕುಗಳಿಗೂ ಅಧಿಪತಿಯು. ಮಾತುಗಳಿಗೆ ಸಿಲುಕದವನು. ॥೬೩-೬೪॥

ವೇದಾಂತಕೃತ್ಸದೀರ್ಘಾಯುರ್ನಿರ್ಧುರಃ ಸುಕ್ರತುರ್ವರಃ ।
ಅಂಬುಭಕ್ಷಃ ಪಯೋಭಕ್ಷಸ್ತ್ರಿಗುಣಾಕಾಶಲೋಪಗಃ ॥೬೫॥

ಆಪ್ತಕಾಮೋನುಮಂತಾತ್ಮಾ ಕಾಮೋ ಭಕ್ತೇಷು ಸುಂದರಃ ।
ಅಸ್ತೇಯೋ ರಾಗನಿರ್ಮುಕ್ತಃ ಸ್ನೇಹದೀರ್ಘೋ ವಿಶೋಷಕಃ ॥೬೬॥

ಸ್ವಚ್ಛಂದಶ್ಛಂದನಿರ್ಮುಕ್ತಃ ಸ್ಪೃಷ್ಟವ್ಯೋಮಭೃತೋಮತಃ ।
ಅಪರೋಕ್ಷಪ್ರಿಯೋ ಲಿಂಗಮದ್ವೇಷ್ಟಾಪ್ರೇಮಸಂಗರಃ ॥೬೭॥

ದಾನಲಿಂಗೋ ಗತಿಜ್ಞಾನೀ ನಾದಗವ್ಯೋಪಭಾಸ್ಕರಃ ।
ಶುದ್ಧಸ್ಫಟಿಕಸಂಕಾಶಃ ಸ್ತುತಿಪ್ರಸ್ತುತವೈಭವಃ ॥೬೮॥

ಹಿರಣ್ಯಬಾಹುಸ್ಸೋಮಾಸ್ಯೋ ಹರಿಕೇಶೋ ವಿಶಾಂಪತಿಃ ।
ಸಪ್ಪಿಂಜರಃ ಪಶುಪತಿರ್ವಿಷಮಾಯಾಧ್ವನಾಂ ಪತಿಃ ॥೬೯॥

ಉಪನಿಷತ್ತನ್ನು ಸೃಷ್ಟಿಸಿದವನು. ಕೊನೆಯಿಲ್ಲದ ಆಯುಸ್ಸುಳ್ಳವನು. ವಾಸ್ತವವಾಗಿ ಪತ್ನೀವಿದೂರನು. ಶ್ರೇಷ್ಠವಾದ ಯಾಗಸ್ವರೂಪನು. ಶ್ರೇಷ್ಠನಾದವನು. ಜಲವನ್ನೂ, ಕ್ಷೀರವನ್ನೂ ಭಕ್ಷಿಸುವವನು. ಸತ್ವರಜಸ್ತಮೋರೂಪವಾದ ಗುಣತ್ರಯಗಳನ್ನು ಕೊನೆಯಲ್ಲಿ ನಿರ್ಮೂಲಗೊಳಿಸುವವನು. ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಒದಗಿಸುವವನು. ಅನುಮಾನದಿಂದ ತಿಳಿಯಲು ಸಾಧ್ಯನಾದವನು. ಕಾಮ್ಯವಸ್ತುಗಳನ್ನು ಅನುಗ್ರಹಿಸುವವನು. ಭಕ್ತರಿಗೆ ಸುಂದರನಾಗಿ ಕಾಣುವವನು. ಕಳ್ಳತನದಿಂದ ಅಪಹರಿಸಲಾಗದವನು. ಪಾಪನಿರ್ಮುಕ್ತನು. ಸ್ನೇಹಗುಣದಿಂದ ಪರಿಪೂರ್ಣನು. ಸಕಲ ಲೋಕವನ್ನೂ ಒಣಗಿಸುವವನು. ||೬೫-೬೬||

ಸ್ವೇಚ್ಛೆಯಾಗಿ ನಡೆಯುವವನು, ಛಂದಸ್ಸಿನಿಂದ ದೂರನಾದವನು, ಸಕಲಾಕಾಶದಲ್ಲಿಯೂ ವ್ಯಾಪಿಸಿರುವವನು, ಪ್ರತ್ಯಕ್ಷದಲ್ಲಿ ಸರ್ವವನ್ನೂ ನೋಡಿ ತೃಪ್ತಿಹೊಂದುವವನು, ಲಿಂಗರೂಪಿಯು, ಸಕಲರನ್ನೂ ಪ್ರೀತಿಸುವವನು, ಪ್ರೇಮರಾಶಿಯು, ಭಕ್ತರನ್ನು ಉದ್ಧರಿಸಲು ಶಿವಲಿಂಗವನ್ನು ದಾನಮಾಡಿರುವವನು, ಸದ್ಗತಿಪ್ರದನು ಜ್ಞಾನಶೀಲನು, ನಾದದಿಂದ ದೊರೆಯತಕ್ಕವನು, ಸೂರ್ಯಸದೃಶನು, ಶುದ್ಧವಾದ ಸ್ಫಟಿಕದಂತೆ ಕಾಂತಿಯುಳ್ಳವನು, ಸ್ತುತಿಯಿಂದಲೂ ಅತಿಶಯವಾದ ಹೊಗಳಿಕೆಯಿಂದಲೂ ಆನಂದಪಡುವವನು. ||೬೭-೬೮||

ಸುವರ್ಣಾಭರಣಗಳನ್ನು ಭುಜದಲ್ಲಿ ಧರಿಸಿರುವವನು, ಚಂದ್ರನಂತೆ ಮುಖ

ಬಂಧುಶೋ ಭಗವಾನ್ ಭವ್ಯೋ ವಿನ್ಯಾಸೋಧಿಪತಿಃ ಪರಃ ।
ಅಗಜಾಪತಿರಕ್ಷುದ್ರೋ ಹರಿಕೇಶೋದ್ವಯಾಕೃತಿಃ ॥೭೦॥

ಪುಷ್ಟಾನಾಂ ಪತಿರವ್ಯಗ್ರೋ ಭವಹೇತಿರ್ಜಗತ್ಪತಿಃ ।
ಸ್ವಾಹಾರೂಪೋ ವಸುಮನಾಃ ಬಟುಕಃ ಕ್ಷೇತ್ರಪಾಲಕಃ ॥೭೧॥

ಶಾಪಾರ್ತಿಹಾ ಶತ್ರುಹರಃ ಶೂಲೀ ಸ್ಮೃತಿವಿಧಾಯಕಃ ।
ಅಪ್ರಮೇಯೋ ಪ್ರತಿರಥಃ ಪ್ರಯುಕ್ತಃ ಪರಮೇಶ್ವರಃ ॥೭೨॥

ಅನುತ್ತಮ ಉದಾಸೀನೋ ಮುಕ್ತಿದೋ ಮುದಿತಾನನಃ ।
ಷಡಧ್ವಾನಧ್ವರೇಶೋ ವೈತಾನಾನಲ ಲಂಪಟಃ ॥೭೩॥

---

ವುಳ್ಳವನು, ನೀಲವರ್ಣದಿಂದ ರಂಜಿಸುವ ಕೇಶಪಾಶವುಳ್ಳವನು, ಕಾಂತಿಯಿಂದ ರಂಜಿಸುವ ಸಕಲ ವಸ್ತುಗಳಿಗೂ ಒಡೆಯನಾದವನು, ಎಳೆಗರಿಕೆಯಂತೆ ಮಿಶ್ರವರ್ಣ ವುಳ್ಳವನು, ಅಜ್ಞಾನಿಗಳನ್ನೆಲ್ಲಾ ರಕ್ಷಿಸುವವನು, ದುರ್ಮಾರ್ಗವನ್ನವಲಂಬಿಸಿದವರಿಗೆ ಒಡೆಯನೆನೆಸಿದವನು, ಬಂಧುವಿನಂತೆ ವರ್ತಿಸುವವನು, ಷಡ್ಗುಣೈಶ್ವರ್ಯಸಂಪನ್ನನು ಭವಬಂಧನವನ್ನು ತಾನೇ ಹೊಂದಿರುವವನು, ಭಕ್ತರಲ್ಲಿ ತನ್ನ ಐಶ್ವರ್ಯವನ್ನೆಲ್ಲಾ ನ್ಯಾಸವಾಗಿಡುವವನು, ಸರ್ವರಿಗೂ ಅಧಿಪತಿಯು, ಪಾರ್ವತೀಪತಿಯು, ಕ್ಷುದ್ರಬುದ್ಧಿ ಯಿಲ್ಲದವನು, ನೀಲವರ್ಣದ ಕೇಶವುಳ್ಳವನು, ಎರಡಿಲ್ಲದ ಒಂದೇ ವಸ್ತುವೆನಿಸು ವವನು. ||೬೯-೭೦||

ಪರಿಪೂರ್ಣಗುಣವುಳ್ಳವರಿಗೆ ಒಡೆಯನೆನಿಸಿದವನು, ಆತುರನಲ್ಲದವನು ಸಂಸಾರವೆಂಬ ಪಾಶಕ್ಕೆ ಆಯುಧದಂತಿರುವವನು, ಜಗದೊಡೆಯನು, ಸ್ವಾಹಾರೂಪ ದಲ್ಲಿರುವವನು, ದ್ರವ್ಯದಲ್ಲಿಟ್ಟಿರುವ ಮನಸ್ಸುಳ್ಳವನು, ವಟುರೂಪದಲ್ಲಿ ಬರುವವನು ಸಕಲ ಭೂಮಿಗೂ ರಕ್ಷಕನು, ಶಾಪವಿಮೋಚನೆ ಮಾಡುವವನು, ಶತ್ರುನಾಶಕನು ಶೂಲಧಾರಿಯು, ಧರ್ಮಶಾಸ್ತ್ರವನ್ನು ವಿಧಿಸುವವನು, ಊಹೆಗೆ ಸಿಲುಕದವನು, ದುಷ್ಟ ರನ್ನು ಎದುರಿಸುವವನು, ಮುಂದುವರಿಯುವವನು, ಪರಮೇಶ್ವರನು. ||೭೧-೭೨||

ಇವನಿಗಿಂತ ಬೇರೆ ಉತ್ತಮನಿಲ್ಲದಿರುವವನು. ಉದಾಸೀನಸ್ಥಿತಿಯಲ್ಲಿರುವ ವನು ಮುಕ್ತಿಯನ್ನು ಅನುಗ್ರಹಿಸುವವನು ಸಂತುಷ್ಟವಾದ ಮುಖಕಮಲವುಳ್ಳವನು ಷಡಧ್ವಗಳಿಗೆ ಒಡೆಯನು(ತರ್ಕವ್ಯಾಕರಣಾದಿ ಆರು ಶಾಸ್ತ್ರಮಾರ್ಗಗಳಿಗೆಒಡೆಯನು) ಯಜ್ಞದಲ್ಲಿ ಪ್ರಜ್ವಲಿಸುವ ಅಗ್ನಿಯಲ್ಲಿ ಪ್ರೀತಿಯುಳ್ಳವನು. ಮುದ್ರಾಮಯೋ

ಮುದ್ರಾಮಯೋ(?)ಮುಗ್ನ ಸೋಮೋ ಮಹಾವೀರ್ಯೋ ಮಹಾಭುಜಃ ।
ಮಹಾನಂದೋ ಮಹಾಸ್ಕಂದೋ ಮಹಾನಂದೋ ಮಹಾನಿಧಿಃ ॥೭೪॥

ಭ್ರಾಜಿಷ್ಣು ರ್ಭೋಜನಂ ಗಮ್ಯೋ ಭುವಿ ಜ್ಞಾನವಿನಾಶನಃ ।
ಮಹಾರ್ಥಶಾಯೀ ಮೇಧಾವೀ ಮಹಾಸೇನ್ಯಗುರುರ್ಮಹಃ ॥೭೫॥

ಸರ್ವಾಟಕಸ್ಸರ್ವಭೃತ್ಯಃ ಸರ್ವದೃಪ್ತಃ ಶಮಪ್ರಿಯಃ ।
ದೀರ್ಘಸಿಕ್ತಜಟಾಜೂಟೋ ವೀರಬಾಹುರ್ದಿಗಂಬರಃ ॥೭೬॥

ನೃತ್ಯಕಾಮಸ್ಸವ್ಯಚಾಪಸ್ಸಂಶಯಘ್ನಸ್ಸಹಸ್ರದೃಕ್ ।
ಹೇತುರ್ದೃಷ್ಟ್ಯೋತಿನಿರ್ಮುಕ್ತೋ ಹೇತುಹೇತುಮಜ್ಜನ್ಮಭೃತ್ ॥೭೭॥

ಹೇಲಾವಿನಿರ್ಜಿತಜಗದ್ಧೇಮಶೂನ್ಯವಿಷಾಶಯಃ ।
ಸಕೃದ್ವಿಭಾತಃ ಸಂವಕ್ತಾ ಸದಸತ್ಕೋಟಿವರ್ಜಿತಃ ॥೭೮॥

(ನಾನಾವಿಧವಾದ ಮುದ್ರಾರೂಪಿಯು) ಚಂದ್ರನಲ್ಲಿ ಅಡಗಿರುವವನು. ಮಹಾಪರಾಕ್ರಮಿಯು ಬಲಿಷ್ಠವಾದ ಬಾಹುಗಳುಳ್ಳವನು, ಆನಂದಸ್ವರೂಪನು ದೊಡ್ಡ ಭುಜ ಶಿರಸ್ಸುಳ್ಳವನು, ಮಹಾನಿಧಿಯಂತಿರುವವನು. ||೭೩-೭೪||

ತೇಜಶ್ಶಾಲಿಯು. ಆಹಾರಸ್ವರೂಪನು. ಗಮನಾರ್ಹನು. ಜ್ಞಾನನಾಶಕನು. ಮಹಾವಸ್ತುಗಳಲ್ಲಿಯೂ ನೆಲಸಿರುವವನು. ಬುದ್ಧಿಶಾಲಿಯು. ಸಕಲ ಸೈನ್ಯಕ್ಕೂ ಗುರುವೆನಿಸಿದವನು. ತೇಜೋರೂಪಿಯು. ಸರ್ವತ್ರ ಸಂಚಾರಿಯು. ಸರ್ವರನ್ನೂ ಸೇವಕರಂತೆ ಮಾಡಿಕೊಳ್ಳುವವನು. ಸಕಲ ವಸ್ತುಗಳಿಂದಲೂ ಪೂರ್ಣನಾದವನು. ಶಾಂತಿಗುಣಕ್ಕೆ ಪ್ರಿಯನೆನಿಸಿದವನು. ದೀರ್ಘವಾದ ಜಟಾಜೂಟವುಳ್ಳವನು. ವೀರ್ಯವತ್ತಾದ ತೋಳುಗಳುಳ್ಳವನು. ದಿಕ್ಕುಗಳನ್ನೇ ವಸ್ತ್ರವನ್ನಾಗಿ ಉಳ್ಳವನು ||೭೫-೭೬||

ಸತ್ಯವನ್ನು ಬಯಸುವವನು. ಎಡಗೈಯ್ಯಲ್ಲಿ ಸದಾ ಬಿಲ್ಲನ್ನು ಧರಿಸಿರುವವನು. ಸಂಶಯವನ್ನು ನಿವಾರಿಸುವವನು. ಸಹಸ್ರ ನೇತ್ರವುಳ್ಳವನು. ಪ್ರತ್ಯಕ್ಷದರ್ಶನಕ್ಕೆ ಮೂಲಕಾರಣನು. ಕಷ್ಟಪರಂಪರೆಗಳಿಂದ ನಿರ್ಮುಕ್ತನಾದವನು. ಜನ್ಮವನ್ನು ಧರಿಸುವವರಿಗೆ ಮೂಲಕಾರಣನೆನಿಸಿರುವವನು. ಲೀಲೆಗಾಗಿ ಪ್ರಪಂಚವನ್ನು ಜಯಿಸಿದವನು. ಸುವರ್ಣರೂಪಿಯು. ಶೂನ್ಯವಾದ ರೂಪುಳ್ಳವನು. ವಿಷವನ್ನು ಪಾನಮಾಡಿರುವವನು. ಒಂದೇಸಾರಿ ಸಂಪೂರ್ಣವಾಗಿ ಪ್ರಕಾಶಿಸುವವನು. ಸ್ಫುಟವಾದ ಮಾತುಳ್ಳವನು. ಒಳ್ಳೆಯ ಮತ್ತು ಕೆಟ್ಟ ಯೋಚನಾಪರಂಪರೆಯಿಲ್ಲದವನು. ||೭೭-೭೮||

ಸ್ವೇಚ್ಛಾಬ್ರಹ್ಮಬುಧಃ ಸ್ವಾಮೀ ಸ್ವಾನನ್ಯಃ ಶ್ವಸಿತಾಖಿಲಃ ।
ರತಿಪಾಲಶ್ಚ ಪುಣ್ಯಾದ್ಯಃ ಪದ್ಮಬಂಧುರ್ಹರಸ್ಸ್ವಭೂಃ ॥೭೯॥

ವಶೀ ವರೇಣ್ಯೋ ವಿತತೋ ಭೂರಿರಾಜಾವಶೋಭಿತಃ ।
ರೋಹಿತಶ್ಚ ಪತಿರ್ವೃಕ್ಷಃ ಪತಿರ್ಮಂತ್ರೀ ಚ ವಣಿಜಃ ॥೮೦॥

ಅಕ್ಷಯಃ ಶ್ವೇತಪೀತಶ್ಚಾಭವಃ ಸೋಮಪಿಬಃಕೃತೀ ।
ಆರ್ಷಈಶಃ ಶತಾಮೀಶ ಉಚ್ಚೈರ್ಘೋಷೋ ವಿಭೀಷಣಃ ॥೮೧॥

ಪತೀನಾಮಧಿಪಃ ಕೃತ್ಸ್ನಜಂತುವಾತೋಥ ಸತ್ವವಾನ್ ।
ಸಹಮಾನಶ್ಚ ನಿವ್ಯಾಧಿರಾವ್ಯಾಧಿನಿಯಮೋ ಯಮಃ ॥೮೨॥

---

ತನ್ನ ಇಚ್ಛೆಯಿಂದಲೇ ಬ್ರಹ್ಮಜ್ಞಾನವನ್ನು ಅರಿಯುವವನು. ಸರ್ವಸ್ವಾಮಿಯು. ದ್ವಿತೀಯವಸ್ತುರಹಿತನು. ಉಸುರಿನಿಂದಲೇ ಸಕಲ ವಸ್ತುಗಳನ್ನೂ ಸೃಷ್ಟಿಸಿರುವವನು. ರತೀದೇವಿಯನ್ನು ಕಾಪಾಡಿದವನು. ಪುಣ್ಯಾರ್ಜನೆಗೆ ಮೂಲಭೂತನು. ಲಕ್ಷ್ಮಿಗೆ ಬಂಧುವಿನಂತಿರುವವನು. ಪಾಪಹರನು. ಸ್ವಯಂ ಉತ್ಪತ್ತಿಯುಳ್ಳವನು. ಜಿತೇಂದ್ರಿಯನು. ಶ್ರೇಷ್ಠನು. ಸರ್ವತ್ರ ಹರಡಿರುವವನು. ಅನೇಕ ರಾಜರಿಂದ ಶೋಭಿಸುತ್ತಿರುವವನು. ಕೆಂಪುಬಣ್ಣದಿಂದ ರಂಜಿಸುವವನು. ಜಗದೊಡೆಯನು. ವೃಕ್ಷರೂಪಿಯು. ಮಂತ್ರಜ್ಞನು. ವಣಿಗ್ರೂಪದಿಂದ ವ್ಯವಹರಿಸುವವನು. ||೭೯-೮೦||

ನಾಶರಹಿತನು. ಉಮಾಮಹೇಶ್ವರರೂಪದಲ್ಲಿ ಬಿಳುಪಾಗಿಯೂ, ಕೆಂಪಾಗಿಯೂ ಕಾಣುವ ದೇಹವುಳ್ಳವನು. ಉತ್ಪತ್ತಿಶೂನ್ಯನು. ಸೋಮಪಾನಮಾಡಿದವನು. ಸುಕೃತಿಯು. ಋಷಿಪರಂಪರೆಗೆ ಆಶ್ರಯನು ಜಗತ್ಪತಿಯು. ನೂರಾರು ಗಣಗಳಿಗೆ ಒಡೆಯನು. ಭಯಂಕರವಾದ ಧ್ವನಿಯುಳ್ಳವನು. ವಿಶೇಷವಾಗಿ ಭಯವನ್ನುಂಟುಮಾಡುವವನು. ಸೇನಾಪತಿಗಳಿಗೆಲ್ಲಾ ಒಡೆಯನು. ಸಮಸ್ತಪ್ರಾಣಿಗಳನ್ನೂ ವಾಯುರೂಪದಲ್ಲಿದ್ದು ರಕ್ಷಿಸುವವನು ಸತ್ವಸಂಪನ್ನನು. ಕೋಪವನ್ನು ಸಹಿಸತಕ್ಕವನು. ಶತ್ರುಗಳೆಂಬ ಮೃಗಗಳನ್ನು ಬಾಣಗಳಿಂದ ಹೊಡೆಯುವ ಬೇಡನು. ಸರ್ವತ್ರ ಬಾಣಪರಿತ್ಯಾಗಮಾಡುವ ಶಕ್ತಿಯುಳ್ಳವನು. ಇಂದ್ರಿಯನಿಗ್ರಹಮಾಡಿದವನು. ||೮೧-೮೨||

ಅನ್ವಯೀ ದಿತಿರಾದಿತ್ಯಃ ಕಕುಭಃ ಕಾಲಕೋವಿದಃ ।
ನಿಷಂಗೀಷುಧಿಮಾನಿಂದ್ರಸ್ತಸ್ಕರಾಣಾಮಧೀಶ್ವರಃ ॥೮೨॥

ನಿಚೇರ್ಯುಕ್ತಃ ಪರಿಚರ ಆರಣ್ಯಪತಿರಾಗ್ಯತಃ ।
ಸೃಕಾವೀ ಮುಷ್ಣತಾಂನಾಥಃ ಪಂಚಾಶದ್ವರ್ಣರೂಪಭೃತ್ ॥೮೩॥

ನಕ್ತಂ ಚರಃ ಪ್ರಕೃಂತಾನಾಂ ಪತಿರ್ಗಿರಿಚರೋಗುರುಃ ।
ಕುಲುಂಚಾನಾಂ ಪತಿಃ ಕುಪ್ಯೋ ಧನ್ವಾವಿಭ್ಯೋ ನರಾಧಿಪಃ ॥೮೫॥

ಆತನ್ವಾನಃ ಶತಾನಂದಃ ಶ್ರುತ್ಯೋಗ್ರಸ್ತಪತಿಃ ಸುರಾಃ ।
(?)ತ್ವಾರೋತ್ವಾತಪತಿರ್ವಿಪ್ರ ಅವರ್ಷ್ಯಃ ಕ್ಷುಲ್ಲಕಃಕ್ಷಮೀ ॥೮೬॥

---

ನಾಶರಹಿತನಾದವನು. ದಿತೀದೇವಿಯಂತೆ ದೈತ್ಯರಿಗೆಲ್ಲಾ ಆಶ್ರಯಸ್ಥಾನನು. ಅದಿತೀದೇವಿಯ ಮಕ್ಕಳಂತೆ ಆವಿರ್ಭವಿಸುವವನು. ದಿಕ್ಕುಗಳಂತೆ ಕಾಣುವವನು. ಕಾಲವಿಜ್ಞಾನಿಯು. ಪ್ರಶಸ್ತವಾದ ಧನುಸ್ಸುಳ್ಳವನು. ಪ್ರಶಸ್ತವಾದ ಬಾಣಗಳುಳ್ಳ ಬತ್ತಳಿಕೆಯನ್ನು ಹೊಂದಿದವನು. ಪರಮೈಶ್ವರ್ಯವಿಶಿಷ್ಟನು. ಕಳ್ಳರಿಗೆಲ್ಲಾ ಒಡೆಯನಾದವನು. ಸ್ವಾಮಿಗೃಹದಲ್ಲಿದ್ದು ಸ್ವಾಮಿಯ ಸರ್ವಸ್ವವನ್ನೂ ಅಪಹರಿಸುವ ಕಳ್ಳನಂತಾಗುವವನು. ಅಂಗಡೀಬೀದಿಯೇ ಮೊದಲಾದ ಬಹಿರಂಗಪ್ರದೇಶಗಳಲ್ಲಿ ಕಳ್ಳತನ ಮಾಡುವವನಂತಿರುವವನು. ಅರಣ್ಯಗಳಿಗೆಲ್ಲಾ ಸ್ವಾಮಿಯೆನಿಸಿದವನು. ವಜ್ರಾಯುಧದಿಂದ ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುವವನಂತಿರುವವನು. ರೈತರಂತಿದ್ದು ಸ್ವಾಮಿಯ ಧಾನ್ಯವನ್ನು ಅಪಹರಿಸುವವರಿಗೂ ಒಡೆಯನಾದವನು. ಐವತ್ತು ವರ್ಣಗಳಿಂದ ಕೂಡಿದ ದೇಹವುಳ್ಳವನು. ॥೮೩-೮೪॥

ರಾತ್ರಿಯಲ್ಲಿ ಸಂಚರಿಸುವವನು. ಒಬ್ಬನನ್ನು ಕೊಂದು ಓಡಿಹೋಗುವಂತಹ ಪ್ರಕೃಂತರಿಗೆ ಒಡೆಯನೆನಿಸಿದವನು. ಗಿರಿಪ್ರದೇಶದಲ್ಲಿ ಸಂಚರಿಸುವವನು. ಗುರುವು (ಜ್ಞಾನದಾತನು) ಭೂಮ್ಯಾದಿಗಳನ್ನು ಅಪಹರಿಸುವ ಕಳ್ಳರಿಗೆಲ್ಲಾ ಯಜಮಾನನು ಬಹಳವಾಗಿ ಕೋಪಗೊಳ್ಳುವವನು. ಪ್ರಶಸ್ತವಾದ ಧನುಸ್ಸುಳ್ಳವನು. ಸರ್ವವ್ಯಾಪಿಯು. ನದಿಗಳಿಗೆಲ್ಲಾ ಒಡೆಯನು. ಧನುಸ್ಸಿನಲ್ಲಿ ಮೌರ್ವಿಯನ್ನೆಳೆಯುವವನು. ನಾನಾವಿಧವಾದ ಆನಂದಗಳಿಗೆ ಆಶ್ರಯನು. ವೇದಾಗ್ರಭಾಗದಲ್ಲಿ ಸ್ವಾಮಿಯಂತೆ ಸ್ತುತ್ಯನಾಗಿರುವವನು. ದೇವತಾರೂಪಿಯು. ಸಮಸ್ತ ಪ್ರಾಣಿಗಳಿಗಿಂತಲೂ ವಿಶೇಷ

(?)ಬಿಲ್ವಾವರ್ತಸ್ಸಧೀಃ ದುಂದುಭ್ಯ ಆಹನನ್ಯಃ ಪ್ರತಂದ್ರಿತಃ ।
ಧೃಷ್ಣು ಪ್ರಹಿತಸ್ತೀಕ್ಷ್ಣೋ ಸುಪ್ರಸಿದ್ಧಃ ಸಹಜಸ್ಸುಖೀ ॥೮೭॥

ಸ್ತುತ್ಯಪಕ್ಷಃ ಸ್ವತ್ವಂತ್ರಶ್ಚ ಕಾಕನೀಯಃ ಕರೋಟಿಭೃತ್ ।
ಸೂದ್ಯಃ ಸವಸ್ಯೋ ವೈಶಂತೋ ನಾದ್ಯೋ ವರ್ಷ್ಯಾ ಅವರ್ಷಕಃ ॥೮೮॥

ವಿದ್ಯುತ್ಯೋ ವಿನಯೋ ಮೇಘ್ಯಃ ರೇಷ್ಮಿಯೋ ವಾಸವೋ ವಸುಃ ।
ಅಗ್ರೇವಧೋಗ್ರಸಂಪೂಜ್ಯೋ ಹಂತಾ ತಾರೋ ಮಯೋಭುವಃ ॥೮೯॥

ಮಯಸ್ಕರೋ ಮಹಾತೀರ್ಥಃ ಸಾಲ್ಪಾಪಾರ್ಯ್ಯೋ ಪದಾತ್ಮಕಃ ।
ಶಂಖಭೂತರಣೇ ವಾರ್ಯಃ ಫೇನ್ಯಶ್ಶಷ್ಪ್ಯೋ ಶಿವಾದ್ಯಜಃ ॥೯೦॥

---

ಪ್ರಜ್ಞಾಶಾಲಿಯು. ವೃಷ್ಟಿಯನ್ನೇ ನಾಶಗೊಳಿಸುವವನು. ಅಲ್ಪಪ್ರಾಣಿಯಂತಾಗುವವನು. ಕ್ಷಮಾಶೀಲನು. ॥೮೫-೮೬॥

ಬಿಲ್ವದಲ್ಲಿ ಇಡಲ್ಪಟ್ಟ ಮನಸ್ಸುಳ್ಳವನು. ದುಂದುಭಿಯಲ್ಲಿ ಜನಿಸಿರುವವನು. ಹೊಡೆಯುವ ದಂಡದಲ್ಲಿ ತೋರಿಬರುವವನು. ವಿಶೇಷವಾಗಿ ಆಯಾಸಗೊಳ್ಳುವ ಸಾಮರ್ಥ್ಯವುಳ್ಳವನು. ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವವನು. ಯುದ್ಧಕ್ಕಾಗಿ ಎಲ್ಲರನ್ನೂ ಪ್ರೇರಿಸುವವನು. ಕ್ರೂರನು. ಪ್ರಸಿದ್ಧಮೂರ್ತಿಯು. ಸ್ವಭಾವದಿಂದಲೇ ಜನಿಸುವವನು. ಸುಖಪಡುವವನು. ಸ್ತೋತ್ರಮಾಡುವವರಲ್ಲಿ ವಿಶ್ವಾಸವಿಡುವವನು. ಸ್ವತಂತ್ರದಲ್ಲಿರುವವನು. ಅತ್ಯಲ್ಪವಾಗಿ ಕಾಣುವವನು. ಬ್ರಹ್ಮಕಪಾಲವನ್ನು ಹಿಡಿದಿರುವವನು. ಕೆಸರಿನಲ್ಲಿರುವ ನೀರಿನಲ್ಲಿ ನೆಲಸುವವನು. ಸರೋವರದಲ್ಲಿ ನೆಲಸಿರುವವನು. ಸಣ್ಣ ಕೊಳದಲ್ಲಿರುವ ನೀರಿನಂತಾಗುವವನು. ನದೀಗತವಾದ ಜಲರೂಪದಿಂದಿರುವವನು. ವೃಷ್ಟಿಯಲ್ಲಿ ಕಂಡುಬರುವ ಜಲರೂಪಿಯು. ವೃಷ್ಟಿಸಾಪೇಕ್ಷೆಯಿಲ್ಲದ ಸಮುದ್ರಾದಿಗಳಲ್ಲಿ ಜಲರೂಪದಿಂದಿರುವವನು. ॥೮೭-೮೮॥

ಮಿಂಚಿನಲ್ಲಿ ಅಡಗಿರುವವನು. ವಯಸ್ಸಿಗೆ ಸಿಲುಕದವನು. ಮೇಘಾಂತರ್ವರ್ತಿಯು. ಪ್ರಲಯಕಾಲದಲ್ಲಿ ಅಡಗಿರುವವನು. (ಸಕ್ಕರೆ ಕಲ್ಲು ಮುಂತಾದುವುಗಳಿಂದ ಕೂಡಿದ ವೃಷ್ಟಿರೂಪಿಯು ರೇಷ್ಮಿಯಃ) ಇಂದ್ರನಂತಿರುವವನು. ದ್ರವ್ಯರೂಪಿಯು. ಎದುರಿನಲ್ಲಿಯೇ ಪ್ರಾಣಿಗಳನ್ನು ವಧಿಸುವವನು. ಎದುರಿನಲ್ಲಿಯೇ ಪೂಜೆಯನ್ನು ಸ್ವೀಕರಿಸುವವನು. ಎಲ್ಲರನ್ನೂ ಕೊಲ್ಲುವವನು. ಸುಖವನ್ನು ಉಂಟುಮಾಡುವವನು. ಸುಖಕರನು. ಪ್ರಸಿದ್ಧವಾದ ತೀರ್ಥವುಳ್ಳವನು. ಅಲ್ಪವಸ್ತುಗಳನ್ನೂ

ಮುನಿರಾತಾರ್ಯ ತಿಲಾದ್ಯಃ ಸಿಕತ್ಯಶ್ಚ ಕಿಗುಂಶಿಲಃ ।
ಪುಲಸ್ತ್ಯಕ್ಷಯಣೇ ಗ್ರಣ್ಯೋ ಗೋಷ್ಠ್ಯೋ ಗೋಪರಿಪಾಲಕಃ ॥೯೧॥

ಸಿಧ್ಯೋ ಹರಿತ್ಯೋ ವೇಣ್ಯಶ್ಚ ಸ್ತುತ್ಯವಸ್ತ್ರ್ಯೋತಿವಾದಿಭೂಃ ।
ಪರ್ಣಶದ್ಯಃ ಪ್ರತ್ಯಗಾತ್ಮಾ ಪ್ರಸನ್ನಃ ಪರಮಾತ್ಮನಃ ॥೯೨॥

ಶಯನೀಯಶ್ಯತಾನಂದಃ ಶಶೀದೀಪಃ ಕ್ಷರಾಕ್ಷರಃ ।
ಪಾಶೀ ಪಾತಕಸಂಹರ್ತಾ ತೀಕ್ಷ್ಣೋಗ್ರಸ್ತಿಮಿರಾರ್ಣವಃ ॥೯೩॥

ವರಾಭಯಪ್ರದೋ ಬ್ರಹ್ಮಾ ಪುಚ್ಛ್ಯೋ ಬ್ರಹ್ಮವಿದಾಂ ಪರಃ ।
ಬ್ರಹ್ಮವಿದ್ಯಾ ಗುರುರ್ವೇದ್ಯೋ ಗತ್ಯಕಾಭೀಷ್ಟನಕ್ಷಮಾ ॥೯೪॥

---

ಅಪಹರಿಸುವವನು. ಪದಸ್ವರೂಪನು. ಶಂಖದಿಂದ ಜನಿಸುವವನು. ಸಂಸಾರದಿಂದ ದಾಟುವವರಲ್ಲಿ ಮುಂದಾಳಾದವನು. ಯಾರಿಂದಲೂ ತಡೆಯಲಾಗದವನು. ನೊರೆಯಲ್ಲಿ ನಿಲ್ಲುವವನು. ಸಣ್ಣ ತೃಣದಂತೆ ಕಾಣುವವನು. ಶಿವನೇ ಮೊದಲಾದ ಶಬ್ದಗಳಿಂದ ಪ್ರತ್ಯಕ್ಷನಾಗತಕ್ಕವನು. ॥೮೯-೯೦॥

ಮುನಿಯಂತಿರುವವನು. ಕಾಮ್ಯಕರ್ಮಾನುಷ್ಠಾನ ಮಾಡುವ ಸಂಸಾರಕ್ಕೆ ಮತ್ತೆ ಹಿಂದಿರುಗುವವನು. ಕರ್ಮಫಲವನ್ನು ಸಂಪೂರ್ಣವಾಗಿ ಅನುಭವಿಸುವ ಜೀವರೂಪಿಯು. (ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಎಂಬ ಶ್ರುತಿಪ್ರಮಾಣದಂತೆ) ಮರಳುರಾಶಿಯಲ್ಲಿ ನಿಂತಿರುವವನು. ಕುತ್ಸಿತವಾದ ಶಿಲಾಮಯವಾದ ಭೂಮಿಯಲ್ಲಿ ನೆಲಸಿರುವವನು. ಭಕ್ತರ ಮುಂಭಾಗದಲ್ಲಿ ನಿಲ್ಲುವವನು. ಕ್ಷೀಣಗುಣಕ್ಕೆ ಸಿಕ್ಕಿರುವವನು. ಸಕಲ ಕಾರ್ಯಕ್ಕೂ ಮುಂದಾಳಾದವನು. ಗೋವಿನ ವಾಸಗೃಹದಲ್ಲಿ ಸಿಕ್ಕುವವನು. ವೃಷಭರಕ್ಷಕನು. ಸರ್ವಸಿದ್ಧಿಯನ್ನೂ ಪಡೆದಿರುವವನು. ಹರಿದ್ವರ್ಣವಿಶಿಷ್ಟನು. ಬಿದುರಿನ ವರ್ಣದಂತೆ ವರ್ಣವುಳ್ಳವನು. ಸ್ತೋತ್ರಕ್ಕೆ ವಶನಾಗತಕ್ಕವನು. ಒಣಎಲೆಗಳ ಗುಂಪಿನಲ್ಲಿರುವವನು. ಜ್ಞಾನರೂಪಿಯಾದ ಆತ್ಮನು. ಪ್ರಸನ್ನನಾದವನು. ಪರಮಾತ್ಮರೂಪಿಯು. ॥೯೧-೯೨॥

ಸುಖಶಯನದಲ್ಲಿರುವವನು. ನಾನಾವಿಧವಾದ ಆನಂದಸ್ವರೂಪನು. ಚಂದ್ರನನ್ನೇ ದೀಪವನ್ನಾಗಿಯುಳ್ಳವನು. ನಾಶರಹಿತನಾದವನು. ಪಾಶಾಯುಧಧಾರಿಯು. ಪಾಪರಾಶಿಯನ್ನು ಸಂಹಾರಮಾಡುವವನು. ತೀಕ್ಷ್ಣಸ್ವಭಾವದವನು. ಉಗ್ರರೂಪಿಯು. ಕತ್ತಲೆಯ ರಾಶಿಯಂತಿರುವವನು. ವರ ಮತ್ತು ಅಭಯ ಇವುಗಳನ್ನು

ಕೃತಾಂತಕಃ ಕ್ರಿಯಾಸಾರಃ ಕೃತಿಃ ಕೃಪಣರಕ್ಷಕಃ ।
ನೈಷ್ಕಾಮ್ಯದೋ ನ ರಸಃ ತ್ರ್ಯಕ್ಷಸ್ತ್ರಿಪುರ ಭೈರವಃ ॥೯೫॥

ತ್ರಿಮಾತೃಕಸ್ತ್ರಿತತ್ಕೃತ್ಯಸ್ತ್ರೇತಾಗ್ನಿ ಸ್ತ್ರಿಗುಣಾತ್ಮಕಃ ।
ತ್ರಿಧಾಮಾ ತ್ರಿಜಗದ್ಧೇತು ಸ್ತ್ರಿತಗ ಸ್ತ್ರಿಜಗದ್ಧರಃ ॥೯೬॥

ಪ್ರಪಂಚವಸರ್ಗೋ ನಾಮ ರೂಪದ್ವಂದ್ವ ವಿವರ್ಜಿತಃ ।
ಪ್ರಕೃತೀಶಃ ಪ್ರತಿಷ್ಠಾತಾ ಪ್ರಭವಃ ಪ್ರಮುದಃ ಪೃಥಿಃ ॥೯೭॥

ಸುನಿಶ್ಚಿತಾರ್ಥೋ ಆದ್ಯಂತಸ್ತತ್ವಮಸ್ಯರ್ಥವಾಚಕಃ ।
ಹಿತಃ ಪ್ರಸಾದಃ ಪರವಾನ್ ಸರ್ವೋಪನಿಷದಾಶಯಃ ॥೯೮॥

---

ಕೊಡುವವನು. ಬ್ರಹ್ಮರೂಪಿಯು. 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂಬ ಶ್ರುತಿವಾಕ್ಯದಂತೆ ಪ್ರಪಂಚಾತ್ಮಕನು. ಬ್ರಹ್ಮವಿದ್ಯೆಗೆ ಗುರುವಿನಂತಿರುವ ಜ್ಞಾನಸ್ವರೂಪಿಯು. ಇಷ್ಟಾರ್ಥಗಳನ್ನು ಸಲ್ಲಿಸುವವನು. ಕ್ಷಮಾಶೀಲನು. ॥೯೩-೯೪॥

ಯಮಸ್ವರೂಪನು. ಸಕಲ ಯಾಗಾದಿಕ್ರಿಯೆಗಳಿಗೂ ಆಧಾರಭೂತನು. ಕಾರ್ಯರೂಪಿಯು. ಕಾರ್ಪಣ್ಯದಿಂದ ಜೀವಿಸುವವರನ್ನೂ ರಕ್ಷಿಸುವವನು. ನಿಷ್ಕಾಮಕರ್ಮಿಠರಿಗೆ ಇಷ್ಟಾರ್ಥಗಳನ್ನು ಒದಗಿಸುವವನು. ರಸಸ್ವರೂಪನು. ಮೂರುಕಣ್ಣುಗಳುಳ್ಳವನು. ತ್ರಿಪುರಗಳನ್ನೂ ನಾಶಗೊಳಿಸುವವನು. ಲಕ್ಷ್ಮೀ, ಸರಸ್ವತೀ, ಗೌರೀ ಈ ಮೂರು ದೇವತೆಗಳ ರೂಪದಲ್ಲಿರುವವನು. ಈ ಮೂರುದೇವತೆಗಳ ಕಾರ್ಯದಲ್ಲಿಯೂ ಅಡಗಿರುವವನು. ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿರೂಪದಲ್ಲಿರುವವನು. ಸತ್ತ್ವರಜಸ್ತಮೋಗುಣರೂಪಿಯು. ಸೂರ್ಯಚಂದ್ರಾಗ್ನಿಗಳೆಂಬ ತೇಜಸ್ತ್ರಯವುಳ್ಳವನು. ಭೂರ್ಭುವಸ್ಸ್ವರ್ಲೋಕಗಳಿಗೆ ಮೂಲಕಾರಣನು. ಬ್ರಹ್ಮ ವಿಷ್ಣು ಮಹೇಶ್ವರರೂಪದಿಂದ ವರ್ತಿಸುವವನು. ಮೂರುಲೋಕಗಳಲ್ಲಿರುವ ದುಷ್ಟರನ್ನೆಲ್ಲಾ ನಾಶಗೊಳಿಸುವವನು. ॥೯೫-೯೬॥

ಪ್ರಪಂಚದಲ್ಲೆಲ್ಲಾ ವಾಸಿಸುವವನು. ಸುರೂಪು, ಕುರೂಪು ಮುಂತಾದ ಸ್ವರೂಪಗಳಿಂದ ನಿರ್ಮುಕ್ತನು. ಪ್ರಕೃತಿಗೆ ಪುರುಷನಾಗಿರುವವನು. ಸಕಲ ಲೋಕವನ್ನೂ ಪ್ರತಿಷ್ಠಿಸಿರುವವನು. ಸ್ವಯಂ ಉತ್ಪನ್ನನು. ಸಂತೋಷರೂಪಿಯು. ಸ್ಥಿರವಾಗಿ ನಿಲ್ಲುವವನು. ನಿಶ್ಚಯವಾದ ಮನೋಭಾವವುಳ್ಳವನು. ಆದಿ, ಅಂತ್ಯಗಳೆರಡರ ಸ್ವಭಾವದವನು. ತತ್ತ್ವಾರ್ಥವಾಚಕನು. ಸಕಲಲೋಕಹಿತಪ್ರದನು. ಪ್ರಸಾದ

ವಿಶೃಂಖಲೋ ವಿಯದ್ಧೇತುರ್ವಿಷನೋ ವಿಶ್ರುತಪ್ರಭಃ ।
ಅಖಂಡಬೋಧೋ ಖಂಡಾತ್ಮಾ ಸೂರ್ಯಮಂಡಲಮಂಡಿತಃ ॥೯೯॥

ಅನಂತಶಕ್ತಿರಾಚಾರ್ಯಾಃ ಪುಷ್ಕರಃ ಸರ್ವಪೂರಣಃ ।
ಪುರುಜಿತ್ಪೂರ್ವಜಃ ಪುಷ್ಪಹಾಸಃ ಪುಣ್ಯಫಲಪ್ರದಃ ॥೧೦೦॥

ನ ಗಮ್ಯೋಽವ್ಯಗ್ರರೂಪಾದಿರ್ಯುವಾ ಧರ್ಮವಿದಾಂ ವರಃ ।
ಅವಶಃ ಸ್ವವಶಃ ಸ್ಥಾಣುರಂತರ್ಯಾಮೀ ಸ ಶುಭಕ್ರತುಃ ॥೧೦೧॥

ಕಟಿಭಃ ಕರ್ಮಪೀಠೋಭಃ ಕೂಷ್ಮಾಂಡಗ್ರಹಗೋಚರಃ ।
ಕುಲಭೂಷಃ ಕೃಪಾಸಿಂಧುಃ ಕುಶಲಃ ಕುಂಕುಮೇಶ್ವರಃ ॥೧೦೨॥

---

ರೂಪಿಯು. ಶ್ರೇಷ್ಠನಾದವನು. ಸಕಲ ಉಪನಿಷತ್ತುಗಳ ಆಶಯಕ್ಕೆ ವಿಷಯನೆನಿಸಿದವನು. ॥೯೭-೯೮॥

ಬಂಧನವಿಲ್ಲದವನು. ಆಕಾಶೋತ್ಪತ್ತಿಗೂ ಮೂಲಕಾರಣನು. ಕಠಿನಸ್ವರೂಪನು. ಮಿಂಚಿನಂತೆ ಕಾಂತಿಯುಳ್ಳವನು. ಸಂಪೂರ್ಣ ಜ್ಞಾನಸ್ವರೂಪಿಯು. ಅಖಂಡಸ್ವರೂಪನು. ಸೂರ್ಯಮಂಡಲದಲ್ಲಿ ಅಲಂಕೃತನಾದವನು. ಅತಿಶಯವಾದ ಶಕ್ತಿಯುಳ್ಳವನು. ಜ್ಞಾನಪ್ರದನಾದ ಆಚಾರ್ಯಸ್ವರೂಪನು. ಪುಷ್ಕರತೀರ್ಥರೂಪಿಯು. ಸರ್ವವಸ್ತುಗಳನ್ನೂ ಪೂರ್ಣಗೊಳಿಸುವವನು. ಪುರುವೆಂಬ ರಾಜನನ್ನೂ ಗೆದ್ದವನು. ಅನಾದಿಯಾದವನು. ಪುಷ್ಪಗಳನ್ನೇ ಮಂದಹಾಸವನ್ನಾಗಿಯುಳ್ಳವನು. ಪುಣ್ಯಫಲವನ್ನು ಕೊಡುವವನು. ॥೯೯-೧೦೦॥

ಸುಲಭವಾಗಿ ದೊರಕಲು ಸಾಧ್ಯವಿಲ್ಲದವನು. ಕೊನೆಯವರೆಗೂ ನಾನಾರೂಪಗಳನ್ನು ಹೊಂದುವವನು. ಯುವಕನು. ಧರ್ಮಜ್ಞರಲ್ಲಿ ಶ್ರೇಷ್ಠನು. ಯಾರಿಗೂ ವಶನಾಗದವನು. ತನ್ನ ಅಧೀನದಲ್ಲಿ ಎಲ್ಲವನ್ನೂ ನಿಲ್ಲಿಸುವವನು. ನಿರ್ವಿಕಲ್ಪ ಸಮಾಧಿಸ್ಥನು. ಸರ್ವವಸ್ತುಗಳಲ್ಲಿಯೂ ಅಡಗಿರುವವನು. ಶುಭಕರವಾದ ಯಾಗವುಳ್ಳವನು. ಆನೆಯ ಕುಂಭಸ್ಥಳದಲ್ಲಿ ಪ್ರಕಾಶಿಸುವವನು. ಕರ್ಮಪ್ರದವಾದ ಪೀಠದಲ್ಲಿ ನೆಲಸಿರುವವನು. ಕೂಷ್ಮಾಂಡವೆಂಬ ಗ್ರಹಗಳಿಗೆ ಗೋಚರಿಸುವವನು. ಕುಲವನ್ನೇ ಅಲಂಕರಿಸತಕ್ಕವನು. ದಯಾಸಮುದ್ರನು. ಸರ್ವಕಾರ್ಯನಿಪುಣನು. ಕುಂಕುಮದ ವರ್ಣದಂತೆ ವರ್ಣವುಳ್ಳ ಸ್ವಾಮಿಯು. ॥೧೦೧-೧೦೨॥

ಗದಾಧರೋ ಗದಾಸ್ವಾಮೀ ಗರಿಷ್ಠಃ ಸಮರಾಯುಧಃ ।
ಜವನೋ ಜಗದಾಧಾರೋ ಜಮದಗ್ನಿಭುವೋಗುರುಃ ॥೧೦೩॥

ಜಟಾಧರೋ ಹತಾನಂಗೋ ಅಮೃತಾಂಶುಧೃತೋಽಹವಃ ।
ವಿಶ್ವಕರ್ಮಾ ವಿಭೂತಿಸ್ಥೋ ವಿಶ್ವಮೂರ್ತಿರ್ದಯಾಪರಃ ॥೧೦೪॥

ವಿಷತ್ಕಾರೋ ವಿಷತ್ಕಾರಃ ಕರೋ ವಟಕರಃ ಪಟುಃ ।
ಬ್ರಹ್ಮಿಷ್ಠವರ್ತ್ಮಾ ನಾನಾರ್ಥಕೃತ್ಪರೋ ಬ್ರಹ್ಮಚೇತನಃ ॥೧೦೫॥

ಗಾಯನೋ ಗರುಡಾರೂಢೋ ಗಜಾಸುರವಿಶಾತನಃ ।
ಗರ್ವಾರ್ತೋ ಗಗನಾವಾಸೋ ಗ್ರಂಥೀಶಯವಿಭೇದನಃ ॥೧೦೬॥

ಭೂತಮುಕ್ತಾವಲೀತಂತುರ್ಭೂತಪೂರ್ವೋ ಭುಜಂಗಭೃತ್ ।
ಅಂತಕಾರಿಃ ಸಾರಸಕ್ತೋ ಮಾತೃಶಾಸ ಸ್ಸದಾಶಿವಃ ॥೧೦೭॥

---

ಗದೆಯನ್ನು ಧರಿಸಿದವನು. ಗದೆಗೆ ಯಜಮಾನನು. ಸರ್ವಶ್ರೇಷ್ಠನು. ಯುದ್ಧದ ಆಯುಧಗಳುಳ್ಳವನು. ಯಮಸ್ವರೂಪನು. ಜಗತ್ತಿಗೆ ಆಧಾರಭೂತನಾದವನು. ಜಮದಗ್ನಿ ಪುತ್ರನಾದ ಪರಶುರಾಮನಿಗೆ ಗುರುವು. ಜಟೆಯನ್ನು ಧರಿಸಿದವನು. ಮನ್ಮಥನನ್ನು ಕೊಂದವನು. ಅಮೃತಕಿರಣನಾದ ಚಂದ್ರನನ್ನು ಧರಿಸಿದವನು. ಯುದ್ಧರೂಪಿಯು. ವಿಶ್ವವನ್ನೇ ನಿರ್ಮಾಣಮಾಡಿದವನು. ಐಶ್ವರ್ಯದಲ್ಲಿ ನೆಲಸಿರುವವನು. ವಿಶ್ವವೇ ಮೂರ್ತಿಯಾಗಿ ಉಳ್ಳವನು. ದಯಾಶಾಲಿಯಾದವನು. ॥೧೦೩-೧೦೪॥

ವಿಷಸಮೂಹದಿಂದಲೇ ಜ್ವಲಿಸುವವನು. ವಿಷಮಯವಾದ ಕೈಯುಳ್ಳವನು. ವಟಪತ್ರವನ್ನು ಕೈಯ್ಯಲ್ಲಿ ಧರಿಸಿರುವವನು. ಪಟುವಾಗಿರುವವನು. ಬ್ರಹ್ಮಮಾರ್ಗಾವಲಂಬಿಯು. ಗರುಡವಾಹನನು. ಗಜಾಸುರನನ್ನು ಧ್ವಂಸಮಾಡಿದವನು. ಗಾನನಿಪುಣನು. ಗರ್ವವನ್ನು ತೋರ್ಪಡಿಸುವವನು. ಅಂತರಿಕ್ಷದಲ್ಲಿ ನೆಲಸುವವನು. ಗ್ರಂಥಿಗಳಲ್ಲಿ ಅಡಗಿದ್ದವರನ್ನೂ ನಾಶಗೊಳಿಸುವವನು. ॥೧೦೫-೧೦೬॥

ಜಗತ್ತಿನಲ್ಲಿರುವ ಪ್ರಾಣಿಗಳೆಂಬ ಮುತ್ತಿನ ಸರದಲ್ಲಿ ದಾರದಂತೆ ಮುಖ್ಯನಾದವನು. ಸಕಲ ಪ್ರಾಣಿಗಳಿಗೂ ಮೂಲಭೂತನು. ಭುಜಂಗವನ್ನು (ಹಾವನ್ನು) ಧರಿಸಿರುವವನು. ಯಮನಿಗೆ ಶತ್ರುವಿನಂತಿರುವವನು. ಸಾರವತ್ತಾದ ವಸ್ತುಗಳಲ್ಲಿ

ಶಕ್ತಿಸಾತಕರಃ ಶಾಂತೋ ಶಾಶ್ವತಃ ಶ್ರೇಯಸಾಂ ನಿಧಿಃ ।
ಅಜೀರ್ಣಸುಕುಮಾರಾಂತಃ ಪಾರದೃಶ್ವಾ ಪುರಂದರಃ ॥೧೦೮॥

ಅನಾದಿ ಸಾದಿ ವಿಜ್ಞಾನೀ ನಿರ್ವಿಭಾವೋ ವಿಭಾವಸುಃ ।
ವಿಜ್ಞಾನಮಾತ್ರೋ ವಿರಜಾಃ ವಿರಾಮೋ ವಿಬುಧಾಶ್ರಯಃ ॥೧೦೯॥

ವಿದಾರ್ಯೋ ಮುಕ್ತವೇಷಾಢ್ಯೋ ವಿಶ್ವಾತೀತೋ ವಿಶೋಧಕಃ ।
ಮಾಯಾನಂದವಿನೋದಾಂತೋ ಮಾಯಾನಟನಶಿಕ್ಷಕಃ ॥೧೧೦॥

ಕಾಲಾತ್ಮಾ ಕಾಲಿಕಾನಾಥಃ ಕರ್ಕೋಟಕವಿಭೂಷಣಃ ।
ಷಡೂರ್ಮಿರಹಿತಸ್ತವ್ಯಃ ಷಡ್ವಿಧೈಶ್ವರ್ಯಗಾಯುಕಃ ॥೧೧೨॥

ಆಸಕ್ತಿಯುಳ್ಳವನು. ತಾಯಿಯನ್ನೇ ಶಿಕ್ಷಿಸಿದವನು. (ಪರಶುರಾಮಾವತಾರದಲ್ಲಿ) ಸದಾ ಮಂಗಳಪ್ರದನು. ಶಕ್ತ್ಯಾಯುಧವನ್ನು ಕೆಳಕ್ಕೆ ಬೀಳಿಸಿದವನು. ಶಾಂತ ಸ್ವಭಾವದವನು. ಶಾಶ್ವತನು. ಶ್ರೇಯಸ್ಸಿಗೆ ನಿಧಿಯಂತಿರುವವನು. ಶಿಥಿಲವಾಗದ ಕೋಮಲದೇಹವುಳ್ಳವನು. ಸಕಲಸುಖದುಃಖಗಳ ಕೊನೆಯನ್ನು ಕಂಡವನು. ಶತ್ರುನಗರಗಳನ್ನು ಕೊಳ್ಳೆಹೊಡೆದವನು. ॥೧೦೭-೧೦೮॥

ಆದಿಯಿಲ್ಲದವನು. ಆದಿಯನ್ನು ಕಂಡವನು. ವಿಶೇಷವಾದ ಜ್ಞಾನ ರಾಶಿಯು. ವಿರುದ್ಧಸ್ವಭಾವವಿಲ್ಲದವನು. ತೇಜೋರಾಶಿಯು. ಕೇವಲ ಜ್ಞಾನಸ್ವರೂಪನು. ರಜೋಗುಣವಿರಹಿತನು. ವಿಶೇಷವಾಗಿ ಭಕ್ತರನ್ನು ಆನಂದಗೊಳಿಸುವವನು. ದೇವತೆಗಳಿಗೆ ಆಶ್ರಯನಾದವನು. ದುಷ್ಟರನ್ನು ಸೀಳುವವನು. ಮುಕ್ತಾಭರಣಗಳಿಂದ ಅಲಂಕೃತನು. ವಿಶ್ವವನ್ನು ಮೀರಿರುವವನು. ವಿಶೇಷವಾಗಿ ಪರೀಕ್ಷಿಸುವವನು. ಮಾಯಾನಂದದ ಮತ್ತು ಮಾಯಾವಿನೋದದ ಕೊನೆಯನ್ನು ಕಂಡವನು. ಮಾಯಾಕಾರದ ನಾಟ್ಯವಾಡುವವನು. ಮಾಯಾವಿಗಳನ್ನು ಶಿಕ್ಷಿಸುವವನು. ॥೧೦೯-೧೧೦॥

ಮಾಯಾನಾಟ್ಯವಾಡುವವನು. ಸರ್ವರನ್ನೂ ಆಕರ್ಷಿಸುವ ಶಕ್ತಿಯುಳ್ಳವನು. ಮಾಯೆಗೂ, ಮಂತ್ರಕ್ಕೂ ಸಿಕ್ಕದವರನ್ನು ಬಿಡಿಸುವವನು. ನ್ಯೂನಾತಿರೇಕಗಳನ್ನು ಹೊಂದುವವನು. ಮಿಂಚಿನಂತೆ ಹೊಳೆಯುವವನು. ಪ್ರಪಂಚವನ್ನೇ ಮೋಸಗೊಳಿಸುವವನು. ಕಾಲಸ್ವರೂಪನು. ಕಾಲನಿಯಾಮಕನು. ಸರ್ಪಭೂಷಣನು. ಆಹಾರ, ಬಾಯಾರಿಕೆ, ಶೋಕ, ಮೋಹ, ಜರೆ, ಮೃತ್ಯುಗಳೆಂಬ ಷಡೂರ್ಮಿಗಳಿಗೆ

ಷಡಾಧಾರಗತಃ ಸಂಖ್ಯಃ ಷಡಾಶ್ರಯಸಮಾಶ್ರಯಃ ।
ಅನಿರ್ದೇಶ್ಯೋ ನಿಲೋ ಗವ್ಯೋ ವಿಕ್ರಯೋ ಚೋದ್ಯವೈಭವಃ ॥೧೧೩॥

ಹೇಯಾಹೇಯವಿನಿರ್ಮುಕ್ತೋ ಹೇಲಾಕಲ್ಪಿತತಾಂಡವಃ ।
ಅಪರ್ಯಾಸೋ ಪರಿಚ್ಛೇದ್ಯೋ ಗೋಚರೋ ರುಗ್ವಿಮೋಚಕಃ ॥೧೧೪॥

ನಿರೀಚ್ಛೋ ನಿಗಮಾನಾಥೋ ನಿರಾನಂದೋ ನಿದಾನಭೂಃ ।
ಆದಿಭೂತೋ ಮಹಾಭೂತೋ ಸ್ವೇಚ್ಛಾಕಲ್ಪಿತವಿಗ್ರಹಃ ॥೧೧೫॥

ನಿಸ್ಪಷ್ಟಃ ಪ್ರತ್ಯಯಾನಂದೋ ನಿರ್ನಿಮೇಷೋ ನಿರಂತರಃ ।
ಪ್ರಬುದ್ಧಃ ಪರಮೋದಾರೋ ಪರಮಾನಂದಸಾಗರಃ ॥೧೧೬॥

---

ಸಿಲುಕದವನು. ಸ್ತುತಿಗೆ ಅರ್ಹನಾದವನು. ಷಡ್ಗುಣೈಶ್ವರ್ಯಸಂಪನ್ನನು. ಗಾಯನ ಶೀಲನು. ॥೧೧೧-೧೧೨॥

ಷಡಾಧಾರಚಕ್ರನಿವಾಸಿಯು. ಸಂಖ್ಯೆಗೆ ದೊರಕತಕ್ಕವನು. ಷಡ್ಗುಣಗಳಿಗೆ ಆಶ್ರಯದಾತನು. ನಿರ್ದೇಶದಿಂದ ತಿಳಿಯದವನು. ಅನಿಲರೂಪಿಯು. ಗೋವಿಕಾರವಾದ ಕ್ಷೀರಾದಿಸ್ವರೂಪನು. ವಿಕ್ರಯಮಾಡುವವನು. ಆಶ್ಚರ್ಯಕರವಾದ ಐಶ್ವರ್ಯವುಳ್ಳವನು. ಶ್ರೇಷ್ಠವಾದ ಮತ್ತು ತುಚ್ಛವಾದ ವಿಶೇಷ ಭಾವಗಳಿಲ್ಲದವನು. ಲೀಲಾರ್ಥವಾಗಿ ತಾಂಡವವನ್ನಾಡುವವನು. ವ್ಯತ್ಯಾಸವಿಲ್ಲದವನು. ಅಳತೆಗೆ ಸಿಲುಕುವವನು. ಗೋ (ವೃಷಭ)ವಿನ ಮೇಲೆ ಸಂಚರಿಸುವವನು. ರೋಗನಾಶಕನು. ॥೧೧೩-೧೧೪॥

ಅತಿಯಾದ ಆಶೆಯಿಲ್ಲದವನು. ವೇದಗಳಿಗೆಲ್ಲಾ ಒಡೆಯನಾದವನು. ಆನಂದಾದಿಗಳ ಅನುಭವವಿಲ್ಲದವನು. ಮೂಲಕಾರಣವೆನಿಸಿದ ವಸ್ತುಗಳಿಗೆಲ್ಲಾ ಮೂಲನಾದವನು. ಪ್ರಪಂಚಕ್ಕೆ ಆದಿಪುರುಷನು. ಮಹಾಭೂತನೆನಿಸಿದವನು. ತನ್ನ ಇಷ್ಟದಂತೆ ದೇಹವನ್ನು ಧರಿಸುವವನು. ಸ್ಪಷ್ಟವಾದ ಆಕಾರವಿಲ್ಲದವನು. ಪ್ರತ್ಯಯದಿಂದ ಆನಂದರೂಪಿಯಾಗಿ ತೋರಿಬರುವವನು. ನಿಮೇಷರಹಿತನಾದವನು. ಅಂತರಾಯ (ವಿಘ್ನ) ವಿಲ್ಲದವನು. ಎಚ್ಚರಿಕೆಯುಳ್ಳವನು. ಅತಿಶಯವಾದ ಔದಾರ್ಯವುಳ್ಳವನು. ಪರಮವಾದ ಆನಂದಕ್ಕೆ ಸಾಗರದಂತಿರುವವನು. ॥೧೧೫-೧೧೬॥

ಸ ವಿಸ್ತಾರಕಲಾಪೂರ್ಣಃ ಸುರಾಸುರನಮಸ್ಕೃತಃ ।
ನಿರ್ವಾಣೋದನಿರ್ವಿದಗ್ಧೋ ನಿರ್ವಾರೋ ನಿರುಪಾಧಿಕಃ ॥೧೧೭॥

ಆಭಾವಸುರಪಸ್ತಂತುಃ ಶದಿವಃ(?)ಪೇಶಲಃ ಪವಿಃ ।
ಸಂ ಶಾಂತಃ ಸರ್ವಸಾಫಲ್ಯಃ ಸಂಸದೀಶಃ ಸದೋದಿತಃ ॥೧೧೮॥

ಭಾವಾಭಾವವಿನಿರ್ಮುಕ್ತೋ ಭಾವಿತೋ ಭಾರೂಪೋ ಹರಃ ।
ಸರ್ವಾಶೀ ತೀತತ್ಸಾರತಟಂ(?) ಸಾಂಬಃ ಸಾರಸ್ವತಪ್ರದಃ ॥೧೧೯॥

ಸರ್ವಕೃತ್ಸರ್ವನಾತ್ಸರ್ವ ಮಯತತ್ತ್ವಾವಲಂಬಕಃ ।
ಕೇಕೀ ಕೇಕಾಕೇಳಿಕರಃ ಕೋಕೋ ಬಾಲವಿನಾಶಕಃ ॥೧೨೦॥

ದಕ್ಷಾತಿಥ್ಯ ವಿರಹಿತ ವಿಹಾರೀ ವೀರ್ಯಬಂಧಿತಃ ।
ವಿಶ್ರಾಂತಿ ಭೂಮಿವಸತೋ ವಿದ್ಯಾಹರ್ತಾ ವಿಬೋಧಕಃ ॥೧೨೧॥

---

ವಿಸ್ತಾರವಾದ ಕಲೆಯಿಂದ ಪೂರ್ಣನಾದವನು. ದೇವರಾಕ್ಷಸರಿಂದ ನಮಸ್ಕೃತನಾದವನು. ಮೋಕ್ಷಪ್ರದವಾದ ತೀರ್ಥವುಳ್ಳವನು. ಅಸದೃಶವಾದ ಪಾಂಡಿತ್ಯವುಳ್ಳವನು. ಯಾರಿಂದಲೂ ತಡೆಯಲಾಗದವನು. ಉಪಾಧಿವಿರಹಿತನು. ಪ್ರಕಾಶಮಾನವಾದ ಕಿರಣವುಳ್ಳವನು. ಪ್ರಪಂಚಕ್ಕೆ ಸೂತ್ರಪ್ರಾಯನು. ಮೃದುಸ್ವಭಾವದವನು. ವಜ್ರಾಯುಧದಂತಿರುವವನು. ಸಂಪೂರ್ಣವಾದ ಶಾಂತಗುಣವುಳ್ಳವನು. ಸರ್ವವನ್ನೂ ಸಫಲಗೊಳಿಸುವವನು, ಸಭಾಪತಿಯು, ಯಾವಾಗಲೂ ಉದಯಿಸಿರುವವನು. ॥೧೧೭-೧೧೮॥

ಭಾವವಸ್ತುಗಳನ್ನಾಗಲಿ, ಅಭಾವವಸ್ತುಗಳನ್ನಾಗಲಿ, ಹೊಂದದೇ ಇರುವವನು, ಊಹೆಗೆ ಸಿಲುಕುವವನು, ತೇಜೋರೂಪಿಯು, ಪಾಪನಿವಾರಕನು, ಎಲ್ಲವನ್ನೂ ಭಕ್ಷಿಸುವವನು, ಸಂಸಾರದಡವನ್ನು ಕಂಡವನು, ಪಾರ್ವತೀಸಹಿತನು, ಸರಸ್ವತಿಯ ಸಂಪತ್ತನ್ನು ಅನುಗ್ರಹಿಸುವವನು, ಸರ್ವವಸ್ತುಗಳನ್ನೂ ಸೃಷ್ಟಿಸುವವನು, ಸರ್ವವಸ್ತುಗಳನ್ನೂ ಅಸೂಯೆಯಿಂದ ಕಾಣುವವನು (ಜಿತೇಂದ್ರಿಯನು), ಸರ್ವತತ್ತ್ವವನ್ನೂ ಪ್ರಕಾಶಪಡಿಸುವವನು, ನವಿಲುಗಳ ಕೇಕಾರವದಿಂದ ಆನಂದಪಡುವವನು, ದುಃಖನಾಶಕನು, ಚಿಕ್ಕ ವಿಘ್ನೇಶ್ವರರೂಪದಿಂದ ತೋರಿಬರುವವನು. ॥೧೧೯-೧೨೦॥

ದಕ್ಷಬ್ರಹ್ಮನ ಆತಿಥ್ಯವನ್ನು ಸ್ವೀಕರಿಸಿದೆ, ಅವನನ್ನು ನಾಶಗೊಳಿಸಿದವನು,

ವೀರಪ್ರಿಯೋ ವೀತಭಯೋ ವಿಂಧ್ಯದರ್ಪವಿನಾಶನಃ ।
ಭೇತಾಳನಟನಪ್ರೀತೋ ವೇತಂಡಕುಹರಂ ಭರಃ ॥೧೨೨॥

ವೇಲಾತಿಲಂಘಿಕರಣೋ ವಿಲಾಸೀ ವಿತನೋ ಮರುಃ ।
ವೈರಸ್ಯಸೇವಾಧಿವಿಶ್ವಭೋಕ್ತಾ ಸರ್ವಾರ್ಥಸಂಸ್ಥಿತಃ ॥೧೨೩॥

ಮಹಾಗತೋರ್ ಮಹಾಭೋಕ್ತಾ ಮಹಾಸಂವಿಸ್ಮಯೋ ಮಧುಃ ।
ಮನೋ ವಚೋಭಿಃ ಸತ್ರಾಪ್ರೋಕ್ಯೋ ಮಹಾವಿಲಿಕೃತಾಲಯಃ ॥೧೨೪॥

ಅನಹಂಕೃತಿರಚ್ಛೇದ್ಯಃ ಸ್ವಾನಂದೈಕಮಯಾಕೃತಿಃ ।
ಸಂವರ್ತಾಗ್ನ್ಯುವಿತಃ ಸರ್ವಃ ಸುವ್ಯಾಸ್ಯಾಃ ಸರ್ವಸಂಗ್ರಹಃ ॥೧೨೫॥

ಸಂಪನ್ನಸ್ಸಕೃಪಸ್ಸತ್ರೀ ಸದೋತ್ಥಃ ಸಕಲೋರ್ಜಿತಃ ।
ಸಂಪ್ರವೃದ್ಧಃ ಸನ್ನಿಕೃಷ್ಟಃ ಸವಿನಷ್ಟಃ ಸಮಗ್ರದೃಕ್ ॥೧೨೬॥

ತನ್ನ ಪರಾಕ್ರಮದಿಂದ ಸರ್ವರನ್ನೂ ಕಟ್ಟಿಹಾಕಿದವನು, ವಿಶ್ರಾಂತಿಪ್ರದವಾದ ಭೂಮಿಯಲ್ಲಿ ವಾಸಮಾಡುವವನು, ವಿದ್ಯೆ (ಜ್ಞಾನ) ಯನ್ನೂ ತನ್ನ ಕಡೆಗೆ ಎಳೆದು ಕೊಳ್ಳುವವನು, ಜ್ಞಾನಪ್ರದನು, ವೀರರಲ್ಲಿ ಅಭಿಮಾನವುಳ್ಳವನು, ಭಯವನ್ನು ಕಳೆದುಕೊಂಡಿರುವವನು, ವಿಂಧ್ಯಪರ್ವತದ ಗರ್ವವನ್ನು (ಅಗಸ್ತ್ಯಋುಷಿಯ ಮೂಲಕ) ಹೋಗಲಾಡಿಸಿದವನು, ಭೇತಾಳಗಳ ನಾಟ್ಯದಲ್ಲಿ ಪ್ರೀತಿತೋರಿಸು ವವನು, ಭಯಂಕರವಾಗಿ ಹಿಮಗಿರಿಯ ಗುಹೆಯಲ್ಲಿ ವಾಸಿಸಿದವನು. ॥೧೨೧-೧೨೨॥

ಅತಿಶಯವಾದ ಸಮುದ್ರದ ದಡವನ್ನು ದಾಟಿಸುವ ಸಾಧಕನು, ವಿಲಾಸ ಮಯನಾದವನು, ನಿರ್ಗತವಾದ ಅಜ್ಞಾನವುಳ್ಳವನು, ಮರುಭೂಮಿ ಸ್ವರೂಪನು, ವಿರಸವಾದ ವಸ್ತುಗಳಿಂದಲೂ ಸೇವಿಸಲ್ಪಡುವವನು, ವಿಶ್ವವ್ಯಾಪಿಯು, ವಿಶ್ವವನ್ನೇ ಭಕ್ಷಿಸುವವನು, ಮಹತ್ತಾದ ಜ್ಞಾನಸ್ವರೂಪಿಯು, ಮಧುರೂಪಿಯು, ಮನಸ್ಸು, ವಚಸ್ಸು ಮುಂತಾದವುಗಳಿಂದ ದೊರೆಯುತಕ್ಕವನು, ಮಹತ್ತಾದ ಗುಹೆಯನ್ನೇ ಆಲಯವನ್ನಾಗಿ ಉಳ್ಳವನು. ॥೧೨೩-೧೨೪॥

ಅಹಂಕಾರ ರಹಿತನು, ನಾಶಕ್ಕೆ ಎಂದೂ ಸಿಕ್ಕದವನು, ಕೇವಲ ಆನಂದ ಮಯವಾದ ಆಕಾರವುಳ್ಳವನು, ಪ್ರಳಯಕಾಲದಲ್ಲಿ ಪ್ರಪಂಚವನ್ನೇ ಪರಿಶುದ್ಧಗೊಳಿ ಸುವವನು, ಶ್ರೇಷ್ಠವಾದ ವಸ್ತ್ರವುಳ್ಳವನು, ಎಲ್ಲವನ್ನೂ ಒಂದುಕಡೆ ಕೂಡಿಹಾಕು ವವನು, ಸಂಪತ್ತಿನಿಂದ ಕೂಡಿದವನು, ದಯಾಶಾಲಿಯು, ಸತ್ರವನ್ನು ಇಡುವವನು,

ಸಮಯಸ್ಥಃ ಸಮುದ್ರಸ್ಥಃ ಸಂಪ್ರಹೃಷ್ಟಸಮುದ್ಗಕಃ ।
ಸಂಪೃಷ್ಟಃ ಸಂಪ್ರಮರ್ದೀ ಚ ಸೂತ್ರಮೂಲಃ ಸಪ್ರಕಾಶಃ ।೧೨೭॥

. . . . . . ಸಪ್ತಶೀಲಸ್ಸದಾದ್ವಯಃ ।
ಸತ್ವಸಂಸ್ಥಃ ಸುಷುಪ್ತಿಸ್ಥಃ ಸುತಲ್ಪೋ ಸ ಸ್ವರೂಪಗಃ ॥೧೨೮॥

ಸವಿಕಲ್ಪೋಲ್ಪಾಸಮುಕ್ತಃ (?) ಸಮೋ ನೀರಾಗಚೇತನಃ ।
ಆದಿತ್ಯವರ್ಣಃ ಸುಜ್ಯೋತಿಃ ಸಮ್ಯದರ್ಶನತತ್ಪರಃ ॥೧೨೯॥

ಮಹಾತಾತ್ಪರ್ಯನಿಲಯಃ ಪ್ರತ್ಯಗ್ಬ್ರಹ್ಮೈಕ್ಯ ನಿಶ್ಚಯಃ ।
ಪ್ರಪಂಚೋ ಲಾಸ್ಯನಿರ್ಮುಕ್ತಃ ಪ್ರತ್ಯಕ್ಷಃ ಪ್ರತಿಭಾತ್ಮಕಃ ॥೧೩೦॥

---

ಸದಾ ಜಾಗ್ರದವಸ್ಥೆಯಲ್ಲಿರುವವನು, ಕಲಾವಿಶಿಷ್ಟನು, ಜಯ ಹೊಂದುವವನು, ಅತಿಶಯವಾಗಿ ಬೆಳೆದವನು, ಸರ್ವರಿಗೂ ಸಮೀಪಗತನಾಗಿರುವವನು, ಪ್ರಪಂಚವನ್ನೇ ಮುಳುಗಿಸುವ ಸಾಮರ್ಥ್ಯವುಳ್ಳವನು, ಸಂಪೂರ್ಣ ದೃಷ್ಟಿಯುಳ್ಳವನು. ॥೧೨೫-೧೨೬॥

ಸಮಯವನ್ನು ತಿಳಿದವನು, ಸಮುದ್ರದಲ್ಲಿ ನೆಲಸಿರುವವನು, ಹೃದಯಾಂತರಾಳದ ಸಂಪುಟದಲ್ಲಿ ಪ್ರವೇಶಿಸುವವನು, ಸಂಪೂರ್ಣವಾಗಿರುವವನು, ಶತ್ರುಗಳನ್ನೂ ಪೂರ್ಣವಾಗಿ ಅರಿಯುವವನು, ಪ್ರಪಂಚಸೂತ್ರಕ್ಕೆ ಮೂಲಭೂತನಾದವನು, ತೇಜೋವಿಶಿಷ್ಟನು, ಸಪ್ತಶೀಲಗಳುಳ್ಳವನು, ಸರ್ವದಾ ಏಕರೂಪದಲ್ಲಿರುವವನು, ಸಕಲ ಪ್ರಾಣಿಗಳಲ್ಲಿಯೂ ಅಡಗಿರುವವನು, ಸುಷುಪ್ತ್ಯವಸ್ಥೆಯಲ್ಲಿರುವಂತೆ ಕಾಣುವವನು, ಸುಖ ಶಯನವುಳ್ಳವನು, ಸ್ವಸ್ವರೂಪದಲ್ಲಿ ಗೋಚರಿಸುವವನು. ॥೧೨೭-೧೨೮॥

ಊಹೆಯಿಂದರಿತ ಆಕಾರವುಳ್ಳವನು, ಭಕ್ತರಿಗೆ ಮುಕ್ತಿಯನ್ನು ಅನುಗ್ರಹಿಸುವವನು, ಸಮವಾದ ದೃಷ್ಟಿಯುಳ್ಳವನು, ಅನುರಾಗವಿಲ್ಲದ ಚೇತನವುಳ್ಳವನು, ಸೂರ್ಯನಂತೆ ಹೊಳೆಯುವವನು, ಜ್ಯೋತೀರೂಪನು, ಪಾರ್ವತಿಯಿಂದ ಆವೃತವಾದ ಭಾಗವನ್ನೇ ಸದಾ ನೋಡುತ್ತಿರುವವನು, ನಾನಾವಿಧವಾದ ತಾತ್ಪರ್ಯಗಳು ತೋರುವಂತಿರುವವನು, ಜ್ಞಾನಬ್ರಹ್ಮಸ್ವರೂಪಿಯು, ಪ್ರಪಂಚರೂಪನು, ತಾಂಡವ ಲಾಸ್ಯದಲ್ಲಿ ಇಡಲ್ಪಟ್ಟ ಆಸೆಯುಳ್ಳವನು, ಎದುರಿಗೆ ಕಾಣಿಸುವವನು, ಸ್ವಯಂ ಪ್ರಕಾಶಕನು. ॥೧೨೯-೧೩೦॥

ಪ್ರವೇಕಃ ಪ್ರಮುದಾರ್ಧಾಂಗಃ ಸುನರ್ತನಪರಾಯಣಃ ।
ಯೋಗೀ ಯೋಗಪಥಾಭೂಪಃ ಯಕ್ಷಗಂಧರ್ವವಂದಿತಃ ॥೧೩೧॥

ಜಟಾಲಸ್ತರಳಾಪಾಂಗೋ ಮಹಾನಟನಲಂಪಟಃ ।
ಪಾಟಲಾಂಶುಃ ಪಟುತರಃ ಪಾರಿಜಾತದ್ರುಮೂಲಗಃ ॥೧೩೨॥

ಪಾಪಾಟವೀಬೃಹದ್ಭಾನುರ್ಭಾನುಮತ್ಕೋಟಿಕೋಟಿಭಾಃ ।
ಕೋಟಿಕಂದರ್ಪಸೌಭಾಗ್ಯಸುಂದರೋ ಮಧುರಸ್ಮಿತಃ ॥೧೩೩॥

ಲಾಸ್ಯಭೂತಚಕೋರಾಣಾಂ ಪೂರ್ಣೇಂದುಃ ಪುಣ್ಯಗೋಚರಃ ।
ರುದ್ರಾಕ್ಷದ್ರುಮಲಾಕಲ್ಪ ಮಹಾಕಾಮಾಕ್ಷಸದ್ಯುತಿಃ ॥೧೩೪॥

ಅಮೂಲ್ಯಮಣಿಸಂಭಾಸ್ವತ್ಕ್ವಣತ್ಕಂಕಣಸತ್ಕರಃ ।
ಚಿಚ್ಛಕ್ತಿಲೋಚನಾನಂದಕಂದಲಃ ಕುಂದಪಾಂಡರಃ ॥೧೩೫॥

---

ಸದಾ ಚಿತ್ಸ್ವರೂಪಳಾದ ಪಾರ್ವತಿಗೆ ಅರ್ಧಭಾಗವನ್ನಿತ್ತಿರುವವನು, ಸೊಗಸಾದ ನಾಟ್ಯಕಲೆಯಲ್ಲಿ ಆಸಕ್ತನಾದವನು, ಯೋಗದಲ್ಲಿ ನಿರತನಾದವನು, ಯೋಗಮಾರ್ಗದಲ್ಲಿ ಸದಾ ಸಂಚರಿಸುವವನು, ಯಕ್ಷರಿಂದಲೂ, ಗಂಧರ್ವರಿಂದಲೂ ಪೂಜಿತನಾದವನು, ಜಟಾಧಾರಿಯು, ಚಂಚಲವಾದ ಕಡೆಗಣ್ಣುಳ್ಳವನು, ನಾಟ್ಯ ಮಾಡುವುದರಲ್ಲಿ ಹೆಚ್ಚು ಆಸಕ್ತನಾದವನು, ಪಾಟಲವರ್ಣದ ಕಿರಣಗಳುಳ್ಳವನು, ಪಟುವಾದವನು, ಪಾರಿಜಾತವೃಕ್ಷದ ಬುಡದಲ್ಲಿರುವವನು. ॥೧೩೧-೧೩೨॥

ಪಾಪವೆಂಬ ಮಹಾರಣ್ಯಕ್ಕೆ ಸೂರ್ಯನಂತಿರುವವನು, ಕಿರಣಗಳಿಂದ ಕೂಡಿದವನು, ಕೋಟ್ಯಂತರ ಕಿರಣಗಳುಳ್ಳವನು, ಕೋಟಿಜನ ಮನ್ಮಥರಂತೆ ಸುಂದರನಾಗಿ ಕಾಣುವವನು, ಮಧುರವಾದ ಮುಗುಳ್ನಗೆಯುಳ್ಳವನು, ರುದ್ರಾಕ್ಷಿಯ ಮರದಲ್ಲಿ ಭಕ್ತರ ಇಷ್ಟಾರ್ಥಗಳನ್ನು ಪೂರ್ಣಗೊಳಿಸುವವನು, ಲಾಸ್ಯವೆಂಬ ಚಕೋರ ಪಕ್ಷಿಗಳಿಗೆ ಚಂದ್ರನಂತೆ ಕಳೆಗಟ್ಟಿಸುವವನು, ಪುಣ್ಯಶಾಲಿಗಳಿಗೆ ಮಾತ್ರ ಗೋಚರನಾಗುವವನು. ॥೧೩೩-೧೩೪॥

ಅಮೂಲ್ಯವಾದ ಅನೇಕ ರತ್ನಸಮೂಹದಿಂದ ನಿರ್ಮಿತವಾದ ಕೈಬಳೆಗಳನ್ನು ಧರಿಸಿ ಧ್ವನಿಗೈಸುವವನು, ಚಿಚ್ಛಕ್ತಿಸ್ವರೂಪಳಾದ ದೇವಿಯನ್ನು ನೋಡುವುದರಲ್ಲಿ ಆಸಕ್ತನಾದವನು, ಕುಂದಪುಷ್ಪದಂತೆ ಶುಭ್ರವರ್ಣವಿಶಿಷ್ಟನು, ಹೊಂದಲಾಗದ

ಅಗಮ್ಯಮಹಿಮಾಂಭೋಧಿರನೇಕಯಶಸಾಂ ನಿಧಿಃ ।
ಚಿದಾನಂದನಟಾಧೀಶಃ ಸಮುಜ್ಜ್ವಲವಪುರ್ಧರಃ ॥೧೩೬॥

ಚಿದೇಕರಸಸಂಪೂರ್ಣಃ ಶ್ರೀಶಿವಃ ಶ್ರೀಮಹೇಶ್ವರಃ ॥೧೩೭॥

ಏತತ್ತೇ ಕಥಿತಂ ದೇವಿ ನಟರಾಜಸ್ಯ ಸುಂದರಂ ।
ನಾಮ್ನಾಂ ಸಹಸ್ರಮತ್ಯಂತಂ ಗೋಪ್ಯಂ ನೈತತ್ಪ್ರಕಾಶಯೇತ್ ॥೧೩೮॥

ಸರ್ವಸಿದ್ಧಿಕರಂ ಪುಣ್ಯಂ ಸರ್ವವಿದ್ಯಾವಿಶಾರದಂ ।
ಆಪತ್ಕಾಲಮಹಾವ್ಯಾಧಿಜ್ವರಕುಷ್ಠಾದಿನಾಶನಂ ॥೧೩೯॥

ಅತ್ಯುತ್ಪಾತಭಯಕ್ಷೋಭಕ್ಷುದ್ರಶಾಂತಿದಕಾರಣಂ ।
ಕೂಷ್ಮಾಂಡಭೂತವೇತಾಳಗ್ರಹಾಪಸ್ಮಾರನಾಶನಂ ॥೧೪೦॥

---

ಮಹಿಮೆಯೆಂಬ ಸಮುದ್ರವುಳ್ಳವನು, ಸಕಲ ವಿಧವಾದ ಕೀರ್ತಿಗೂ ನಿಧಿಯಂತಿರುವವನು, ಚಿದಾನಂದರೂಪನು, ನಟರಾಜನು, ಪ್ರಕಾಶಮಾನವಾದ ದೇಹವನ್ನು ಧರಿಸಿರುವವನು. ॥೧೩೫-೧೩೬॥

ಚಿತ್ತೆಂಬ (ಜ್ಞಾನ) ರಸದಿಂದ ಪೂರ್ಣನಾದವನು, ಸದಾ ಸಂಪದ್ಯುಕ್ತನಾಗಿ ಮಂಗಳಪ್ರದನಾಗಿರುವವನು, ಮಹೇಶ್ವರನೆನಿಸಿದವನು" ಈ ಶಿವಸಹಸ್ರನಾಮಗಳನ್ನು ಸಾಕ್ಷಾತ್ಪರಮೇಶ್ವರನೇ ಪಾರ್ವತಿಗೆ ವಿವರಿಸಿ ಹೇಳುತ್ತಾ "ಎಲೌ ದೇವಿಯೇ, ನಟರಾಜನ ದಿವ್ಯ ಸಹಸ್ರನಾಮಸ್ತೋತ್ರವನ್ನು ಈಗ ನಿನ್ನ ಮೇಲಿನ ಅಭಿಮಾನದಿಂದ ಹೇಳಿರುವೆನು. ಇದು ಅತ್ಯಂತ ಗೋಪ್ಯವಾದದ್ದು. ಅನಧಿಕಾರಿಗಳಿಗೆ ಇದು ಪ್ರಕಾಶನೀಯವಾದುದಲ್ಲ. ॥೧೩೭-೧೩೮॥

ಇದನ್ನು ಕೇಳಿದವರ ಸಕಲ ಇಷ್ಟಾರ್ಥಗಳೂ, ಸಿದ್ಧಿಸುವುವು. ಸಕಲ ವಿದ್ಯೆಯನ್ನೂ ಇದು ಅನುಗ್ರಹಿಸುವುದು. ಆಪತ್ಕಾಲದಲ್ಲಿಯೂ, ಮಹಾವ್ಯಾಧಿ ಅಡಸಿದಾಗಲೂ, ಜ್ವರಕುಷ್ಠಾದಿ ರೋಗಗಳು ವ್ಯಾಪಿಸಿದಾಗಲೂ ಇದು ಆ ಕಷ್ಟಗಳನ್ನೆಲ್ಲಾ ಪರಿಹರಿಸುವುದು. ಅತ್ಯುತ್ಪಾತ, ಭಯ, ಕಳವಳ ಇವುಗಳನ್ನೆಲ್ಲಾ ಪರಿಹರಿಸಿ ಶಾಂತಿಯನ್ನು ಒದಗಿಸುವುದು. ಕೂಷ್ಮಾಂಡ ಭೂತಗಳು, ಭೇತಾಳಗಳು, ಸಕಲ ದುಷ್ಟ ಗ್ರಹಗಳು, ಅಪಸ್ಮಾರಾದಿ ಮಹಾವ್ಯಾಧಿಗಳು ಇವುಗಳನ್ನೆಲ್ಲಾ ಇದು ನಿವಾರಿಸುವುದು. ॥೩೯-೧೪೦॥

ಮಯಾ ಸಹಸ್ರನಾಮೇದಂ ದತ್ತಂ ತದ್ವಿಷ್ಣವೇ ಪುರಾ।
ವಿಷ್ಣುನಾ ತತ್ರ ಹಾಲಾಸ್ಯೇ ಸ್ತುವತೇಽಶಂ ಪತಂಜಲಿಃ ॥೧೪೧॥

ಅಗಸ್ತ್ಯೋಽಪಿ ನಟೇಶಾನಂ ರಜತಸ್ಯ ಸಭಾಪತಿಂ ॥೧೪೨॥

॥ ಶ್ರೀಸ್ಕಂದ ಉವಾಚ ॥

ಕದಂಬವನ್ಯಾಂ ಶಿವರಾಜಧಾನ್ಯಾಂ
ಪಾಂಡ್ಯೇಶಕನ್ಯಾಪತಿಮೀಕ್ಷ್ಯ ಧನ್ಯಃ ।
ವಿರಾಜಮಾನಂ ಕಲಧೌತನೇಷ್ಟ್ಯಾಂ(?)
ನಟೇಶ್ವರಂ ನಾಮಸಹಸ್ರಸಂಸ್ತುವನ್ ॥೧೪೩॥

ಇತಿ ಶ್ರೀಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ ನಟೇಶಸಹಸ್ರನಾಮ
ಕಥನಂ ನಾಮ ಷಟ್ಚತ್ವಾರಿಂಶೋಽಧ್ಯಾಯಃ

---

ಈ ಸಹಸ್ರನಾಮಸ್ತುತಿಯನ್ನು ಪಾರ್ವತಿಯಿಂದ ನಾನು (ಸ್ಕಂದ) ಅರಿತೆನು. ನನ್ನಿಂದ ವಿಷ್ಣುವು ತಿಳಿದುಕೊಂಡನು. ಹಾಗೆಯೇ ವಿಷ್ಣುವು ಪತಂಜಲಿಗೂ, ಪತಂಜಲಿಯು ಅಗಸ್ತ್ಯನಿಗೂ ವಿವರಿಸಿ ಉಪದೇಶಿಸಿದರು. ಅಗಸ್ತ್ಯಮಹರ್ಷಿಯು ಇದೇ ಸಹಸ್ರನಾಮಗಳಿಂದ ರಜತಮಯವಾದ ಸಭೆಯಲ್ಲಿ ಮಂಡಿಸಿದ್ದ ಮಹಾದೇವನನ್ನು ಅರ್ಚಿಸಿ, ಧ್ಯಾನಿಸಿ ಮುಕ್ತನಾದನು. ॥೧೪೧-೧೪೨॥

ಮುಖ್ಯವಾಗಿ ಶಿವರಾಜಧಾನಿಯೆನಿಸಿದ ಕದಂಬವನದಲ್ಲಿ ಪಾಂಡ್ಯರಾಜಕುಮಾರಿಗೆ (ಮೀನಾಕ್ಷಿಗೆ) ಪತಿಯೆನಿಸಿದ ಸುಂದರೇಶ್ವರನನ್ನು ನೋಡಿದವನು ಧನ್ಯನೆನಿಸುವನು. ಅಲ್ಲದೆ ಅಲ್ಲಿರುವ ಸುವರ್ಣಮಯವಾದ ಮಂಟಪದಲ್ಲಿ ಪ್ರಕಾಶಿಸುವ ನಟರಾಜಮೂರ್ತಿಯನ್ನು ನೋಡಿ ನಟರಾಜ ಸಹಸ್ರನಾಮಸ್ತೋತ್ರದಿಂದ ಭಜಿಸಿದವನು, ಪರಶಿವನ ಅನುಗ್ರಹಕ್ಕೆ ಪಾತ್ರನಾಗುವನು ಎಂಬುದರಲ್ಲಿ ಸಂಶಯವಿಲ್ಲ. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹಾಮುನಿಗಳಿಗೆ ನಟರಾಜಸಹಸ್ರನಾಮಗಳನ್ನೂ ಅದರ ಮಹಿಮೆಯನ್ನೂ ವಿವರಿಸಿ ಹೇಳಿದನು. ॥೧೪೩॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ನಟೇಶಸಹಸ್ರನಾಮ
ಕಥನವೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

### ಸಪ್ತಚತ್ವಾರಿಂಶೋಽಧ್ಯಾಯಃ

॥ಸ್ಕಂದ ಉವಾಚ ॥

ಹಾಲಾಸ್ಯನಗರೇ ವಿಷ್ಣುರನಘಾದಿಶಿವಾರ್ಚಕೈಃ ।
ವೇಗವತ್ಯಾಃ ಸದಾ ಭಾಗೇ ಸಂಸ್ಥಿತೋ ಭಕ್ತಿಕಾಮುತಃ ॥೧॥

ಸಂಪೂಜ್ಯ ಸುಂದರೇಶಾನಂ ಶಿವಾನುಜ್ಞಾಮವಾಪ್ಯ ಚ ।
ಸಂಸ್ತುವೀತ ಮಹೇಶಾನಂ ಭಕ್ತಿಯುಕ್ತೋಂಬಿಕಾಸಖಂ ॥೨॥

॥ ಅನಘ ಉವಾಚ ॥

ನಮಸ್ತೇ ಹಾಲಾಸ್ಯನಟನಪಟುಪಾದಾಬ್ಜ ಭಗವನ್
ಸುಮೀನಾಕ್ಷೀನಾಥ ತ್ರಿದಶಪತಿ ಸಂಪೂಜಿತಪದ ।

---

## ನಲವತ್ತೇಳನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಗೆ ಶಿವಕ್ಷೇತ್ರಮಹಿಮೆಯನ್ನು ವಿವರಿಸುತ್ತಾ ಹೀಗೆಂದನು. ಮಹಾವಿಷ್ಣುವು ಹಾಲಾಸ್ಯನಗರದಲ್ಲಿ ಮಹಾನುಹಿಮರಾದ ಅನಘನೇ ಮೊದಲಾದ ಶಿವಾರ್ಚಕರೊಡನೆ ವಾಸಮಾಡುವನು. ಆ ನಗರವು ವೇಗವತೀನದಿಯ ದಡದಲ್ಲಿರುವುದು. ದಿವ್ಯಸುಂದರವಾದ ಸುಂದರೇಶ್ವರವಿಗ್ರಹವನ್ನು ದರ್ಶನಮಾಡುತ್ತಾ, ದೇವಿಯನ್ನು ಪ್ರಾರ್ಥಿಸುತ್ತಾ ಹೀಗೆ ಆಗಾಗ ಸ್ತೋತ್ರಮಾಡುವನು. ॥೧-೨॥

ಹಾಲಾಸ್ಯಕ್ಷೇತ್ರದಲ್ಲಿ ಸರ್ವದಾ ನಾಟ್ಯವಾಡುವ ಪಾದಕಮಲವುಳ್ಳವನೇ ಮೀನಾಕ್ಷೀಪತಿಯೇ, ದೇವೇಂದ್ರನಿಂದಲೂ ಪೂಜಿತವಾದ ಪಾದಕಮಲವುಳ್ಳವನೇ,

ಪ್ರಸೀದೇಶಾನಾದ್ಯಪ್ರಥಿತನಿಗಮಾಂತೇಷು ಗದಿತಂ
ಭವಂತಂ ಧ್ಯಾಯನ್ವೈ ಹೃದಯಕಮಲೇ ಚಾತ್ರ ನಿವಸೇ ॥೩॥

ಇತ್ಥಂ ಸ ವಿಷ್ಣವೇ ಪ್ರಾದಾದ್ವೇಗವತ್ಯಾಸ್ತಟೋತ್ತರೇ।
ಸ್ಥಾನಂ ತದಲಕಾಖ್ಯಂ ವೈ ಸತೀರ್ಥಸ್ಸುಂದರೇಶ್ವರಃ ॥೪॥

ಹಾಲಾಸ್ಯದಕ್ಷಿಣೇ ಸ್ಥಾನಂ ಶಾಲಿವಾಟೇಶ್ವರಾಭಿಧಂ।
ಮುನಿಭಿರ್ದೇವಗಂಧರ್ವಘಟಜೇನ ಚ ಸೇವಿತಂ ॥೫॥

ವಿಷ್ಣುನಾ ಸೇವಿತಂ ನಿತ್ಯಂ ಶಯಾನೇನ ಸುಪೂಜಿತಃ।
ಯತ್ರೋತ್ತರವಹಾ ಶಂಭೋಃ ಸಾಂನಿಧ್ಯೇ ತಾಮ್ರಪರ್ಣಿಕಾ ॥೬॥

ದೇವೀ ಕಾಂತಿಮತೀ ತತ್ರ ಚಂದ್ರಾತ್ಕಾಂತತರಾನನಾ।
ಶಾಲಿವಾಟೇಶ್ವರಸ್ಯಾಗ್ರೇ ತಾಮ್ರಪರ್ಣೀ ಜಲಾಪ್ಲುತಂ ॥೭॥

---

ನನಗೆ ಪ್ರಸನ್ನನಾಗು. ನಿನ್ನ ಗುಣರಾಶಿಗಳು ಸಕಲ ವೇದ ವೇದಾಂತಗಳಲ್ಲಿಯೂ ಪ್ರಸಿದ್ಧಿಗೊಂಡಿರುವುವು. ನಾನೂ ಸಹ ಅದನ್ನೇ ಅನುಸಂಧಾನಮಾಡುತ್ತಾ ನಿನ್ನ ಸ್ವರೂಪವನ್ನು ನನ್ನ ಹೃದಯಕಮಲದಲ್ಲಿ ಧ್ಯಾನಮಾಡುತ್ತಿರುವೆನು. ॥೩॥

ಹೀಗೆ ಮಹಾವಿಷ್ಣುವು ಸರ್ವದಾ ಸುಂದರೇಶ್ವರನನ್ನು ಧ್ಯಾನಿಸುತ್ತಾ, ವೇಗವತೀ ನದಿಯ ಉತ್ತರದಲ್ಲಿರುವ ಅಲಕನಾಮಕವಾದ ಸುಂದರೇಶ್ವರತೀರ್ಥದಲ್ಲಿ ಮಹೇಶ್ವರನನ್ನು ಸೇವಿಸುತ್ತಾ ನೆಲಸಿರುವನು. ಹಾಗೆಯೇ ಹಾಲಾಸ್ಯಕ್ಷೇತ್ರದ ದಕ್ಷಿಣಭಾಗದಲ್ಲಿ ಶಾಲಿವಾಟೇಶ್ವರಕ್ಷೇತ್ರವೆಂಬ ಪವಿತ್ರಪ್ರದೇಶವೊಂದಿರುವುದು. ಅದನ್ನು ಸಕಲ ದೇವತೆಗಳೂ, ಮುನಿಗಳೂ, ಗಂಧರ್ವರೂ, ಅಗಸ್ತ್ಯಮಹರ್ಷಿಯೂ ಸೇವಿಸುತ್ತಿರುವರು. ॥೪-೫॥

ಅಲ್ಲಿ ವಿಷ್ಣುವು ಸುಖಶಯನದಲ್ಲಿದ್ದು ಮಹಾದೇವನನ್ನು ಪೂಜಿಸುತ್ತಿರುವನು. ಅದರ ಉತ್ತರಭಾಗದಲ್ಲಿ ಶಿವಲಿಂಗದ ಸಮೀಪದಲ್ಲಿಯೇ ತಾಮ್ರಪರ್ಣೀ ನದಿಯು ಹರಿಯುತ್ತಿರುವುದು. ಅಲ್ಲಿ ದೇವಿಯು ಕಾಂತಿವಿಶಿಷ್ಟಳಾಗಿ ಚಂದ್ರನಿಗಿಂತಲೂ ಅತಿಯಾಗಿ ಪ್ರಕಾಶಿಸುವ ಮುಖದಿಂದ ಶೋಭಿಸುತ್ತಿರುವಳು. ಅಲ್ಲಿರುವ ಶಾಲಿವಾಟೇಶ್ವರಕ್ಷೇತ್ರದ ಮುಂಭಾಗದಲ್ಲಿಯೇ ತಾಮ್ರಪರ್ಣೀನದಿಯು ಜಲಭರಿತವಾಗಿ ಹರಿಯುತ್ತಿರುವುದು. ॥೬-೭॥

ಮಾರ್ಗಶೀರ್ಷೇ ಮಾಸಮಾತ್ರಂ ಶಾಲಿವಾಟೇಶ್ವರಂ ನಮನ್ ।
ಕೃತಕೃತ್ಯೋ ನರೋ ಭೂಯಾತ್ಸರ್ವಪಾಪೈಃ ಪ್ರಮುಚ್ಯತೇ ॥೮॥

ತಾಮ್ರಪರ್ಣೀ ನದೀ ತತ್ರ ಕಲಿಕಲ್ಮಷನಾಶಿನೀ ।
ತಸ್ಯಾಂ ಸ್ನಾತ್ವಾ ಶಾಲಿವಾಟೀನಾಥಂ ಕಾಂತಿಮತೀಂ ಶಿವಾಂ ॥೯॥

ಸೋಮಸೂರ್ಯಗ್ರಹಣಯೋಃ ಸ್ತಾಮ್ರಸಾಗರಸಂಗಮೇ ।
ಸ್ನಾತ್ವಾ ಸಕೃಚ್ಛ್ರದಶಕಫಲಂ ಶಿವವಿಲೋಕಿನಾಂ ॥೧೦॥

ತಾಮ್ರಪರ್ಣ್ಯಾಂ ಸರ್ವನದ್ಯಃ ಸಂಗತಾಃ ಪಾಪಹಾರಿಕಾಃ ।
ಚಿತ್ರಾ ಚ ಘಟನಾ ಸಿಂಧುರ್ವರುಣಾ ವೇಗಿನೀ ತಥಾ ॥೧೧॥

ತಾಮ್ರಪರ್ಣ್ಯಾ ತಥಾ ಮುಖ್ಯಾಸ್ತತ್ರ ಸ್ಥಾನಾನಿ ಭೂರಿಶಃ ।
ತತ್ರ ಶ್ರೀ ಶಾಲಿವಾಟೇಶಂ ಸ್ತುವನ್ನಭ್ಯರ್ಚಯದ್ಧರಿಃ ॥೧೨॥

॥ ಶ್ರೀವಿಷ್ಣುರುವಾಚ ॥

ನಮಸ್ತೇ ಶೀತಾಂಶುದ್ಯುತಿವಿಜಿತದೇಹಾವ ಭಗವ
ನ್ನಿತಂ ಪ್ರಾಚಾವೇದ್ಯಸ್ತುತ ಸುನೀತ್ಯಾವ ಹರ ಮಾಂ ।

---

ಮಾರ್ಗಶೀರ್ಷಮಾಸ ಪೂರ್ತಿ ಅಲ್ಲಿಯೇ ಶಾಲಿವಾಟೇಶ್ವರಕ್ಷೇತ್ರದಲ್ಲಿ ನೆಲಸಿ, ಅಲ್ಲಿರುವ ಶಿವಲಿಂಗವನ್ನು ದರ್ಶನ ಮಾಡುವವರು ಕೃತಕೃತ್ಯರೆನಿಸುವರು. ತಾಮ್ರಪರ್ಣೀನದಿಯು ಕಲಿಕಲ್ಮಷ ನಾಶಕವಾದುದು. ಅಲ್ಲಿ ಸ್ನಾನಮಾಡಿ ಶಾಲಿವಾಟೇಶ್ವರನನ್ನೂ, ಕಾಂತಿಮತೀದೇವಿಯನ್ನೂ ದರ್ಶನಮಾಡುವವರು ಸರ್ವ ಪಾಪವಿಮುಕ್ತರಾಗುವರು. ತಾಮ್ರಪರ್ಣೀನದಿಯು ಸಾಗರವನ್ನು ಸೇರುವ ಸಂಗಮ ಸ್ಥಳದಲ್ಲಿ ಸೂರ್ಯಚಂದ್ರಗ್ರಹಣ ಕಾಲಗಳಲ್ಲಿ ಸ್ನಾನಮಾಡಿ ಶಿವದರ್ಶನ ಮಾಡಿದ ವರಿಗೆ ದಶಕೃಚ್ಛ್ರಾಚರಣೆಯ ಸುಕೃತವು ದೊರಕುವುದು. ॥೮-೯-೧೦॥

ತಾಮ್ರಪರ್ಣಿಯಲ್ಲಿ ಅನೇಕ ಪಾಪನಾಶಕಗಳಾದ ನದಿಗಳು ಸೇರುತ್ತವೆ. ಚಿತ್ರಾ, ಘಟನಾ, ಸಿಂಧು, ವರಣಾ, ವೇಗಿನೀ ಮುಂತಾದ ನದಿಗಳು ತಾಮ್ರಪರ್ಣೀ ನದಿಗೆ ಸೇರುವ ಸ್ಥಳಗಳೆಲ್ಲಾ ಪವಿತ್ರಕ್ಷೇತ್ರಗಳೆನಿಸಿಕೊಂಡಿವೆ. ಶಾಲೀವಾಟೇಶ್ವರ ನನ್ನು ಸ್ತುತಿಸುತ್ತಾ ಮಹಾವಿಷ್ಣುವು ಅಲ್ಲಿಯೇ ಸರ್ವದಾ ನೆಲಸಿರುವನು.॥೧೧-೧೨॥

ಚಂದ್ರನನ್ನೂ ಕಾಂತಿಯಲ್ಲಿ ಮೀರಿಸಿದ ಶುಭ್ರದೇಹವುಳ್ಳವನೇ, ಭಗವಂತನೇ

ಮಹೇಶಂ ವಿಶ್ವೇಶಂ ಭವ ಭಯಹರಂ ದೈವತಮಣಿಂ
ಪ್ರಪದ್ಯೇ ಶಶ್ವತ್ತ್ವಾಂ ಗಿರಿವರ ಸುತಾಯಲ್ಲಕವಿಭುಂ ॥೧೩॥

ಹೇ ಶಾಲಿವಾಟೀಶ್ವರ ದೇವ[ಕೋಟೀರ
ರತ್ನಾಂಬುಜ ಪಾದ ಶಂಭೋ ।
ಮಗ್ನಂ ಸುದುಃಖಾಂಬುಧಿಮಧ್ಯಗಂ ತ್ವಂ
ಮಾಮುದ್ಧರ ಸ್ವಾಗಹರ ಪ್ರಸೀದ ॥೧೪॥

ನೌಮಿ ತ್ವಾಂ ಶಶಿಕಾಂತಸುಂದರ ಮುಖೀಂ ಬ್ರಹ್ಮೇಂದ್ರ ವಂದ್ಯಾಂ ಶಿವಾಂ
ಭಕ್ತಾನಾಂ ಪರಿಸೇವಿನಾಂ ತವ ಪದಂ ಮುಕ್ತಿಪ್ರದಾನೋದ್ಯತಂ ।
ಶಾಂತಾಂ ಕಾಂತಿಮತೀಂ ಮಹೇಶರಮಣೀಂ
ತ್ವಾಮಾಶ್ರಯಾಮೀಶ್ವರೀಂ ॥೧೫॥

---

ವೇದವೇದಾಂತಗಳಲ್ಲಿ ನಿರೂಪಿತಗಳಾಗಿರುವ ನಿನ್ನ ಮಹಿಮಾತಿಶಯವನ್ನು ಬೀರುತ್ತಾ ನನ್ನನ್ನು ಸಲಹು. ನೀನು ಪಾರ್ವತಿಯ ಮುಂದಲೆಯ ಹೂವಿನಂತಿರುವೆ. ಮಹೇಶ್ವರನೂ, ವಿಶ್ವೇಶ್ವರನೂ ಭವಭಯವನ್ನು ನಿವಾರಿಸುವವನೂ ಆದ ನಿನ್ನನ್ನು ನಾನು ಸದಾ ಧ್ಯಾನಮಾಡುತ್ತಿರುವೆನು. ॥೧೩॥

ಶಾಲಿವಾಟೀಶ್ವರನೇ, ನಿನ್ನ ಪಾದಕಮಲವು ಸಮಸ್ತ ದೇವತೆಗಳ ಕಿರೀಟಗತವಾದ ರತ್ನಕಾಂತಿಗಳಿಂದ ವಿರಾಜಿಸುತ್ತಿರುವುದು. ಇಂತಹ ಮಹಾಮಹಿಮನಾದ ನೀನು ದುಃಖಪೂರಿತವಾದ ಸಂಸಾರಸಾಗರದಲ್ಲಿ ಸದಾ ಮುಳುಗಿ ದುಃಖಿಸುತ್ತಿರುವ ನನ್ನನ್ನು ನೀನು ಸರ್ವದಾ ಅನುಗ್ರಹಪೂರ್ವಕವಾಗಿ ಉದ್ಧರಿಸು. ॥೧೪॥

ಚಂದ್ರಕಾಂತಶಿಲೆಯಂತೆ ಶುಭ್ರವಾದ ಮುಖಕಾಂತಿಯುಳ್ಳವಳೂ, ಬ್ರಹ್ಮೇಂದ್ರಾದಿ ದೇವತೆಗಳಿಂದ ವಂದಿತಳೂ ಆದ ದೇವಿಯೇ, ನಿನ್ನ ಪಾದಕಮಲವು ತನ್ನನ್ನು ಸೇವಿಸುವ ಭಕ್ತರಿಗೆಲ್ಲಾ ಶಾಶ್ವತವಾದ ಮುಕ್ತಿಯನ್ನು ಅನುಗ್ರಹಿಸುವುದಲ್ಲವೆ? ಶಾಂತಾತ್ಮಳಾಗಿ, ಕಾಂತಿಮತಿಯೆಂಬ ಹೆಸರಿನಿಂದ ಮಹೇಶರಮಣಿಯೆನಿಸಿರುವ ದೇವಿಯೇ, ನಾನು ನಿನ್ನನ್ನು ಸದಾ ಆಶ್ರಯಿಸಿರುವೆನು. ॥೧೫॥

ಇತ್ಥಂ ಶ್ರೀಶಾಲಿವಾಟೀಶಂ ದೇವೀಂ ಕಾಂತಿಮತೀಂ ಹರಿಃ ।
ನತ್ವಾ ತತ್ರೇಶಮಭ್ಯರ್ಚ್ಯ ಪುಂಡರೀಕದಲೇಕ್ಷಣಃ ॥೧೬॥

ಶಾಲಿವಾಟೇಶ್ವರಾಗಾರೇ ಶಿಷ್ಯೇ ಚೋತ್ತರದಿಕ್ಸ್ಥಿತಃ ।
ವಿಷ್ಣುಸ್ಸ್ವಸ್ವಾಲಯೇ ಲಿಂಗಮಭ್ಯರ್ಚ್ಯ ಸ್ತೌತಿ ವೈ ಹರಿಃ ॥೧೭॥

॥ ಹರಿರುವಾಚ ॥

ನಮಸ್ತೇ ಮಹಾದೇವ ಶಂಭೋ ತ್ರಿನೇತ್ರ ।
ಪ್ರಸೀದ ಸ್ವಮರ್ತ್ಯಂ ತವ ಕ್ಷೇತ್ರಮಧ್ಯೇ ॥೧೮॥

ವಸಂತಂ ಚ ಶಾಂತಂ ಭವತ್ಪಾದಪದ್ಮಂ ।
ಸದಾ ಕಾಮಯಂತಂ ಭಜೇ ಚಾಂತಕಾಂತಂ ॥೧೯॥

ತದಾಗ್ನೇಯೇ ಶಾಲೀವಾಟೇ ಅಗ್ನಿರಗ್ನೀಶಮರ್ಚಯನ್ ।
ಭಕ್ತಿಯುಕ್ತೋಂಬಿಕಾನಾಥಂ ಮನ್ಮಥಾಂತಕಮೀಶ್ವರಂ ॥೨೦॥

ತುಷ್ಟಾವ ದೇವಮಗ್ನೀಶಂ ತಾಮ್ರಪರ್ಣ್ಯಾಸ್ತಟೇ ಸ್ಥಿತಂ ॥೨೧॥

---

ಹೀಗೆ ಮಹಾವಿಷ್ಣುವು ಕಮಲದಳಾಯತಲೋಚನನಾಗಿ, ಶಾಲಿವಾಟೇಶ್ವರ ಲಿಂಗವನ್ನೂ ಕಾಂತಿಮತಿದೇವಿಯನ್ನೂ ದರ್ಶನಮಾಡುತ್ತಾ, ಪರಿಪರಿಯಾಗಿ ಸ್ತುತಿಸುತ್ತಾ ಶಾಲಿವಾಟೇಶ್ವರಕ್ಷೇತ್ರದ ಉತ್ತರದಿಕ್ಕಿನಲ್ಲಿ ನೆಲಸಿ ತನ್ನ ನಿವಾಸದಲ್ಲಿರುವ ಶಿವಲಿಂಗವನ್ನು ಬಿಡದೆ ಪೂಜಿಸುತ್ತಿರುವನು. ॥೧೬-೧೭॥

ಮಹಾದೇವನೇ, ಶಂಭುವೇ, ತ್ರಿನಯನನೇ, ನಿನ್ನ ಕ್ಷೇತ್ರಮಧ್ಯದಲ್ಲಿ ನೆಲಸಿರುವ ಸಕಲ ಮಾನವವರ್ಗವನ್ನೂ ಸಲಹು. ಅಲ್ಲದೆ ನಿನ್ನ ಕ್ಷೇತ್ರದಲ್ಲಿಯೇ ನೆಲಸಿ, ಸದಾ ನಿನ್ನ ಪಾದಕಮಲವನ್ನೇ ನಂಬಿರುವ ನಾನು ಅಂತಕಾಂತಕನಾದ ನಿನ್ನನ್ನು ಮಾತ್ರ ಸರ್ವದಾ ಸೇವಿಸುತ್ತಿರುವೆನು. ॥೧೮-೧೯॥

ಆ ಶಾಲಿವಾಟಕ್ಷೇತ್ರದ ಆಗ್ನೇಯಭಾಗದಲ್ಲಿರುವ ಅಗ್ನೀಶ್ವರನೆಂಬ ಶಿವಲಿಂಗ ರೂಪಿಯೂ ಮನ್ಮಥಾಂತಕನಾದ ಮಹಾದೇವನೂ ಆದ ಮಹೇಶ್ವರನನ್ನು ತಾಮ್ರ ಪರ್ಣೀನದಿಯ ದಡದಲ್ಲಿದ್ದು ಅಗ್ನಿಪುರುಷನು ಹೀಗೆ ಸ್ತುತಿಸಿರುವನು. ॥೨೦-೨೧॥

॥ ಅಗ್ನಿರುವಾಚ ॥

ನಮೋ ನಮಸ್ತೇ ಭಗವಂಸ್ತ್ರಿಣೇತ್ರ
ಪ್ರಸೀದ ಗಂಗಾಧರ ವಿಶ್ವನಾಥ ।
ಶಶಾಂಕಶೋಭಾವಹ ಮಸ್ತಕಾದ್ಯ
ಅಗ್ನೀಶ್ವರೇಶಾನ ವಿಭೋ ಪ್ರಸೀದ ॥೨೨॥

ಏವಮಗ್ನೀಶ್ವರಂ ವಹ್ನಿಸ್ತತ್ರಾರಾಧ್ಯಾವಸತ್ತದಾ ।
ಸ್ವಾಹಾ ಸ್ವಧಾಯುತೋ ವಹ್ನಿಃ ಶಿವನೇತ್ರತ್ವಮಾಪಹ ॥೨೩॥

ತತ್ರ ಈಶಪ್ರಸಾದೇನ ಶಾಲಿವಾಟೇಶಪ್ರಾಗ್ದಿಶಿ ।
ತತ್ರಾಗಸ್ತ್ಯೋ ಮುನಿರ್ನತ್ವಾ ಶಾಲಿವಾಟೇಶ್ವರಾರ್ಚನಂ ॥೨೪॥

ಸ್ತುತ್ವಾ ತುಷ್ಟಾವ ದೇವೇಶಂ ದೇವೀಂ ಕಾಂತಿಮತೀಮಪಿ ॥೨೫॥

॥ ಆಗಸ್ತ್ಯ ಉವಾಚ ॥

ನಮಸ್ತೇ ಶಾಲಿವಾಟೇಶ ನಮಸ್ತೇ ಕಾಂತಿಮತ್ತರೇ ।
ನಮಸ್ತೇ ವ್ಯೋಮಕೇಶಾಯ ಸುಕೇಶಾಯೈ ನಮೋ ನಮಃ ॥೨೬॥

---

ತ್ರಿನಯನಸ್ವಾಮಿಯೇ, ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿರುವವನೇ, ವಿಶ್ವನಾಥನೇ, ಚಂದ್ರಕಲೆಯಿಂದ ಶೋಭಿಸುವ ಶಿರಸ್ಸುಳ್ಳವನೇ, ಅಗ್ನೀಶ್ವರನೇ, ಸರ್ವವ್ಯಾಪಿಯೇ, ನಿನಗೆ ನಮಸ್ಕಾರ. ನಮ್ಮನ್ನುದ್ಧರಿಸು. ನಮ್ಮಲ್ಲಿ ಅನುಗ್ರಹವಿಡು. ॥೨೨॥

ಹೀಗೆ ಅಗ್ನಿಯು ಅಗ್ನೀಶ್ವರನನ್ನು ಸ್ತುತಿಸುತ್ತಾ, ತನ್ನ ಪತ್ನಿಯರಾದ ಸ್ವಾಹಾ ಮತ್ತು ಸ್ವಧಾದೇವಿಯರೊಡನೆ ಪೂಜಿಸಿ, ಈಶ್ವರಾನುಗ್ರಹದಿಂದ ಶಿವನೇತ್ರಸ್ಥಾನವನ್ನು ಪಡೆದನು. ಹಾಗೆಯೇ ಅಗಸ್ತ್ಯಮಹರ್ಷಿಯು ಶಾಲಿವಾಟೇಶ್ವರನ ಪೂರ್ವಭಾಗದಲ್ಲಿರುವ ಪವಿತ್ರಸ್ಥಳದಲ್ಲಿ ಶಾಲಿವಾಟೇಶ್ವರನನ್ನು ಆರಾಧಿಸಿರುವನು. ॥೨೩-೨೪॥

ಭಕ್ತಿಯಿಂದ ಈರೀತಿ ಕಾಂತಿಮತಿಯನ್ನೂ, ಶಾಲೀವಾಟೇಶ್ವರನನ್ನೂ ಸ್ತುತಿಸಿರುವನು. "ಶಾಲಿವಾಟೇಶ್ವರನೇ, ಕಾಂತಿಮತೀದೇವಿಯೇ, ವ್ಯೋಮಕೇಶನೇ, ಪ್ರಶಸ್ತವಾದ ಕೇಶಪಾಶವುಳ್ಳವಳೇ, ನಿನಗೆ ವಂದನೆ. ॥೨೫-೨೬॥

ನಮಸ್ತೇ ಗಾಂಗಸನ್ಮೌಳೀ ನಮೋ ಧಮ್ಮಿಲ್ಲಮಲ್ಲಿಕೇ ।
ನಮಃ ಕನಕವರ್ಣಾಯ ಹಿರಣ್ಯಾಂಗ್ಯೈ ನಮೋನಮಃ ॥೨೭॥

ನಮಸ್ತ್ರಿನಾಯ ತ್ರಿಪುರಾಂತಕಾಯ
ನಮೋ ಮಹೇಶ್ಯೈ ಶಿವಕಾಂತಿಮತ್ಯೈ ।
ನಮೋ ತ್ರಿಪೂಜ್ಯಾಯ ಮಹೇಶ್ವರಾಯ
ನಮೋ ನಮೋ ನೀಲಸುಕುಂತಲಾಯೈ ॥೨೮॥

ಇತ್ಥಂ ಕುಂಭಭವೇನೇಶಃ ಸಾಲಿವಾಟೇಶ್ವರಸ್ಸ್ತುತಃ ।
ದೇವೀ ಕಾಂತಿಮತೀ ಕೇನ ಶಶಿಕಾಂತಾನನಾ ಸ್ತುತಾ ॥೨೯॥

ತಸ್ಮೈ ಕುಂಭೋದ್ಭವಾಯೇಶೋ ನೃತ್ಯಂ ದರ್ಶಯತೀಶ್ವರಃ ।
ತತ್ರ ತಾಮ್ರಸಭಾಮಧ್ಯೇ ನಂದಿಭೃಂಗಿ ಸಮನ್ವಿತಃ ॥೩೦॥

ವಿಷ್ಣುಬ್ರಹ್ಮೇಂದ್ರವಿಬುಧೈರ್ಮುನಿಸಂಘೈಸ್ಸಮನ್ವಿತಃ ।
ಅಗಸ್ತ್ಯಂ ಪಶ್ಯಪಶ್ಯೇತಿ ತತ್ರ ತಾಮ್ರಸಭಾತಲೇ ॥೩೧॥

ನನರ್ತಾನಂದಭರಿತೋ ದೇವ್ಯಾದೇವೋ ಮಹೇಶ್ವರಃ ।
ಅಗಸ್ತ್ಯೇ ಮುನಿಭಿಸ್ಸಾರ್ಧಂ ವಿಷ್ಣುಬ್ರಹ್ಮಾದಿಭಿಸ್ಸರೈಃ ॥೩೨॥

---

ಗಂಗಾದೇವಿಯನ್ನೇ ಶಿರಸ್ಸಿನಲ್ಲಿ ಧರಿಸಿರುವ ಮಹಾದೇವನೇ, ನೀನು ತ್ರಿಪುರಾಂತಕನು. ಸುವರ್ಣವಿಶಿಷ್ಟನು. ತ್ರಿಲೋಕಗಳಿಂದಲೂ ಪೂಜಿತನಾಗಿರುವವನು. ಕಾಂತಿಮತೀದೇವಿಯೇ, ನಿನ್ನ ಕೇಶಪಾಶವು ಬಹು ಸುಂದರವಾಗಿದೆ. ಹಿರಣ್ಯಾಭರಣಗಳಿಂದ ಶೋಭಿಸುವ ದೇಹವುಳ್ಳವನು. ನೀಲಚಿಕುರಗಳುಳ್ಳವನು. ಇಂತಹ ಶಿವಪಾರ್ವತಿಯರಿಗೆ ನಾನು ಸರ್ವದಾ ವಂದಿಸುವೆನು. ||೨೭-೨೮||

ಹೀಗೆ ಅಗಸ್ತ್ಯಮಹರ್ಷಿಯು ಕಾಂತಿಮತೀದೇವಿಯನ್ನೂ, ಶಾಲಿವಾಟೇಶ್ವರನನ್ನೂ ಸ್ತುತಿಸಿದಮೇಲೆ ದೇವದೇವಿಯರು ಋಷಿಗೆ ಪ್ರಸನ್ನರಾಗಿ, ತಾಮ್ರಸಭಾಮಧ್ಯದಲ್ಲಿ ನಂದಿಭೃಂಗಿಯರೊಡಗೂಡಿ ನಾಟ್ಯವಾಡುತ್ತಾ, ಆ ನಾಟ್ಯವನ್ನು ನೋಡುವ ಸುಯೋಗವನ್ನು ಅಗಸ್ತ್ಯನಿಗೆ ಕಲ್ಪಿಸಿಕೊಟ್ಟರು. ||೨೯-೩೦||

ಆ ಕಾಲಕ್ಕೆ ವಿಷ್ಣು, ಬ್ರಹ್ಮ, ಇಂದ್ರಾದಿ ದೇವತೆಗಳು, ಋಷಿಗಣಗಳು ಎಲ್ಲರೂ ಶಿವನಾಟ್ಯದರ್ಶನಕುತೂಹಲವುಳ್ಳವರಾಗಿ ಬಂದು ನೆರೆದರು. ಅಗಸ್ತ್ಯ

ಅಸ್ತುವದ್ಭಕ್ತಿಭರಿತಃ ಕುಂಭಭೂಸ್ತತ್ರ ಶಂಕರಂ ।
ಮುನಿರ್ಬದ್ಧಾಂಜಲಿಪುಟೈರ್ಮುನಿದೇವಗಣೈರ್ಗಣೈಃ ॥೩೩॥

॥ ದೇವಗಣಾ ಊಚುಃ ॥

ನಮಸ್ತೇ ನಮಸ್ತೇಶ ಹಸ್ತಾನಲೋರ್ಧ್ವ
ಜ್ವಲಜ್ಜ್ವಾಲಯಾ ದಗ್ಧಭಕ್ತಾಘಸಂಘ ।
ಪ್ರಸೀದೇಶ ವಿಶ್ವಾಧಿಕೇಶಾನ ಶಂಭೋಽಷ್ಟ
ಮೂರ್ತಿಂ ಭವಂತಂ ವಿಲೋಕ್ಯಾತ್ಮಧನ್ಯಾಃ ॥೩೪॥

ನಮಸ್ತೇ ಭವತ್ಪಾದಪದ್ಮೇ ಶ್ರಯಾಮೋ
ವಿಮುಕ್ತಾಘಸಂಘಾ ಭವಂತಂ ಭಜಾಮಃ ।
ವಿಮುಕ್ತ್ಯೈ ಸುಭಕ್ತ್ಯೈ ಭವಾನೇವ ಶಂಭೋ
ಪ್ರದಾನಾಯ ಭಕ್ತೇ ಮಹಾನ್ ಜಾಗೃತಸ್ಸ್ಯಾಃ ॥೩೫॥

---

ನನ್ನು ಸಂಬೋಧಿಸಿ ದೇವದೇವಿಯರು ಆನಂದಭರಿತರಾಗಿ, ಅಲ್ಲಿ ನೆರೆದಿದ್ದ ಸಕಲರಿಗೂ ಸಂತೋಷವಾಗುವಂತೆ ತಾವು ಸಭಾಮಧ್ಯದಲ್ಲಿ ನರ್ತನಮಾಡಿದರು.॥೩೧-೩೨॥

ಆಗಲೇ ಅಗಸ್ತ್ಯಮಹರ್ಷಿಯು ಭಕ್ತಿಭರಿತನಾಗಿ ಅಂಜಲಿಪುಟಗಳನ್ನು ಮೇಲೆತ್ತಿ ಅಲ್ಲಿ ನೆರೆದಿದ್ದ ಇತರ ದೇವಋಷಿಗಳೊಡನೆ ಹೀಗೆ ಸ್ತೋತ್ರಮಾಡಿದನು. " ಮಹಾದೇವನೇ, ನಾಟ್ಯಕಾಲದಲ್ಲಿ ನಿನ್ನ ಕೈಯಲ್ಲಿ ಜ್ವಾಲಾರೂಪವಾಗಿ ಉರಿಯುವ ಅಗ್ನಿಯು ನಿನ್ನ ಭಕ್ತರ ಪಾಪರಾಶಿಯನ್ನೆಲ್ಲಾ ನಾಶಗೊಳಿಸುವುದು. ಮಹಾದೇವನೇ, ನೀನು ವಿಶ್ವಾಧಿಕನು. ಅಷ್ಟಮೂರ್ತಿಸ್ವರೂಪನು. ನಿನ್ನನ್ನು ನೋಡಿ ನಾವೆಲ್ಲರೂ ಧನ್ಯರಾಗಿರುವೆವು. ॥೩೪-೩೪॥

ಮಹೇಶ್ವರನೇ, ನಾವು ನಮ್ಮ ಪಾಪರಾಶಿಯನ್ನೆಲ್ಲಾ ಕಳೆದುಕೊಂಡು ನಿನ್ನ ಎರಡು ಪಾದಕಮಲಗಳನ್ನೂ ಆಶ್ರಯಿಸಿರುವೆವು. ನಮಗೆ ಐಹಿಕಾಮುಷ್ಮಿಕಸುಖಗಳನ್ನು ಅನುಗ್ರಹಿಸುವವನು ನೀನಲ್ಲದೆ ಮತ್ತಾರು ? ನೀನಾದರೋ ಭಕ್ತವೃಂದಕ್ಕೆ ಸಕಲ ಇಷ್ಟಾರ್ಥಗಳನ್ನೂ ಒದಗಿಸಲು ಸರ್ವದಾ ಜಾಗ್ರದವಸ್ಥೆಯಲ್ಲಿಯೇ ಇರುವೆಯಲ್ಲವೆ ! ॥೩೫॥

ಚರಂ ಚಾಚರಂ ಲೋಕಮೇತಾದ್ಯ ಶೂಲಿನ್
ಕಪಾಲಿನ್ ಮಹಾಸರ್ಪಮಾಲಿನ್ನಮಸ್ತೇ ।
ತ್ವಯಾ ಸೃಷ್ಟಮಾದೌ ಮಾಯಾಲಯೇನ
ತ್ವಯಾಂತೇ ಹಿ ಯಾಂತ್ಯೇವ ಕಲ್ಪಾಂತಿಮೇಶ ॥೩೬॥

ನಮಾಮೋಽಮೃತಾಸ್ಯಾ ಭವದ್ಭಕ್ತವೀರಾ
ಸ್ಸಮುಸ್ತಾ ಭವದ್ಭಸ್ಮ ಭಾವಾನುಸಕ್ತಾಃ ।
ತ್ವದೀಯಂ ಸಮುಸ್ತಂ ವಿಭಾತೀಶ ಶಶ್ವತ್
ಭವನ್ನೃತ್ತಸಂದರ್ಶನಾದ್ಬಂಧಮುಕ್ತಾಃ ॥೩೭॥

॥ ಶ್ರೀ ಸ್ಕಂದ ಉವಾಚ ॥

ಇತ್ಥಂ ತಾಮ್ರಸಭಾಸು ದಿವ್ಯಚರಣಂ ಶಂಭೋರ್ಮುದಾ ವೀಕ್ಷ್ಯತೇ
ಬ್ರಹ್ಮಾದ್ಯಾಸ್ತ್ರಿದಶಾ ಮುನೀಶ್ವರಗಣಾಃ ಕುಂಭೋದ್ಭವಾದ್ಯಾ ಹರಿಃ ।

---

ತ್ರಿಶೂಲಧಾರಿಯೇ, ಕಪಾಲಮಾಲಾಭರಣನೇ, ಸರ್ಪಮಾಲಾಲಂಕೃತನೇ, ಸರ್ಪವನ್ನೇ ಹಾರವನ್ನಾಗಿಯುಳ್ಳವನೇ, ಚರಾಚರಾತ್ಮಕವಾದ ಈ ಜಗತ್ತನ್ನು ನಿನ್ನ ಮಾಯಾಸಹಾಯದಿಂದ ನೀನು ಮೊದಲು ಸೃಷ್ಟಿಸಿದೆ. ಅದೇ ಜಗತ್ತು ಕಲ್ಪಾಂತ್ಯಕಾಲದಲ್ಲಿ ಮತ್ತೆ ಮಾಯಾಪಾಶಕ್ಕೆ ಸಿಕ್ಕಿ ನಿನ್ನಲ್ಲಿಯೇ ಐಕ್ಯವಾಗುವುದು. ಇದು ನಿನ್ನ ಅಪಾರವಾದ ಮಹಿಮೆಯಲ್ಲವೆ! ॥೩೬॥

ಮಹೇಶ್ವರನೇ, ನಿನ್ನನ್ನು ಸ್ತೋತ್ರಮಾಡುವ ಈ ನಮ್ಮ ಪವಿತ್ರ ಮುಖಗಳಿಂದ ನಾವು ಧನ್ಯರಾಗಿರುವೆವು. ಭವನಾಶಕನಾದ ನಿನ್ನ ವಿಭೂತಿ (ಐಶ್ವರ್ಯ, ಲೀಲೆ) ಯಲ್ಲಿ ಸರ್ವದಾ ನೆಟ್ಟಮನಸ್ಸುಳ್ಳವರಾಗಿರುವೆವು. ನಿನ್ನ ಅಮೋಘವಾದ ನಾಟ್ಯಕಲೆಯ ದರ್ಶನದಿಂದ ನಾವು ಬಂಧಮುಕ್ತಿಯನ್ನು ಪಡೆದು, ಸಕಲ ಬ್ರಹ್ಮಾಂಡವೂ ನಿನ್ನಲ್ಲಡಗಿರುವಂತೆ ನಿನ್ನ ಸ್ವರೂಪವನ್ನು ನಾವು ಕಾಣುತ್ತಿರುವೆವು. ॥೩೭॥

ಹೀಗೆ ತಾಮ್ರಸಭೆಯಲ್ಲಿ ಮಹಾದೇವನ ದಿವ್ಯನಾಟ್ಯಕೌಶಲವನ್ನು ಕಣ್ಣಾರ ನೋಡಿದ ಬ್ರಹ್ಮವಿಷ್ಣ್ವಾದಿ ದೇವತೆಗಳೂ, ಅಗಸ್ತ್ಯನೇ ಮೊದಲಾದ ಮಹರ್ಷಿಗಳೂ, ಇತರರೂ ತಮ್ಮ ಪಾಪಶೋಕರಾಶಿಗಳನ್ನು ಕಳೆದುಕೊಂಡರು. ಅಲ್ಲದೆ ಅವರು ಸದಾ ಸರ್ವೇಶ್ವರನೆನಿಸಿದ ಶಾಲಿವಾಟೇಶ್ವರನ ಲೀಲಾವಿಭೂತಿಗಳನ್ನೂ,

ನಿರ್ಮುಕ್ತಾಖಿಲಶೋಕಪಾಶವಿಧುರಾಃ ಭೂಷಂ ತದಾ ತತ್ರ ವೈ
ಧ್ಯಾಯಂತಃ ಸ್ವಹೃದಂಬುಜೇ ಚಿರೆತರಂ ಶ್ರೀಶಾಲಿವಾಟೇಶ್ವರಂ ॥೩೮॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಶಾಲಿವಾಟೇಶ್ವರವೈಭವೇ ತಾಮ್ರಸಭಾನಟನ ವರ್ಣನಂ ನಾಮ
ಸಪ್ತಚತ್ವಾರಿಂಶೋಽಧ್ಯಾಯಃ

---

ಸ್ವರೂಪವನ್ನೂ ತಮ್ಮ ಹೃತ್ಕಮಲದಲ್ಲಿ ನೆನೆಯುತ್ತಾ ಆನಂದಸಾಗರದಲ್ಲಿ ಮುಳುಗಿದವರಾದರು. ಎಂದು ಜೈಗೀಷವ್ಯಮಹಾಮುನಿಗೆ ಕುಮಾರಸ್ವಾಮಿಯು ಹೇಳಿದನು. ॥೩೮॥

ಇಲ್ಲಿಗೆ ಶ್ರೀಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಶಾಲಿವಾಟೇಶ್ವರನ
ವೈಭವವನ್ನೂ, ತಾಮ್ರಸಭಾನಾಟ್ಯಕಲಾಕೌಶಲವನ್ನೂ, ಅಗಸ್ತ್ಯಾದಿಗಳಿಂದ
ಉಕ್ತವಾದ ಶಿವಸ್ತೋತ್ರಗಳನ್ನೂ ವಿವರಿಸುವ ನಲವತ್ತೇಳನೆಯ
ಅಧ್ಯಾಯವು ಸಮಾಪ್ತವಾದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಅಷ್ಟಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

**ತದ್ದಕ್ಷಿಣೇ ಚ ಕುದ್ದಾಲಂ ಹರಿಸ್ಥಾನಂ ಪುರಾಭವತ್ ।**
**ಅಗಸ್ತ್ಯೇನ ಶಿವಸ್ಥಾನಂ ಕೃತಂ ತತ್ಪಾವನಂ ಪುರಾ ॥೧॥**

॥ ಜೈಗೀಷವ್ಯ ಉವಾಚ ॥

**ಹರೇಃ ಸ್ಥಾನಂ ಚ ಕುದ್ದಾಲಂ ಶಿವಸ್ಥಾನಮಭೂತ್ಕಥಂ ।**
**ತಾರಕಾರೇ ವದಾದ್ಯ ತ್ವಂ ಕಥಾಂ ಮೇ ವಿಸ್ಮಯಾವಹಾಂ ॥೨॥**

---

## ನಲವತ್ತೆಂಟನೆಯ ಅಧ್ಯಾಯ

ಮತ್ತೆ ಕುಮಾರಸ್ವಾಮಿಯು ಜೈಗೀಷವ್ಯಮಹರ್ಷಿಯನ್ನು ಕುರಿತು, "ಮಹರ್ಷಿಯೇ, ಹೀಗೆ ಅಗಸ್ತ್ಯಮಹರ್ಷಿಯಿಂದ ಶಿವಸ್ಥಾನವೊಂದು ಪ್ರಸಿದ್ಧವಾದಂತೆ, ಅದಕ್ಕೆ ದಕ್ಷಿಣದಿಕ್ಕಿನ ಒಂದು ಕಡೆಯಲ್ಲಿ ಕುದ್ದಾಲವೆಂಬ ಹರಿಸ್ಥಾನವೊಂದು ನಿರ್ಮಿತವಾಯಿತು." ಎಂದು ಹೇಳಲು, ಒಡನೆಯೇ ಜೈಗೀಷವ್ಯಮಹಾಮುನಿಯು, ತಾರಕಾಸುರನಾಶಕನಾದ ಕುಮಾರಸ್ವಾಮಿಯನ್ನು ಕುರಿತು, ಹೀಗೆಂದನು. "ತಾರಕಾರಿಯೇ, ಶಿವಸ್ಥಾನವು ಹರಿಸ್ಥಾನವಾಗಿ ಕುದ್ದಾಲಕ್ಷೇತ್ರವೆಂಬ ಹೆಸರಿನಿಂದ ಪ್ರಸಿದ್ಧವಾದುದು ಹೇಗೆ? ದಯೆಯಿಟ್ಟು ತತ್ಸಂಬಂಧವಾದ ಇತಿಹಾಸವನ್ನು ವಿವರಿಸಿ ಹೇಳಬೇಕು" ಎಂದು ಪ್ರಾರ್ಥಿಸಲು ಕುಮಾರಸ್ವಾಮಿಯು ಜೈಗೀಷವ್ಯನೊಡನೆ ಹೀಗೆಂದನು. ॥೧-೨॥

॥ ಶ್ರೀಸ್ಕಂದ ಉವಾಚ ॥

ಜೈಗೀಷವ್ಯ ಶೃಣುಷ್ವಾದ್ಯ ತ್ರಿಕುದ್ದಾಲಂ ಹರೇಃ ಸ್ಥಲಂ ।
ಸಮಾಗತಾ ತಾಮ್ರಪರ್ಣ್ಯಾ ಪಾಪನಾಶಾ ಉದಗ್ವಹಾ ॥೩॥

ಪಶ್ಚಿಮಾಭಿಮುಖಂ ಕ್ಷೇತ್ರಂ ಹರೇಸ್ತತ್ರಾಥ ತತ್ಪುರಂ ।
ಅಗಸ್ತ್ಯೋಽಗಸ್ತ್ಯಕೂಟಾತ್ತು ಮಹೇಂದ್ರಶಿಖರಾಶ್ರಯಃ ॥೪॥

ಮುನಿಭಿಸ್ಸ ತಪಸ್ತೇಪೇ ತತ್ರ ಧ್ಯಾಯನ್ಮಹೇಶ್ವರಂ ।
ಭಸ್ಮರುದ್ರಾಕ್ಷಸಂಪನ್ನಃ ಸರ್ವದಾ ರುದ್ರತತ್ಪರಃ ॥೫॥

ಪಂಚಾಕ್ಷರಪರೋ ನಿತ್ಯಂ ಪಂಚಾಸ್ಯಂ ಪೂಜಯನ್ಮುನಿಃ ।
ಸ್ತುವನ್ನೀಶಂ ಮಹಾದೇವಮಗಸ್ತ್ಯೋ ದೇವಮೀಶ್ವರಂ ॥೬॥

॥ ಅಗಸ್ತ್ಯ ಉವಾಚ ॥

ಸುಧಾಂಶುಧರಶೇಖರಂ ಪುರಹರಂ ಚ ಗಂಗಾಧರಂ
ವಿಭೂತಿ ಪರಿಧೂಸರಂ ಉರಗಭಾರಹಾರಂ ಶಿವಂ ।
ಗರಾಶನಮುಪಾಸ್ಮಹೇ ಮದನಕಾಯಸಂದೀಪನಂ
ನಿರಂಜನಸುಪಾಟನಂ ನಯನಪೂತವಹ್ನ್ಯಾನನಂ ॥೭॥

---

ಜೈಗೀಷವ್ಯನೇ, ತ್ರಿಕುದ್ದಾಲಕ್ಷೇತ್ರವೆನಿಸಿದ ಹರಿಸ್ಥಾನದ ವಿಷಯವನ್ನು ಕೇಳು. ಅಲ್ಲಿಗೆ ತಾಮ್ರಪರ್ಣೀನದಿಯಿಂದ ಒಂದು ಶಾಖೆಯು ಹೊರಟು ಪಾಪನಾಶಕವಾಗಿ, ಉತ್ತರವಾಹಿನಿಯೆನಿಸಿ ಅಲ್ಲಿ ಹರಿಯುವುದು. ಆ ಕ್ಷೇತ್ರವು ಪಶ್ಚಿಮಾಭಿಮುಖವಾಗಿರುವುದು. ಅಗಸ್ತ್ಯಮಹರ್ಷಿಯು ಅಲ್ಲಿರುವ ಮಹೇಂದ್ರಪರ್ವತದ ಶಿಖರವನ್ನಾಶ್ರಯಿಸಿ ಅನೇಕ ಋಷಿವೃಂದದೊಡನೆ ಸೇರಿ ದೀರ್ಘಕಾಲ ತಪಸ್ಸುಮಾಡಿದನು.॥೩-೪॥

ಹಾಗೆಯೇ ಎಲ್ಲರೊಡಗೂಡಿ, ಸದಾ ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು, ರುದ್ರಾಧ್ಯಾಯವನ್ನೇ ಪಠಿಸುತ್ತಾ, ಶಿವಪಂಚಾಕ್ಷರಿಯನ್ನೇ ಜಪಿಸುತ್ತಾ, ಶಿವಪೂಜಾನಂತರ ಮಹಾದೇವನನ್ನು ಈರೀತಿ ಸ್ತೋತ್ರಮಾಡುತ್ತಿದ್ದನು. ॥೫-೬॥

"ಮಹಾದೇವನೇ, ನೀನು ಅಮೃತಕಿರಣನಾದ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನು. ತ್ರಿಪುರಹರನು. ಗಂಗೆಯನ್ನು ಶಿರಸಾ ಧರಿಸಿರುವವನು. ವಿಭೂತಿ ಲೇಪನದಿಂದ ಶುದ್ಧವಾದ ದೇಹವುಳ್ಳವನು. ನಾಗಾಭರಣದಿಂದ ಅಲಂಕೃತನು.

ಭಸ್ಮರುದ್ರಾಕ್ಷಸಂಪನ್ನಂ ದೃಷ್ಟ್ವಾಗಸ್ತ್ಯಂ ಮಹಾಮುನಿಂ ।
ಮುನಿಭಿಸ್ಸಸಮಾನ್ಯೈಶ್ಚ ಯಾಂತಂ ವಿಷ್ಣುರ್ವಿಲೋಕ್ಯ ತಂ ॥೮॥

ವದಂತಂ ಶಿವನಾಮಾನಿ ಶಿವಭಕ್ತ್ಯಾಭಿಯಾ ಹರಿಃ ।
ದೃಷ್ಟ್ವಾ ಆನಾಂ ಸಮಾಲೋಕ್ಯ ವಿಷ್ಣುಃ ಪಾಷಂಡಮಾಶ್ರಿತಃ ॥೯॥

ದುರ್ಮುಖಾದರ್ಶನಾಲಾಪ ಪಾಪಹಂ ವೀಕ್ಷಣಂ ಸತಾಂ ।
ದೃಷ್ಟ್ವಾಗಸ್ತ್ಯಂ ತದಾ ವಿಷ್ಣೋರ್ದ್ವಾರಂ ತೇ ಸಾರ್ಗಲಂ ವ್ಯಧುಃ ॥೧೦॥

ತಾನ್ ದೃಷ್ಟ್ವಾ ದ್ವಾರತೋಽಗಸ್ತ್ಯಃ ಕ್ವಚಿಲ್ಲೀನೋ ಭವತ್ತದಾ ।
ಮುನಿಭಿಸ್ಸ ತತೋ ವೇಷಂ ಪಾಷಂಡೇನ ಸಮಾಶ್ರಿತಂ ॥೧೧॥

ಸ ಭಿದ್ರೋರ್ಧ್ವಂ ಶ್ವೇತಪೀಠಂ ಮಧ್ಯೇ ಕುಂಕುಮರೇಖಕಂ ।
ಪದಂ ಸದ್ರಾವಿಡಂ ವಿಷ್ಣುರ್ವೈಷ್ಣವಾಂಶ್ಚ ನಮುನ್ಮಹುಃ ॥೧೨॥

---

ಲೋಕವನ್ನೇ ಸುಡುತ್ತಿದ್ದ ವಿಷವನ್ನು ಪಾನಮಾಡಿದವನು. ಮನ್ಮಥನ ದೇಹವನ್ನು ಸುಟ್ಟು ಭಸ್ಮಮಾಡಿದವನು. ಇಂತಹ ಪಾಪನಾಶಕನೂ, ಪರಿಶುದ್ಧವಾದ ಅಗ್ನಿನೇತ್ರನೂ ಆಗಿರುವ ನಿನ್ನನ್ನು ಸದಾ ವಂದಿಸುವೆನು " ಎಂದು ಅಗಸ್ತ್ಯಮುನಿ ಪ್ರಾರ್ಥಿಸುವನು. ॥೭॥

ಹೀಗೆ ಭಸ್ಮರುದ್ರಾಕ್ಷಗಳಿಂದ ಶೋಭಿಸುತ್ತಿರುವ ಅಗಸ್ತ್ಯಮುನಿಯನ್ನೂ, ತತ್ಸಹಚರರಾದ ಅಂತಹ ಅನೇಕ ಮಹಾಮಹಿಮರಾದ ಋಷಿಜನರನ್ನೂ ನೋಡಿ ವಿಷ್ಣುವು ಇವರೆಲ್ಲರೂ ಪರಶಿವಭಕ್ತರೆಂದು ಅರಿತನು. ಆದರೇನು, ವಿಷ್ಣುವು ಮುಂದೆ ಹೇಳುವಂತಹ ಪಾಷಂಡವೇಷಧಾರಿಯಾಗಿದ್ದನು. ದುಷ್ಟರ ಸಮಸ್ತ ಪಾಪರಾಶಿಯನ್ನೂ ನಿರ್ಮೂಲಗೊಳಿಸುವ ಅಗಸ್ತ್ಯಮಹಾಮುನಿಯನ್ನು ವಿಷ್ಣುವು ನೋಡುತ್ತಿರುವಾಗಲೇ ಅವರೆಲ್ಲರೂ ಅಗಸ್ತ್ಯನು ಒಳಗೆ ಬರದಂತೆ ಬಾಗಿಲಿನ ಅಗಣಿಯನ್ನು ಹಾಕಿದರು. ॥೮-೯-೧೦॥

ವಿಷ್ಣುವೂ ಮತ್ತು ಅವನ ಅನುಯಾಯಿಗಳಾದವರು ತಮ್ಮ ಹಣೆಗೆ ಬಿಳಿಯ ಊರ್ಧ್ವಪುಂಡ್ರವನ್ನಿಟ್ಟು ಮೂಗಿನಮೇಲೆ ಆ ತ್ರಿಪುಂಡ್ರಕ್ಕೆ ಒಂದು ಪೀಠವನ್ನು ಕಲ್ಪಿಸಿ, ಮಧ್ಯೆ ಕೆಂಪು ನಾಮವನ್ನು ಧರಿಸಿದ್ದರು. ದ್ರಾವಿಡಭಾಷೆಯ ಪದಗಳನ್ನು ಉಚ್ಚರಿಸುತ್ತಿದ್ದರು. ಇಂತಹವರನ್ನು ಮರ್ಯಾದಿಸುತ್ತಾ ವಿಷ್ಣುವು ಇದ್ದದ್ದನ್ನು ನೋಡಿ ಅಗಸ್ತ್ಯಮಹರ್ಷಿಯು ಅಲ್ಲಿಯೇ ಒಂದುಕಡೆ ಮರೆಯಾದನು. ॥೧೧-೧೨॥

ನಾರಾಯಣಾದಿನಾಮಾನಿ ಸಂವದನ್ ಭಕ್ತಿತತ್ಪರಃ ।
ವೈಷ್ಣವಾನಾಂ ಸಮಾಜಂ ಸ ಸಮಭ್ಯಾಗಾನ್ಮಹಾಮುನಿಃ ॥೧೩॥

ತೇ ದೃಷ್ಟ್ವಾ ವೈಷ್ಣವಶ್ರೇಷ್ಠಂ ಪ್ರಣಪೇತಂ ಹರಿಂ ತದಾ ।
ಅನ್ಯೋನ್ಯಮಂಜಲಿಂ ಚಕ್ರುರ್ಮುನೇರಾಲಂಬ್ಯತೇ ಕರಂ ॥೧೪॥

ತದಾ ಪ್ರವೇಶಯಾಮಾಸುರ್ವಿಷ್ಣೋರಾಲಯಮುತ್ತಮಂ ।
ವೈಷ್ಣವೈಸ್ತದಾ ವಿಷ್ಣುಂ ಪ್ರಧಾವನ್ನಿವ ವೈ ಮುನಿಃ ॥೧೫॥

ವದನ್ನಾರಾಯಣಾನಂತ ಗೋವಿಂದೇತಿ ಮುಹುರ್ಮುಹುಃ ।
ತೈರ್ದತ್ತಂ ಪುಣ್ಯತೀರ್ಥಾದಿ ಗೃಹೀತ್ವಾ ಮೂರ್ಧ್ನ್ಯಶೋಧಯನ್॥೧೬॥

ಅಂತರ್ಯಯೌ ತದಾ ವಿಷ್ಣುಭಕ್ತವತ್ಪಾಣಿಮಸ್ಪೃಶತ್ ।
ಯಮುರ್ದಪಾಣಿನಾ(?)ತತ್ರ ಜನಾರ್ದನಶಿರಃ ಸ್ಪೃಶನ್ ॥೧೭॥

ತದಾ ವಿಷ್ಣೋಃ ಸ ಸಂಪೀಡ್ಯ ಲಿಂಗಂ ಚಕ್ರೇ ಮಹೇಶಿತುಃ ।
ಯಥಾಪೂರ್ವಮಗಸ್ತ್ಯೋ ಭೂಧ್ಭಸ್ಮರುದ್ರಾಕ್ಷಪುಂಡ್ರಧೃಕ್ ॥೧೮॥

---

ಹಾಗೂ ವಿಷ್ಣುವು ಇರುವುದನ್ನು ನೋಡಿ, ಅಗಸ್ತ್ಯಮಹರ್ಷಿಯು ನಾರಾಯಣಾದಿ ವಿಷ್ಣುನಾಮಗಳನ್ನುಚ್ಚರಿಸುತ್ತಾ ಅವರ ಗುಂಪಿಗೆ ತಾನೂ ಹೋದನು. ಹಾಗೆ ವೈಷ್ಣವಚಿನ್ಹೆಗಳಿಲ್ಲದೆ ಬಂದ ಅಗಸ್ತ್ಯಮಹರ್ಷಿಯನ್ನು ಕಂಡು, ವೈಷ್ಣವರೆಲ್ಲರೂ ಇವನ ಕೈಯ್ಯನ್ನು ಹಿಡಿದು, ವಿಷ್ಣುವಿನ ಸಮೀಪಕ್ಕೆ ಕರೆತಂದರು. ॥೧೩-೧೪॥

ಹಾಗೆಯೇ ಅವನನ್ನು ವಿಷ್ಣುದೇವಾಲಯಕ್ಕೆ ಕರೆದೊಯ್ದರು. ಅಲ್ಲಿ ವೈಷ್ಣವರೆಲ್ಲರೂ ಓಡಿಹೋಗುವಂತೆ ಕಾಣುತ್ತಿದ್ದ ಅಗಸ್ತ್ಯಮುನಿಯನ್ನು ಬಲವಾಗಿ ಹಿಡಿದುಕೊಂಡು, ನಾರಾಯಣಾದಿ ವಿಷ್ಣುನಾಮಸ್ಮರಣೆಮಾಡುತ್ತಾ ವಿಷ್ಣುತೀರ್ಥವೇ ಮೊದಲಾದುವುಗಳಿಂದ ಅಗಸ್ತ್ಯನ ಶಿರಸ್ಸನ್ನು ಪ್ರೋಕ್ಷಿಸಿದರು. ॥೧೫-೧೬॥

ಹಾಗೆಯೇ ಇನ್ನೂ ದೇವಾಲಯದೊಳಕ್ಕೆ ಕರೆದೊಯ್ದು ವಿಷ್ಣುಭಕ್ತನಂತೆ ಭಾವಿಸುತ್ತಾ ಅಗಸ್ತ್ಯರ ತಲೆಯಮೇಲೆ ವಿಷ್ಣುಹಸ್ತವನ್ನೂ, ಜನಾರ್ದನ ಶಿರಸ್ಸನ್ನೂ ಇಟ್ಟು ಇವನಿಗೆ ವಿಷ್ಣುಲಾಂಛನಗಳನ್ನು ಇಡಲಾರಂಭಿಸಿದರು. ಆದರೆ ಶಿವಮಹಿಮೆ

ದೃಷ್ಟ್ವಾ ತೇ ತಂಡುರಾಧರ್ಷಲಘುಂ(?)ಹಂತುಂ ಸಮುದ್ಯತಾನ್ ।
ಹುಂಕಾರೇಣೈವ ತಾನ್ ಸರ್ವಾನ್ ಭಸ್ಮಸಾದಕರೋನ್ಮುನಿಃ ॥೧೯॥

ಶಶಾಪ ಕುಪಿತೋತ್ಯರ್ಥಂ ಪಾಷಂಡಾನ್ ವೈಷ್ಣವಾಧಮಾನ್ ॥೨೦॥

॥ ಅಗಸ್ತ್ಯ ಉವಾಚ ॥

ಯೂಯಂ ಶಿವಪ್ರಹಸ್ಸರ್ವೇ ನರಕಂ ಯಾಂತು ಸಾನ್ವಯಾಃ ।
ವೇದಬಾಹ್ಯಾ ದುರಾಚಾರಾ ಜಾರನಾರೀಗಮಾಃ ಖಲಾಃ ॥೨೧॥

ಭವಂತೋ ದ್ರಾವಿಡಾನೇವ ಪಿಣ್ಯಾಕೇಂಗುದಸನ್ಮುಖಾಃ ।
ಸದಾ ಪರ್ಯುಷಿತಾನ್ನಾದಾ ಭವಂತು ನಿರಯಂ ಗತಾಃ ॥೨೨॥

ಯತ್ರ ಕುತ್ರಾಪಿ ವಾ ವಿಷ್ಣೋಃ ಸನ್ನಿಧಿ ಸ್ಸಯದಾ ಭವೇತ್ ।
ಪ್ರದೋಷೇಷು ಹರಿಂ ದೃಷ್ಟ್ವಾ ನರಕಂ ಯಾಂತು ಸಾನ್ವಯಾಃ ॥೨೩॥

---

ಯಿಂದ ಇವನಿಗೆ ಮೊದಲಿನಂತೆಯೇ ಭಸ್ಮ, ರುದ್ರಾಕ್ಷಾದಿಗಳು ಕಾಣಲಾರಂಭಿಸಿದುವು. ಇದರಿಂದ ಕುಪಿತರಾದ ವೈಷ್ಣವರು ಮುನಿಯನ್ನು ಹೊಡೆಯಲಾರಂಭಿಸಿದರು. ॥೧೭-೧೮॥

ಇದನ್ನು ಶಿವಗಣಪತಿಯಾದ ತಂಡುವು ನೋಡಿ ಕೋಪದಿಂದ ಹುಂಕಾರ ಮಾಡಿ ಅದರಿಂದಲೇ ಆ ಎಲ್ಲರನ್ನೂ ಭಸ್ಮವನ್ನಾಗಿ ಮಾಡಿದನು. ಹಾಗೆಯೇ ಅಗಸ್ತ್ಯಮಹರ್ಷಿಯೂ ಕೋಪಗೊಂಡು, ಪಾಷಂಡರೆನಿಸಿದ ಆ ವೈಷ್ಣವಾಧಮರಿಗೆ ಹೀಗೆ ಶಾಪವಿತ್ತನು. ॥೧೯ ೨೦॥

" ನೀವೆಲ್ಲರೂ ಶಿವದ್ರೋಹಿಗಳಾಗಿರುವುದರಿಂದ, ನಿಮಗೆ ನಿಮ್ಮ ವಂಶಜರೊಡನೆ ನರಕಲೋಕವೇ ಪ್ರಾಪ್ತವಾಗಲಿ. ಮುಂದೆ ನಿಮ್ಮ ವಂಶಜರೆಲ್ಲರೂ ವೇದಬಾಹಿರರಾಗಿ ದುರಾಚಾರಗಳಲ್ಲಿ ನಿರತರಾಗಲಿ. ನಿಮ್ಮ ಸಂತಾನವೆಲ್ಲಾ ಕೇವಲ ವ್ಯಭಿಚಾರದಿಂದಲೇ ಬೆಳೆಯಲಿ. ಕೇವಲ ದ್ರಾವಿಡಭಾಷೆಯ ಮಂತ್ರತಂತ್ರಗಳೇ ನಿಮ್ಮಲ್ಲಿ ನೆಲಸಲಿ. ನೀವು ಹುಣಸೆಹುಳಿ, ಇಂಗು, ಹಿಂಡಿ ಮುಂತಾದ ವಸ್ತುಗಳಿಂದ ಕೂಡಿದ ತಂಗಳನ್ನವನ್ನೇ ಭಕ್ಷಿಸುವರಾಗಿರಿ. ನಿಮಗೆ ಇದರಿಂದ ಸರ್ವದಾ ನರಕವೇ ಪ್ರಾಪ್ತವಾಗಲಿ. ॥೨೧-೨೨॥

ಇನ್ನುಮೇಲೆ ಯಾರೇ ಆಗಲಿ ಪ್ರದೋಷಕಾಲದಲ್ಲಿ ವಿಷ್ಣು ಸನ್ನಿಧಿಗೆ ಹೋಗಿ ಅಲ್ಲಿ ವಿಷ್ಣುದರ್ಶನ ಮಾಡಿದರೆ ಅವರು ವಂಶಸಹಿತವಾಗಿ ನರಕಕ್ಕೆ ಬೀಳಲಿ"

ಇತ್ಥಂ ಶಾನಶಪತ್ತತ್ರ ಕುದ್ದಾಲೇಶಾಖ್ಯಮಾತನೋತ್ ।
ಮಲ್ಲಿಂಗಮರಿಮಸ್ಯಾಭಿಃ ಸಂಪೂಜ್ಯ ಘಟಸಂಭವಃ ॥೨೪॥

ಕ್ರೋಧಾದ್ದದಾಹ ತಾನ್ ಸರ್ವಾನಗಸ್ತ್ಯಶ್ಶ್ಯೋ ಮಹಾಮುನಿಃ ॥೨೫॥

॥ ಅಗಸ್ತ್ಯ ಉವಾಚ ॥

ವೇದಾಂತೇಷು ವಿಧೀಯತೇ ಚ ವಚನಂ ಭಸ್ಮ ತ್ರಿಪುಂಡ್ರಾದಿಕಂ
ರುದ್ರಾಕ್ಷಾಭರಣಂ ಶಿವಾಂಘ್ರಿಪಯಸಾಂ ಪಾನಂ ಪ್ರಸಾದಾದನಂ ।
ಧ್ಯಾನಂ ತಸ್ಯ ತದನ್ಯಸರ್ವವಿಷಯತ್ಯಾಗೋ ನೃಣೋಹೋದಿತಂ
ಸರ್ವಂ ತ್ಯಜ್ಯ ಚ ಕಾಮಮಾರ್ಗನಿರತಾ ವಿಪ್ರಾಃ ಕಥಂ ವೈದಿಕಾಃ ॥೨೬॥

ಪಶ್ಚಿಮಾಭಿಮುಖಂ ಲಿಂಗಂ ಬಿಲ್ವೈರಭ್ಯರ್ಚ್ಯ ಪಂಕಜೈಃ
ಧೂಪದೀಪೈರ್ಭಕ್ಷ್ಯಭೋಜ್ಯೈಃ ಪ್ರದಕ್ಷಿಣ ನತಿಸ್ತವೈಃ ।
ತುಷ್ಟಾವ ದೇವಂ ತತ್ರೇಶಂ ಕುದ್ದಾಲೇ ತ್ರ್ಯಂಬಕಂ ಹರಂ ॥೨೭॥

---

ಎಂದು ಅಗಸ್ತ್ಯಮಹಾಮುನಿಯು ಅವರನ್ನು ಶಪಿಸಿ, ಅಲ್ಲಿ ಕುದ್ದಾಲೇಶನೆಂಬ ಹೆಸರಿನಿಂದ ಒಂದು ಶಿವಲಿಂಗವನ್ನು ಪ್ರತಿಷ್ಠಿಸಿ ಪೂಜಿಸಿದನು. ಮತ್ತು ತನ್ನ ಕೋಪಾಗ್ನಿಯಿಂದ ಆ ವೈಷ್ಣವರನ್ನೆಲ್ಲಾ ಸುಟ್ಟು ಭಸ್ಮಮಾಡಿದನು. ॥೨೩-೨೪-೨೫॥

ಭಸ್ಮಧಾರಣೆ, ರುದ್ರಾಕ್ಷಾಭರಣಾಲಂಕಾರ, ಶಿವಪಾದೋದಕಪ್ರಾಶನ, ಶಿವನೈವೇದ್ಯಶೇಷಭಕ್ಷಣ, ಶಿವಧ್ಯಾನ, ತದಿತರವಿಷಯಕಚಿಂತನತ್ಯಾಗ, ಇವೇ ಮುಂತಾದ ವಿಷಯಗಳು ಸಕಲ ಉಪನಿಷತ್ತುಗಳಲ್ಲಿಯೂ ಘಂಟಾಘೋಷವಾಗಿ ಉಕ್ತವಾಗಿವೆ. ವೇದಧರ್ಮಾನುಯಾಯಿಗಳಾದವರು ಹೀಗೆ ವೇದದಲ್ಲಿ ಹೇಳಿದ ಅನುಷ್ಠಾನಗಳನ್ನೆಲ್ಲಾ ಅಜ್ಞಾನದಿಂದ ತೊರೆದು, ಸ್ವೇಚ್ಛೆಯಾಗಿ ತಮಗೆ ತೋರಿದಂತೆ ನಡೆಯುವಾಗ ಈ ಬ್ರಾಹ್ಮಣರನ್ನು ವೈದಿಕರು ವೇದಧರ್ಮಾನುಯಾಯಿಗಳು ಎಂದು ಹೇಳಲು ಸಾಧ್ಯವಿದೆಯೆ? ॥೨೬॥

ಎಂದು ಹೇಳುತ್ತಾ ಅಗಸ್ತ್ಯಮಹಾಮುನಿಯು ಪಶ್ಚಿಮಾಭಿಮುಖವಾಗಿರುವ ಆ ಕುದ್ದಾಲೇಶ್ವರಲಿಂಗವನ್ನು ಬಿಲ್ವ, ಕಮಲ, ಧೂಪ, ದೀಪ, ಭಕ್ಷ್ಯ, ಭೋಜ್ಯಾದಿ ನೈವೇದ್ಯ, ಪ್ರದಕ್ಷಿಣ, ನಮಸ್ಕಾರಾದಿಗಳಿಂದ ಪೂಜಿಸಿ, ಈರೀತಿ ಭಕ್ತಿಯಿಂದ ಸ್ತುತಿಸಿದನು. ॥೨೭॥

|| ಅಗಸ್ತ್ಯ ಉವಾಚ ||

ನಮಸ್ತೇ ಶರ್ವಾಯ ತ್ರಿಪುರಮಥನಾಂತಾಯ ಭವತೇ
ನಮೋ ವಾಕ್ಯೈರ್ವೇದೈಃ ಪ್ರತಿಪದನಮೋಂತೈಕಶರಣಾಃ ।
ಅತಸ್ತ್ವಂ ಸರ್ವೇಷಾಂ ಪತಿರಸಿ ಮಹಾದೇವ ಭಗವನ್
ಉದಾಸೀನೋ ಮಾಭೂಸ್ತವ ನಮನಭಾವೇಷು ವರದ ॥೨೮॥

ಯೋ ವೈ ರುದ್ರಸ್ತ್ವಮೀಶೋ ಹರಹರಿವಿಧಿಭಿಃ ಪಾಲಯಸ್ಯತ್ರಿಲೋಕಂ
ಯಾಂತಿ ವೇದಾಶ್ಚಯಸ್ಮಿನ್ ನಿಖಿಲ ಸುರವರಲೋಕಂ ಮಾಲೋಕಯಾಪ್ಯ।
ಪೂಷೇಂದುಕ್ಷಿತಿ ವಹ್ನಿವಾಯು ಜಲಖೈರ್ಯುರ್ಕ್ತಸ್ತ್ವಮಷ್ಟಾತ್ಮಕಃ
ಕಸ್ತ್ವಾಂ ವೇದ ಭವಾನಗಾಧಮಹಿಮಾ ತ್ವಾಂ ಸ್ತೋತುಮೀಶೋತ್ರ ಕಃ॥೨೯

ಇತ್ಥಂ ಮುನಿಸ್ಸಕುದ್ದಾಲೇ ಪೂಜಯಾಮಾಸ ಶಂಕರಂ ।
ತದಾ ಪ್ರಭೃತಿ ತತ್ಕ್ಷೇತ್ರಂ ರುದ್ರಪ್ರೀತಿಕರಂ ತ್ವಭೂತ್ ॥೩೦॥

---

ಸರ್ವರಿಗೂ ಸುಖಕರನೆನಿಸಿದ ಮಹಾದೇವನೇ, ತ್ರಿಪುರದಾಹಕನೇ, ನಿನ್ನ ಪ್ರತಿ ನಾಮಗಳಿಗೂ ನಮಶ್ಶಬ್ದವನ್ನುಪಯೋಗಿಸುತ್ತಾ ವೇದವಾಕ್ಯಗಳು ನಿನ್ನನ್ನೇ ಮೊರೆಹೊಕ್ಕಿರುವುವು. ಅದರಿಂದಲೇ ನೀನು ಸರ್ವಲೋಕೇಶ್ವರನು, ಹೀಗೆ ಭಕ್ತರಿಗೆ ವರಪ್ರದನಾಗಿರುವ ಮಹಾನುಭಾವನೇ, ನೀನು ಎಂದಿಗೂ ನನ್ನನ್ನು ಉದಾಸೀನದಿಂದ ಕಡೆಗಾಣಬೇಡ. ಮಹಾದೇವನೇ ನೀನು ರಕ್ಷಿಸು. ॥೨೮॥

ಮಹೇಶ್ವರನೇ, ನೀನು ಬ್ರಹ್ಮ, ವಿಷ್ಣು, ರುದ್ರರೂಪದಿಂದ ಜಗತ್ತನ್ನು ಸೃಷ್ಟಿಸಿ, ರಕ್ಷಿಸಿ, ಹಾಗೆಯೇ ನಾಶವನ್ನೂ ಗೊಳಿಸುವೆ. ಸೂರ್ಯ, ಚಂದ್ರ, ಭೂಮಿ, ಅಗ್ನಿ, ವಾಯು, ಜಲ, ಯಜಮಾನ, ಆಕಾಶ ಈ ಎಂಟು ರೂಪಗಳಿಂದ ಕೂಡಿರುವ ನಿನ್ನನ್ನು ಅಷ್ಟಮೂರ್ತಿಯೆಂದು ಹೇಳುತ್ತಿರುವರು. ಇಂತಹ ಸರ್ವಲೋಕಾಧಿಪತಿಯಾದ ನೀನು ದೇವಲೋಕವನ್ನು ರಕ್ಷಿಸುವಂತೆ ನನ್ನನ್ನೂ ಕಾಪಾಡು. ಇಂತಹ ಮಹಾಮಹಿಮನಾದ ನಿನ್ನನ್ನು ಯಾರು ತಾನೆ ಸ್ತೋತ್ರಮಾಡಿ ಮೆಚ್ಚಿಸಿಯಾರು? ಮಹಾದೇವನೇ, ಸಮಸ್ತ ವೇದರಾಶಿಯನ್ನೂ ಅಡಗಿಸಿಕೊಂಡಿರುವವನೇ, ನನ್ನನ್ನು ರಕ್ಷಿಸು" ಎಂದು ಅಗಸ್ತ್ಯಮಹಾಮುನಿಯು ಕುದ್ದಾಲಕೇಶ್ವರನನ್ನು ಭಕ್ತಿಯಿಂದ ಪ್ರಾರ್ಥಿಸಿದನು. ॥೨೯॥

ಹೀಗೆ ಅಗಸ್ತ್ಯಮಹರ್ಷಿಯು ಕುದ್ದಾಲಕ್ಷೇತ್ರದಲ್ಲಿ ಶಂಕರನನ್ನು ಪೂಜಿಸಲು, ಅಂದಿನಿಂದ ಆ ಕ್ಷೇತ್ರವು ಕುದ್ದಾಲಕ್ಷೇತ್ರವೆಂಬ ಹೆಸರಿನಿಂದ ಶಿವಪ್ರೀತಿಕರವಾದ

ತಾಮ್ರಪರ್ಣ್ಯೋರ್ಽತ್ತರವಹಾ ಜಲೇ ಸ್ನಾತ್ವಾ ಮಹೇಶ್ವರಂ ।
ದೃಷ್ಟ್ವಾ ದೇವಂ ತ್ರಿಕುದ್ದಾಲಂ ನರಾಣಾಂ ಪಾಪಭೀಃ ಕುತಃ ॥೩೧॥
ವಿಷ್ಣುಃ ತ್ರಿನಗರೇ ವಾಸಂ ಚಕ್ರೇಽಗಸ್ತ್ಯೋ ಮಹಾಮುನಿಃ ॥೩೨॥

॥ ಸ್ಕಂದ ಉವಾಚ ॥

ತ್ರಿಕುದ್ದಲಸಂಸ್ಥಂ ಪರಂ ಭೀತಿನಾಶಂ
ಮಹೇಶಂ ಸಮಾಲೋಕ್ಯ ಮುಕ್ತಾ ನರಾಃ ಸ್ಯುಃ ।
ಮುನೇ ತಾಮ್ರಪರ್ಣ್ಯಾ ಜಲಸ್ನಾನತೋ ವಾ
ನ ಪಾಪಾಭಿಸಂಗೋ ನರಾಣಾಂ ಭವೇದ್ವೈ ॥೩೩॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಅಷ್ಟಚತ್ವಾರಿಂಶೋಽಧ್ಯಾಯಃ

---

ಕ್ಷೇತ್ರವೆನಿಸಿರುವುದು. ಉತ್ತರದಿಗಭಿಮುಖವಾಗಿ ಹರಿಯುವ ತಾಮ್ರಪರ್ಣೀನದಿಯಲ್ಲಿ ಸ್ನಾನಮಾಡಿ, ತ್ರಿಕುದ್ದಾಲೇಶ್ವರಲಿಂಗವನ್ನು ದರ್ಶನಮಾಡಿದ ಮನುಜರಿಗೆ ಪಾಪಭಯವೇ ತೋರುವುದಿಲ್ಲ. ಅಂತಹ ದಿವ್ಯ ಕ್ಷೇತ್ರದಲ್ಲಿ ಅಗಸ್ತ್ಯಮಹಾಮುನಿಯು ವಿಷ್ಣುವಿನೊಡನೆ ಅಲ್ಲಿಯೇ ವಾಸಮಾಡುತ್ತಿರುವನು. ॥೩೦-೩೧॥

ಒಟ್ಟಿನಲ್ಲಿ ಜೈಗೀಷವ್ಯಮಹಾಮುನಿಯೇ, ತ್ರಿಕುದ್ದಾಲಕ್ಷೇತ್ರದಲ್ಲಿ ನೆಲಸಿರುವ ಶಿವಲಿಂಗವು ಮಹಾಪಾಪನಾಶಕವಾದುದು. ಅಲ್ಲದೆ ದರ್ಶನ ಮಾಡುವವರ ಭಯವೂ ತೊಲಗಿ, ಸರ್ವಸುಖಗಳೂ ಒದಗಿ ಕೊನೆಗೆ ಅವರಿಗೆ ಮುಕ್ತಿಯೇ ದೊರಕುವುದು. ಹಾಗೆಯೇ ತಾಮ್ರಪರ್ಣೀನದೀಸ್ನಾನ, ಈ ಶಿವಲಿಂಗದರ್ಶನ ಇದರಿಂದ ಸಕಲ ಭಕ್ತರೂ ಪಾಪಮುಕ್ತರಾಗಿ ಶಿವಸಾನ್ನಿಧ್ಯವನ್ನೈದುವುದರಲ್ಲಿ ಯಾವ ಸಂಶಯವೂ ಇಲ್ಲವೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಹೇಳಿದನು. ॥೩೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಸಪ್ತಮಾಂಶದ ಉತ್ತರಾರ್ಧದಲ್ಲಿ ನಲವತ್ತೆಂಟನೆಯ ಅಧ್ಯಾಯವು ಸಮಾಪ್ತವಾದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

### ಸಪ್ತಮಾಂಶೇ ಉತ್ತರಾರ್ಧೇ

## ಏಕೋನಪಂಚಾಶೋಽಧ್ಯಾಯಃ

|| ಶ್ರೀಸ್ಕಂದ ಉವಾಚ ||

ತದ್ದಕ್ಷಿಣೇ ಶಿವಸ್ಥಾನಂ ಪಾಪನಾಶಾಭಿಧಂ ಮಹತ್ ।
ಜನಾನಾಂ ವರವಾಸಾನಾಂ ಸರಸ್ತತ್ರಾಸ್ತಿ ನಿರ್ಮಲಂ ॥೧॥

ತಸ್ಮಿನ್ ಸರಸಿ ಯಃ ಸ್ನಾತ್ವಾ ಪಾಪಚಕ್ರಸ್ಯ ಮೋಚಕೇ ।
ಗಿರೇಃ ಶೃಂಗಾತ್ಪತಂತೀ ಚ ಧಾರಯಾ ತಾಮ್ರಪರ್ಣಿಕಾ ॥೨॥

ಯಃ ಸ್ನಾಯಾತ್ತತ್ರ ಧಾರಾಯಾಂ ಪತಂತ್ಯಾಂ ಚ ಗಿರೇಸ್ತಟಾತ್ ।
ತದಂಗಸಂಗತಂ ಪಾಪಂ ವಿನಷ್ಟಮಖಿಲಂ ಭವೇತ್ ॥೩॥

---

## ನಲವತ್ತೊಂಬತ್ತನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಮುಂದಿನ ಶಿವಕ್ಷೇತ್ರಮಹಿಮೆಯನ್ನು ವಿವರಿಸತೊಡಗಿದನು—ತ್ರಿಕುದ್ದಾಲಕ್ಷೇತ್ರದ ದಕ್ಷಿಣಭಾಗದಲ್ಲಿ ಪಾಪನಾಶಕರವಾದ ಪಾಪನಾಶಿನಿಯೆಂಬ ಶಿವಸ್ಥಾನವೊಂದಿರುವುದು. ಅಲ್ಲಿ ನಿರ್ಮಲವೂ, ಪವಿತ್ರವೂ ಆದ ಸರೋವರವೊಂದಿರುವುದು. ಅಲ್ಲಿ ಪರ್ವತಾಗ್ರದಿಂದ ತಾಮ್ರಪರ್ಣೀನದಿಯ ಧಾರೆಯೊಂದು ಬೀಳುವುದು. ಅಲ್ಲಿ ಸ್ನಾನ ಮಾಡುವುದರಿಂದ ಸಮಸ್ತ ಪಾಪಸಂಘವೂ ನಿವಾರಣೆಯಾಗುವುದು. ||೧-೨||

ಪರ್ವತತಟದಿಂದ ಬೀಳುವ ಆ ತಾಮ್ರಪರ್ಣೀಧಾರೆಯಲ್ಲಿ ಸ್ನಾನಮಾಡುವವನ ಸಕಲ ಪಾಪರಾಶಿಯೂ ನಿವಾರಣೆಯಾಗುವುದು ಪೊರೆಬಿಟ್ಟ ಸರ್ಪದಂತೆಯೂ,

ಜೀರ್ಣತ್ವಚವಿನಿರ್ಮುಕ್ತೋ ಯಥಾ ಭಾತಿ ಮಹೋರಗಃ ।
ಯಥಾ ಮೇಘಗಣೈರ್ಮುಕ್ತೋ ಭ್ರಾಜತೇ ದಿವಿ ಭಾನುಮಾನ್ ॥೪॥

ತಥೈವ ಧಾರಾತ್ರಿತಯಸ್ನಾನಕೃನ್ಮಾನವೋ ಭವೇತ್ ।
ಸ್ನಾತ್ವಾ ಪಾಪವಿನಾಶಾಖ್ಯೇ ಸರಸಿ ಸ್ವಪಿತೄನ್ ಸುರಾನ್ ॥೫॥

ಸಂತರ್ಪಯೇಚ್ಚ ವಿಧಿವತ್ಪಂಚಾಶತ್ಪಿತೃವಂಚಕಃ ।
ಅಗಸ್ತ್ಯಾದ್ಯಾಶ್ಚ ಮುನಯಃ ಸಸುರಾಸುರಮಾನವಾಃ ॥೬॥

ಅತ್ರ ಸ್ನಾತ್ವಾ ವಿರಜಸೋ ಅಭವಂಸ್ತತ್ರ ಸಂಪ್ಲವಾತ್ ।
ಪಾಪನಾಶೇಶ್ವರಂ ತತ್ರ ಸಮಭ್ಯರ್ಚ್ಯ ದಿವೌಕಸಃ ॥೭॥

ಸ್ತುವಂತಿ ಸ್ತುತಿಭಿಸ್ತತ್ರ ಪಾಪನಾಶೇಶ್ವರಂ ವಿಭುಂ ॥೮॥

॥ ದೇವಾ ಊಚುಃ ॥

ಅಂಭೋ ಮುಚೇ ಭಗವತೇ ಸ ಸುರಾಸುರೌಘ
ಪೂಜ್ಯಾಯ ಇಜ್ಯಾಯ ನಮೋಽಸ್ತು ನಿತ್ಯಂ ।

---

ಮೇಘಾವರಣವಿಲ್ಲದಿರುವ ಸೂರ್ಯನಂತೆಯೂ ಆತನು ಪಾಪನಿರ್ಮುಕ್ತನಾಗಿ ಶೋಭಿಸುವನು. ॥೩-೪॥

ಅಲ್ಲಿ ಬೀಳುವ ತ್ರಿಧಾರೆಗಳಲ್ಲಿಯೂ ಸ್ನಾನಮಾಡಿ, ಹಾಗೆಯೇ ಪಾಪನಾಶಿನಿ ಯೆಂಬ ಕೊಳದಲ್ಲಿ ಮುಳುಗಿ, ಅಲ್ಲಿ ದೇವರ್ಷಿಪಿತೃತರ್ಪಣಗಳನ್ನು ನೆರವೇರಿಸುವ ಮಾನವನು ತನ್ನ ಹಿಂದಿನ ಐವತ್ತು ಪಿತೃಗಳನ್ನೂ ಉದ್ಧರಿಸುವನು. ಆಗಸ್ತ್ಯರೇ ಮೊದಲಾದ ಮಹರ್ಷಿಗಳೂ, ದೇವರಾಕ್ಷಸರೂ, ಮಾನವವರ್ಗವೂ ಅಲ್ಲಿ ಸ್ನಾನ ಮಾಡಿ ಪಾಪಮುಕ್ತರಾಗಿರುವರು. ॥೫-೬॥

ಮತ್ತು ದೇವತೆಗಳೆಲ್ಲರೂ ಸೇರಿ ಅಲ್ಲಿ ಪಾಪನಾಶೇಶ್ವರನೆಂಬ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠಾಪಿಸಿ ವಿಧವಿಧವಾಗಿ ಪೂಜಿಸಿ ಹೀಗೆ ಸ್ತೋತ್ರಮಾಡಿರುವರು. ॥೭-೮॥

ಪ್ರಪಂಚರಕ್ಷಣಾರ್ಥವಾಗಿ ಜಲವರ್ಷಮಾಡುವ ಮೇಘರೂಪಿಯಾದ ಮಹಾತ್ಮನೇ, ನೀನು ಸಮಸ್ತ ದೇವಾಸುರರ ಗುಂಪಿಗೂ ಪೂಜ್ಯನಾಗಿರುವೆಯಲ್ಲವೆ!

ಶೂಲಾಯುಧಾದ್ಯ ಭಗವನ್ನವ ಪಾಪನಾಶ
ಶ್ರೀ ವ್ಯೋಮಕೇಶ ಪಶುಪಾಶವಿನಾಶಕೇಶ ॥೯॥

ಆಕಾಶಕೇಶಗರಧೃಕ್ಪ್ರಸಿತಾವಭಾಸ ॥೧೦॥

ಶಂಭೋ ತ್ವದುತ್ತುಂಗಕಪರ್ದಸಂಗ
ತರಂಗಿಣೀಯಂ ಶಿವತಾಮ್ರಪರ್ಣೀ ।
ಸಮಾರ್ಗಶೀರ್ಷೇ ಹರತಿ ತ್ವಘೌಘಾನ್
ಪಾಪಾದ್ರಿಭಂಗಂ ಕುರುತೇ ಪ್ರಸಾದಾತ್ ॥೧೧॥

ಗಿರೇಸ್ಸಂಪಾತಜಾಸ್ತತ್ರ ಪತಂತಿ ಮಧುಬಿಂದವಃ ।
ಮಧುಪತನೀಶಾಖ್ಯ ಸ್ವಚ್ಛೇ ಶಿರಸಿ ಸತ್ತಮೇ ॥೧೨॥

ತತ್ರ ತಲ್ಲಿಂಗಮುತ್ಕೃಷ್ಟಂ ದೃಷ್ಟ್ವಾ ಪಾಪೈಃ ಪ್ರಮುಚ್ಯತೇ ।
ತಾಮ್ರಪರ್ಣೀ ಸಮುದ್ಭೇದಂ ದೃಷ್ಟ್ವಾ ಸ್ನಾತ್ವಾ ಮಹೇಶ್ವರಂ ॥೧೩॥

---

ಜ್ಞಾನಪ್ರದಾಯಕನೆನಿಸಿ, ನಿತ್ಯವೂ ಶೂಲಾದ್ಯಾಯುಧಗಳನ್ನು ಧರಿಸಿ, ಭಕ್ತರ ಸಕಲ ಪಾಪರಾಶಿಯನ್ನೂ ನಿರ್ಮೂಲಗೊಳಿಸುವ ವ್ಯೋಮಕೇಶನೇ, ಪಶುಸದೃಶರಾದ ಅಜ್ಞಾನಿಗಳ ಅಜ್ಞಾನವನ್ನು ನಾಶಗೊಳಿಸುವ ಮಹೇಶ್ವರನೇ, ನಿನಗೆ ನಮಸ್ಕಾರ.॥೯॥

ವ್ಯೋಮಕೇಶನೇ, ವಿಷಧರನೇ, ವಿಭೂತಿಭೂಷಿತನೇ, ಶಂಕರನೇ, ನಿನ್ನ ಜಟಾಜೂಟದ ಸಂಪರ್ಕದಿಂದ ಶಿವತಾಮ್ರಪರ್ಣೀ ಎಂಬ ಹೆಸರಿನಿಂದ ಹರಿದು ಬರುವ ಈ ನದಿಯ ಧಾರೆಯು ವಿಶೇಷವಾಗಿ ಮಾರ್ಗಶೀರ್ಷಮಾಸದಲ್ಲಿ ಭಕ್ತರ ಸಕಲ ಪಾಪರಾಶಿಯನ್ನು ನಿವಾರಿಸುವುದಲ್ಲವೆ! ಮತ್ತು ಈ ನದಿಯು ನಿನ್ನ ಅನುಗ್ರಹಬಲದಿಂದ ಪಾಪನಾಶಕರವಾದ ಮಹಿಮೆಯನ್ನು ಪಡೆದಿರುವುದಲ್ಲವೆ! ॥೧೦-೧೧॥

ಈ ನದಿಯ ಧಾರೆಗಳು ಪರ್ವತಕ್ಕೆ ಸಂಪರ್ಕವಾಗುವ ಸ್ಥಳಗಳಿಂದ ಮಧು ಬಿಂದುಗಳು ಅಲ್ಲಿಯೇ ಕೆಳಗಿರುವ ಮಧುಪತನೀಶ ಲಿಂಗದಮೇಲೆ ಬೀಳುವುವು. ಅಂತಹ ಶಿವಲಿಂಗವನ್ನೂ, ಹಾಗೆ ತಾಮ್ರಪರ್ಣೀಧಾರೆಯು ಬೀಳುವುದನ್ನೂ, ಅಲ್ಲಿಯೇ ಇರುವ ಅಪರ್ಣಾ (ಪಾರ್ವತಿ) ವಿಗ್ರಹವನ್ನೂ ದರ್ಶನಮಾಡುವವರಿಗೂ, ಅಲ್ಲಿಯೇ ನಿಂತು ತಾಮ್ರಪರ್ಣೀಸ್ನಾನಮಾಡುವವರಿಗೂ ಸಕಲ ಪಾಪಭಯವೂ

ತಾಮ್ರಪರ್ಣೀಮಪರ್ಣಾಂ ಚ ದೃಷ್ಟ್ವಾ ಮುಚ್ಯಂತಿ ಪಾತಕೈಃ ।
ತದ್ವೈ ಪುಣ್ಯತಮಂ ಸ್ಥಾನಂ ದರ್ಶನಾತ್ಪಾಪನಾಶನಂ ॥೧೪॥

ಸರ್ವಕಾಮಪ್ರದಂ ಪುಂಸಾಂ ತತ್ರ ಸ್ನಾತ್ವಾ ಪಾಪನಾಶನಂ ।
ತತ್ರಾಸ್ತಿ ದಕ್ಷಿಣೇ ತಸ್ಯಾಂ ದಿಶಿ ಮಧ್ಯಾರ್ಜುನಂ ಸ್ಥಲಂ ॥೧೫॥

ಅರ್ಜುನದ್ರುಮಮೂಲೇತ್ರ ದೃಷ್ಟ್ವಾ ಲಿಂಗಂ ಕಪರ್ದಿನಂ ।
ಚಿತ್ರಾನದ್ಯಾಂ ನರಸ್ಸ್ನಾತ್ವಾ ಚಿತ್ರಪಾಪೈಃ ಪ್ರಮುಚ್ಯತೇ ॥೧೬॥

ತ್ರಿನೇತ್ರಂ ತತ್ರ ಸಂಪೂಜ್ಯ ಮಧ್ಯಾರ್ಜುನಸಮಾಹ್ವಯಂ ।
ಸರ್ವಸಿದ್ಧಿಮವಾಪ್ನೋತಿ ಮುಕ್ತಪಾಪೋ ವಿರಾಜತೇ ॥೧೭॥

ರಾಜರಾಜೋ ಯಕ್ಷಪತಿಸ್ತ್ರ್ಯಕ್ಷಂ ಮಧ್ಯಾರ್ಜುನೇಶ್ವರಂ ।
ಸಂಪೂಜ್ಯ ತತ್ರ ದೇವೇಶಂ ತುಷ್ಟಾವೇಶಂ ಕೃಪಾಕರಂ ॥೧೮॥

ನಮಸ್ತೇ ದೇವಾಯ ತ್ರಿಪುರಹರದಕ್ಷಾಧ್ವರಭಿದೇ
ವಿಚಿತ್ರಂ ತೇ ಶಂಭೋ ಜಗದುದಯರಕ್ಷಾದಿಕರಣಂ ।

---

ನಿವಾರಣೆ ಯಾಗುವುದು. ಅದು ಅತ್ಯಂತ ಪುಣ್ಯಸ್ಥಾನವೆನಿಸಿಕೊಂಡಿರುವುದು. ಅದರ ದರ್ಶನವೇ ಪುಣ್ಯಪ್ರದವಾದುದು. ||೧೨-೧೩-೧೪||

ಅದರ ದಕ್ಷಿಣ ಭಾಗದಲ್ಲಿ ಮಧ್ಯಾರ್ಜುನೇಶಕ್ಷೇತ್ರವೆಂಬ ಒಂದು ಪವಿತ್ರ ಸ್ಥಾನವಿರುವುದು. ಅಲ್ಲಿ ಒಂದು ಅರ್ಜುನವೃಕ್ಷವೂ (ಬಿಳೀ ಮತ್ತಿಮರ) ಅದರ ಕೆಳಭಾಗದಲ್ಲಿ ಶಿವಲಿಂಗವೂ ಅಲ್ಲಿಯೇ ಚಿತ್ರಾನದಿಯೂ ಪ್ರವಹಿಸುತ್ತಿರುವುದು. ಅಲ್ಲಿ ಸ್ನಾನಮಾಡಿ ಆ ಶಿವಲಿಂಗ ದರ್ಶನಮಾಡಿದವರಿಗೆ ಚಿತ್ರವಿಚಿತ್ರವಾದ ಪಾಪ ರಾಶಿಯೆಲ್ಲವೂ ಪರಿಹೃತವಾಗುವುದು. ಮತ್ತು ಸಕಲೇಷ್ಟಾರ್ಥಗಳೂ ಲಭಿಸುವುವು. ||೧೫-೧೬||

ಯಕ್ಷಪತಿಯೆನಿಸಿದ ಕುಬೇರನು ಈ ಮಧ್ಯಾರ್ಜುನೇಶ್ವರಕ್ಷೇತ್ರಕ್ಕೆ ಬಂದು ಅಲ್ಲಿ ಸ್ನಾನಾದಿಗಳಿಂದ ಶುದ್ಧನಾಗಿ ಮಧ್ಯಾರ್ಜುನೇಶ್ವರನನ್ನು ಪೂಜಿಸಿ ಹೀಗೆ ಸ್ತೋತ್ರಮಾಡಿರುವನು. ||೧೭-೧೮||

"ತ್ರಿಪುರಗಳನ್ನೂ ದಕ್ಷಯಾಗವನ್ನೂ ನಾಶಮಾಡಿದ ಮಹಾದೇವನೇ, ನಿನಗೆ ನಮಸ್ಕಾರ. ಜಗತ್ತಿನ ಸೃಷ್ಟಿ, ಸ್ಥಿತಿಗಳಿಗೆ ಕಾರಣನೂ, ತ್ರಿನೇತ್ರವಿಶಿಷ್ಟತ್ವಾದಿ

ತ್ರಿಣೇತ್ರಂ ತೇ ರೂಪಂ ಗರಧರಮುಮಾಶಂಕರ ವಿಭೋ
ಪ್ರಪನ್ನಸ್ತ್ವಂ ಮೇದ್ಯ ವಿತರ ವರಮುಹೋ ಹರ ಸದಾ ॥೧೯॥

ಏವಂ ತತ್ರಾರ್ಜುನೇಶಾನಂ ಸಂಪೂಜ್ಯೈವಂ ಮಹೇಶ್ವರಂ ।
ತತ್ರ ವೈಶ್ರವಣೋ ದೇವಂ ಯಕ್ಷರಾಜತ್ವಮಾಪ್ತವಾನ್ ॥೨೦॥

ತತ್ರೈವ ನದ್ಯಸ್ಸಪ್ತೈವ ಪ್ರವಹಂತ್ಯಃ ಸುಪಾವನಾಃ ।
ತಾಸಾಂ ಮುಖಾನಿ ಸರ್ವಾಣಿ ತಾಮ್ರಸಾಗರ ಸಂಗಮೇ ॥೨೧॥

ಶಿವಲಿಂಗಾನಿ ಭೂರೀಶಸ್ತಾಮ್ರಪರ್ಣ್ಯಾಸ್ತಟೇ ಯುಗೇ ।
ಶಿವಕ್ಷೇತ್ರಾಣಿ ತತ್ರೈವ ವರ್ತತೇ ವಚ್ಮಿ ತಚ್ಛೃಣು ॥೨೨॥

ಬ್ರಹ್ಮೇಶಂ ಹರಿಕೇಶಂ ಚ ತ್ರಿನೇತ್ರಂ ಗದದಾರಣಂ ।
ಮಾತಂಗಹರಣಂ ತತ್ರ ತಂ ದೃಷ್ಟ್ವಾ ಪಾಪಭಂಜನಂ ॥೨೩॥

ಗಂಡಶೂಲಂ ತ್ರಿಶೂಲೇಶಂ ಭಕ್ತೇಶನಯನಾರ್ಚಿತಂ ।
ಸ್ಥಾನೇಷು ದಶಕಂ ಮುಖ್ಯಂ ಸುವರ್ಣಗಣಪೂಜಿತಂ ॥೨೪॥

---

ಮಹಿಮಾಭರಿತನೂ, ವಿಷಧರನೂ ಆಗಿರುವ ಪರಶಿವನೇ, ನಿನ್ನನ್ನು ಈಗ ಮೊರೆ ಹೊಕ್ಕಿರುವೆನು. ಅನುಗ್ರಹಮಾಡಿ ನನ್ನ ಇಷ್ಟಾರ್ಥವನ್ನೆಲ್ಲಾ ನೆರವೇರಿಸು"॥೧೯॥

ಹೀಗೆ ವೈಶ್ರವಣನೆನಿಸಿದ ಕುಬೇರನು ಅರ್ಜುನೇಶ್ವರನನ್ನು ಪೂಜಿಸಿ ಅದರಿಂದಲೇ ಯಕ್ಷರಾಜಪದವಿಯನ್ನು ಹೊಂದಿದನು. ಅಲ್ಲಿಂದ ಮುಂದೆ ತಾಮ್ರ ಪರ್ಣೀ ನದಿಯು ಏಳು ಭಾಗಗಳಾಗಿ ಹರಿದು ಸಮುದ್ರವನ್ನು ಸೇರುವುದು. ಆ ಸಾಗರ ಸಂಗಮಸ್ಥಳಗಳಲ್ಲೆಲ್ಲಾ ಒಂದೊಂದು ಶಿವಲಿಂಗವು ಪ್ರತಿಷ್ಠಾಪಿತವಾಗಿದೆ. ಅವೆಲ್ಲಾ ಶಿವಕ್ಷೇತ್ರಗಳೆನಿಸಿ ಪ್ರಸಿದ್ಧಿಗೊಂಡಿವೆ. ಅವುಗಳ ಮಹಿಮೆಯನ್ನು ವಿವರಿಸಿ ಹೇಳುವೆನು ಕೇಳು, ಎಂದು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಮುಂದಿನ ವಿಷಯವನ್ನು ವಿವರಿಸಲಾರಂಭಿಸಿದನು. ॥೨೦-೨೧-೨೨॥

ಆ ತಾಮ್ರಪರ್ಣೀ ಸಂಗಮ ಸ್ಥಳದಲ್ಲಿ ಬ್ರಹ್ಮೇಶ್ವರ, ಹರಿಕೇಶೇಶ್ವರ, ತ್ರಿನಯ ನೇಶ್ವರ, ಗದದಾರಣೇಶ್ವರ, ಮಾತಂಗಹರಣೇಶ್ವರ, ಪಾಪಭಂಜನೇಶ್ವರ, ಗಂಡಶೂಲೇ ಶ್ವರ, ತ್ರಿಶೂಲೇಶ್ವರ, ಭಕ್ತೇಶ್ವರ, ನಯನಾರ್ಚಿತೇಶ್ವರ ಎಂಬ ಹೆಸರಿನಿಂದ ಹತ್ತು

ಸಿಂಧುತೀರೇ ಹರಿಃ ಪೂರ್ವಂ ಶಂಕರೇಣೈಕತಾಮಗಾತ್
ನಾರಾಯಣಃ ಶಂಕರಾಖ್ಯಸ್ತಸ್ಮಿನ್ನೈಕ್ಯಂ ದದೌ ಚ ಸಃ ।
ತಲ್ಲಿಂಗಸಂಗಮಭಿವಾಂಛತಿ ಮಾನಸಂ ಮೇ
ನಾರಾಯಣೋ ಭವ ವಿಭೋ ಶಿವಶಂಕರಸ್ತ್ವಂ ॥೨೫॥

ಇತಿ ಶ್ರೀ ಶಿವರಹಸ್ಯೇ ಸಪ್ತಮಾಂಶೇ ಉತ್ತರಾರ್ಧೇ
ಪಾಪನಾಶಶಂಕರನಾರಾಯಣಾದಿಸ್ಥಾನವೈಭವೋ
ನಾಮ ಏಕೋನಪಂಚಾಶೋಽಧ್ಯಾಯಃ

---

ಶಿವಲಿಂಗಗಳು ಹತ್ತು ಕ್ಷೇತ್ರಗಳಲ್ಲಿ ಪ್ರಸಿದ್ಧಿಗೊಂಡಿರುವುವು. ಅವೆಲ್ಲವೂ ಸುವರ್ಣ ಗಣಗಳಿಂದ ಪೂಜಿತವಾಗಿರುವುವು. ॥೨೩-೨೪॥

ಆ ಸಮುದ್ರತೀರದಲ್ಲಿಯೇ ನಾರಾಯಣನು ಶಂಕರಲಿಂಗಗಳನ್ನು ಬಹುವಾಗಿ ಪೂಜಿಸಿ, ಅವನ ಅನುಗ್ರಹಬಲದಿಂದ ಶಿವಲಿಂಗದಲ್ಲಿ ಐಕ್ಯನಾದನು. ಅದೇ ಶಂಕರನಾರಾಯಣಕ್ಷೇತ್ರ. ಅಂತಹ ಸುಕೃತವು ವಿಷ್ಣುವಿಗೆ ಅಲ್ಲಿ ಶಿವಾನುಗ್ರಹದಿಂದ ಲಭಿಸಿತು. ಆದ್ದರಿಂದ ಎಲೈ ಜೈಗೀಷವ್ಯಾದಿಗಳೇ, ನನಗೂ ಸಹ ಅಲ್ಲಿಯೇ ಸದಾ ವಾಸಮಾಡಬೇಕೆಂಬ ಮನಸ್ಸು ಉತ್ಪನ್ನವಾಗುತ್ತಿರುವುದು. ನಾರಾಯಣನಂತೆ ನಾವೂ ಸಹ ಅಲ್ಲಿ ನೆಲಸಿ ಶಿವಶಂಕರಸಾರೂಪ್ಯವನ್ನು ಹೊಂದಲು ಪ್ರಯತ್ನಿಸಬೇಕು. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಕ್ಷೇತ್ರಮಹಿಮೆಯನ್ನು ವಿವರಿಸಿದನು. ॥೨೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಳನೆಯ ಅಂಶದ ಉತ್ತರಾರ್ಧದಲ್ಲಿ ಪಾಪನಾಶಕರವಾದ
ಶಂಕರ ನಾರಾಯಣಸ್ಥಾನಗಳ ವೈಭವವನ್ನು ವಿವರಿಸುವ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಉಗ್ರಾಖ್ಯೇ

## ಸಪ್ತಮಾಂಶೇ ಉತ್ತರಾರ್ಧೇ

## ಪಂಚಾಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ತದುತ್ತರೇ ಸ್ಥಾನಯುಗ್ಮಂ ಪತ್ರೀಶಂ ಸಿದ್ಧಿದೇಶ್ವರಂ ।
ಸಿದ್ಧೈರಾರಾಧಿತಂ ಕ್ಷೇತ್ರಂ ಪಾವನಂ ತತ್ರ ಪಾಪಹಂ ॥೧॥

ಹನೂಮತಾ ಪೂಜಿತಂ ಚ ಲಿಂಗಂ ಹನುಮದೀಶ್ವರಂ ।
ಪೂಜಿತಂ ತತ್ರ ತು ಪುರಾ ಸದಾ ಹನೂಮತಾ ಸ್ತುತಂ ॥೨॥

ಸಮುದ್ರತರಣೇ ಬಾಹ್ವೋರ್ಬಲಪ್ರಮಾಥಸೋ ಬಲಂ ।
ಹನೂಮತೇ ದಿಶತ್ತದಾ ಕುರ್ವತೇ ರಕ್ಷಸಾಂವಧೇ ॥೩॥

|| ಹನೂಮಾನುವಾಚ ||

ಶಂಭೋ ನಮಸ್ತೇಽಸ್ತು ಬಲಂ ಮಮಾದ್ಯ
ಪ್ರದೇಹಿ ಬಾಹ್ವೋಶ್ಚ ಸಮುದ್ರಲಂಘನೇ ।

---

ಐವತ್ತನೆಯ ಅಧ್ಯಾಯ

ಆ ಶಿವಸ್ಥಾನದ ಉತ್ತರಭಾಗದಲ್ಲಿ, ಪತ್ರೀಶ್ವರ, ಹನುಮದೀಶ್ವರಗಳೆಂಬ ಎರಡು ಶಿವಸ್ಥಾನಗಳಿರುವುವು. ಪತ್ರೀಶಕ್ಷೇತ್ರವು ಸಿದ್ಧವಿದ್ಯಾಧರರಿಂದ ಸೇವಿತವಾಗಿ ಪವಿತ್ರವೆನಿಸಿರುವುದು. ಹನುಮದೀಶ್ವರಲಿಂಗವನ್ನು ಸಮುದ್ರಲಂಘನಕಾಲದಲ್ಲಿ ಸ್ಥಾಪಿಸಿ, ಶಕ್ತಿಯನ್ನು ಸಂಪಾದಿಸಲೋಸುಗ ಸಾಕ್ಷಾತ್ ಹನುಮಂತನೇ ಶಿವಲಿಂಗವೊಂದನ್ನು ಪೂಜಿಸಿ, ಹೀಗೆ ಸ್ತುತಿಸಿರುವನು. ||೧-೨-೩||

ಮಹಾದೇವನೇ, ಶಂಕರನೇ, ನನಗೆ ಸಮುದ್ರವನ್ನು ಹಾರುವಂತಹ

ತ್ವಾಂ ಸಂಸ್ತುವನ್ ಯಾತಿ ನರೋ ರಿಪೂನ್ಸೈ ।
ಭವೇದ್ರಣೇ ತಸ್ಯ ಬಲಂ ಜಯಶ್ಚ ॥೪॥

ನವಕೈಲಾಸಮುಖ್ಯಾನಿ ತತ್ರ ಸ್ಥಾನಾನಿ ಧೂರ್ಜಟೇಃ ।
ತಾಮ್ರಪರ್ಣ್ಯಾಸ್ತಟೇ ತಾನಿ ದೃಷ್ಟ್ವಾನ್ಯಘಹರಾಣಿ ವೈ ॥೫॥

ಭದ್ರೇಶ್ವರಂ ಸೋಮನಾಥಂ ಮಣೀಶಂ ವಾರಣೇಶ್ವರಂ ।
ಸೌರೇಶ್ವರಂ ರಾಜಗಿರಿದ್ಯುಮತೀಶಂ ಹರೇಶ್ವರಂ ॥೬॥

ಪನ್ನಗೇಶ್ವರಮಿತ್ಯೇವಂ ನವಕೈಲಾಸಸಂಜ್ಞಿತಂ ।
ತೇಷು ಸ್ಥಾನೇಷು ದೇವೇಶಂ ಲಿಂಗರೂಪಂ ಸದಾಶಿವಂ ॥೭॥

ಪೂಜಯಂತಿ ಮುನಿಶ್ರೇಷ್ಠಾ ಸುರಗಂಧರ್ವದಾನವಾಃ ।
ತತಃ ಪಾಂಡ್ಯಕವಾಟಂ ಹಿ ಕೇರಳಾ ದ್ವಾದಶೋತ್ತರಾಃ ॥೮॥

ತಾಮ್ರಸಾಗರಸಂಗೇ ವೈ ಸ್ಥಾನಂ ಪುಣ್ಯವಿವರ್ಧನಂ ।
ತ್ರಿಚಂದ್ರಪುರಮಿತ್ಯೇವಮುಬ್ಧಿತೀರೇ ಮಮೈವ ಹಿ ॥೯॥

---

ದಿವ್ಯಶಕ್ತಿಯನ್ನು ದಯಪಾಲಿಸು. ಮಾನವನು ನಿನ್ನನ್ನು ಸ್ತುತಿಸಿ ಶತ್ರುಜಯವನ್ನು ಅನಾಯಾಸವಾಗಿ ಪಡೆಯುವನಲ್ಲವೆ! ಶಂಭೋ, ನನಗೆ ಅಂತಹ ಅಮಿತವಾದ ಬಾಹುಬಲವನ್ನು ಕರುಣಿಸು. ||೪||

ತಾಮ್ರಪರ್ಣೀದಡದಲ್ಲಿ ನವಕೈಲಾಸವೆಂಬ ಹೆಸರಿನಿಂದ ಒಂಬತ್ತು ಶಿವಸ್ಥಾನಗಳು ಪ್ರಸಿದ್ಧಿಗೊಂಡಿವೆ. ಅವೆಲ್ಲವೂ ಪಾಪನಾಶಕಗಳೆಂದು ತಿಳಿದು, ದೇವಗಂಧರ್ವಾದಿಗಳೆಲ್ಲರೂ ಭಕ್ತಿಯಿಂದ ಅದನ್ನು ಪೂಜಿಸಿರುವರು. ಭದ್ರೇಶ್ವರ, ಸೋಮನಾಥೇಶ್ವರ, ಮಣೀಶ್ವರ, ವಾರಣೇಶ್ವರ, ಸೌರೇಶ್ವರ, ವಾಜಗಿರೀಶ್ವರ, ದ್ಯುಮತೀಶ್ವರ, ಹರೇಶ್ವರ, ಪನ್ನಗೇಶ್ವರ ಎಂಬ ಒಂಬತ್ತು ಶಿವಲಿಂಗಗಳು ಅಲ್ಲಿ ಪ್ರಸಿದ್ಧಗಳಾಗಿವೆ. ಅಲ್ಲಿಂದ ಮುಂದೆ, ಪಾಂಡ್ಯರಾಜನಿರ್ಮಿತವಾದ ಹನ್ನೆರಡು ಶಿವಲಿಂಗಸ್ಥಾನಗಳಿರುವುವು. ||೫-೬-೭-೮||

ತಾಮ್ರಪರ್ಣೀನದಿಯು ಸಾಗರವನ್ನು ಸೇರುವ ಸಂಗಮಸ್ಥಾನದಲ್ಲಿ ತ್ರಿಚಂದ್ರಪುರವೆಂಬ ಒಂದು ಕ್ಷೇತ್ರವಿರುವುದು. ಅಲ್ಲಿ ನನ್ನ ಹೆಸರಿನ ಸ್ಕಂದತೀರ್ಥವೆಂಬ ದಿವ್ಯ ಸರೋವರವಿರುವುದು. ಅಲ್ಲಿ ಸ್ನಾನಮಾಡುವುದರಿಂದಲೂ. ವಿಷ್ಣುವಿನಿಂದ

ದರ್ಶನಾತ್ಕ್ಷಮುದಂ ನೄಣಾಂ ಮನ್ಮೂರ್ತಿಶ್ಚ ಕೃಪಾಣಿತಃ ।
ಸ್ಕಂದತೀರ್ಥಂ ಸಾಗರೇ ವೈ ಸ್ನಾತಾನಾಂ ಪಾಪವಾರಕಂ ॥೧೦॥

ತತ್ರ ಮಾಂ ಘಟಜೋ ದೃಷ್ಟ್ವಾ ಪೂಜಯಾಮಾಸ ವೈ ಮುನಿಃ ।
ಲೋಕಾನಾಂ ತು ತ್ರಿರೂಪಾಣಾಂ ವೃದ್ಧ್ಯರ್ಥಂ ತಾಮ್ರಪರ್ಣಿಕಾ ॥೧೧॥

ಜಲಸಂಸ್ಥೋಪಕಾರಾಯ ಪ್ರಾಣಿಪಾಪಾಪನುತ್ತಯೇ ।
ಚಕಾರ ತಾಮ್ರಪರ್ಣ್ಯಾಂ ವೈ ಸೇತುಂ ವೈ ಸುರವರ್ಧಕಿಃ ॥೧೨॥

ನವಕೈಲಾಸಮುಖ್ಯೇಷು ಸ್ಥಾನೇಷು ಹರಿಣಾರ್ಚಿತಃ ।
ಮಹಾದೇವೋ ಹರೇಸ್ತುಷ್ಟ್ಯೈ ಸ್ಥಾನೇಷು ಹರಿಣಾರ್ಚಿತಃ ॥೧೩॥

ತೇಷು ಸ್ಥಾನೇಷು ನಿವಸನ್ ತುಷ್ಟಾವೇಶಂ ಹರಿರ್ಹರಂ ॥೧೪॥

॥ ಹರಿರುವಾಚ ॥

ನಮಸ್ತೇ ವಿಭೋ ಚಂದ್ರರೇಖಾವತಂಸ
ಮಹಾದೇವ ಶಂಭೋ ವಿಭೋ ಕೃತ್ತಿವಾಸ ।
ಉಮಾನಾಥ ಮನ್ಮಾಥ ಶಂಭೋ ಪ್ರಸೀದ
ಪ್ರಸಾದಂ ಮಮೇಶಾನ ವಕ್ತುಂ ಮನೋ ಮೇ ॥೧೫॥

---

ಪ್ರತಿಷ್ಠಿತವಾದ ನನ್ನ ಮೂರ್ತಿಯನ್ನು ದರ್ಶನಮಾಡುವುದರಿಂದಲೂ ಮಾನವನು ಪಾಪಮುಕ್ತನಾಗುವನು. ॥೯-೧೦॥

ಅಲ್ಲಿ ಅಗಸ್ತ್ಯಮಹರ್ಷಿಯು ನನ್ನ ಮೂರ್ತಿಯನ್ನು ಪೂಜಿಸಿ ಧ್ಯಾನಿಸಿರುವನು. ಅಲ್ಲಿಯೇ ಹರಿಯುವ ತಾಮ್ರಪರ್ಣೀನದಿಯನ್ನು ನೋಡಿ, ದೇವಶಿಲ್ಪಿಯಾದ ವಿಶ್ವಕರ್ಮನು ತ್ರಿಲೋಕಗಳನ್ನು ಉದ್ಧರಿಸಲೋಸ್ಕರವೂ, ಪ್ರಾಣಿಗಳ ಪಾಪರಾಶಿಯನ್ನು ನಿವಾರಿಸಲೋಸುಗವೂ ಆ ತಾಮ್ರಪರ್ಣೀನದಿಗೆ ದಿವ್ಯಸೇತುವೆಯೊಂದನ್ನು ನಿರ್ಮಿಸಿರುವನು. ॥೧೧-೧೨॥

ನವಕೈಲಾಸವೆಂದು ಪ್ರಸಿದ್ಧಿಗೊಂಡಿರುವ ಆ ಶಿವಸ್ಥಾನಗಳಲ್ಲಿ ಮಹಾವಿಷ್ಣುವು ಶಂಕರನನ್ನು ಬಹುವಾಗಿ ಪೂಜಿಸಿ, ಅಲ್ಲಿಯೇ ನೆಲಸಿ ಸರ್ವದಾ ಈರೀತಿ ಮಹಾದೇವನನ್ನು ಧ್ಯಾನಮಾಡುತ್ತಿರುವನು. ॥೧೩-೧೪॥

ಸರ್ವವ್ಯಾಪಿಯೇ, ಚಂದ್ರಕಲಾವತಂಸನೇ, ಮಹಾದೇವನೇ, ಚರ್ಮಾಂಬರ

ಸ್ತುತ್ವೈವಂ ತೇಷು ಕೈಲಾಸಸ್ಥಾನೇಷು ನವಧಾ ಹರಿಃ ॥೧೬॥

ಉಪಾಸಾರಾಧ್ಯ ನವಧಾ ತತ್ರ ಕುದ್ದಾಲಕಸ್ಥಲೇ
ಪಂಚೈವ ಪಂಚಕೋಶಾನಿ ತತ್ರ ಲಿಂಗಾನಿ ಧೂರ್ಜಟೇಃ ।
ಅಗಸ್ತ್ಯಾದ್ಯಾಶ್ಚ ಮುನಯಸ್ತತ್ರ ಚಿತ್ರಸಭಾಪತಿಃ ॥೧೭॥

ದೃಷ್ಟ್ವಾ ನೃತ್ಯಂತಮೀಶಾನಂ ಸ್ತುವಂತಿ ವಿಧಿವಿಷ್ಣವಃ ॥೧೮॥

॥ ಮುನಿಸುರಾ ಊಚುಃ ॥

ವಿಚಿತ್ರಂ ತವಾಪಾರ ನೃತ್ಯಂ ಪ್ರದೋಷೇ
ಪ್ರಪಶ್ಯಾಮ ನಾನ್ಯೇ ಕ್ಷಮಾತ್ರ್ಯಕ್ಷಪಾದಂ ।
ಕೃತಾರ್ಥಾ ವಯಂ ಧನ್ಯ ಮಾನ್ಯಾಗ್ರಗಣ್ಯಾಃ
ಭವಾಮೋ ಭವಾಬ್ಧೇರ್ವಿಮುಕ್ತಾಶ್ಚ ಭಕ್ತಾಃ ॥೧೯॥

---

ಧಾರಿಯೇ, ಗೌರೀಪತಿಯೇ, ಜಗದೊಡೆಯನೇ, ಲೋಕೈಕನಾಥನೇ, ನನ್ನನ್ನು ಅನುಗ್ರಹಿಸು. ನಿನ್ನನ್ನೂ ಸ್ತುತಿಸುವಂತಹ ಮನಸ್ಸನ್ನು ನನಗೆ ಅನುಗ್ರಹಿಸು. ॥೧೫॥

ಹೀಗೆಂದು ಪ್ರಾರ್ಥಿಸಿ, ಹರಿಯು ಒಂಬತ್ತು ಕೈಲಾಸಸ್ಥಾನಗಳೆನಿಸಿದ ಆ ಶಿವಲಿಂಗಗಳನ್ನೂ ದರ್ಶನಮಾಡುವ ಉದ್ದೇಶದಿಂದ ತನ್ನ ಆಕಾರವನ್ನು ಒಂಬತ್ತು ವಿಧಗಳನ್ನಾಗಿ ಮಾಡಿಕೊಂಡು ಅಲ್ಲೆಲ್ಲಾ ವಾಸಮಾಡುತ್ತಿರುವನು. ಅಲ್ಲಿಂದ ಮುಂದೆ ಪೃಥ್ವೀ, ಅಪ್ಪು, ಮೊದಲಾದ ಪಂಚಭೂತಗಳಿಂದ ನಿರ್ಮಿತವಾದ ಪಂಚ ಶಿವಲಿಂಗಗಳು ಕಂಡುಬರುವುವು. ಮತ್ತು ಜ್ಞಾನಮಂಟಪದಲ್ಲಿ ಆಗಾಗ ನರ್ತನ ಮಾಡುವ ಮಹಾದೇವನ ನಾಟ್ಯವನ್ನು ನೋಡುತ್ತಾ ಅಗಸ್ತ್ಯನೇ ಮೊದಲಾದ ಮಹರ್ಷಿಗಳೂ, ಬ್ರಹ್ಮ, ವಿಷ್ಣು ಮುಂತಾದ ದೇವತೆಗಳೂ, ಇತರ ದೇವತೆಗಳೂ, ಮಹಾದೇವನನ್ನು ಈರೀತಿ ಸ್ತೋತ್ರಮಾಡಿರುವರು. ॥೧೬-೧೭॥

ಮಹೇಶ್ವರನೇ, ಪ್ರದೋಷಕಾಲದ ನಿನ್ನ ಅಸದೃಶವಾದ ನಾಟ್ಯವನ್ನು ನೋಡುವ ಸದವಕಾಶವನ್ನು ನಮಗೆ ಒದಗಿಸಿರುವೆಯಲ್ಲವೆ! ನಮ್ಮನ್ನು ಬಿಟ್ಟರೆ ಮತ್ತಾರಿಗೂ ಈ ಭಾಗ್ಯವು ಒದಗಲಾರದು. ಇದರಿಂದಲೇ ನಾವು ಧನ್ಯರಾಗಿರುವೆವು. ಅಷ್ಟಲ್ಲದೆ ನಾವು ಸಂಸಾರಸಾಗರದಿಂದ ದಾಟಿ ಮುಂದುವರಿಯಲು ಸಮರ್ಥರಾಗಿರುವೆವು. ಇದರಲ್ಲಿ ಸಂಶಯವಿಲ್ಲ. ಎಂದು ಸಕಲ ಮುನಿಗಳೂ ದೇವತೆಗಳೂ ಪ್ರಾರ್ಥಿಸುತ್ತಿರುವರು. ॥೧೮-೧೯॥

ತತ್ಪಂಚಕನ್ಯಕಾತೀರ್ಥಂ ಸಾಗರೇ ಪಾಪನಾಶನಂ ।
ತತ್ರ ಸ್ನಾತ್ವಾ ಪಂಚಪಾಪೈರ್ಮುಚ್ಯತೇ ಮಾನವೋತ್ರ ವೈ ॥೨೦॥

ಕುಮಾರಿಕಾಪತಿಂ ದೃಷ್ಟ್ವಾ ಅನಂತಂ ಪ್ರಾಪ್ತುಮುದ್ಯತಾ ।
ರಮಾ ಪ್ರಾಪ ಪತಿಂ ತತ್ರ ಧ್ಯಾಯಂತೀ ಸ್ವಹೃದಂಬುಜೇ ॥೨೧॥

ಕನ್ಯಾ ತಂ ಪರಿಪೂಜ್ಯೈವ ದೃಷ್ಟ್ವಾ ವಿಂದತಿ ಸತ್ಪತಿಂ ।
ಅನಂತೋಽಪಿ ತತಃ ಪಶ್ಚಾತ್ಕೇರಳದ್ವಾರಮಾಸ್ಥಿತಃ ॥೨೨॥

ಭಕ್ತಕಾಮಪ್ರದಃ ಶಿಷ್ಯೇ ಅನಂತಶಯನೋ ಹರಿಃ
ಅನಂತಶಾಯೀ ದೇವಸ್ಯ ಲಿಂಗಂ ಸಂಪೂಜ್ಯ ಸಂಸ್ತುವನ್ ॥೨೩॥

॥ ಅನಂತ ಉವಾಚ ॥

ಭವೋದ್ಭವ ಜಗತ್ಪತೇ ಬಲಪ್ರಮಥನಾದ್ಯಾವ ಮಾಂ
ಪ್ರಸೀದ ದಯಯಾಧುನಾ ವಿಭುಧರೇಶ ಪಾಪಂ ಹರ ।
ಗರಾದನ ಸುರಾವನ ವಿಧಿಹರೀಂದ್ರ ವೇದಸ್ತುತ
ನಿರಂಜನಸನಾತನ ತವ ಪದಾಬ್ಜಯೋರ್ನೋ ನತಿಃ ॥೨೪॥

---

ಅಲ್ಲಿಂದ ಮುಂದೆ ಹೋದರೆ ಪಂಚಕನ್ಯಾತೀರ್ಥವೆಂಬ ಒಂದು ಪವಿತ್ರ ಕೊಳವಿರುವುದು. ಅಲ್ಲಿ ಸ್ನಾನಮಾಡಿದವರು ಪಂಚಮಹಾಪಾಪಗಳಿಂದ ಮುಕ್ತರಾಗುವರು. ಅಲ್ಲಿ ಕನ್ಯೆಯರು ಸ್ನಾನಮಾಡಿ ಪರಶಿವನನ್ನು ಧ್ಯಾನಮಾಡುವುದರಿಂದ ತಮಗೆ ಪ್ರಿಯನಾದ ಪತಿಯನ್ನು ಪಡೆಯುವರು. ಹಿಂದೆ ಲಕ್ಷ್ಮೀದೇವಿಯು ಮಹಾವಿಷ್ಣುವನ್ನು ವರಿಸಲೋಸುಗ ತನ್ನ ಹೃದಯಕಮಲದಲ್ಲಿ ಕುಮಾರೀಪತಿಯಾದ ಮಹಾದೇವನನ್ನು ಅಲ್ಲಿ ಸ್ಮರಿಸಿದಳು. ॥೨೦-೨೧॥

ಕನ್ಯೆಯಾದ ರಮಾದೇವಿಯು ಅದರಿಂದಲೇ ತನಗೆ ಇಷ್ಟನಾದ ಅನಂತಶಾಯಿಯನ್ನು ಪತಿಯನ್ನಾಗಿ ವರಿಸಿದಳು. ಅನಂತಶಾಯಿಯಾದ ಮಹಾವಿಷ್ಣುವಾದರೋ ಕೇರಳದೇಶದಲ್ಲಿ ನೆಲಸಿ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವವನಾಗಿ, ಸರ್ವದಾ ಶಿವಲಿಂಗವನ್ನೇ ಪೂಜಿಸುತ್ತಾ ಪರಶಿವಮೂರ್ತಿಯನ್ನು ಹೀಗೆ ಸ್ತುತಿಸುವನು. ॥೨೨-೨೩॥

ಉಪಾಧಿಭೇದದಿಂದ ಸಂಸಾರದಲ್ಲಿ ರೂಪತಾಳುವವನೇ, ಜಗದೊಡೆಯನೇ, ಬಲಾಸುರನನ್ನು ನಾಶಗೊಳಿಸುವವನೇ, ನನ್ನನ್ನು ಅನುಗ್ರಹಿಸು. ಸಮಸ್ತ

ಅನಂತಶಾಯುನೋದ್ರೀಶಂ ಸೇವಂಸ್ತತ್ರಾರ್ಚಯನ್ಸ್ಥಿತಃ ।
ತದ್ವಾಯವ್ಯಾಂ ಹರೇಃ ಸ್ಥಾನಂ ಜನಾರ್ದನಸಮಾಹ್ವಯಂ ॥೨೫॥

ಜನಾರ್ದನೋ ಹರಂ ಧ್ಯಾಯೇತ್ ತತ್ರ ತಿಷ್ಠತಿ ಪಾಪಹೃತ್ ।
ಶುಚೀಂದ್ರ ಕೇರಲೇ ಸ್ಥಾನಂ ಶಂಭೋಃ ಪ್ರಿಯಕರಂ ಮಹತ್ ॥೨೬॥

ಇಂದ್ರಃ ಸ್ತುವನ್ ತಥೇಶಾನಂ ಶುಚಿಸ್ತತ್ರಾರ್ಚ್ಯ ಶಂಕರಂ ।
ತ್ವಷ್ಟುರ್ವಧಾದ್ವಿಮುಕ್ತಾಘೋ ಶುಚೀಂದ್ರೇಶಪ್ರಸಾದತಃ ॥೨೭॥

|| ಇಂದ್ರ ಉವಾಚ ||

ನಮೋ ನಮಸ್ತೇ ಶಶಿಧಾಮಚೂಡ
ಗಂಗಾಧರೇಶಾನ ವಿಭೋ ಪ್ರಸೀದ ।
ತ್ವಷ್ಟುರ್ವಧಾದಸ್ಮದಘಾನ್ ಮಹೇಶ
ವಿಮೋಚಯಸ್ವಾಶು ತವ ಪ್ರಸಾದಾತ್ ॥೨೮॥

---

ಜಗದ್ವ್ಯಾಪಿಯೇ, ನನ್ನನ್ನು ಪಾಪದಿಂದ ಉದ್ಧರಿಸು. ವಿಷವನ್ನು ಭಕ್ಷಿಸಿದವನೆ, ದೇವತೆಗಳನ್ನು ರಕ್ಷಿಸಿದವನೇ, ಬ್ರಹ್ಮೇಂದ್ರಾದಿಗಳಿಂದಲೂ, ವೇದರಾಶಿಯಿಂದಲೂ ಸ್ತುತ್ಯನಾದವನೇ, ಪಾಪನಾಶಕನೆನಿಸಿ ಅನಾದಿಭೂತನಾಗಿರುವ ನಿನ್ನ ಪಾದಕಮಲಗಳಿಗೆ ಶಿರಸಾವಂದಿಸುವೆನು. ||೨೪||

ಅನಂತಶಾಯಿಯಾದ ಮಹಾವಿಷ್ಣುವು ಕೈಯಲ್ಲಿಯೇ ಪರಶಿವನನ್ನು ಹಿಡಿದು ಅರ್ಚಿಸುತ್ತಾ ನೆಲಸಿರುವನು. ಅದಕ್ಕೆ ವಾಯುವ್ಯದಿಕ್ಕಿನಲ್ಲಿ ಶಂಭುವಿಗೆ ಪ್ರಿಯಕರವಾದ ಜನಾರ್ದನಕ್ಷೇತ್ರವಿರುವುದು. ಅಲ್ಲಿ ಇಂದ್ರೇಶ್ವರನೆಂಬ ಶಿವಲಿಂಗವೊಂದಿರುವುದು. ಹಿಂದೆ ತ್ವಷ್ಟಾಸುರನನ್ನು ಕೊಂದ ಪಾಪವನ್ನು ಕಳೆದುಕೊಳ್ಳಲೋಸುಗ ದೇವೇಂದ್ರನು, ಶಿವಲಿಂಗವನ್ನು ಪ್ರತಿಷ್ಠಾಪಿಸಿ ಶುಚೀಂದ್ರದಲ್ಲಿ ಹೀಗೆ ಪ್ರಾರ್ಥಿಸಿರುವನು. ||೨೫-೨೬-೨೭||

ಚಂದ್ರಚೂಡನೇ, ಗಂಗಾಧರನೇ, ಸರ್ವವ್ಯಾಪಿಯೇ, ನನ್ನ ಮೇಲೆ ಅನುಗ್ರಹವಿಡು. ನಿನಗೆ ಸದಾ ನಮಸ್ಕರಿಸುತ್ತಿರುವೆನು. ತ್ವಷ್ಟೃವಿನ ನಾಶದಿಂದ ನಮಗೊದಗಿರುವ ಪಾಪರಾಶಿಯನ್ನು ನಿವಾರಿಸು. ನಿನ್ನ ಅನುಗ್ರಹದಿಂದ ನಾನು ಪಾಪಮುಕ್ತನಾಗುವಂತೆ ಕರುಣಿಸು. ||೨೮||

ವಿಷ್ಣುಸ್ತತ್ರ ವಸನ್ ಶಂಭೋಃ ಪ್ರಸಾದಾರ್ಥಂ ಶುಚೀಂದ್ರಕೇ।
ತತ್ರ ಸ್ಥಾಣ್ವೀಶ್ವರಂ ಸ್ಥಾನಂ ಬ್ರಹ್ಮಣಾರಾಧಿತಂ ಸ್ತುತಂ ॥೨೯॥

ಸೃಷ್ಟ್ಯೇತಿ ವವೃತೇ ದೇವೋ ಸ್ಥಾಣುನಾದೋಽಭವಂ ತದಾ ॥೩೦॥

॥ ಬ್ರಹ್ಮೋವಾಚ ॥

ಅಣೋರಣುಸ್ತ್ವಂ ಮಹತೋ ಮಹಾಂಸ್ತ್ವಂ
ಸ್ಥಾಣುಸ್ತ್ವಮಾದ್ಯಃ ಪುರುಷಃ ಪುರಾಣಃ।
ತವ ಪ್ರಸಾದಾದ್ಬಹುಧಾ ವಿಸೃಷ್ಟಿಂ
ಕರೋಮಿ ಶಂಭೋ ವಿವಿಧಾಂ ಪ್ರಸೀದ ॥೩೧॥

॥ ಶ್ರೀಸ್ಕಂದ ಉವಾಚ ॥

ಏವಂ ಪಾಂಡ್ಯಸಚೋಲಕೇರಳಭುವಸ್ಥಾನೇಷು ಗಿರ್ಯಗ್ರಕೇ
ದೇವೋ ದೈತ್ಯವರಾ ಮಹರ್ಷಿನಿಕರಾಃ ಸಂಪೂಜ್ಯ ವಿಶ್ವೇಶ್ವರಂ।
ಪ್ರಾಪುಃ ಸ್ಥಾನವರಂ ಶಿವಸ್ಯ ಕೃಪಯಾ ಸಂಪೂಜ್ಯತೇ ಭಕ್ತಿತಃ
ಪುಣ್ಯೇಽಸ್ಮಿನ್ ಇತಿಹಾಸಸಪ್ತಮಮಹಾತ್ಮ್ಯೋತ್ತರೇ ಪಾವನೇ ॥೩೨॥

---

ಹಾಗೆ ಸ್ತೋತ್ರಮಾಡಿದ ಶುಚೀಂದ್ರಕ್ಷೇತ್ರದಲ್ಲಿ ಈಶ್ವರಾನುಗ್ರಹವನ್ನು ಅಪೇಕ್ಷಿಸಿ, ಮಹಾವಿಷ್ಣುವೂ ಸಹ ಅಲ್ಲಿಯೇ ನೆಲಸಿರುವನು. ಅದರ ಸಮೀಪದಲ್ಲಿಯೇ ಬ್ರಹ್ಮದೇವನಿಂದ ಸ್ತುತವಾದ ಸ್ಥಾಣ್ವೀಶ್ವರಲಿಂಗವಿರುವುದು. ಆ ಶಿವಲಿಂಗವನ್ನು ಧ್ಯಾನಮಾಡಿ, ಅದರ ಅನುಗ್ರಹಬಲದಿಂದಲೇ ಲೋಕದ ಸೃಷ್ಟಿಕಾರ್ಯವನ್ನು ಆರಂಭಿಸಿದನು. ॥೨೯-೩೦॥

ಮತ್ತು ಬ್ರಹ್ಮನು ಹೀಗೆ ಸ್ತುತಿಸತೊಡಗಿದನು. "ಮಹಾದೇವನೇ, ನೀನು ಅಣುವಸ್ತುಗಳಿಂದಲೂ ಅಣುವಾಗಿ ಕಾಣುವವನು. ಮಹತ್ವಪರಿಮಾಣವುಳ್ಳ ವಸ್ತ್ವಪೇಕ್ಷಯಾ ಮಹಾವಸ್ತುವಾಗಿ ಕಾಣುವವನು. ಕೇವಲ ಜಡವಸ್ತುವೆನಿಸುವವನು. ಆದ್ಯಂತರಹಿತನಾದ ಪುರುಷರೂಪಿಯೂ ನೀನೇ. ನಿನ್ನ ಅನುಗ್ರಹಬಲದಿಂದಲೇ ನಾನು ಇಂದು ಸಕಲ ಲೋಕಸೃಷ್ಟಿಯನ್ನೂ ನೆರವೇರಿಸುತ್ತಿರುವೆನು. ಇದೇ ರೀತಿ ನನ್ನನ್ನು ಅನುಗ್ರಹಿಸುತ್ತಿರು." ॥೩೧॥

ಹೀಗೆ, ಪಾಂಡ್ಯ ಮತ್ತು ಕೇರಳದೇಶಗಳಲ್ಲಿರುವ ಶಿವಲಿಂಗಗಳೆಲ್ಲಾ ಅತ್ಯಂತ ಪವಿತ್ರವಾದವುಗಳು. ಇತಿಹಾಸದಲ್ಲಿ ಪ್ರಸಿದ್ಧವಾದ ಏಳು ಪರ್ವತಗಳೂ ಈ

ಜೈಗೀಷವ್ಯ ತವಾದ್ಯ ಮೇ ಕಥಿ ಮಹೇಶಾನ್ಯೈ ಮಹೇಶೋದಿತಂ
ಮುಖ್ಯಂ ಮೇ ಕಥಿತಂ ನ ಶಕ್ಯಮಧುನಾ ವಕ್ತುಂ ಚ ಸರ್ವಸ್ಥಲಂ ।
ಶ್ರುತ್ವೈದಂ ನಿಖಿಲಸ್ಥಲಾರ್ಚನಫಲಂ ವಾಸಸ್ಯ ಲಬ್ಧ್ವಾನರೋ
ಮುಕ್ತಃ ಪಾತಕಕೋಟಿಭಿಃ ಶುಭತನೋ ಕೈಲಾಸಮೌಲೌ ವಸೇತ್॥೩೩॥

ಇತಿ ಶ್ರೀಶಿವರಹಸ್ಯೇ ಉತ್ತರಾರ್ಧೇ ಉಗ್ರಾಖ್ಯೇ ಸಪ್ತಮಾಂಶೇ
ಕೇರಲ ಚೋಲ ಪಾಂಡ್ಯ ಶಿವಕ್ಷೇತ್ರ ವೈಭವಕಥನಂ ನಾಮ
ಪಂಚಾಶೋಽಧ್ಯಾಯಃ

---

ದೇಶದಲ್ಲಿಯೇ ಕಂಡುಬರುತ್ತಿವೆ. ಆದರ ಉತ್ತರಭಾಗದಲ್ಲಿ ಪವಿತ್ರವಾಗಿರುವ ಈ ಶಿವಕ್ಷೇತ್ರಗಳಲ್ಲಿ, ಅನೇಕ ದೇವತೆಗಳೂ, ದೈತ್ಯರೂ, ಮಹರ್ಷಿಗಳೂ, ವಿಶ್ವೇಶ್ವರನನ್ನು ವಿಧವಿಧವಾಗಿ ಪೂಜಿಸಿ, ಶಿವಾನುಗ್ರಹವನ್ನು ಪಡೆದು ತನ್ಮೂಲಕ ತಮ್ಮ ಕೊರತೆಗಳನ್ನೆಲ್ಲಾ ಸಫಲಗೊಳಿಸಿಕೊಂಡಿರುವರು. ॥೩೨॥

ಜೈಗೀಷವ್ಯಮಹಾಮುನಿಯೇ, ನಾನು ಹಿಂದೆ ಮಹಾದೇವನು ಪಾರ್ವತಿಗೆ ಹೇಳಿದ ಶಿವಕ್ಷೇತ್ರಗಳ ಮಹಿಮೆಯನ್ನು ಯಥಾಮತಿ ನಿನಗೆ ವಿವರಿಸಿ ಹೇಳಿರುವನು. ಮಹಾದೇವನು ದೇವಿಗೆ ಹೇಳಿದ ಸಕಲವಿಷಯಗಳನ್ನೂ ವಿಸ್ತರಿಸಿ ಹೇಳುವ ಶಕ್ತಿ ನನಗಿಲ್ಲವಾಗಿದೆ. ಆದರಿಂದಲೇ ಮುಖ್ಯವಾದ ಕೆಲವು ವಿಷಯುಗಳನ್ನು ಮಾತ್ರ ನಿನಗೆ ಉಪದೇಶಿಸಿರುವೆನು. ಇದನ್ನು ಭಕ್ತಿಯಿಂದ ಕೇಳಿದವರಿಗೆ ಸಕಲ ಶಿವಲಿಂಗ ಗಳ ಅರ್ಚನಾಫಲವೂ ದೊರೆಯುವುದು. ಮತ್ತು ಅವರಿಗೆ ಸಕಲಪಾಪನಿವೃತ್ತಿ ಯುಂಟಾಗಿ, ಕೊನೆಗೆ ಕೈಲಾಸಶಿಖರದಲ್ಲಿ ಸ್ಥಿರವಾದ ವಾಸವು ಲಭಿಸುವುದು. ಇದರಲ್ಲಿ ಸಂಶಯುವಿಲ್ಲ ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಮುನಿಗಳಿಗೆ ಶಿವರಹಸ್ಯವನ್ನು ಉಪದೇಶಿಸಿದನು. ॥೩೩॥

ಇಲ್ಲಿಗೆ ಶ್ರೀಶಿವರಹಸ್ಯದ ಉಗ್ರನಾಮಕವಾದ ಏಳನೆಯ ಅಂಶದ ಉತ್ತರಾರ್ಧದಲ್ಲಿ
ಕೇರಳ ಮತ್ತು ಚೋಳ, ಪಾಂಡ್ಯದೇಶಗಳಲ್ಲಿರುವ ಶಿವಕ್ಷೇತ್ರ ವೈಭವವನ್ನು
ತಿಳಿಸುವ ಐವತ್ತನೆಯ ಅಧ್ಯಾಯವು ಮುಗಿದುದು.

॥ ಶಿವಂ ಭೂಯಾತ್ ॥